ಕನ್ನಡ ವಿಶ್ವವಿದ್ಯಾಲಯ, ಹಂಪಿ

ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ, ಭಾಷಾನಿಕಾಯ, ವಿದ್ಯಾರಣ್ಯ-೫೮೩೨೭೬


(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಮಹಾಪ್ರಬಂಧ)

# ಹರಿಹರನ ರಗಳೆಗಳಲ್ಲಿ : ಶಿವ ಮತ್ತು ಭಕ್ತರ ಸಂಬಂಧದ ನೆಲೆಗಳು


ಸಂಶೋಧಕರು

ವಜ್ರೇಶ್ವರಿ ಎಸ್. ಮೂರ್ತಿ ಡಿ.ಸಿ

ಮಾರ್ಗದರ್ಶಕರು

ಡಾ|| ಕೆ.ಪಿ.ಮಂಜುಳಾ ರೆಡ್ಡಿ

ನಿವೃತ್ತ ಪ್ರಾಧ್ಯಾಪಕರು, ಸರ್ಕಾರಿ ಕಲಾ ಕಾಲೇಜು

ಬೆಂಗಳೂರು.



ಕನ್ನಡ ಸಾಹಿತ್ಯ ಪರಿಷತ್ತು (ಮಾನ್ಯತಾ ಸಂಸ್ಥೆ)

ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ.

ಬೆಂಗಳೂರು-೫೬೦೦೧೮

೨೦೧೭





# ಕನ್ನಡ ವಿಶ್ವವಿದ್ಯಾಲಯ, ಹಂಪಿ

ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ, ಭಾಷಾನಿಕಾಯ, ವಿದ್ಯಾರಣ್ಯ-೫೮೩೨೭೬

(ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಮಹಾಪ್ರಬಂಧ)

## ಹರಿಹರನ ರಗಳೆಗಳಲ್ಲಿ : ಶಿವ ಮತ್ತು ಭಕ್ತರ ಸಂಬಂಧದ ನೆಲೆಗಳು

ಸಂಶೋಧಕರು

**ವಜ್ರೇಶ್ವರಿ ಎಸ್. ಮೂರ್ತಿ ಡಿ.ಸಿ**

ಮಾರ್ಗದರ್ಶಕರು

**ಡಾ॥ ಕೆ.ಪಿ.ಮಂಜುಳಾ ರೆಡ್ಡಿ**

ನಿವೃತ್ತ ಪ್ರಾಧ್ಯಾಪಕರು, ಸರ್ಕಾರಿ ಕಲಾ ಕಾಲೇಜು

ಬೆಂಗಳೂರು.



ಕನ್ನಡ ಸಾಹಿತ್ಯ ಪರಿಷತ್ತು (ಮಾನ್ಯತಾ ಸಂಸ್ಥೆ)

ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ,

ಬೆಂಗಳೂರು-೫೬೦೦೧೮.

೨೦೧೭

# ಮಾರ್ಗದರ್ಶಕರ ದೃಢೀಕರಣ ಪತ್ರ

ವಜ್ರೇಶ್ವರಿ ಎಸ್. ಮೂರ್ತಿ ಡಿ.ಸಿ ಅವರು **ಹರಿಹರನ ರಗಳೆಗಳಲ್ಲಿ : ಶಿವ ಮತ್ತು ಭಕ್ತರ ಸಂಬಂಧದ ನೆಲೆಗಳು** ಎಂಬ ಈ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಅವರು ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

**ಮಾರ್ಗದರ್ಶಕರು**

**ಸ್ಥಳ : ಬೆಂಗಳೂರು**

**ದಿನಾಂಕ :** 20·8·17

**ಡಾ|| ಕೆ.ಪಿ.ಮಂಜುಳಾ ರೆಡ್ಡಿ**

ನಿವೃತ್ತ ಪ್ರಾಧ್ಯಾಪಕರು

ಸರ್ಕಾರಿ ಕಲಾ ಕಾಲೇಜು

ಬೆಂಗಳೂರು-೫೬೦೦೦೧

# <u>ಸಂಶೋಧಕರ ಪ್ರಮಾಣ ಪತ್ರ</u>

ಹರಿಹರನ ರಗಳೆಗಳಲ್ಲಿ : ಶಿವ ಮತ್ತು ಭಕ್ತರ ಸಂಬಂಧದ ನೆಲೆಗಳು ಎಂಬ ಮಹಾಪ್ರಬಂಧವನ್ನು ಡಾ॥ ಕೆ.ಪಿ.ಮಂಜುಳಾ ರೆಡ್ಡಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಪಿಎಚ್.ಡಿ ಪದವಿಗಾಗಿ ಭಾಷಾ ನಿಕಾಯದ ಕನ್ನಡ ಸಾಹಿತ್ಯ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಈ ಮಹಾಪ್ರಬಂಧವು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

Vajreshwari S

ಸ್ಥಳ : ಬೆಂಗಳೂರು

ದಿನಾಂಕ : 20.8.17

ವಜ್ರೇಶ್ವರಿ ಎಸ್. ಮೂರ್ತಿ ಡಿ.ಸಿ

ಸಂಶೋಧನ ವಿದ್ಯಾರ್ಥಿನಿ

ಕನ್ನಡ ಸಾಹಿತ್ಯ ಪರಿಷತ್ತು

(ಮಾನ್ಯತಾ ಸಂಸ್ಥೆ)

ಪಂಪ ಮಹಾಕವಿ ರಸ್ತೆ

ಬೆಂಗಳೂರು – ೫೬೦೦೧೮.

# ಹರಿಹರನ ರಗಳೆಗಳಲ್ಲಿ ಶಿವ ಮತ್ತು ಭಕ್ತರ ಸಂಬಂಧದ ನೆಲೆಗಳು

## ಪರಿವಿಡಿ

***************

# ಅಧ್ಯಾಯ : ೧

## ಅಧ್ಯಯನದ ಉದ್ದೇಶ, ಅಗತ್ಯ, ವ್ಯಾಪ್ತಿ, ಸ್ವರೂಪ ಮತ್ತು ಸಮೀಕ್ಷೆ

### ೧.೧ : ಪ್ರಸ್ತಾವನೆ :-

ಕನ್ನಡ ಸಾಹಿತ್ಯಕ್ಕೆ ಸುಮಾರು ಎರಡು ಸಾವಿರ ವರ್ಷಗಳ ದೀರ್ಘ ಪರಂಪರೆ ಇದೆ. ಕನ್ನಡ ಸಾಹಿತ್ಯದಲ್ಲಿ "ರಗಳೆ" ಯುಗ ಬರುವ ಮುನ್ನ ಪಂಪ, ಪೊನ್ನ, ರನ್ನರೇ ಮೊದಲಾದವರಿಂದ ರಚನೆಗೊಂಡ ಕಾವ್ಯಗಳು 'ಚಂಪು' ಪ್ರಕಾರದಲ್ಲಿದ್ದವು. ಈ ಸಾಹಿತ್ಯದಲ್ಲಿ ಲೌಕಿಕ, ಧಾರ್ಮಿಕವೆಂಬ ಕಾವ್ಯಪಂಥವನ್ನಾಧರಿಸಿ ಸಂಸ್ಕೃತಭೂಯಿಷ್ಠ ಶೈಲಿಯಲ್ಲಿ ಅಭಿವ್ಯಕ್ತಿಗೊಂಡು ಮಾರ್ಗಕೃತಿಗಳಾಗಿದ್ದವು. ಇದರ ನಾಯಕರು ಧರ್ಮವೀರರು, ರಾಜರು, ತೀರ್ಥಂಕರರು – ಅವರ ಮಕ್ಕಳು ಮುಂತಾದವರಿಂದ ಕೂಡಿದ್ದು ಧರ್ಮ ಮತ್ತು ರಾಜಾಶ್ರಯವನ್ನು ಪ್ರಧಾನವಾಗಿ ಅವಲಂಭಿಸಿರುತ್ತಿತ್ತು. ಈ ಕಾವ್ಯಗಳು ಅಷ್ಟಾದಶಾವರ್ಣನೆಗಳಲ್ಲಿ ರಚನೆಗೊಂಡು ಪಂಡಿತವರ್ಗಕ್ಕೆ ಮೀಸಲಾಗಿ, ಜನಸಂಪರ್ಕದಿಂದ ದೂರ ಉಳಿದಿದ್ದವು. ಈ ಕೃತಿಗಳು ಜೈನಧರ್ಮದ ಉನ್ನತಿಗಾಗಿ ಶ್ರಮಿಸುತ್ತಿತ್ತೇ ಹೊರತು ಜನಸಾಮಾನ್ಯರ ಆಸೆ, ಆಕಾಂಕ್ಷೆಗಳ – ಅಭಿಪ್ರಾಯಗಳಿಗೆ ಮನ್ನಣೆ ನೀಡಿರಲಿಲ್ಲ. ಇಂತಹ ಪರಿಸ್ಥಿತಿಯಲ್ಲಿ ೧೨ನೇ ಶತಮಾನದಲ್ಲಿ ಶಿವಶರಣರು ರಚಿಸಿದ ವಚನಗಳು ಸಾಮಾಜಿಕ ಮತ್ತು ಸಾಹಿತ್ಯಕ ಕ್ರಾಂತಿಯನ್ನುಂಟು ಮಾಡಿದವು.

ವಚನಕಾರರು ತಮ್ಮ ವಚನಸಾಹಿತ್ಯದ ಮೂಲಕ ಶಿವಭಕ್ತಿ ಸಾಧನೆಯ ಅಗತ್ಯತೆಯನ್ನು, ಅಂದಿನ ಸಮಾಜದಲ್ಲಿ ಮನೆಮಾಡಿಕೊಂಡಿದ್ದ ಮೌಢ್ಯತೆಯನ್ನು ತಿದ್ದುವ ನೀತಿ ಮತ್ತು ಆದರ್ಶಗಳನ್ನು ಅಭಿವ್ಯಕ್ತಪಡಿಸಿದರು. ಮೌಲ್ಯಯುತ ವಿಚಾರಗಳನ್ನು ಸರಳ ಭಾಷೆಯಲ್ಲಿ ತಿಳಿಯಪಡಿಸುವ ಮುಖೇನ ಸಾಹಿತ್ಯವನ್ನು ಜನಸಾಮಾನ್ಯರ ಹತ್ತಿರಕ್ಕೆ ತಂದರು. ಆದ್ದರಿಂದ ಇದೊಂದು ಪರಿವರ್ತನೆಯ ಕಾಲ ಮತ್ತು ದೇಸಿಯ ಉತ್ಕರ್ಷಕಾಲವಾಗಿತ್ತು. ವಚನಕಾರರು ರಾಜಾಶ್ರಯವನ್ನು ತೊರೆದು ಕಾಯಕತತ್ವ, ದಾಸೋಹ, ಗುರು–ಲಿಂಗ–ಜಂಗಮ ಸೇವೆಯಲ್ಲಿ ನಿರತರಾಗಿದ್ದರು.

ಬಸವಣ್ಣಾದಿ ಪ್ರಮಥರು ಧರ್ಮಬೋಧಕರಾಗಿ ಬೋಧನೆಯ ಮಹತ್ವದಿಂದ ಪ್ರತಿಷ್ಠೆಯನ್ನು ಪಡೆದು, ನುಡಿದಂತೆ ನಡೆದವರೆನಿಸಿಕೊಂಡಿದ್ದಾರೆ. ಅಂತೆಯೇ ಹರಿಹರನು ೧೩ನೇ ಶತಮಾನದಲ್ಲಿ ಶಿವಶರಣರ ಕಥೆಗಳನ್ನು ರಚಿಸಿ, ಭಕ್ತಿಪ್ರಧಾನ ಸಾಹಿತ್ಯದ ಮುಖೇನ ಕನ್ನಡ ಸಾಹಿತ್ಯದಲ್ಲಿ ಮಹತ್ವದ ಸ್ಥಾನ ಪಡೆದುಕೊಂಡಿದ್ದಾನೆ. ಮತಪ್ರಚಾರ ಕಾರ್ಯವನ್ನು ಸಾಹಿತ್ಯಮಾರ್ಗದಲ್ಲಿ ಮಾಡಿದ ಕವಿಯಾಗಿದ್ದಾನೆ. ತನ್ನ ಅಂತರಾತ್ಮದಲ್ಲೂ ಶಿವಭಕ್ತಿಯನ್ನು ತುಂಬಿಕೊಂಡು ಅದೇ ನಿಶ್ಚಲ ಭಕ್ತಿಯನ್ನು ಸಮಾಜದ ಜನರಲ್ಲಿ ಬೆಳೆಸಲು ಪ್ರಾಮಾಣಿಕ ಪ್ರಯತ್ನ ಮಾಡಿದನು. ತನ್ನಲ್ಲಿ ಮೂಡಿದ ಗಂಭೀರವಾದ ಈ ಆತ್ಮವಿಶ್ವಾಸದ ಭಕ್ತಿಯೆಂಬ ಶಕ್ತಿಯಿಂದಲೇ ಸಾಹಿತ್ಯದಲ್ಲಿ ನವೀನ ಮಾರ್ಗವೊಂದನ್ನು ಸೃಷ್ಟಿಸಿದನು.

ವಚನಸಾಹಿತ್ಯ ನಂತರದ ಕಾಲ ಹೀಗೆ ಸಾಹಿತ್ಯದಲ್ಲಿ ದೊಡ್ಡ ಬದಲಾವಣೆಯನ್ನು ತಂದಿತ್ತು. ಹರಿಹರನು ರಾಜಾಶ್ರಯ ತ್ಯಜಿಸಿ, ೧೩ನೇ ಶತಮಾನದಲ್ಲಿ ಪಂಪಾವಿರೂಪಾಕ್ಷನ ಸನ್ನಿಧಿಗೆ ಬಂದವನು. ಚಂಪು ಕಾವ್ಯಗಳಲ್ಲಿ ಕ್ವಚಿತ್ತಾಗಿ ಬಳಕೆಯಾಗುತ್ತಿದ್ದ ರಗಳೆ ಛಂದಸ್ಸನ್ನು ಅಭಿವ್ಯಕ್ತಿಯನ್ನಾಗಿ ಮಾಡಿಕೊಂಡನು. ಶಿವಶರಣರ ಬದುಕಿನ ಇತಿಹಾಸವನ್ನು ಕಾವ್ಯದ ವಸ್ತುವನ್ನಾಗಿಟ್ಟುಕೊಂಡು ರಗಳೆ ಛಂದಸ್ಸಿನಲ್ಲಿ ನೂರಾರು ಕಾವ್ಯಗಳನ್ನು ರಚಿಸಿದ್ದಾನೆ. ಇದರೊಡನೆ 'ಗಿರಿಜಾ ಕಲ್ಯಾಣ', 'ಪಂಪಾ ಶತಕ', 'ರಕ್ಷಾಶತಕ', ಮುಡಿಗೆಯ ಅಷ್ಟಕ ಮುಂತಾದ ಕೃತಿಗಳನ್ನು ರಚಿಸಿದ್ದಾನೆ. ಹರಿಹರನ ಸಾಹಿತ್ಯದಲ್ಲಿ "ಶಿವಭಕ್ತಿ-ಶಿವಮಹಿಮೆ" ಮೇಲ್ಮೈ ಸ್ಥಾನಕ್ಕೆ ತಲುಪಿದೆ. ಇವು ಸರ್ವಕಾಲಕ್ಕೂ ಎಲ್ಲರ ಮೇಲೆ ಪ್ರಭಾವ ಬೀರುವಂತಹ ಮಹತ್ವದ ಕೃತಿಗಳಾಗಿವೆ. ಹೀಗೆ ಹರಿಹರ ಕವಿಯು, ಶಿವಭಕ್ತನು, ಮಾರ್ಗದರ್ಶಕನಾಗಿಯೂ ಸಾಹಿತ್ಯದ ಕೃಷಿಯನ್ನು ಮಾಡಿದ್ದಾನೆ. ಈ ಎಲ್ಲಾ ಕಾರಣಗಳಿಂದ ಪ್ರಾಚೀನ ಕವಿಗಳ ಸಾಲಿನಲ್ಲಿ ಹರಿಹರನು ಒಂದು ಮಹತ್ವದ ಮೈಲಿಗಲ್ಲು. ಹರಿಹರನ ಈ ಭಕ್ತಿಸಾಹಿತ್ಯ ಪರಂಪರೆಯನ್ನು ಕುರಿತಂತೆ ಹಲವು ವಿದ್ವಾಂಸರು, ವಿಮರ್ಶಕರು, ಚಿಂತಕರು ಮತ್ತು ಸಂಶೋಧಕರು ನಿರಂತರವಾಗಿ ಅಧ್ಯಯನ, ವಿಮರ್ಶೆ ಮತ್ತು ಸಂಶೋಧನೆಯಂತಹ ಕಾರ್ಯಗಳನ್ನು ಮಾಡುತ್ತಾ ಬಂದಿರುವುದು ಗಮನಾರ್ಹ. ಈ ಮೂಲಕ ಅದರ ಜೀವಂತಿಕೆಯನ್ನು ವಿಸ್ತರಿಸುವ ಅವಶ್ಯಕತೆ ಇಂದಿಗೂ ಇದೆ.

## ೧.೨ : ಅಧ್ಯಯನದ ಉದ್ದೇಶ :-

ಹರಿಹರ ತನ್ನ ರಗಳೆಗಳಲ್ಲಿ ಪುರಾಣಗಳ ಕಲ್ಪನೆಯ ಈಶ್ವರನ ಸ್ವರೂಪವನ್ನು ಕೇಂದ್ರೀಕರಿಸಿ, ಅವನ ಸುತ್ತ ಭಕ್ತ ಪ್ರಪಂಚವನ್ನು ನಿರ್ಮಿಸಿದ್ದಾನೆ. ನಂಬಿಕೆಯು ಮನುಷ್ಯನನ್ನು ಅಮರನಾದ ಶಿವನೊಡನೆ ಸಂಬಂಧಿಸುವ ಉತ್ಸಾಹದ ಕೊಂಡಿಯಾಗಿದೆ. ಇದು ಸ್ವತಃ ಸದ್ಗುಣಗಳಿಂದ ಕೂಡಿದ ಭಕ್ತಿಯೆಂಬ ಮಾಧ್ಯಮದ ಮೂಲಕ ನಡೆಯುವುದು. ಯಾರು ಈ ಭಕ್ತಿಯಲ್ಲಿ ತಲ್ಲೀನರಾಗುತ್ತಾರೋ ಆ ಸಮಾಜದಲ್ಲಿ ಸತ್ಯ, ಶಾಂತಿ, ಪ್ರೀತಿ, ರಕ್ಷಣೆ, ದಾನ-ಧರ್ಮ ಮೊದಲಾದ ಮಾನವೀಯ ಸಜ್ಜನಿಕೆಯ ವೃದ್ಧಿಯಾಗುತ್ತದೆ. ಇಡೀ ಸಮಾಜವೇ ಇದರ ಪ್ರಭಾವಕ್ಕೆ ಒಳಗಾದರೆ ಅದು ಭಕ್ತಿನಿಷ್ಠ ಮತ್ತು ಮಾನವೀಯ ಸಮಾಜವೆನಿಸಿಕೊಳ್ಳುತ್ತದೆ. ಈ ಕಾರ್ಯಸಿದ್ಧಿಗಾಗಿ ಹರಿಹರ ಅವಿಶ್ರಾಂತ ಸಾಹಿತ್ಯಕ ಕ್ರಾಂತಿಯನ್ನು ಮಾಡಿದ್ದಾನೆ ಎಂದೆನಿಸುತ್ತದೆ. ಹರಿಹರನ ರಗಳೆಗಳನ್ನು ಆಧ್ಯಾತ್ಮಿಕ ಕ್ಷೇತ್ರದ ವತಿಯಿಂದ ಭಕ್ತಿನೆಲೆ ಮತ್ತು ಸಮಾಜದ ದೃಷ್ಟಿಕೋನದಡಿಯಲ್ಲಿ ಕ್ರಾಂತಿಕಾರಕ ನೆಲೆಯಿಂದಲೂ ನೋಡುವ ಸಾಧ್ಯತೆ ಇದೆ.

ಹರಿಹರನ ರಗಳೆಗಳನ್ನು ವಿದ್ವಾಂಸರು ಶಿವತತ್ವ, ಭಕ್ತಿಪ್ರಧಾನ ಸಾಹಿತ್ಯ, ಮೋಕ್ಷ, ಸಂಘರ್ಷ, ಬೇಧನಿರಸನ, ಹೋರಾಟ, ಕ್ರಾಂತಿಕಾರಕ ಧ್ವನಿ ಎಂಬ ಹಲವು ನೆಲೆಗಳಿಂದ ವಿಶ್ಲೇಷಿಸಿದ್ದಾರೆ. ವಚನಕಾರರ ಭಕ್ತಿಚಳುವಳಿಯ ಪೀಳಿಗೆಯನ್ನು ಮುಂದುವರಿಸಿದ ಹರಿಹರನ ರಗಳೆಗಳು ಭಕ್ತಿಯುತವಾದುದು. ಭಕ್ತಿ ಎಂದರೆ ಶಕ್ತಿಯೆಂಬಂತೆ ಚಿತ್ರಿಸಿರುವ ಈ ಕಥೆಗಳಲ್ಲಿ ಶಿವ ಮತ್ತು ಭಕ್ತನ ನಡುವಿನ ಸಂಬಂಧವೇ ಭಕ್ತಿಯಾಗುತ್ತದೆ. ಆ ಭಕ್ತಿಯೇ ಮೋಕ್ಷದ ಸಾಧನವಾಗುತ್ತದೆ. "ಶಿವ ಮತ್ತು ಭಕ್ತರ ನಡುವಿನ ಸಂಬಂಧ"ಕ್ಕೆ ಸೇತುವೇ ಭಕ್ತಿ. ಈ ಭಕ್ತಿತತ್ವದ ಹಿನ್ನೆಲೆಯಿಂದ ಸಂಶೋಧಕರು, ವಿಮರ್ಶಕರು ಹಲವು ಆಯಾಮಗಳಿಂದ ಚರ್ಚಿಸಿದ್ದಾರೆ. "ಹರಿಹರನ ರಗಳೆಗಳಲ್ಲಿ ಭಕ್ತಿ" ಎಂಬ ಕೃತಿಯಲ್ಲಿ ಕೆ.ಎಸ್.ಕೃಷ್ಣಮೂರ್ತಿಯವರು 'ಭಕ್ತ ಮತ್ತು ಭಗವಂತನ ನಡುವಿನ ಸಂಬಂಧದ ಕಡೆಗೆ ಗಮನ ಸೆಳೆದಿದ್ದಾರೆ. ಆದರೆ ಈ ಕ್ಷೇತ್ರದ ಸಮಗ್ರ ಅಧ್ಯಯನ ಇಂದು ನಡೆಯಬೇಕಿದೆ. ಆದ್ದರಿಂದ "ಹರಿಹರನ ರಗಳೆಗಳಲ್ಲಿ ಶಿವ ಮತ್ತು ಭಕ್ತರ ಸಂಬಂಧದ ನೆಲೆಗಳು" ಎಂಬ ವಿಷಯವನ್ನು ಪಿಎಚ್.ಡಿ ಸಂಶೋಧನ ಕಾರ್ಯಕ್ಕೆ ಆಯ್ದುಕೊಂಡಿರುತ್ತೇನೆ. ಹರಿಹರನು ತನ್ನ ರಗಳೆಗಳಲ್ಲಿ ಶಿವ ಮತ್ತು ಭಕ್ತರ ಸಂಬಂಧವನ್ನು ಎಳೆಎಳೆಯಾಗಿ ತಿಳಿಸಿದ್ದಾನೆ. ಆ ಸಂಬಂಧದ ನೆಲೆಗಳನ್ನು ವಿಶ್ಲೇಷಿಸುವುದು ಅಧ್ಯಯನದ ಪ್ರಧಾನ ಉದ್ದೇಶವಾಗಿದೆ.

ಶರಣರ ಭಕ್ತಿಪಂಥದಿಂದ ಪ್ರಭಾವಿತನಾದ ಹರಿಹರನು "ಭಕ್ತಕವಿ" ಎಂದೇ ಹೆಸರಾದವನು. ಸಮಾಜದ ಜನರನ್ನು ಸಾತ್ವಿಕರನ್ನಾಗಿ ಮಾಡಲು ಭಕ್ತಿಮಾರ್ಗವು ಅತ್ಯಂತ ಪರಿಣಾಮಕಾರಿಯಾದುದು ಎಂಬುದನ್ನು ಅರಿತ ಹರಿಹರನು ತನ್ನ ರಗಳೆಗಳಲ್ಲಿ ಶರಣರ ಜೀವನೋದ್ಧಾರಣೆಗಳನ್ನು ವ್ಯಕ್ತಪಡಿಸಿದ್ದಾನೆ. ಭಕ್ತಿಯ ಸ್ವರೂಪವೇ ರಗಳೆಗಳ ಜೀವಾಳ ಹಾಗೂ ಪ್ರಧಾನ ತಿರುಳು. "ಭಕ್ತಿ" ಎಂದರೆ ಭಗವಂತನ ಸ್ಮರಣೆ, ಆರಾಧನೆ, ಉಪಾಸನೆ ಮಾಡುವುದಾಗಿದೆ. ಇವು ಭಕ್ತಿಯ ಬಾಹ್ಯಾಚರಣೆಯಾಗಿದ್ದು ಸುಲಭ ಮಾರ್ಗದಿಂದ ಕೂಡಿರುತ್ತದೆ. ಆದರೆ ಅಂತರಂಗದ ಮೂಲಕ ತೋರುವ ಭಕ್ತಿ, ಭಕ್ತನಲ್ಲಿ ಕೆಲವು ಮೌಲ್ಯ ಮತ್ತು ಆದರ್ಶಗಳನ್ನು ಬಯಸುವುದರಿಂದ ಕಷ್ಟಸಾಧ್ಯವಾದುದು. ಇಲ್ಲಿ ಭಕ್ತನು ನಿಷ್ಠೆ, ಧೃತಿ, ಶ್ರದ್ಧೆ, ಸಂಯಮ, ಆತ್ಮಪರೀಕ್ಷೆ, ತ್ಯಾಗ ಮತ್ತು ದಾನ-ಧರ್ಮದಂತಹ ಪ್ರಮುಖ ಮೌಲ್ಯಗಳನ್ನು ಬೆಳೆಸಿಕೊಂಡಾಗಲೇ ಭಕ್ತಿಯ ಸಾರ್ಥಕ. ಭಕ್ತನು ಇಂತಹ ಮೌಲ್ಯಗಳನ್ನು ಸ್ವೀಕರಿಸಿ ಭಾವಪರವಶನಾಗುತ್ತಾನೆ. ಭಕ್ತಿಯು ಪ್ರಾರಂಭದಲ್ಲಿ ಆಪ್ಯಾಯಮನವಾಗಿದ್ದು, ನಂತರ ಭಕ್ತನು ಶಿವನ ಪರೀಕ್ಷೆಗೆ ಒಳಗಾಗಿ ತ್ರಾಸಪಟ್ಟರೂ, ಧೈರ್ಯಗೆಡದೆ ತಮ್ಮ ನಿಷ್ಠೆಯಿಂದ ಶಿವನ ಕೃಪೆಗೆ ಒಳಗಾಗುತ್ತಾರೆ.

ಹೀಗೆ ಹರಿಹರನ ರಗಳೆಗಳಲ್ಲಿ ಶಿವ ಮತ್ತು ಭಕ್ತರ ನಡುವಿನ ಸಂಬಂಧವು ಅವಿನಾಭಾವದಿಂದ ಕೂಡಿದೆ. ಅಲ್ಲದೆ ಅದು ಬಹಳ ಅನ್ಯೋನ್ಯತೆ ಮತ್ತು ಆತ್ಮೀಯವಾದುದು. ಮನುಷ್ಯ, ಸಮಾಜಜೀವಿಯಾಗಿರುವುದರಿಂದ ಅವನು ಸ್ನೇಹ, ಕೌಟುಂಬಿಕ, ದಾಸ್ಯ ಸಂಬಂಧಗಳನ್ನು ತನ್ನ ಮಧ್ಯೆ ವಾಸಿಸುವವರೊಡನೆ ಹೊಂದಿರುತ್ತಾನೆ. ಇಂತಹ ಸಂಬಂಧ, ವಾತ್ಸಲ್ಯ ಮತ್ತು ಭಾವಗಳ ಮೂಲಕ ಭಕ್ತನು ಭಗವಂತನನ್ನು ಅರಿಯಲು ಹೋದಾಗ ಅದು ಭಕ್ತಿಯಲ್ಲಿ ತಲ್ಲೀನನಾಗಿ ಶಿವನನ್ನು ತನ್ನ ಆತ್ಮೀಯ ಸ್ನೇಹಿತ, ಬಂಧು ಮತ್ತು ಪ್ರೀತಿಯ ಒಡೆಯನೆಂದು ತಿಳಿಯಹೊರಡುತ್ತಾನೆ. ಇಲ್ಲಿ ಭಕ್ತಿಯ ಆರಂಭವು ಸಹಜವಾಗಿ ಪ್ರಾರಂಭವಾಗಿ, ಕ್ರಮೇಣ ನಂಬಿಕೆ ಪ್ರಧಾನವಾದಾಗ ಗಾಢವಾದ ಭಕ್ತಿ ಬೆಳೆದು ಆ ಭಗವಂತನ ಮೇಲಿನ ಪ್ರೀತಿ ಹೆಚ್ಚಾಗುತ್ತಾ ಭಕ್ತಿಪರವಶನಾಗಿ ತಾದಾತ್ಮ್ಯಕ್ಕೊಳಗಾಗುತ್ತಾನೆ. ಭಾವಗಳ ವಿಷಯಕ್ಕೆ ಬಂದರೆ ಭಕ್ತನು ಸ್ವತಂತ್ರ, ಅವನು ತನ್ನಿಚ್ಛೆಗೆ ತಕ್ಕ ಭಾವದಿಂದ ಶಿವನನ್ನು ಒಲಿಸಿಕೊಳ್ಳುತ್ತಾನೆ. ಭಕ್ತನು ಶಾಂತ, ಧೃತಿ, ಪ್ರೇಮ-ಮಧುರ ಮತ್ತು ಉಗ್ರನಿಷ್ಠ ಭಾವಗಳಿಂದ ಶಿವನನ್ನು ಪೂಜಿಸುತ್ತಿರುತ್ತಾನೆ. ಭಾವಗಳು ಹಲವಿದ್ದರೂ ವಿವಿಧತೆಯಲ್ಲಿ ಏಕತೆ ಎಂಬಂತೆ ಯಾವುದೇ ಭಾವನಾತ್ಮಕ ಸಂಬಂಧದೊಂದಿಗೆ ಭಕ್ತನು ಭಕ್ತಿಯನ್ನು ಬೆಳೆಸಿಕೊಂಡರೂ, ಗುರಿ ಮಾತ್ರ ಒಂದೇ ಅದು

"ಶಿವನ ಸಾಕ್ಷಾತ್ಕಾರ" ಪಡೆಯುವುದಾಗಿದೆ. ಹರಿಹರನ ರಗಳೆಗಳಲ್ಲಿ 'ಶಿವ ಮತ್ತು ಭಕ್ತರ' ನಡುವೆ ಸಂಬಂಧ ಮತ್ತು ಭಾವಗಳು ಯಾವ ರೀತಿಯಲ್ಲಿ ಅಭಿವ್ಯಕ್ತವಾಗಿದೆ ಎಂಬುದರ ವಿಶ್ಲೇಷಣೆಯೇ ಅಧ್ಯಯನದ ಪ್ರಧಾನ ಉದ್ದೇಶವಾಗಿದೆ.

ಹರಿಹರನ ರಗಳೆಗಳ ಮಹತ್ವ ಮತ್ತು ಕಾವ್ಯೋದ್ದೇಶವನ್ನು ತಿಳಿಯುವ ಹಿನ್ನೆಲೆಯಿಂದ ಪ್ರಧಾನವಾಗಿ ೪ ನೆಲೆಗಳಲ್ಲಿ ಗುರುತಿಸುವ ಪ್ರಯತ್ನವನ್ನು ಮಾಡಲಾಗಿದೆ.

೧) ಹರಿಹರನ ಜೀವನ ಮತ್ತು ಕಾವ್ಯೋದ್ದೇಶ

೨) ಚಾರಿತ್ರಿಕ

೩) ಸಾಮಾಜಿಕ

೪) ಪ್ರಸ್ತುತತೆ – ವರ್ತಮಾನದ ಪ್ರಶ್ನೆಗಳು

ಹರಿಹರನ ರಗಳೆಗಳನ್ನು ಅಧ್ಯಯನ ಮಾಡುವ ಮೊದಲು ಅವನ ಸಾಹಿತ್ಯಕೃತಿಗೆ ಪ್ರೇರಣೆ, ಪ್ರಭಾವ ಬೀರುವುದರ ಜೊತೆಗೆ ಒತ್ತಡ ಹೇರಿರುವಂತಹ ಸಂದರ್ಭಗಳು ಇರಬಹುದೇ? ಇದ್ದರೆ ಯಾವುವು ಎಂಬ ಶೋಧನೆಯಲ್ಲಿ ತೊಡಗಬೇಕು. ಅದಕ್ಕಾಗಿ ಕ್ರಿ.ಶ. ೧೨ ಮತ್ತು ೧೩ನೇ ಶತಮಾನದ ಚಾರಿತ್ರಿಕ ಸಂದರ್ಭವೊಂದರ ಧಾರ್ಮಿಕ ಪದ್ಧತಿ, ಸಾಮಾಜಿಕ ವ್ಯವಸ್ಥೆಯ ಸ್ವರೂಪವನ್ನು ಅರ್ಥೈಸಿಕೊಳ್ಳುವ ಜೊತೆಗೆ ಅವುಗಳ ನಡುವಿನ ಅಂತರ ಸಂಬಂಧವನ್ನು ತಿಳಿಯುವುದಾಗಿದೆ. ಈ ಹಿನ್ನೆಲೆಗಳಿಂದ ಹರಿಹರನ ಸಾಹಿತ್ಯವನ್ನು ಓದುವಾಗ ವರ್ತಮಾನದಲ್ಲಿ ಎದುರಾಗುವ ಪ್ರಶ್ನೆಗಳಾವುವು? ಹಾಗು ಇಂದಿನ ಜನತೆಯ ಬದುಕಿಗೆ ಹೇಗಾದರೂ ಪ್ರಯೋಜನ ನೀಡಬಲ್ಲುದೆ? ಎಂಬ ಹಲವು ಪ್ರಶ್ನೆಗಳನ್ನು ಎತ್ತಿ, ಅದಕ್ಕೆ ಸಮಂಜಸವಾದ ಉತ್ತರಗಳನ್ನು ನೀಡುವುದು ಅವಶ್ಯವೆನಿಸಿದೆ. ಅಲ್ಲದೆ ಹರಿಹರನ ಜೀವನ ಮತ್ತು ಕಾವ್ಯೋದ್ದೇಶವನ್ನು ಅರ್ಥೈಸಿಕೊಳ್ಳುವುದು ಅಧ್ಯಯನಕ್ಕೆ ಪೂರಕವಾಗಿದೆ. ಪ್ರಸ್ತುತ ಮಹಾಪ್ರಬಂಧ ಈ ಉದ್ದೇಶವನ್ನು ಹೊಂದಿದೆ.

೧೨ನೇ ಶತಮಾನದ ವಚನಕಾರರು ಸಾರಿದ ಮೌಲ್ಯಗಳನ್ನು ಹರಿಹರನು ಹೆಚ್ಚು ಪ್ರಜ್ಞಾಪೂರ್ವಕವಾಗಿ ತನ್ನ ಸಾಹಿತ್ಯದಲ್ಲಿ ಬಿಂಬಿಸಿದ್ದಾನೆ. ಹೊಸ ದೃಷ್ಟಿಕೋನ ಬೆಳೆಸಿಕೊಂಡು

ರಚಿಸಿದ ಹರಿಹರನ ಸಾಹಿತ್ಯ ಕೃಷಿಯ ವೈವಿಧ್ಯತೆಗಳು ಒಂದು ಮೈಲಿಗಲ್ಲಾಗಿ ನಿಲ್ಲುವುದಕ್ಕೆ ಕಾರಣಗಳೇನು ಎಂಬ ಚಿಂತನೆಯೂ ಅಧ್ಯಯನದ ಉದ್ದೇಶವಾಗಿದೆ.

ಹರಿಹರನ ರಗಳೆಗಳಲ್ಲಿ ಕಥಾನಾಯಕರ ಜೀವನಶ್ರದ್ಧೆ ಮತ್ತು ಮೌಲ್ಯಗಳಾದ ಭಕ್ತಿ, ನಿಷ್ಠೆ, ಮುಗ್ಧತೆ, ಹಠ, ಛಲ, ಸತ್ಯ ಮೊದಲಾದ ಸಾಮಾಜಿಕ ಪೋಷಕಗುಣಗಳನ್ನು ಪ್ರತಿಷ್ಠಾಪಿಸಿದ್ದಾನೆ. ಇದು ಜನಮಾನಸದ ಮೇಲೆ ಪ್ರಭಾವಬೀರುವ ಅಂಶವಾಗಿದೆ. ಆದ್ದರಿಂದ ಹರಿಹರ ಕವಿ ಒಂದು ಪ್ರೇರಕ ಶಕ್ತಿಯಂತಿದ್ದಾನೆ. ಶಿವನು ಭಕ್ತರಿಗೆ ತಂದೊಡ್ಡುವ ಪರೀಕ್ಷೆಯ ಸ್ವರೂಪದಲ್ಲಿ ವ್ಯಕ್ತವಾಗುವ ಪವಾಡಗಳು ವೈಶಿಷ್ಟ್ಯತೆಯಿಂದ ಕೂಡಿದೆ. ಇವು ಭಕ್ತಿಪಂಥ ಬೆಳವಣಿಗೆಗೆ ಪ್ರೇರಣೆ ನೀಡುವ ಸಾಧ್ಯತೆ ಮತ್ತು ಶಿವತತ್ವ ಸ್ವರೂಪದ ಆಯಾಮಗಳ ಚರ್ಚೆಯು ಅಧ್ಯಯನದ ಉದ್ದೇಶವಾಗಿದೆ. ಹರಿಹರನ ರಗಳೆಗಳು ಮುಖ್ಯವಾಗಿ ಭಕ್ತಿ ಜೀವನದ ಅಂತರಂಗದ ಕೈಪಿಡಿಗಳಾಗಿವೆ. ಹಾಗಾಗಿ ಭಕ್ತನ ಆದರ್ಶ ಮತ್ತು ಜೀವನ ದರ್ಶನದ ನೆಲೆಗಳ ವಿಶ್ಲೇಷಣೆಯು ಅಧ್ಯಯನದ ಉದ್ದೇಶಕ್ಕೊಳಪಟ್ಟಿದೆ. ಮನುಷ್ಯರ ಬದುಕು ಸಾರ್ಥಕವಾಗಬೇಕಾದರೆ, ಅದು ದುಃಖಾನುಭವದಿಂದ ಬಿಡುಗಡೆ ಹೊಂದಿ ಶಿವಾನುಭವದಿಂದ ಮೋಕ್ಷ ಸಾಧಿಸುವಂತಾಗಬೇಕು ಎಂಬ ಜೀವನದ ಸತ್ಯಮಾರ್ಗಗಳನ್ನು ಚರ್ಚಿಸುವ ನೆಲೆಗಳಲ್ಲಿ ಅಧ್ಯಯನದ ಮಹತ್ವ ಅಡಗಿದೆ.

ರಗಳೆ ಸಾಹಿತ್ಯದ ರಾಚನಿಕ ಸ್ವರೂಪದ ಹಿನ್ನೆಲೆಯಿಂದ ಕಥಾವಸ್ತು, ಕಥನ ತಂತ್ರ, ಭಾಷೆ-ಶೈಲಿ ನಿರ್ವಹಣೆ ಮತ್ತು ರಗಳೆಗಳ ವಿನ್ಯಾಸಗಳನ್ನು ಶಿವ ಮತ್ತು ಭಕ್ತರ ಸಂಬಂಧಕ್ಕೆ ಪೂರಕವಾಗಿ ಪರಿಶೀಲಿಸುವುದೂ ಅಧ್ಯಯನದ ಉದ್ದೇಶಕ್ಕೊಳಪಟ್ಟಿದೆ.

## ೧.೩ : ಅಧ್ಯಯನದ ಅಗತ್ಯ :-

ಕನ್ನಡ ಸಾಹಿತ್ಯದಲ್ಲಿ ಹರಿಹರನ ರಗಳೆಗಳ ಕುರಿತು ವಿಫುಲವಾಗಿ ಅಧ್ಯಯನ ನಡೆದಿದೆ. ಶಿವಭಕ್ತನಾದ ಹರಿಹರ, ಶಿವಶರಣರ ಜೀವನ ಸತ್ವಗಳನ್ನು ತಿಳಿಸುವಾಗ ಭಕ್ತಿಯ ಔನತ್ಯವನ್ನು ಅವರು ಆಚರಿಸುವ ವಿಭಿನ್ನ ರೀತಿಯ ಶಿವಪೂಜೆಯನ್ನು ಬಹಳ ವೈವಿಧ್ಯಮಯವಾಗಿ ಸಾರಿದ್ದಾನೆ. ಅಲ್ಲಿ ಶಿವ ಮತ್ತು ಭಕ್ತರ ನಡುವಿನ ಸಂಬಂಧವು ಅವಿನಾಭಾವದಿಂದ ಕೂಡಿರುತ್ತದೆ. ಒಬ್ಬರಿಗೊಬ್ಬರು ಪರಸ್ಪರ ಬಾಂಧವ್ಯಗಳಿಂದ ಮಿಳಿತಗೊಂಡಿರುತ್ತಾರೆ. ಇಲ್ಲಿ ಶರಣರ ಭಕ್ತಿ ಮತ್ತು ಶಿವಾನುಭವವೇ ಕೇಂದ್ರಬಿಂದುವಾಗಿದೆ. ಧರ್ಮ ಮತ್ತು ಭಕ್ತಿಯನ್ನು ಮುಂದಿಟ್ಟುಕೊಂಡು ರಚಿಸಿರುವ

ಈ ರಗಳೆಗಳಲ್ಲಿ ಶಿವ ಮತ್ತು ಭಕ್ತರ ಒಡನಾಟವನ್ನು ಸಂಬಂಧಗಳಡಿಯಲ್ಲಿ ಭಾವನಾತ್ಮಕವಾಗಿ ವಿಶ್ಲೇಷಿಸುವುದು ಇಂದಿಗೆ ಅವಶ್ಯವಿದೆ.

ಶಿವಭಕ್ತರ ಅನುಪಮವಾದ ಮತ್ತು ಪ್ರೇಮಮಯವಾದ ಭಕ್ತಿ, ಅಚಲ ನಿಷ್ಠೆ ಶಿವನ ಮನಸ್ಸನ್ನು ಕರುಣೆಯಿಂದ ಸೂರೆಗೊಳ್ಳುವಂತೆ ಮಾಡುತ್ತದೆ. ಹರಿಹರನ ಶರಣರ ನಿಲುವು ನಿಶ್ಚಲವಾದುದು. ಶಿವ ತನ್ನ ಭಕ್ತರ ಭಕ್ತಿಯ ನಿಷ್ಠೆಯನ್ನು ಒರೆಹಚ್ಚಿ ನೋಡುವ ಸಲುವಾಗಿ ವೇಷಾರೂಢನಾಗಿ ಬಂದು ಭಕ್ತರನ್ನು ಪರೀಕ್ಷಿಸಿದಾಗ ಭಕ್ತರ ನಿಜಭಕ್ತಿ ಮತ್ತಷ್ಟು ಹದಗೊಂಡು ಪರಿಪಕ್ವವಾಗುತ್ತದೆ. ಶಿವಶರಣರ ಭಕ್ತಿಮಯವಾದ ಬದುಕನ್ನು ಚಿತ್ರಿಸುವಾಗ ಹರಿಹರನು ಮೈಮರೆತು ಆ ಭಕ್ತಿಯ ಪರಿ ತನಗೂ ಉಂಟಾಗುವಂತೆ ಹರಸು ಎಂದು ಶಿವನಲ್ಲಿ ಕೇಳುತ್ತಾನೆ. ಈ ಭಕ್ತಿ ಎನ್ನುವುದೇ ಹಾಗೆ, ಅದು ಅಂಟಿಕೊಂಡರೆ ಬಿಡದು. ಸದಾ ಭಕ್ತನನ್ನು ಅದರಲ್ಲೇ ಮುಳಗೇಳಸುತ್ತದೆ. ಆದ್ದರಿಂದ ಈ ಭಕ್ತಿಯೆಂಬುದು ಶಿವ ಮತ್ತು ಭಕ್ತರನ್ನು ಒಂದುಗೂಡಿಸುವ ಸೇತುವೆಯಂತಾಗಿದೆ. ಭಕ್ತರು ಶಿವಭಕ್ತಿ ಬಿಟ್ಟರೆ ಬೇರೇನನ್ನೂ ಕಾಣದಾಗುತ್ತಾರೆ, ಶಿವನ ಪರವಶರಾಗುತ್ತಾರೆ. ಈ ಬಗೆಯ ಅವಿಭಾಜ್ಯ ಸಂಬಂಧವನ್ನು ಭಕ್ತಿಸೂತ್ರದಡಿಯಲ್ಲಿ ಶಿವಶರಣರ ಚರಿತ್ರೆಗಳನ್ನು ಅವಲೋಕಿಸುವ ಅಗತ್ಯವಿದೆ. ಏಕೆಂದರೆ ವರ್ತಮಾನದಲ್ಲೂ ಶಿವಪೂಜೆ, ಭಕ್ತಿ, ಶಿವಕ್ಷೇತ್ರಗಳ ದರ್ಶನ, ಹೋಮ-ಹವನ, ಅಭಿಷೇಕ, ಶಿವರಾತ್ರಿ, ಕಾರ್ತಿಕಮಾಸದ ವೈಭವೋಪೇತ ಆಚರಣೆಯ ಪರಿ ನಡೆಯುತ್ತಾ ಬಂದಿದೆ. ಹೀಗಿರುವಾಗ ಭಕ್ತಿಸೂತ್ರದ ನೆಲೆಯಿಂದ ಶಿವಭಕ್ತರ ಕಥೆಗಳು, ಅಲ್ಲಿ ವ್ಯಕ್ತವಾಗುವ ಭಕ್ತ-ಭಗವಂತನ ಸಂಬಂಧಗಳನ್ನು ಹಲವು ಆಯಾಮಗಳಲ್ಲಿ ವಿಶ್ಲೇಷಿಸುವುದು ಪ್ರಸ್ತುತವೆನಿಸುತ್ತದೆ.

### ೧.೪ : ಅಧ್ಯಯನದ ವ್ಯಾಪ್ತಿ :-

ಹರಿಹರನ ರಗಳೆ ಸಾಹಿತ್ಯವು ಬಹಳ ವಿಸ್ತಾರವಾದುದು ಹಾಗು ವೈವಿಧ್ಯಮಯದಿಂದ ಕೂಡಿದೆ. ರಗಳೆಗಳ ಸಂಖ್ಯಾನಿರ್ಣಯದ ಕುರಿತು ಹಲವು ವಿದ್ವಾಂಸರುಗಳಲ್ಲಿ ಭಿನ್ನಾಭಿಪ್ರಾಯವಿರುವುದರಿಂದ ಸಂಶೋಧನಾಧ್ಯಯನದ ವ್ಯಾಪ್ತಿಯನ್ನು ೧೦೮ ರಗಳೆಗಳಿಗೆ ಸೀಮಿತಗೊಳಿಸಿಕೊಳ್ಳಲಾಗಿದೆ.

ಹರಿಹರನು ನೂರಾರು ರಗಳೆಗಳ ಕಥೆಗಳನ್ನು ರಚಿಸಿದ್ದರೂ ಅವುಗಳ ಹಿಂದಿನ ಸಾರಾಂಶ-ಭಾವಾರ್ಥ ಒಂದೇ. ಅದೇ "ಶಿವಭಕ್ತಿ". ಸಮಾಜದ ಜನರನ್ನು ಭಕ್ತಿಯ ರಸದಲ್ಲಿ ಮುಳುಗಿಸಿ, ಭಾವೋದ್ವೇಗಗೊಳಿಸಿದ್ದಾನೆ. ಭಕ್ತನನ್ನು ಪರೀಕ್ಷೆ ಮಾಡಲು ಬರುವ ಶಿವನು ತಂದೊಡ್ಡುವ ಪರೀಕ್ಷೆಗಳನ್ನು ವಿಶೇಷತೆಯೆಂದು ಪರಿಗಣಿಸಿ ಪವಾಡ ಎನ್ನುವ ಬದಲು, ಇಂದಿನ ನಮ್ಮ ಜನಜೀವನದ ಬದುಕಿನಲ್ಲಿ ಎದುರಾಗುವ ಕಷ್ಟ-ದುಃಖ, ನೋವು-ನಲಿವುಗಳಂತೆ ಅರ್ಥೈಸಿಕೊಳ್ಳುವ ಸಾಧ್ಯತೆಯ ಪ್ರಶ್ನೆಗಳನ್ನು ಇಂದಿನ ಸಮಕಾಲೀನ ಪರಿಸ್ಥಿತಿಗೆ ಅನುಗುಣವಾಗಿ ಹಾಕಿಕೊಂಡು ನೋಡುವ ಅವಶ್ಯಕತೆಯುಂಟು. ಭಕ್ತಿಯೆಂಬುದು ಒಂದು ಮೌಲ್ಯ, ನಂಬಿಕೆ ಮತ್ತು ಶಕ್ತಿಯೆಂದು ನಾವು ವಿಸ್ತಾರ ಅರ್ಥದಲ್ಲಿ ಗಮನಿಸಿಕೊಳ್ಳಬೇಕೆ ಹೊರತು ಯಾವುದೋ ಘಟನಾಪ್ರದವಾಗಿಯೋ ಅಥವಾ ಪವಾಡಸದೃಶವಾಗಿ ನೋಡಹೊರಟರೆ ಅದು ಅಪೂರ್ಣವೆನಿಸುತ್ತದೆ. ಭಗವಂತನನ್ನು ವರಗಳನ್ನು ಬೇಡುವಾಗ ಮಾತ್ರ ನೆನಪಿಸಿಕೊಳ್ಳುವುದರಲ್ಲಿ ಅರ್ಥವಿಲ್ಲ, ಬದಲಿಗೆ ಶಿವಭಕ್ತರು ಇಹದಲ್ಲೇ ಪರವನ್ನು ಹುಡುಕಿ ಜೀವಾತ್ಮ-ಪರಮಾತ್ಮ ಸಮನ್ವಯತೆಯ ಸಾಧಿಸಿ, ಹರನಿಗಿಂತ ನರನೇ ಶ್ರೇಷ್ಠವೆಂದು ಸಾರಿರುವ ಅಂಶಗಳ ಕಡೆಗೂ ಅಧ್ಯಯನ ಗಮನ ನೀಡಿದೆ.

ಹರಿಹರ ಹಲವಾರು ಕಥೆಗಳನ್ನು ಒಂದೇ ಮಾದರಿಯಲ್ಲಿ ಹೇಳುವ ಅವಶ್ಯಕತೆ ಏನಿರಬಹುದು. ಅದರ ಹಿಂದಿನ ಉದ್ದೇಶವೇನು? ಇದರಿಂದ ಸಮಾಜದ ಭೂತ, ವರ್ತಮಾನ ಮತ್ತು ಭವಿಷ್ಯತ್ಕಾಲಕ್ಕೆ ಆಗಿರುವ ಅಥವಾ ಆಗಬಹುದಾದ ಲಾಭಗಳೇನಾದರೂ ಇರಬಹುದೇ? ಅಲ್ಲದೆ ಇಂತಹ ಕೃತಿಗಳು ಈಗಲೂ ಪ್ರಸ್ತುತವೆನಿಸುವುದಕ್ಕೆ ಸಾಹಿತ್ಯಾಸಕ್ತಿ ಕಾರಣವೇ? ಅಥವಾ ಭಯ-ಭಕ್ತಿ ಕಾರಣವಾಗಬಹುದೇ? ಎಂಬ ಪ್ರಶ್ನೆಗಳನ್ನು ಅಧ್ಯಯನದಲ್ಲಿ ಎತ್ತಿಕೊಂಡು ಉತ್ತರ ಕಂಡುಕೊಳ್ಳುವುದರಲ್ಲಿ ಸಂಶೋಧನೆಯ ವ್ಯಾಪ್ತಿ ಅಡಗಿದೆ.

ಹರಿಹರನ ರಗಳೆಗಳಲ್ಲಿನ ಶಿವಭಕ್ತರ ಜೀವನ ಚರಿತ್ರೆಗಳಲ್ಲಿ ಪ್ರಧಾನವಾಗಿ ಎದ್ದುಕಾಣುವ ಶಿವಭಕ್ತರ ತಾತ್ವಿಕ ನೆಲೆಗಳನ್ನು ಒಂದೆಡೆ ಕಲೆಹಾಕಲಾಗಿದೆ. ಭಕ್ತರ ನಿಜಮೌಲ್ಯಗಳಿಗೆ ಅದೆಷ್ಟು ಬದ್ಧರಾಗಿ ಬಾಳ್ವೆ ನಡೆಸಿದ್ದಾರೆ, ಅದರ ಪ್ರತಿಫಲದ ಅಂಶವನ್ನು ತಿಳಿಸುವ ಪ್ರಯತ್ನದಿಂದ ಶಿವಭಕ್ತರ ಬದುಕಿನ ಘಟನಾವಳಿ ಚೋದ್ಯತೆಯಿಂದ ಕೂಡಿದೆ. ಇದಕ್ಕೆ ಅವರ ಮೌಲ್ಯಾದರ್ಶ ಕಾರಣವಾಗುತ್ತವೆಯೋ? ಇಲ್ಲವೆ ಶಿವಭಕ್ತಿಯು ಕಾರಣವಾಗುತ್ತದೆಯೋ? ಎಂಬ ಚರ್ಚೆಯನ್ನು ಈ ಮಹಾಪ್ರಬಂಧದಲ್ಲಿ ನಡೆಸಲಾಗಿದೆ.

ಏಕದೇವೋಪಾಸನೆ, ಶುದ್ಧಭಕ್ತಿ, ಅಂತರಂಗ ಶುದ್ಧಿ, ಭಕ್ತರ ಸಂಘಟನೆ, ಬೇಧ ಮತ್ತು ಭವಿಮೌಲ್ಯ ನಿರಾಕರಣೆಯಂತಹ ಉದ್ದೇಶಗಳನ್ನು ಹೊಂದಿರುವ ಹರಿಹರನ ವಿಚಾರಗಳ ವಿಶ್ಲೇಷಣೆಯನ್ನು ಮಾಡುವುದು ಅವಶ್ಯವೆನಿಸಿದೆ. ಒಟ್ಟಾರೆ ಹರಿಹರನ ರಗಳೆಗಳೆಂಬ ನವೀನ ಪ್ರಯೋಗದಲ್ಲಿ ಶಿವಕಥೆಗಳಲ್ಲಿ ವ್ಯಕ್ತವಾಗುವ ಭಕ್ತಿಗೂ ಮತ್ತು ಶಿವ-ಭಕ್ತರ ನಡುವಿನ ಒಡನಾಟಕ್ಕೂ ಇರುವಂತಹ ಅವಿನಾಭಾವ ಸಂಬಂಧವನ್ನು ಅರ್ಥೈಸಿಕೊಳ್ಳುವುದು ಅಧ್ಯಯನದ ವ್ಯಾಪ್ತಿಗೆ ಒಳಪಟ್ಟಿದೆ.

## ೧.೫ : ಅಧ್ಯಯನದ ಸ್ವರೂಪ :-

ಹರಿಹರನ ರಗಳೆಗಳು ಸಾಹಿತ್ಯ ಕ್ಷೇತ್ರಕ್ಕೆ ಮೀಸಲಾದುದರಿಂದ ಮೊದಲಿಗೆ ಸಾಮಾಗ್ರಿಯನ್ನು ಕೂಡಿಹಾಕುವ ಕಾರ್ಯವನ್ನು ಮಾಡಿರುತ್ತೇನೆ. ಅದಕ್ಕಾಗಿ ಹರಿಹರನ ರಗಳೆಗಳಲ್ಲಿ ೧೦ಲನ್ನು ಆಯ್ದುಕೊಂಡು ಅಭ್ಯಾಸಕ್ಕೆ ನಿರ್ದಿಷ್ಟತೆಯ ದೃಷ್ಟಿಯನ್ನು ತಾಳಿರುತ್ತೇನೆ. ಪ್ರಧಾನವಾಗಿ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯದಿಂದ ಪ್ರಕಟಿಸಿರುವ **ಹರಿಹರನ ರಗಳೆಗಳು- ಡಾ॥ಎಂ.ಎಂ.ಕಲಬುರ್ಗಿ**ರವರ ಕೃತಿಯನ್ನು ಅವಲಂಭಿಸಿರುತ್ತೇನೆ. ಇದು ನನ್ನ ಸಂಶೋಧನೆಗೆ ಮೂಲ ಸಾಮಾಗ್ರಿಯಾಗಿರುತ್ತದೆ. ನಂತರ ಹರಿಹರನ ರಗಳೆಗಳ ಕುರಿತಾದ ಸಂಪಾದನೆ, ವಿಮರ್ಶೆ, ಲೇಖನ, ಬರಹಗಳನ್ನು ಸಂಗ್ರಹಿಸಿ, ಅದನ್ನು ಎರಡನೇ ಸಾಮಾಗ್ರಿಯಾಗಿ ಅಧ್ಯಯನಕ್ಕಾಗಿ ಅವಲಂಭಿಸಿರುತ್ತೇನೆ.

ಹರಿಹರನ ರಗಳೆಗಳಲ್ಲಿ ಶಿವ ಮತ್ತು ಭಕ್ತರ ಸಂಬಂಧದ ನೆಲೆ ಮತ್ತು ಭಾವಗಳನ್ನು ಗುರುತಿಸುವ ಪ್ರಯತ್ನ ಮಾಡಿರುತ್ತೇನೆ. ಅದಕ್ಕಾಗಿ ಹರಿಹರನ ಜೀವನ, ಕೃತಿ, ಕಾವ್ಯೋದ್ದೇಶ, ಚಾರಿತ್ರಿಕ, ಸಾಮಾಜಿಕ, ಸಮಕಾಲೀನ ವಿದ್ಯಮಾನಗಳನ್ನು ಅನುಲಕ್ಷಿಸಿರುತ್ತೇನೆ. ಅಲ್ಲದೆ ಎಲ್ಲಾ ೧೦ಲ ರಗಳೆಗಳಲ್ಲಿ ಶಿವಭಕ್ತರು, ದೇಶ, ಭಕ್ತಿ-ನೇಮ, ಕಾಯಕ, ಸೇವೆ, ಸಂಬಂಧ, ಭಾವ, ಶಿವನ ಸ್ವರೂಪ, ಪರೀಕ್ಷೆಯ ವಿಧಾನಗಳನ್ನು ಎಳೆಎಳೆಯಾಗಿ ಬಿಡಿಸಿಕೊಂಡು ಅಭಿವ್ಯಕ್ತಿಸುವ ಆಶಯವಿದೆ. ನಂತರ ಕಥಾ ವಿಶ್ಲೇಷಣೆಯೊಂದಿಗೆ ಸ್ನೇಹ-ವಾತ್ಸಲ್ಯ-ದಾಸ್ಯ-ಸಂಬಂಧಗಳಡಿಯಲ್ಲಿ ಹಾಗು ಶಾಂತ-ಧೃತಿ-ಮಧುರ-ಭಾವಗಳಲ್ಲಿ ವ್ಯಕ್ತವಾಗುವ ರಗಳೆಗಳ ವಿಸ್ತಾರ ನೋಟವನ್ನು ನೀಡುವ ಪ್ರಯತ್ನ ಮಾಡಿರುತ್ತೇನೆ. ಹರಿಹರನ ರಗಳೆಗಳಲ್ಲಿ ಹೊಸ ದೃಷ್ಟಿಯೆಂಬ ಪರಿಕಲ್ಪನೆಯಡಿಯಲ್ಲಿ

(೧) ಕಥಾನಾಯಕರ ಸಾಮಾಜಿಕ ಮೌಲ್ಯಗಳ ವಿಶ್ಲೇಷಣೆ

(೨) ಶಿವನು ಭಕ್ತರಿಗೆ ತಂದೊಡ್ಡುವ ಪರೀಕ್ಷೆಯ ಸ್ವರೂಪ

(೩) ಪವಾಡ ಸಾದೃಶ್ಯತೆಯ ಪರಿ

(೪) ಶಿವತತ್ವದ ಸ್ವರೂಪ

(೫) ಭಕ್ತನ ಜೀವನ ಆದರ್ಶ ಮತ್ತು ದರ್ಶನ

(೬) ಲೋಕಾನುಭವ – ಶಿವಾನುಭವ

ಈ ವಿಚಾರಗಳಿಗೆ ಆಧಾರಪೂರ್ವಕವಾಗಿ ವ್ಯವಸ್ಥಿತ ಅಭ್ಯಾಸದಿಂದ ಉತ್ತರವನ್ನು ಕಂಡುಕೊಳ್ಳುವ ಪ್ರಯತ್ನ ಮಾಡಲಾಗಿದೆ.

ರಗಳೆಗಳ ಕಥಾವಸ್ತು, ತಂತ್ರ, ಶೈಲಿ, ವಿನ್ಯಾಸಗಳ ಕಡೆಗೂ ಗಮನಹರಿಸಿ ಅಧ್ಯಯನಕ್ಕೆ ಪೂರಕವಾಗಿ ಬಳಸಿಕೊಂಡಿರುತ್ತೇನೆ. ಒಟ್ಟಾರೆ ಹರಿಹರನ ರಗಳೆ ಕುರಿತು ಸಂಗ್ರಹಿಸಿದ ದತ್ತಾಂಶ ಹಾಗು ಮಾಹಿತಿಯನ್ನು ವ್ಯವಸ್ಥಿತವಾಗಿ ಸಂಯೋಜಿಸುವ ಕಾರ್ಯ ಇಲ್ಲಿ ಮಾಡಿರುತ್ತೇನೆ. ರಗಳೆಗಳನ್ನು ಓದಿ ಅರ್ಥೈಸಿಕೊಂಡು ಅದಕ್ಕೆ ಪೂರಕವಾದ ಭಾವಾರ್ಥ, ವಿಮರ್ಶೆ ಕೃತಿಗಳನ್ನು ಅಭ್ಯಾಸಮಾಡಿ ಟಿಪ್ಪಣಿ ರೂಪದಲ್ಲಿ ಸಂಗ್ರಹಿಸಿಕೊಂಡಿರುತ್ತೇನೆ. ನಂತರ ವಿವರವಾಗಿ ಬರೆದು, ಮಾರ್ಗದರ್ಶಕರಿಂದ ತಿದ್ದುಪಡಿಯಾದ ನಂತರ ಮರುಬರವಣಿಗೆ ಮಾಡಿರುತ್ತೇನೆ. ಅಡಿಟಿಪ್ಪಣಿಗಳು, ಆಕಾರಗ್ರಂಥಗಳ ವಿವರಣೆಯನ್ನು ವ್ಯವಸ್ಥಿತವಾಗಿ ಬರೆದಿಡುತ್ತಾ ಬಂದಿರುತ್ತೇನೆ. ಅಧ್ಯಯನದ ನಿರ್ಣಯದ ನೆಲೆಗಳನ್ನು ಬೇರೆ ಬೇರೆ ದಿಕ್ಕುಗಳಿಂದ ಶೋಧಿಸುವ ಅವಕಾಶವನ್ನು ಸಹ ಮಾರ್ಗದರ್ಶಕರು ವಿದ್ವಾಂಸರೊಂದಿಗೆ ಚರ್ಚೆಯ ನೆರವಿನಿಂದ ಸಂಗ್ರಹಿಸಿರುತ್ತೇನೆ. ನಂತರ ಒಂದೆಡೆ ಟೇಬಲ್ ಕೆಲಸ (ಗ್ರಂಥಾಲಯ ಕೆಲಸ)ದಲ್ಲಿ ನಿರತಳಾಗಿ ಸಂಶೋಧನಾಧ್ಯಯನ ನಡೆಸುವ ಪ್ರಯತ್ನ ಮಾಡಿರುತ್ತೇನೆ.

## ೧.೩ : ಇದುವರೆಗೂ ನಡೆದಿರುವ ಅಧ್ಯಯನಗಳ ತಾತ್ವಿಕ ಸಮೀಕ್ಷೆ :-

ಹರಿಹರ ಮತ್ತು ಆತನ ಕೃತಿಗಳ ಬಗ್ಗೆ ಸಂಪಾದನೆ, ಗದ್ಯಾನುವಾದ ಸಂಶೋಧನೆ, ವಿಮರ್ಶೆ ಮತ್ತು ಕವಿಯ ಆಶಯಗಳನ್ನು ಕುರಿತಾದಂತೆ ಇದೂವರೆಗೂ ಅನೇಕ ವಿದ್ವಾಂಸರುಗಳಲ್ಲಿ ಸುದೀರ್ಘವಾದ ಸಾಹಿತ್ಯಕೃಷಿ ನಡೆದಿದೆ. ಇದಲ್ಲದೆ ಅನೇಕ ಸಂಸ್ಥೆಗಳು ಕಾಲಕಾಲಕ್ಕೆ ಹಲವು ವಿಚಾರ ಸಂಕಿರಣಗಳು, ಉಪನ್ಯಾಸ ಮತ್ತು ವೀರಶೈವ ಮಠಗಳಲ್ಲಿ ಜಿಜ್ಞಾಸೆ ವಿಶೇಷೋಪನ್ಯಾಸಗಳನ್ನು ನಡೆಸುತ್ತಾ ಬಂದಿರುವುದು ಗಮನಾರ್ಹ. ಇವುಗಳಿಂದ ಹರಿಹರ

ಕವಿಯ ಬದುಕು, ಬರಹ, ಚರಿತ್ರೆ, ಕಾವ್ಯಧೋರಣೆ, ಕಾವ್ಯೋದ್ದೇಶ, ಕಾವ್ಯದ ಪರಿಕರಗಳು, ವಿಮರ್ಶೆ ಮತ್ತು ಆಶಯಗಳನ್ನು ಸ್ಥೂಲವಾಗಿ ತಿಳಿದಂತಾಗುತ್ತದೆ. ಡಾ.ಫ.ಗು.ಹಳಕಟ್ಟಿಯವರು **"ಶಿವಾನುಭವ ಪತ್ರಿಕೆ"**[೧] ಎಂಬ ಕೃತಿಯಿಂದ ಹರಿಹರ ಕವಿಯ ಅಧ್ಯಯನಕ್ಕೆ ಅವಶ್ಯವಾದ ಸಾಮಾಗ್ರಿಯನ್ನು ಮತ್ತು ರಗಳೆ ಸಾಹಿತ್ಯವನ್ನು ಒದಗಿಸಿಕೊಟ್ಟಿದೆ. ಡಾ.ಎಂ.ಎಂ.ಕಲಬುರ್ಗಿರವರ **"ಹರಿಹರನ ರಗಳೆಗಳು"**[೨] ಎಂಬ ಸಂಪಾದಿತ ಕೃತಿಯಲ್ಲಿ ಹರಿಹರನ ರಗಳೆಗಳನ್ನು ಪ್ರಮುಖವಾಗಿ ಮೂರು ಭಾಗಗಳಾಗಿ ವಿಂಗಡಿಸಿದ್ದಾರೆ. (೧)ಪುರಾತನ ರಗಳೆಗಳು (೨)ನೂತನ ರಗಳೆಗಳು (೩)ಸಂಕೀರ್ಣ ರಗಳೆಗಳು–ಇಲ್ಲಿ ೧೦೮ ರಗಳೆಗಳನ್ನು ಸಮಗ್ರವಾಗಿ ಸಂಪಾದಿಸಿ, ಅತ್ಯಂತ ಅರ್ಥಪೂರ್ಣವಾದ ಮುನ್ನುಡಿಯನ್ನು ಬರೆದಿರುತ್ತಾರೆ. **"ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ" (ಸಂಪುಟ–೩)** ೩ ಯಲ್ಲಿ ರಗಳೆಯ ಉಗಮ, ಹರಿಹರನ ಕಾಲ, ಜೀವನ ವ್ಯಕ್ತಿತ್ವ, ಕಥಾಶೈಲಿ, ವಿಮರ್ಶೆ, ತೌಲನಿಕ ಅಧ್ಯಯನವನ್ನೊಳಗೊಂಡಂತೆ ಹರಿಹರನ ರಗಳೆಗಳ–ಒಂದು ಸಮಗ್ರ ವಿವೇಚನೆಯನ್ನು ಕುರಿತು ಹತ್ತು ವಿಮರ್ಶಾ ಲೇಖನಗಳು ಹಲವು ವಿದ್ವಾಂಸರ ಅಭಿಪ್ರಾಯನಿಷ್ಠೆಯಿಂದ ಅರ್ಥಪೂರ್ಣವಾಗಿ ಮೂಡಿದೆ. ಹರಿಹರನ ಕಾಲದ ರಾಜಕೀಯ, ಸಾಮಾಜಿಕ, ಧಾರ್ಮಿಕ ಭಕ್ತಿ ಪರಂಪರೆ ಮತ್ತು ವಚನ ಸಾಹಿತ್ಯದ ಪ್ರಭಾವ ಪ್ರೇರಣೆಯನ್ನೊಳಗೊಂಡಂತೆ ರಗಳೆ ಸಾಹಿತ್ಯದ ಪರಿಚಯವನ್ನು ಇಲ್ಲಿ ಅನುಕ್ರಮವಾಗಿ ಮಾಡಿದ್ದಾರೆ.

ಮಹಾಕವಿ ಹರಿಹರನ ಜೀವನವನ್ನು ಕುರಿತಾದ ಕಾದಂಬರಿಯಂತಿರುವ **"ಕವಿಚಕ್ರೇಶ್ವರ"** ೪ – ಬಿ.ಎಸ್.ಸ್ವಾಮಿ ರವರ ಕೃತಿಯು ಕವಿಯ ಬದುಕು–ಬರಹದ ಮೇಲೆ ಬೆಳಕು ಚೆಲ್ಲುವುದಾಗಿದೆ. **"ಹರಿಹರ ಮಹಾಕವಿಯ ಕೆಲವು ಮಹೋನ್ನತ ವಿಚಾರಗಳು"** ೫–ಬಿ.ಸಿ.ಜವಳಿರವರ ಈ ಉಪನ್ಯಾಸ ಗ್ರಂಥಮಾಲೆಯಲ್ಲಿ ಹರಿಹರ ಕವಿಯ ವಿಚಾರ, ರಗಳೆಗಳ ಕಥಾ ವೈಶಿಷ್ಟ್ಯ, ಸಾಮಾಜಿಕ –ಧಾರ್ಮಿಕ ನೀತಿಯುತ ವಿಚಾರಗಳನ್ನು ಪ್ರಸ್ತುತ ಪಡಿಸಿದ್ದಾರೆ.

ಡಿ.ಎಲ್.ಎನ್. ರವರ **"ಹಂಪೆಯ ಹರಿಹರ"** ೬ ಎಂಬ ಕೃತಿಯು ಹರಿಹರನ ಜೀವನ, ಕಾವ್ಯಶೈಲಿಯ ಮೇಲೆ ಪ್ರಭಾವ ಬೀರಿರುವ ಕೃತಿಯಾಗಿದೆ.

---

**ಅಡಿಟಿಪ್ಪಣಿಗಳು** : ೧. ಶಿವಾನುಭವ ಪತ್ರಿಕೆ – ಸಂ.ಟ.ಫ.ಗು.ಹಳಕಟ್ಟಿ, ೧೯೩೩
೨. ಹರಿಹರನ ರಗಳೆಗಳು – ಸಂ. ಡಾ.ಎಂ.ಎಂ.ಕಲಬುರ್ಗಿ, ಕ.ವಿ.ವಿ. ಹಂಪಿ, ೧೯೯೯
೩. ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, – ಸಂ. ಬೆ.ವಿ.ವಿ. ೧೯೭೬,
೪. ಕವಿಚಕ್ರೇಶ್ವರ – ಬಿ.ಎಸ್.ಸ್ವಾಮಿ, ಧಾರವಾಡ, ೧೯೭೪
೫. ಹರಿಹರ ಮಹಾಕವಿಯ ಕೆಲವು ಮಹೋನ್ನತ ವಿಚಾರಗಳು – ಡಾ. ಬಿ.ಸಿ. ಜವಳಿ, ಧಾರವಾಡ, ೧೯೬೬
೬. ಹಂಪೆಯ ಹರಿಹರ – ಡಿ.ಎಲ್.ಎನ್, ಮೈಸೂರು, ೧೯೩೯

ಡಾ.ಬಿ.ಸಿ.ಜವಳಿ ಮತ್ತು ಪ್ರಿ.ಶಾಂತರಸರವರ ಸಂಪಾದಕತ್ವದಲ್ಲಿ ಮೂಡಿಬಂದ **"ರಸಿಕಚಕ್ರಿ ಹರಿಹರದೇವ"** ೭ ಹರಿಹರನ ರಗಳೆ, ಚಂಪುಕಾವ್ಯ, ಅಷ್ಟಕ, ಶತಕಗಳನ್ನೊಳಗೊಂಡ ಎಲ್ಲಾ ಕೃತಿಗಳ ವಿಮರ್ಶಾ ಲೇಖನಗಳು, ಪ್ರಮುಖವಾಗಿ ರಗಳೆ ಸಾಹಿತ್ಯದಿಂದ ವ್ಯಕ್ತವಾಗುವ ಶಿವಶರಣರ ಭಕ್ತಿಯ ಆದರ್ಶ, ನಿಷ್ಠೆ, ಜೀವನಮೌಲ್ಯ ಹಲವು ಮಹೋನ್ನತ ವಿಚಾರಗಳನ್ನು ಬಿಂಬಿಸುವಂತಹ ಉತ್ತಮ ಕೃತಿ ಇದಾಗಿದೆ. **"ಹರಿಹರ ದೇವಕೃತ ಪುರಾತನರ ಆರು ರಗಳೆಗಳು"** ೮ – ಡಾ.ಆರ್.ಸಿ.ಹಿರೇಮಠರವರ ಈ ಸಂಪಾದಿತ ಕೃತಿಯಲ್ಲಿ ಪುರಾತನರ ಆರು ಶಿವಭಕ್ತರ ಕಥಾವೈಶಿಷ್ಟ್ಯದೊಂದಿಗೆ ಜೀವನ ಶ್ರದ್ಧೆಯ ವಿಚಾರಗಳನ್ನು ಪ್ರಸ್ತುತ ಪಡಿಸಿದ್ದಾರೆ. **"ಹಂಪೆಯ ಹರಿಹರ"** ಮತ್ತು **"ಹಂಪೆಯ ಹರಿಹರ ದೇವರ ಐದು ರಗಳೆಗಳು"** ೯ ಎಂಬ ಕೃತಿಯು ಶ್ರೀ. ಎಚ್.ದೇವಿರಪ್ಪರವರಿಂದ ಪ್ರಕಟವಾಗಿರುತ್ತದೆ. ಇಲ್ಲಿ ಕವಿಯ ಬದುಕು, ಬರಹ ಶೈಲಿ, ಸಾಹಿತ್ಯ ಸಂಸ್ಕಾರದಂತಹ ಹಲವು ವಿಚಾರಗಳನ್ನು ಮತ್ತು ಭಕ್ತಿತತ್ವದ ಐದು ಮುಖಗಳನ್ನು ಸಾಂಕೇತಿಕವಾಗಿ ನಿರೂಪಿಸಿದ್ದಾರೆ. ಹರಿಹರನ ಶೈಲಿಯನ್ನು ಕುರಿತಾದ ಹೆಚ್ಚಿನ ಓದಿಗೆ–ಎಸ್.ವಿ.ರಂಗಣ್ಣರವರ **"ಶೈಲಿ"** ೧೦ ಪುಸ್ತಕವು ಬಹಳ ಮಹತ್ವದ ಅಂಶಗಳನ್ನೊಳಗೊಂಡಿದೆ. ಪ್ರೊ.ಸ.ಸ. ಮಾಳವಾಡರವರ **"ಹರಿಹರನ ರಗಳೆಗಳಲ್ಲಿ ಜೀವನ ದರ್ಶನ"** ೧೧, ಎಸ್.ವಿ.ಕಣವಿರವರ – **"ಶಿವಭಕ್ತಿ ಮಹಿಮಾ ರಗಳೆಗಳು"** ೧೨ ಮತ್ತು ಎನ್.ಬಸವರಾಧ್ಯರವರ **"ಹರಿಹರ ದೇವ"** ೧೩ ಕೃತಿಗಳು ಹರಿಹರನ ಜೀವನ ದರ್ಶನ ಮತ್ತು ಸಾಹಿತ್ಯ ದರ್ಶನವನ್ನು ಕುರಿತಾದ ಹಲವು ಅಂಶಗಳನ್ನು ತಿಳಿಸಲು ಪೂರಕವಾಯಿತು.

ಡಾ॥ ಬಸವರಾಜ ಪಾಟೀಲರವರ–**"ಹರಿಹರ ಕಥಾಕೋಶ"** ೧೪ ಮತ್ತು ಡಿ.ನಾಗೇಂದ್ರಪ್ಪರವರ **"ಮಹಾಕವಿ ಹರಿಹರನ ಪುರಾತನ ಶರಣರು"** ೧೫ ಎಂಬ ಕೃತಿಗಳು ಹರಿಹರನ ರಗಳೆಗಳ ಭಾವಾರ್ಥಗಳನ್ನು ಒಳಗೊಂಡಿದ್ದು, ಸಾಹಿತ್ಯದ ಅರ್ಥಪೂರ್ಣ ವಿವರಗಳನ್ನು ದಾಖಲು ಮಾಡಿಕೊಟ್ಟು ಬಹಳ ಉತ್ಕೃಷ್ಟ ಕೃತಿ ಎನಿಸಿದೆ. **"ಹರಿಹರನ ರಗಳೆಗಳಲ್ಲಿ ಭಕ್ತಿ"**೧೬– ಕೆ.ಎಸ್.ಕೃಷ್ಣಮೂರ್ತಿರವರ ಕೃತಿಯಲ್ಲಿ ಭಕ್ತಿ ಮತ್ತು ಭಕ್ತಿಮಾರ್ಗ ಕುರಿತು ಪ್ರಾಚೀನ

---

ಅಡಿಟಿಪ್ಪಣಿಗಳು : ೭. ರಸಿಕಚಕ್ರಿ ಹರಿಹರದೇವ – ಡಾ.ಬಿ.ಸಿ.ಜವಳಿ ಮತ್ತು ಪ್ರಿ. ಶಾಂತರಸ, ಬಳ್ಳಾರಿ, ೧೯೭೯;

೮. ಹರಿಹರ ದೇವಕೃತ ಪುರಾತನರ ಆರು ರಗಳೆಗಳು – ಡಾ.ಆರ್.ಸಿ. ಹಿರೇಮಠ;

೯. ಹಂಪೆಯ ಹರಿಹರ, ಹಂಪೆಯ ಹರಿಹರ ದೇವರ ಐದು ರಗಳೆಗಳು – ಶ್ರೀ.ಎಚ್.ದೇವಿರಪ್ಪ, ಬೆಂಗಳೂರು, ೧೯೮೨, ೧೯೭೧;

೧೦. ಶೈಲಿ – ಎಸ್.ವಿ.ರಂಗಣ್ಣ, ಮೈಸೂರು, ೧೯೫೮;

೧೧. ಹರಿಹರನ ರಗಳೆಗಳಲ್ಲಿ ಜೀವನ ದರ್ಶನ – ಪ್ರೊ.ಸ.ಸ. ಮಾಳವಾಡ, ಧಾರವಾಡ, ೧೯೭೯;

೧೨. ಶಿವಭಕ್ತಿ ಮಹಿಮಾ ರಗಳೆಗಳು – ಎಸ್.ವಿ.ಕಣವಿ;

೧೩. ಹರಿಹರ ದೇವ – ಎನ್. ಬಸವರಾಧ್ಯ;

೧೪. ಹರಿಹರ ಕಥಾಕೋಶ – ಡಾ॥ ಬಸವರಾಜ ಪಾಟೀಲ;

೧೫. ಮಹಾಕವಿ ಹರಿಹರನ ಪುರಾತನ ಶರಣರು – ಡಿ. ನಾಗೇಂದ್ರಪ್ಪ; ೧೬. ಹರಿಹರನ ರಗಳೆಗಳಲ್ಲಿ ಭಕ್ತಿ– ಕೆ.ಎಸ್.ಕೃಷ್ಣಮೂರ್ತಿ;

ಸೂಕ್ತಿಗಳೊಂದಿಗೆ ಒಂದು ಪೀಠಿಕೆ ಒದಗಿಸಲಾಗಿದೆ. ಭಕ್ತಿಯ ವೈವಿಧ್ಯ ಮತ್ತು ಭಕ್ತ –ಭಗವಂತನ ಸಂಬಂಧವನ್ನು ಅರ್ಥಪೂರ್ಣವಾಗಿ ತಿಳಿಸಿಕೊಟ್ಟಿದೆ. **"ಹರಿಹರ ಕವಿಯ ಬಸವರಾಜ ದೇವರ ರಗಳೆ"** ೧೭ – ಪ್ರೊ.ಟಿ.ಎಸ್. ವೆಂಕಣ್ಣಯ್ಯ ರವರ ಸಂಪಾದಕತ್ವದಲ್ಲಿ ಮೂಡಿರುವ ಉತ್ತಮ ಕೃತಿಯಾಗಿದ್ದು ಭಕ್ತಿ ಭಂಡಾರಿ ಬಸವಣ್ಣನ ಸಮಗ್ರ ವಿಚಾರ ಪರಕ್ರಾಂತಿ, ಮೌಲ್ಯಗಳನ್ನು ತಿಳಿಸಿದೆ. **"ಹರಿಹರದೇವ"** ೧೮– ಕೆ.ಜಿ.ಕುಂದಣಗಾರ ಅವರ ಸಂಪಾದಕತ್ವದಲ್ಲಿ ಮೂಡಿಬಂದಿರುವ ಉತ್ತಮ ಕೃತಿಯಾಗಿದೆ. ಡಾ.ಶಿವಾನಂದ ಎಸ್. ವಿರಕ್ತಮಠರವರ **"ಹರಿಹರನ ರಗಳೆಗಳು – ಸಾಂಸ್ಕೃತಿಕ ಮುಖಾಮುಖಿ"** ೧೯ ಎಂಬ ಕೃತಿಯು ಹರಿಹರನ ರಗಳೆಗಳನ್ನು ವ್ಯಷ್ಟಿಪ್ರಜ್ಞೆಯ ಕೇಂದ್ರದ ನೆಲೆಯಲ್ಲಿ ಓದುವುದಕ್ಕಿಂತ ಸಾಂಸ್ಕೃತಿಕ ರಚನೆಗಳೆಂಬ ಸಮಷ್ಟಿ ಕೇಂದ್ರದಲ್ಲಿಟ್ಟು ಓದುವ ಸ್ಥೂಲ ಗ್ರಹಿಕೆಯನ್ನು ೧೭ ವಿವಿಧ ವಿಮರ್ಶಾ ಲೇಖನಗಳ ಮೂಲಕ ಸಾದರಪಡಿಸಿದೆ.

ಡಾ|| ಗುರುಪಾದ ಮರಿಗುದ್ದಿರವರ **"ಹರಿಹರ ಕವಿಯ ಜಾತಿಬೇಧ ನಿರಸನ ರಗಳೆಗಳು"** ೨೦ ಮತ್ತು **"ಹರಿಹರ ಕವಿಯ ಲಿಂಗಬೇಧ ನಿರಸನ ರಗಳೆಗಳು"** ೨೧ – ಈ ಕೃತಿಗಳು ಹರಿಹರನ ಕ್ರಾಂತಿಕಾರಕ ಮನೋಧರ್ಮವನ್ನು ಬಹಳ ಸೂಕ್ಷ್ಮವಾಗಿ ಅರಿಯಲು ಸಹಾಯ ಮಾಡಿದವು. ಇದೇ ಸಂದರ್ಭದಲ್ಲಿ ಹರಿಹರನ ರಗಳೆಗಳನ್ನು ಕುರಿತು ನಡೆದಿರುವ ಸಂಶೋಧನೆಯ ಸಾಲಿನಲ್ಲಿ ಹಲವು ಮಹತ್ವದ ಮಹಾಪ್ರಬಂಧಗಳು ಮೂಡಿಬಂದಿವೆ. ಇವು ಹರಿಹರನನ್ನು ಇನ್ನೂ ವ್ಯಾಪಕವಾಗಿ ಪರಿಚಯಿಸಿಕೊಟ್ಟಿತು. ಹಲವು ವಿಭಿನ್ನ ನೆಲೆಗಳಿಂದ ರಗಳೆಗಳನ್ನು ಅಭ್ಯಸಿಸುವ ಮಾದರಿಯನ್ನು ಇವು ಬಿಂಬಿಸಿವೆ.

೧. **"ಹರಿಹರನ ರಗಳೆಗಳು : ಒಂದು ಸಂಖ್ಯಾನಿರ್ಣಯ"** ೨೨ ಡಾ.ಹಿರೇಮಲ್ಲೂರು ಈಶ್ವರನ್ ಅವರ ಸಮಗ್ರ ಕೃತಿಗಳ ಪರಿಚಯ ಹಾಗೂ ರಗಳೆಗಳ ಸಂಖ್ಯಾನಿರ್ಣಯವನ್ನು ಕುರಿತಾದ ಮಹತ್ವದ ಅಂಶಗಳನ್ನೊಳಗೊಂಡಿದೆ. ಕನ್ನಡ ಸಾಹಿತ್ಯದಲ್ಲಿ ಹರಿಹರನ ಒಂದು ಸಮಗ್ರ ನೋಟವನ್ನು ಬಿಂಬಿಸುವ ಈ ಕೃತಿಯು ಕವಿಯ ಜೀವನ ದೃಷ್ಟಿ ಮತ್ತು ಕಾವ್ಯದೃಷ್ಟಿಯನ್ನು ಅರಿಯಲು ಸಹಕಾರಿಯಾಗುತ್ತದೆ.

---

ಅಡಿಟಿಪ್ಪಣಿಗಳು : ೧೭. ಹರಿಹರ ಕವಿಯ ಬಸವರಾಜ ದೇವರ ರಗಳೆ – ಪ್ರೊ.ಟಿ.ಎಸ್. ವೆಂಕಣ್ಣಯ್ಯ
೧೮. ಹರಿಹರದೇವ– ಕೆ.ಜಿ.ಕುಂದಣಗಾರ, ಕ.ಸ.ಪ., ೨೦೧೩
೧೯. ಹರಿಹರನ ರಗಳೆಗಳು – ಸಾಂಸ್ಕೃತಿಕ ಮುಖಾಮುಖಿ – ಡಾ.ಶಿವಾನಂದ ಎಸ್. ವಿರಕ್ತಮಠ, ಕ.ವಿ.ವಿ., ೨೦೧೩;
೨೦. ಹರಿಹರ ಕವಿಯ ಜಾತಿಬೇಧ ನಿರಸನ ರಗಳೆಗಳು – ಡಾ|| ಗುರುಪಾದ ಮರಿಗುದ್ದಿ, ಸಿಂದಗಿ, ೨೦೦೧;
೨೧. ಹರಿಹರ ಕವಿಯ ಲಿಂಗಬೇಧ ನಿರಸನ ರಗಳೆಗಳು – ಡಾ|| ಗುರುಪಾದ ಮರಿಗುದ್ದಿ, ಕನ್ನಡ ವಿ.ವಿ., ೨೦೦೮;
೨೨. ಹರಿಹರನ ರಗಳೆಗಳು – ಡಾ. ಹಿರೇಮಲ್ಲೂರು ಈಶ್ವರನ್, ಮೈ.ವಿ.ವಿ. ೧೯೭೧

೨. **"ಹರಿಹರನ ವ್ಯಕ್ತಿತ್ವ ಹಾಗೂ ಕವಿತ್ವ"** ೧೩ – ಡಾ.ಬಿ.ಬಿ. ಹೆಂಡಿರವರ ಈ ಮಹಾಪ್ರಬಂಧದಲ್ಲಿ ಹರಿಹರನ ಜೀವನ ಮತ್ತು ಕೃತಿಗಳ ಮಹತ್ವದ ವಿಚಾರಗಳು ಮತ್ತು ವಿಭಿನ್ನ ನೆಲೆಗಳಿಂದ ಕೂಡಿದ ವಿಮರ್ಶೆಯು ವ್ಯಕ್ತವಾಗಿದೆ.

೩. **"ಹರಿಹರ ಕವಿಯ ಸ್ತ್ರೀ ಪಾತ್ರದರ್ಶನ"** ೧೪ – ಡಾ.ಬಿ.ಸಿ. ಜವಳಿರವರ ಈ ಮಹಾಪ್ರಬಂಧವು ಹರಿಹರನ ಕೃತಿಗಳಲ್ಲಿನ ಸ್ತ್ರೀಪಾತ್ರ ಕೇಂದ್ರೀಕೃತ ಅಧ್ಯಯನವಾಗಿದ್ದು, ಆ ಪಾತ್ರಗಳ ಮಹತ್ವವನ್ನು ವಿಶ್ಲೇಷಿಸುವ ಅರ್ಥಪೂರ್ಣ ಅಭಿವ್ಯಕ್ತಿಯಾಗಿದೆ.

೪. **Harihara's Ragales linguistic analysis** – ೧೫ ಡಾ॥ ಸಂಗಮೇಶ ಸವದತ್ತಿ ಮಠರವರ ಈ ಮಹಾಪ್ರಬಂಧವು ಹರಿಹರನ ರಗಳೆಗಳ ಭಾಷಿಕ ಅಧ್ಯಯನ ಮತ್ತು ಭಾಷಿಕನೆಲೆಗಳನ್ನು ಪರಿಚಯಿಸುವುದಾಗಿದೆ.

೫. **"ಹರಿಹರನ ರಗಳೆಗಳು – ಒಂದು ಸಾಂಸ್ಕೃತಿಕ ಅಧ್ಯಯನ"** ೧೬ – ಎಂಬ ಸಂಶೋಧನ ಮಹಾಪ್ರಬಂಧವು ಡಾ. ಸದಾನಂದ ಪಾಟೀಲರವರಿಂದ ಪ್ರಕಟವಾಗಿದೆ. ಹರಿಹರನ ರಗಳೆಗಳಲ್ಲಿ ದೊರೆಯುವ ಐತಿಹಾಸಿಕ, ವಾಸ್ತವ ಅಂಶಗಳೊಂದಿಗೆ ಸಾಂಕೇತಿಕ ಹಿನ್ನೆಲೆಯ ಪವಾಡಗಳನ್ನು, ಶಿವಭಕ್ತರ ವಚನಗಳನ್ನು, ಶಾಸನಗಳನ್ನು ಮತ್ತು ಇತರ ಅವಶ್ಯಕ ಕೃತಿಗಳನ್ನು ಪೂರಕ ಸಾಮಾಗ್ರಿಯಾಗಿ ಬಳಸಿಕೊಂಡು ಪೂರೈಸಿದ ರಗಳೆಗಳ ಸಾಂಸ್ಕೃತಿಕ ಚಿತ್ರಣ ಇಲ್ಲಿದೆ.

೬. **"ಹರಿಹರನ ರಗಳೆಗಳು – ಒಂದು ಸಾಹಿತ್ಯಕ ಅಧ್ಯಯನ"** ೧೭ ಎಂಬ ಸಂಶೋಧನ ಮಹಾಪ್ರಬಂಧವು ಡಾ.ಕೆ.ಪಿ.ಮಹಾದೇವಯ್ಯರವರಿಂದ ಮೂಡಿಬಂದಿದೆ. ಸಾಹಿತ್ಯದ ದೃಷ್ಟಿಯಿಂದ ಪ್ರಮುಖ ಎನಿಸುವ ರಗಳೆಗಳನ್ನು ಅಧ್ಯಯನದ ವ್ಯಾಪ್ತಿಗೆ ತೆಗೆದುಕೊಂಡು ಹರಿಹರನಿಗೂ ಮತ್ತು ವಚನಕಾರರಿಗೂ ಇರುವ ಸಾಮ್ಯತೆ, ಪ್ರಭಾವ ಪ್ರೇರಣೆಯ ಅಂಶಗಳು ಅಭಿವ್ಯಕ್ತವಾಗಿದೆ. ಶೈಲಿ, ವರ್ಣನೆ, ಸಾಮಾಜಿಕ, ವೈಚಾರಿಕ ವಿಚಾರಗಳನ್ನು ಬದುಕಿನ ದ್ವಂದ್ವ ಅಂಶಗಳು, ಭಾವನೆಗಳಿಗೆ ಬೆಲೆಕೊಡುವ ಹರಿಹರನ ಕೌಶಲಗಳೇ ಮೊದಲಾದ ಸಾಹಿತ್ಯಕ ವಿಚಾರಗಳ ಮೇಲೆ ಬೆಳಕು ಚೆಲ್ಲಿದೆ.

೭. **"ಹರಿಹರನ ರಗಳೆಗಳ ವಸ್ತು ಹಾಗು ವಿನ್ಯಾಸ"** ೧೮ – ಡಾ.ರವಿಶಂಕರ್.ಜೆ ರವರಿಂದ, **"ಹರಿಹರನ ರಗಳೆಗಳಲ್ಲಿ ಶಿವತತ್ವ"** ೧೯ – ಡಾ. ನೇತ್ರಾವತಿ ಮಳಗೇರಿ,

---

ಅಡಿಟಿಪ್ಪಣಿಗಳು :- ೧೩. ಡಾ. ಬಿ.ಬಿ.ಹೆಂಡಿ – ಹರಿಹರನ ವ್ಯಕ್ತಿತ್ವ ಹಾಗೂ ಕವಿತ್ವ; ೧೪. ಹರಿಹರ ಕವಿಯ ಸ್ತ್ರೀ ಪಾತ್ರದರ್ಶನ– ಡಾ.ಬಿ.ಸಿ. ಜವಳಿ; ೧೫. Hariharas Ragales linguistic analysis – ಡಾ॥ ಸಂಗಮೇಶ ಸವದತ್ತಿ ಮಠ, ಕ.ವಿ.ವಿ., ಧಾರವಾಡ ವಿ.ವಿ., ೧೯೮೧; ೧೬. ಹರಿಹರನ ರಗಳೆಗಳು – ಒಂದು ಸಾಂಸ್ಕೃತಿಕ ಅಧ್ಯಯನ –ಡಾ. ಸದಾನಂದ ಪಾಟೀಲ, ಕರ್ನಾಟಕ ವಿ.ವಿ., ೧೯೯೭; ೧೭. ಹರಿಹರನ ರಗಳೆಗಳು – ಒಂದು ಸಾಹಿತ್ಯಕ ಅಧ್ಯಯನ – ಡಾ.ಕೆ.ಪಿ.ಮಹಾದೇವಯ್ಯ; ೧೮. ಹರಿಹರನ ರಗಳೆಗಳ ವಸ್ತು ಹಾಗು ವಿನ್ಯಾಸ – ಡಾ.ರವಿಶಂಕರ್.ಜೆ; ೧೯. ಹರಿಹರನ ರಗಳೆಗಳಲ್ಲಿ ಶಿವತತ್ವ – ಡಾ. ನೇತ್ರಾವತಿ ಮಳಗೇರಿ, ಗುಲಬರ್ಗ ವಿ.ವಿ, ೨೦೦೪

**“ಕನ್ನಡದಲ್ಲಿ ನಂಜಿಯಣ್ಣ ಸಾಹಿತ್ಯ ಒಂದು ಅಧ್ಯಯನ”** ೩೦ ಎಂಬ ಮಹಾಪ್ರಬಂಧವು – ಡಾ॥ಎನ್.ಎಸ್.ತಾರಾನಾಥರವರಿಂದ, **“ಹರಿಹರನ ರಗಳೆಗಳಲ್ಲಿ ಸಂಘರ್ಷದ ನೆಲೆಗಳು”** ೩೧ – ಎಂಬ ಪಿಎಚ್.ಡಿ ಪ್ರಬಂಧವು ಎನ್.ಡಿ. ತಿಪ್ಪೇಸ್ವಾಮಿಯವರಿಂದ ರಚಿಸಲ್ಪಟ್ಟಿದೆ. ಈ ಮೇಲ್ಕಂಡ ಸಂಶೋಧನ ಪ್ರಬಂಧಗಳು ಹರಿಹರ ಕವಿಯ ಅಧ್ಯಯನದ ಇನ್ನೂ ಬೇರೆ ಬೇರೆ ವಲಯಗಳ ಆಯಾಮಗಳನ್ನು ಪರಿಚಯಿಸಿದವು.

ಈ ಮೂಲಕ ಹರಿಹರನ ರಗಳೆಗಳ ಕುರಿತು ನಡೆದಿರುವ ಸಂಶೋಧನಾಧ್ಯಯನಗಳ ಸ್ಥೂಲಪರಿಚಯದೊಂದಿಗೆ ಅದರ ಜೀವಂತಿಕೆಯನ್ನು ಮತ್ತಷ್ಟು ವಿಸ್ತರಿಸುವ ದೃಷ್ಟಿಕೋನದಿಂದ ಹರಿಹರನ ರಗಳೆಗಳಲ್ಲಿ ಶಿವ ಮತ್ತು ಭಕ್ತರ ಸಂಬಂಧದ ನೆಲೆಗಳು” ಎಂಬ ವಿಷಯವನ್ನು ಸಂಶೋಧನೆಗಾಗಿ ಆಯ್ದುಕೊಂಡಿರುತ್ತೇನೆ. ಇಲ್ಲಿ ಶಿವ ಮತ್ತು ಭಕ್ತರ ಸಂಬಂಧವು ಆತ್ಮೀಯತೆಯಿಂದ ಕೂಡಿದ್ದು, ಅದು ಸ್ನೇಹಯುತವಾಗಿಯೋ, ಕೌಟುಂಬಿಕ ವಾತ್ಸಲ್ಯ ಬಂಧದಿಂದಲೋ ಅಥವಾ ದಾಸ್ಯಯುತವಾದುದೋ ಆಗಿರಬಹುದು. ಈ ಸಂಬಂಧವು ನಿಶ್ಚಲವಾಗಿದ್ದು ಶಾಂತ, ಧೃತಿ, ಪ್ರೇಮ–ಮಧುರ ಮತ್ತು ಉಗ್ರನಿಷ್ಠ ಭಾವಗಳಿಂದ ರಕ್ಷಣಾತ್ಮಕವಾಗಿರುತ್ತದೆ. ಶಿವನನ್ನು ಬಿಟ್ಟು ಭಕ್ತನಾಗಲಿ, ಭಕ್ತರನ್ನು ಬಿಟ್ಟು ಶಿವನಾಗಲಿ ಇರಲಾರದಂಥ ಪ್ರೇಮಮಯವಾದ, ಅನ್ಯೋನ್ಯ ಸಂಬಂಧವಿದು. ಈ ಹಿನ್ನೆಲೆಗಳಿಂದ ಶಿವ–ಭಕ್ತರ ಸಂಬಂಧ ಮತ್ತು ಭಾವಗಳನ್ನು ವಿಶ್ಲೇಷಿಸುವುದು ಪ್ರಸ್ತುತ ಅಗತ್ಯವೆನಿಸಿದೆ. ರಗಳೆಗಳನ್ನು ಭಕ್ತಿಕೇಂದ್ರಿತವಾಗಿ, ಚಾರಿತ್ರಿಕ, ಸಮಾಜೋ–ಧಾರ್ಮಿಕ ಮತ್ತು ವರ್ತಮಾನದ ಪ್ರಶ್ನೆಗಳ ಹಿನ್ನೆಲೆಗಳಿಂದ ಗಮನಿಸುವುದು ಅವಶ್ಯಕ. ಅಲ್ಲದೆ ರಗಳೆಗಳಲ್ಲಿ ವ್ಯಕ್ತವಾಗುವ ಹೊಸದೃಷ್ಟಿಕೋನಗಳಾದ ಸಾಮಾಜಿಕ ಮೌಲ್ಯಗಳು, ಶಿವತತ್ವ, ಭಕ್ತರ ಪರೀಕ್ಷೆ, ಪವಾಡಗಳ ಮಹತ್ವ, ಭಕ್ತರ ಜೀವನ ದರ್ಶನ, ಆದರ್ಶ ಮತ್ತು ಶಿವಾನುಭವ ಸ್ವರೂಪಗಳ ವಿಶ್ಲೇಷಣೆಯ ಕಡೆಗೂ ಅಧ್ಯಯನ ಗಮನನೀಡಿದೆ. ರಗಳೆಗಳ ರಾಚನಿಕ ಸ್ವರೂಪ, ತಂತ್ರ, ಶೈಲಿ ಮತ್ತು ವಿನ್ಯಾಸಗಳನ್ನು ಶಿವ ಮತ್ತು ಭಕ್ತರ ಸಂಬಂಧದ ಹಿನ್ನೆಲೆಯಲ್ಲಿ ಪರಿಶೀಲಿಸಿದೆ. ಈ ಮಹಾಪ್ರಬಂಧದಲ್ಲಿ ಹರಿಹರನ ರಗಳೆಗಳ ಅಧ್ಯಯನಕ್ಕೆ ಪೂರಕವಾದ ಎಲ್ಲಾ ಅಂಶಗಳನ್ನು ಚರ್ಚಿಸಿ, ಹೊಸ ನೆಲೆಗಳನ್ನು ಸಂಶೋಧಿಸುವ ಪ್ರಯತ್ನವನ್ನು ಮಾಡಲಾಗಿದೆ.

---

**ಅಡಿಟಿಪ್ಪಣಿಗಳು :** ೩೦. ಕನ್ನಡದಲ್ಲಿ ನಂಜಿಯಣ್ಣ ಸಾಹಿತ್ಯ ಒಂದು ಅಧ್ಯಯನ – ಡಾ॥ಎನ್.ಎಸ್.ತಾರಾನಾಥ, ಮೈ.ವಿ.ವಿ ೧೯೮೫;
೩೧. ಹರಿಹರನ ರಗಳೆಗಳಲ್ಲಿ ಸಂಘರ್ಷದ ನೆಲೆಗಳು – ಎನ್.ಡಿ. ತಿಪ್ಪೇಸ್ವಾಮಿ, ಕ.ವಿ.ವಿ ೨೦೦೮

# ಅಧ್ಯಾಯ : ೨

## ಹರಿಹರನ ರಗಳೆಗಳ ಮಹತ್ವ ಮತ್ತು ಕಾವ್ಯೋದ್ದೇಶ

### ೨.೧ : ಹರಿಹರನ ಜೀವನ ಮತ್ತು ಕಾವ್ಯೋದ್ದೇಶ :–

ಹರಿಹರನು ೧೩ ನೆಯ ಶತಮಾನದ ಪೂರ್ವಾರ್ಧದಲ್ಲಿ ಬದುಕಿದ್ದ ಕವಿ. ಅಂದು ೧೧–೧೨ನೇ ಶತಮಾನದ ಕಲ್ಯಾಣನಾಡಿನ ಶಿವಶರಣರಿಂದ ಕ್ರಾಂತಿಯ ಸುಳಗಾಳಿ ಬೀಸುತ್ತಿದ್ದ ಕಾಲ. ಸಾಹಿತ್ಯ, ಸಮಾಜ, ಧರ್ಮ ಮೊದಲಾದ ಕ್ಷೇತ್ರಗಳಲ್ಲಿನ ಅಂಧಕಾರವನ್ನು ಕಿತ್ತೊಗೆಯುವ ಮೂಲಕ ನವಯುಗಕ್ಕೆ ಸಂಕ್ರಮಣ ಕಾಲವಾಗಿದ್ದ ಇಂಥ ಸಮಯದಲ್ಲಿ ತನ್ನ ಕಾವ್ಯಕೃಷಿಯಲ್ಲಿ ತೊಡಗಿದ ಹರಿಹರನು ಸೂಕ್ತ ಸಮಯದಲ್ಲಿ ತಾಳಿದ ನಿಲುವು ಅರ್ಥಪೂರ್ಣ ಹಾಗು ವಿಶಿಷ್ಟವಾದುದು.

ಶಿವಶರಣರ ಜೀವನದಿಂದ ಪ್ರಭಾವಿತನಾಗಿ ಕಾವ್ಯಕೃತಿಗಳನ್ನು ರಚಿಸಿದ ಹರಿಹರನು ಒಬ್ಬ ಭಕ್ತಕವಿ. ಮಹಾದೇವ ಮತ್ತು ಶರ್ವಾಣಿಯರ ಮಗನಾದ ಇವನು ಮಾಯಿದೇವ ಎಂಬ ಗುರುವನ್ನು ಹೊಂದಿದ್ದನು. ಕ್ರಿ.ಶ. ೧೩ನೇ ಶತಮಾನದಲ್ಲಿ ಜೀವಿತವಿದ್ದ ಇವನು ನರಸಿಂಹ ಬಲ್ಲಾಳನಲ್ಲಿ ಕರಣಿಕಹುದ್ದೆಯಲ್ಲಿದ್ದವನು. ಇದನ್ನು ಸಮರ್ಥಿಸುವಂತೆ ಕರ್ಣಾಟಕ ಕವಿಚರಿತೆಯಲ್ಲಿ ಹೀಗೆ ಹೇಳಿದೆ. "ಇವನು ವೀರಶೈವ ಕವಿ; ನರಸಿಂಹಬಲ್ಲಾಳನ (೧೧೮೧–೧೧೭೩) ಆಳ್ವಿಕೆಯಲ್ಲಿ ಹಳೆಯಬೀಡಿನಲ್ಲಿ 'ಕರಣಿಕರ ಕುಲತಿಲಕ'ನಾಗಿದ್ದನು". ಇವನ ಮನಸ್ಸಿಗೆ ಈ ವೃತ್ತಿ ಇಚ್ಛಿಸದೆ ಶಿವಧ್ಯಾನ ಚಿತ್ತವನ್ನು ಬೆಳಸಿಕೊಂಡಿದ್ದ. ಇವನಲ್ಲಿ ಆ ಅಪಾರವಾದ ಭಕ್ತಿ ಎಂತಹ ಚೇತೋಹಾರಿ ಕೆಲಸವನ್ನು ಮಾಡಿಸಲು ಉತ್ಸಾಹ ತುಂಬಬಲ್ಲುದು ಎಂಬುದಕ್ಕೆ ಹರಿಹರನ ಜೀವಿತ ಅವಧಿಯಲ್ಲಿನ ಘಟನಾವಳಿಗಳನ್ನು ಬಿ.ಎಸ್.ಸ್ವಾಮಿ ರವರ "ಕವಿ ಚಕ್ರೇಶ್ವರ" ಕೃತಿಯಲ್ಲಿ ಚಿತ್ರಿಸಿದ್ದಾರೆ. ಕವಿಯ ಹುಟ್ಟು, ಕುಟುಂಬ, ವಿದ್ಯಾಭ್ಯಾಸ, ಗುರುಭಕ್ತಿ, ವಿರೂಪಾಕ್ಷ ಭಕ್ತಿ, ಕೃತಿರಚನೆ, ಧ್ಯೇಯ, ಸಾಧನೆ ಇವೇ ಮೊದಲಾದ ಸಂಗತಿಗಳಲ್ಲಿ ಬರುವ ದಂತಕಥೆಗಳು ಪವಾಡಗಳಾಗಿ ಹೆಸರು ಮಾಡಿವೆ.

೧. ಸದಾ ವಿರೂಪಾಕ್ಷನ ಧ್ಯಾನದಲ್ಲಿ ಮಗ್ನನಾಗಿದ್ದ ಹರಿಹರನಿಗೆ ಸಹವರ್ತಿಗಳ ಕುಹಕದಿಂದ ಮಹಾರಾಜರು ಒಮ್ಮೆ ಹನ್ನೆರಡು ವರ್ಷಗಳ ದೀರ್ಘಲೆಕ್ಕಾಚಾರಗಳ ಪಟ್ಟಿಯನ್ನು ಕೇಳಿದಾಗ, ಇವನಿಗೆ ಅವಮಾನವಾಗಬಹುದೆಂದೆಣಿಸಿದ ಜನಗಳು ಆಶ್ಚರ್ಯಗೊಳ್ಳುವಂತೆ ಕ್ಷಣ ಮಾತ್ರದಲ್ಲೇ ಲೆಕ್ಕವನ್ನು ತಂದೊಪ್ಪಿಸಿದ. ತಾನು ಲೆಕ್ಕವನ್ನೊಪ್ಪಿಸುವವರೆಗೂ ಸೂರ್ಯನು ಚಲಿಸುವಂತಿಲ್ಲ, ಈ ಮಾತಿಗೆ ವಿರೂಪಾಕ್ಷನ ಆಣೆ ಇದೆ ಎಂದು ಶಪಥ ಮಾಡಿದನು. ಅದರಂತೆ ಇವನು ಲೆಕ್ಕಒಪ್ಪಿಸುವವರೆಗೂ ಸೂರ್ಯನು ಸ್ತಬ್ಧವಾಗಿದ್ದನಂತೆ !

೨. ಒಮ್ಮೆ ಮಹಾರಾಜರು, ಮಂತ್ರಿವರ್ಯರು ಹಾಗು ಇತರ ಸಹಚರರೊಂದಿಗೆ ಹರಿಹರನು ಕಾರ್ಯಾರ್ಥವಾಗಿ ಯಾವುದೋ ಊರಿಗೆ ತೆರಳಿ ವಾಪಾಸ್ಸಾಗುತ್ತಿರುವಾಗ ಉಂಟಾದ ಗುಡುಗು ಸಿಡಿಲು ಭರಿತವಾದ ಮಳೆಯಿಂದ ರಕ್ಷಣೆ ಪಡೆಯಲೋಸುಗ ಎಲ್ಲರೂ ವಿಷ್ಣುವಿನ ದೇವಸ್ಥಾನದ ಒಳಹೊಕ್ಕರು. ಆದರೆ ಹರಿಹರ ಮಾತ್ರ ಆ ದೇವಾಲಯದೊಳಗೆ, ಪ್ರವೇಶ ಮಾಡಲು ಇಷ್ಟಪಡದೆ ಹಾಗೇ ನಡೆದು ಹೋಗುತ್ತಿದ್ದಾಗ, ಕುಪಿತಗೊಂಡ ವಿಷ್ಣುಭಕ್ತರು, ಈ ಮಳೆಯಲ್ಲಿ ಸ್ವಲ್ಪವೂ ನೆನೆಯದೆ ನೀನು ಮನೆಯನ್ನು ತಲುಪಿದ್ದೇ ಆದಲ್ಲಿ, ನಮ್ಮ ವಿಷ್ಣುವಿಗಿಂತ ನಿನ್ನ ಶಿವನೇ ಹೆಚ್ಚು ಎಂಬ ಸವಾಲನ್ನು ಎಸೆದರು. ಆ ಸವಾಲನ್ನು ಸ್ವೀಕರಿಸಿ ಮಳೆಯಲ್ಲಿ ನಡೆದೇ ಹೋದರೂ ಹರಿಹರ ನೆನೆಯದೇ ತನ್ನ ಶಿವಭಕ್ತಿಯ ಶಕ್ತಿಯನ್ನು ಮೆರೆದನು.

೩. ಆಸ್ಥಾನದಲ್ಲಿ ಹರಿಹರನು ಲೆಕ್ಕವನ್ನು ಬರೆಯುತ್ತಿದ್ದಾಗ, ಒಮ್ಮೆ ತನ್ನ ಕೈಗಳನ್ನು ಹೊಸೆದುಕೊಳ್ಳುತ್ತಾ ವಿಚಿತ್ರವಾಗಿ ನಡೆದುಕೊಳ್ಳಲು ಪ್ರಾರಂಭಿಸಿದನು, ರಾಜನು ಸೇರಿದಂತೆ ಆಸ್ಥಾನಿಕರು ಇವನಿಗೆ ಎಲ್ಲೋ ಮರಳು ಎಂದು ಭಾವಿಸಿದರು. ಹರಿಹರನನ್ನು ಎಲ್ಲರೂ ಅಪಹಾಸ್ಯಮಾಡಿ ಕಾರಣಕೇಳಿದಾಗ, ಹಂಪೆಯ ವಿರೂಪಾಕ್ಷ ದೇವಾಲಯದಲ್ಲಿ ಆರತಿ ಮಾಡುವಾಗ ತೆರೆಯ ಬಟ್ಟೆಗೆ ಬೆಂಕಿ ತಗುಲಿ ಯಾವ ಅನಾಹುತವಾಗಲಿದ್ದಿತು! ಅದನ್ನು ಒರೆಸಿ ಆರಿಸಿದೆ ಎಂಬ ಉತ್ತರ ಕೊಟ್ಟನು. ಎಲ್ಲರೂ ಹರಿಹರನನ್ನು ಗೇಲಿ ಮಾಡಿ ನಗಲಾರಂಭಿಸಿದರು. ರಾಜನ ಆಜ್ಞೆಯಂತೆ ಸೇವಕರಿಬ್ಬರನ್ನು ಅಲ್ಲಿಗೆ ಕಳಿಸಿ ವಿಷಯವನ್ನು ವಿಚಾರಿಸಿ ನೋಡಿದಾಗ ನಿಜಾಂಶವು ಅದೇ ಆಗಿತ್ತು.

೮. ಆಸ್ಥಾನದಲ್ಲಿದ್ದ ಚಾಡಿಕೋರರ ಮಾತುಗಳಿಂದ ಬೇಸತ್ತ ಹರಿಹರನು ತನ್ನ ಹುದ್ದೆಯನ್ನು ತ್ಯಜಿಸಿ ಹಂಪೆ ವಿರೂಪಾಕ್ಷನ ಸನ್ನಿಧಿಗೆ ತೆರಳುವಾಗ ಮಾರ್ಗಮಧ್ಯದಲ್ಲಿದ್ದ ಹರಿಹರೇಶ್ವರನ ದೇಗುಲದಲ್ಲಿ ಬ್ರಹ್ಮರಾಕ್ಷಸವೊಂದು ಸೇರಿಕೊಂಡಿದ್ದು, ಪೂಜಾಕಾರ್ಯವೇ ಸ್ಥಗಿತಗೊಂಡಿತ್ತು. ಆ ದೇವಾಲಯಕ್ಕೆ ಹರಿಹರನ ಪ್ರವೇಶವಾದ ಕೂಡಲೇ ರಕ್ಕಸ ಇವನಿಗೆ ವಂದಿಸಿ ಅಲ್ಲಿಂದ ತೆರಳಿತು. ಅಂದಿನಿಂದ ಸ್ಥಗಿತಗೊಂಡಿದ್ದ ಪೂಜಾಕಾರ್ಯ ನಿರಂತರವಾಗಿ ನಡೆಯಲಾರಂಭಿಸಿತು.

೫. ಹರಿಹರ ನಂತರ ಶಿವಪುರಕ್ಕೆ ಆಗಮಿಸಿ, ಸೋಮನಾಥೇಶ್ವರನಿಗೆ ನಮಿಸಿ ಆ ರಾತ್ರಿ ಅಲ್ಲಿಯೇ ತಂಗಿದ್ದರು. ಆ ದಿನ ರಾತ್ರಿ ವಿಶೇಷವೆಂಬಂತೆ ವಿರೂಪಾಕ್ಷ ಸ್ವಾಮಿಯು ತನ್ನ ಎಲ್ಲಾ ಪರಿಚಾರಕರ ಸ್ವಪ್ನದಲ್ಲಿ ನನ್ನ ಮಗನಾದ ಹರಿಹರನು ಈ ಊರಿಗೆ ಬಂದಿದ್ದಾನೆ. ಅವನು ಸೋಮನಾಥನ ಗುಡಿಯಲ್ಲಿ ಉಳಿದುಕೊಂಡಿರುವನು, ಅವನನ್ನು ಸ್ವಾಗತಿಸಲು ಆಜ್ಞೆಯಿತ್ತನು. ಅದರಂತೆ ಪಲ್ಲಕ್ಕಿಯೊಂದಿಗೆ ಹೋದ ಆ ಭಕ್ತ ಜನರು ಈ ವಿಷಯವನ್ನು ನಿವೇದಿಸಿದರು. ಅವರು ತಮ್ಮೊಡನೆ ತಂದಿದ್ದ ಶ್ರೀ ಮುಖವನ್ನೇ ಆ ಪಲ್ಲಕ್ಕಿಯಲ್ಲಿರಿಸಿ ಮೆರವಣಿಗೆ ಮಾಡುತ್ತಾ ಹಾಡುತ್ತಾ ಭಕ್ತಿ ಪರವಶರಾಗಿ ಸಾಗಿಬಂದರು. ನಂತರ ಈ ಹಾಡೇ ಪಂಪಾಶತಕವಾಗಿ ಹೊರಹೊಮ್ಮಿತು.

೬. ಹಂಪೆಯ ವಿರೂಪಾಕ್ಷ ದೇವಾಲಯಕ್ಕೆ ಆಗಮಿಸಿದ ಹರಿಹರನನ್ನು ಜಂಗಮಾಕಾರದಿಂದ, ಲಿಂಗದಿಂದ ಹೊರಬಂದು ಮುದ್ದಾಡಿದ ದೃಶ್ಯವನ್ನು ನೋಡಿದ ಜನರು ಸಂತೋಷಿಸಿ ಅವನನ್ನು ಸ್ತುತಿಸಿದರು. ಹರಿಹರನ ವಾಸಕ್ಕೆ ಒಂದು ಮನೆಯನ್ನು ಅನುವು ಮಾಡಿಕೊಟ್ಟರು. ಅಲ್ಲಿದ್ದ ರಾಕ್ಷಸನ ಸದ್ದಡಗಿಸಿ, ತನ್ನ ಸೇವಕನನ್ನಾಗಿಸಿಕೊಂಡಿದ್ದನು. ದಿನನಿತ್ಯ ಬೆಳಗಿನ ಜಾವಕ್ಕೆ ಎದ್ದು ತುಂಗಾಭದ್ರಾ ನದಿಯಲ್ಲಿ ಮುಳುಗೆದ್ದು ತರತರದ ಹೂಗಳ ಸಂಗ್ರಹ ಮಾಡಿಕೊಂಡು ಬಂದು, ವಿರೂಪಾಕ್ಷನನ್ನು ಭಕ್ತಿಯಿಂದ ಅಲಂಕರಿಸಿ ಒಲುಮೆಯಿಂದ ಪೂಜಿಸುತ್ತಿದ್ದನು. ಒಮ್ಮೆ ಹರಿಹರನನ್ನು ಬಯಸಿ, ಒಲಿಸಿಕೊಳ್ಳಲು ಹರಸಾಹಸಮಾಡಿ ಅವನ ನೈಜಭಕ್ತಿಯ ಮುಂದೆ ಸೋತು ಶರಣಾಗಿ ಭಕ್ತಳಾಗಿ ಪರಿವರ್ತಿತಳಾಗಿ ವಿರೂಪಾಕ್ಷ ದೇವಾಲಯದ ಅಂಗಳವನ್ನು ಶುಚಿಮಾಡುವ ಕಾಯಕಭರಿತಳಾದಳು.

೭. ಹರಿಹರನಿಗೆ ಒಮ್ಮೆ ಶೀತಜ್ವರ ಬಂದಿದ್ದಾಗ ೩ ತಿಂಗಳವರೆಗೂ ತುಂಗಭದ್ರಾ ನದಿಯಲ್ಲೇ ಮುಳುಗಿ ಶಿವಧ್ಯಾನ ಮಾಡಿ ಪವಾಡ ಮೆರೆದನು. ತನ್ನ ತಲೆ ಮೇಲೆ ಇದ್ದ ಟೊಪ್ಪಿಗೆ ಕೆಳಗೆ ಬಿದ್ದು ಬ್ರಾಹ್ಮಣರೆಲ್ಲಾ ಕುಹಕವಾಡಲು, ಶಿವನೇ ಸರ್ವೋತ್ತಮನೆಂದು ಸಾರಲು ಬಿದ್ದ ಟೊಪ್ಪಿಗೆ (ಮುಡಿಗೆ) ಯನ್ನು ಎತ್ತುವವರು ಯಾರಾದರೂ ಉಂಟೆ? ಎಂದು ಸವಲಾಕಿ ಶಿವಮಹಿಮೆಯ ಸ್ವರೂಪವನ್ನು ತನ್ನ ಮುಡಿಗೆಯ ಅಷ್ಟಕದಲ್ಲಿ ಮೆರೆದನು.

೮. ಹರಿಹರನ ಸೋದರಳಿಯನಾದ ರಾಘವಾಂಕನು ಬರೆದಿದ್ದ "ಹರಿಶ್ಚಂದ್ರ ಕಾವ್ಯ"ಕ್ಕೆ ರಾಜನಿಂದ ಮಾನ್ಯತೆ ದೊರೆತು, ಬಿರುದಾವಳಿಯ ಜೊತೆ ಉಡುಗೊರೆಗಳನ್ನು ತಂದು ಸಂಭ್ರಮಿಸಿದನು. ಶಿವನನ್ನು ಬಿಟ್ಟು ಅನ್ಯರನ್ನು ಹೊಗಳಿ ಕಾವ್ಯ ರಚಿಸಿರುವುದು ತರವಲ್ಲ ಎಂದು ವಾದಿಸಿದ ಹರಿಹರನಿಗೆ ಪ್ರತ್ಯುತ್ತರವಾಗಿ ರಾಘವಾಂಕನು ಹಾಗೇ ನೋಡಿದರೆ ಚೋಳ ಮಹಾರಾಜನ ಕುರಿತು ನೀನು ರಗಳೆಗಳಲ್ಲಿ ಉಲ್ಲೇಖಿಸಲಿಲ್ಲವೇ? ಎಂದು ಜಂಭದಿಂದ ನುಡಿದನು ಕುಪಿತಗೊಂಡ ಹರಿಹರ ಝಾಡಿಸಿ ಒದ್ದನು. ಇದರಿಂದ ಐದು ಹಲ್ಲುಗಳು ಉದುರಿದವು. ಐದು ಶಿವಕಾವ್ಯಗಳನ್ನು ರಚಿಸಿ, ಕ್ಷಮೆಯಾಚಿಸಿದನಂತರವೇ ರಾಘವಾಂಕನಿಗೆ ಮರಳಿ ಹಲ್ಲುಗಳು ಬಂದವು.

೯. ಕೈಲಾಸದಲ್ಲಿ ಶಿವನಸಭೆಯಲ್ಲಿರುವ ಗಣಹರುಷನೆಂಬುವನು, ಗಣಪದವಿಯಲ್ಲಿರುವವರ ಕಥೆಗಳನ್ನು ವಿವರವಾಗಿ ಹೇಳಬೇಕೆಂದು ಶಿವನಲ್ಲಿ ವಿನಂತಿಸಿದಾಗ, "ಶಿವನು ಒಳ್ಳೆಯ ಪ್ರಶ್ನೆ, ಇದರ ಕುರಿತು ವಿಸ್ತಾರವಾದ ಕಥೆಗಳನ್ನು ಭೂಲೋಕಕ್ಕೆ ಹೋಗಿ ರಚನೆಮಾಡು" ಎಂದು ಆಜ್ಞಾಪಿಸಿದನಂತೆ. ಆದ್ದರಿಂದ ಹರಿಹರನು ಭೂಲೋಕದಲ್ಲಿ ಜನ್ಮತಾಳಿ ಶಿವಕಥೆಗಳನ್ನು ರಚನೆ ಮಾಡಿದ್ದಾನೆ, ಎಂಬ ಈ ದಂತ ಕಥೆ ಹರಿಹರನಲ್ಲಿ ಅಡಗಿದ್ದ ಶಿವಭಕ್ತಿಗೆ ಮೂಲವನ್ನು ತಿಳಿಸಿದಂತಿದೆ. ಆಗ ಗಣಹರುಷ ಶಿವನಿಂದ ಆಜ್ಞಿತನಾಗಿ ಭೂಲೋಕದಲ್ಲಿ ಮಹಾದೇವ ಶರ್ವಾಣಿಯರಿಗೆ ಮಗನಾಗಿ ಹುಟ್ಟುವನು. ಮಾಯಿದೇವ ಗುರುಗಳಿಂದ ಶಿಷ್ಯದೀಕ್ಷೆ ಪಡೆದು ವಿರೂಪಾಕ್ಷನ ಪೂಜೆಯಲ್ಲಿಯೇ ಲೀನನಾಗಿದ್ದನು.

ಹರಿಹರನಲ್ಲಿದ್ದ ಭಕ್ತಿಯ ಆವೇಶ ಇಂತಹ ಕಾರ್ಯಗಳನ್ನು ಮಾಡಿಸಲು ಪ್ರೇರಣೆ ನೀಡಿರಬೇಕು. ಮನುಷ್ಯರಲ್ಲಿ ಧ್ಯಾನ, ಯೋಗ ಜ್ಞಾನ ಮತ್ತು ಭಕ್ತಿಮಾರ್ಗಗಳು ಯಾವುದೇ ಸಂದರ್ಭದಲ್ಲೂ ಮನಸ್ಸಿನಲ್ಲಿ ಪರಿಪೂರ್ಣತೆಯನ್ನು ಉಂಟುಮಾಡುತ್ತವೆ. ಹರಿಹರನು ಇಲ್ಲಿ ಭಕ್ತಿಮಾರ್ಗಕ್ಕೆ ಒಳಗಾಗಿ, ತನ್ನ ಕಥಾನಾಯಕನ್ನೊಳಗೊಂಡಂತೆ ಸಮಾಜದ ಜನರನ್ನು ಭಕ್ತಿಯ ರಸದಲ್ಲಿಯೇ ಮುಳುಗೇಳಿಸುತ್ತಾನೆ. ಭಕ್ತಿಮಾರ್ಗದಿಂದ ಪ್ರಚೋದಿತನಾದವನು ತನ್ನೊಂದಿಗೆ ಇರುವವರಿಗೂ ಅಂತಹ ಧನಾತ್ಮಕ, ಪ್ರೇರಣಾತ್ಮಕ ಚಿಂತನೆಗಳನ್ನೇ ಬೋಧಿಸುತ್ತಾನೆ ಎಂಬುದಕ್ಕೆ ಹರಿಹರನ ಜೀವನದ ಘಟನೆಗಳು ಸಾಕ್ಷಿಯಂತಿವೆ ಎಂಬುದು ಗಮನಾರ್ಹ. ಆದರೆ ಕ್ರಮೇಣ ಇತಿಹಾಸದಲ್ಲಿ ಇವುಗಳು ಪವಾಡಗಳಾಗಿ ಉಳಿಯುವಂತಹ ಅವಕಾಶಗಳೇ ಹೆಚ್ಚಾಗುತ್ತದೆ.

ಹರಿಹರನ ಬದುಕಿನಲ್ಲಿ ಶಿವನ ಮೇಲಿನ ಅಪಾರ ನಂಬಿಕೆಯು ಪುರಾತನ ಶಿವಭಕ್ತರ ವ್ಯಕ್ತಿಗಳ ಶಿವಭಕ್ತಿ ಕತೆಗಳ ಪ್ರೇರಣೆಯಿಂದ ಹಾಗು ವಚನ ಸಾಹಿತ್ಯದ ಶಿವಶರಣರ ಮೌಲ್ಯಾದರ್ಶಗಳಿಂದಲೂ ಅವನ ಬದುಕಿನ ಸರ್ವಸ್ವವೂ ಶಿವಮಯವೇ ಆಯಿತೆನ್ನಬಹುದು. ಹೀಗೆ ಭಕ್ತನು ನಂಬಿಕೆಯೊಂದಿಗೆ ಆದರ್ಶಗಳನ್ನು ಇಟ್ಟುಕೊಂಡು ನಡೆಸುವ ಸಾಧನವೇ ಭಕ್ತಿ. ಭಕ್ತನು ಭಗವಂತನ ಸ್ವರೂಪವನ್ನು ಅರಿಯಲು ಪ್ರೇಮ, ಯೋಗ, ಶಾಂತಿ, ಧೃತಿ, ಸ್ನೇಹ-ಬಾಂಧವ್ಯಗಳೇ ಮೊದಲಾದ ಭಾವಗಳ ಮುಖಾಂತರ ತಿಳಿಯಹೊರಡುತ್ತಾನೆ. ಹೀಗೆ ಇವುಗಳ ಮಾದರಿಯನ್ನು ನಾವು ಹರಿಹರನ ರಗಳೆಗಳಲ್ಲಿ ಗುರುತಿಸಲು ಅವಕಾಶಗಳಿವೆ.

ಹರಿಹರನು ಜೀವನದಲ್ಲಿ ಹಲವು ಕಷ್ಟಗಳಿಂದಲೇ ಬೆಳೆದು, ಜೀವನೋಪಾಯಕ್ಕೆ ಮಾರ್ಗಕಾಣದೆ ತನ್ನ ತಂದೆ-ತಾಯಿ, ತಂಗಿಯರಿಗೋಸ್ಕರವಾಗಿಯಾದರೂ ಸೇವಾವೃತ್ತಿಯಲ್ಲೇ ಮನಸ್ಸು ಮಾಡಿ ಅದರ ನಿಷ್ಠುರತೆಯನ್ನು ಅನುಭವಿಸಿ, ಆ ದುಃಖಮಯ ಬದುಕಿನಲ್ಲಿ ಅವನಿಗೆ ಬೇಸರಹುಟ್ಟಿ ಶಾಶ್ವತ ಸುಖವನ್ನು ನೀಡುವಾತ ಏನಿದ್ದರೂ ಶಿವನೊಬ್ಬನೇ ಎಂದು ನಂಬಿ ಭಕ್ತಶ್ರೇಷ್ಠನಾಗಿದ್ದಾನೆ. ಪ್ರತಿದಿನವೂ ವಿವಿಧ ಬಣ್ಣದ ಬಗೆಬಗೆಯ ಹೂ, ಬಿಲ್ವಪತ್ರೆಗಳನ್ನು ತಂದು, ಶಿವನನ್ನು ಅಲಂಕರಿಸಿ, ಹಾಡಿಕುಣಿದಾಡಿ ಸ್ತೋತ್ರ ಪಠಿಸಿ, ಭಕ್ತಿಯಲ್ಲಿ ತನ್ಮಯತೆಯನ್ನು ಹೊಂದಿ ಭಾವಪೂರ್ಣನಾಗಿ ಶಿವಭಕ್ತರ ಕಥೆಗಳನ್ನು ಕನ್ನಡದಲ್ಲಿ ರಚಿಸುತ್ತಿದ್ದನು. ಆ ಎಲ್ಲಾ ಶಿವಶರಣರ ಕಥೆಗಳ ನಿರ್ಮಾತೃ ಭಕ್ತಶ್ರೇಷ್ಠ ಹರಿಹರನ ಈ ಜೀವನ ದರ್ಶನ ಸರ್ವಕಾಲಕ್ಕೂ ಸರ್ವರಿಗೂ ಆದರ್ಶಮಯವಾಗಿ ನಿಲ್ಲುವಂತದ್ದು.

ಮನುಜರ ಮೇಲೆ ಸಾವವರ ಮೇಲೆ ಕನಿಷ್ಠರ ಮೇಲೆಯಕ್ಕಟಾ ।
ತನತನಗಿಂದ್ರ ಚಂದ್ರ ರವಿಕರ್ಣರ ಧೀಚಿ ಬಲೀಂದ್ರನೆಂದು ಮೆಣ್ ॥
ಅನವರತಂ ಪೊಗಳ್ದು ಕೆಡಬೇಡೆಲೆ ಮಾನವ ನೀನಹರ್ನಿಶಂ ।
ನೆನೆಪೊಗಳರ್ಚಿಸೆಮ್ಮ ಕಡುಸೊಂಪಿನ ಪೆಂಪಿನ ಹಂಪೆಯಾಳ್ದನಂ ॥
ಅಲ್ಲವೆ? (ಪಂಪಾಶತಕ)

ರಾಜ್ಯದ ಅಧಿಕಾರ, ಹಣದ ಲಾಲಾಸೆಗೊಳಪಡುವ ರಾಜರಿಗಾಗಿ, ಧರ್ಮದ ಮುಖವಾಡ ತೊಟ್ಟಿರುವ ಕನಿಷ್ಟರಿಗಾಗಿ, ಹೆಣ್ಣಿನ ಮಣ್ಣಿನ ವ್ಯಾಮೋಹಕ್ಕೊಳಗಾಗಿ ಸಾಯುವಂತಹವರನ್ನು ಹೊಗಳಿ ಕಾವ್ಯ ರಚಿಸಿ ನಾಲಿಗೆಯ ಶುದ್ಧತೆಯನ್ನು ಕೆಡಿಸಿಕೊಳ್ಳಬಾರದೆಂದು ಹರಿಹರನು ಪಣತೊಟ್ಟನು. ಅದರಂತೆ ಅವನು ಸಾವವರನ್ನು, ಕನಿಷ್ಟರನ್ನು ಕುರಿತು ಹೊಗಳದೆ, ಸಾಮಾನ್ಯ ಜನರನ್ನು ಅದರಲ್ಲೂ ಶಿವಭಕ್ತ ಪರಂಪರೆಯವರನ್ನು ಕುರಿತು ಕಾವ್ಯ ರಚಿಸಿ ಹೊಸದೊಂದು ಕಾವ್ಯ ಪರಂಪರೆಯನ್ನು ಹುಟ್ಟಿಹಾಕಿದನು. ಹರಿಹರನ ರಗಳೆಗಳಿಗೆ ಶಿವಭಕ್ತರೇ ಸಂಪತ್ತು. ಈ ಭಕ್ತಿಯೆಂಬುದು ಕವಿಯ ಪಾಲಿಗೆ ಶಕ್ತಿಯಾಗಿದೆ. ಭಕ್ತಿಯು ತಾರಕಕ್ಕೇರಿ ಹರಿದ ಉತ್ಸಾಹ ಚಿಲುಮೆಯೇ ರಗಳೆಗಳಾಗಿ ಹೊರಹೊಮ್ಮಿದೆ. ಕನ್ನಡ ಕಾವ್ಯಪರಂಪರೆಯ ದಿಕ್ಕನ್ನೇ ಬದಲಿಸಿದ ವಿರಳ ಕವಿಗಳ ಸಾಲಿನಲ್ಲಿ ಹರಿಹರನಿಗೆ ಒಂದು ಮಹತ್ವದ ಸ್ಥಾನವಿದೆ. ಅಲ್ಲದೆ ಭಾರತೀಯ ಭಕ್ತಿರಸಪೂರ್ಣ ಸಾಹಿತ್ಯ ಮತ್ತು ಸಂಸ್ಕೃತಿಗೆ ಬಹುದೊಡ್ಡ ಕಾಣಿಕೆಯನ್ನು ಹರಿಹರನು ನೀಡಿದ್ದಾನೆ. ಹೀಗೆ ೬೩ ಪುರಾತನರಲ್ಲಿ ಸಂಗಮ ಸಾಹಿತ್ಯದಲ್ಲಿ ಉಲ್ಲೇಖಿತರಾದ ಕೊಚ್ಚಂಗಾಣಾರರು ಪ್ರಥಮರು ಮತ್ತು ಕ್ರಿ.ಶ. ೮೪೦-೮೬೦-೮೬೫ರ ಅವಧಿಯಲ್ಲಿ ಜೀವಿಸಿರಬಹುದಾದ ಸುಂದರ ಮೂರ್ತಿಗಳು ಕೊನೆಯವರು. ಇವರಲ್ಲದೆ ಅಪ್ಪರ್-ಸಂಬಂಧರ್, ಬೇಡರ ಕಣ್ಣಪ್ಪ, ನಂಬಿಯಣ್ಣ, ತಿರುನೀಲಕಂಠ ಮುಂತಾದವರು ಪ್ರಸಿದ್ಧರಾಗಿ ಹೋಗಿದ್ದಾರೆ. ಭಕ್ತಿಯ ಪರಾಕಾಷ್ಠೆಯನ್ನೇ ಮೆರೆದ ಇವರು ಯಾವುದೇ ತಾರತಮ್ಯ ಎಣಿಸದೆ ಇತರ ಧರ್ಮವನ್ನು ಹಿಂದಿಕ್ಕಿ ಶಿವಭಕ್ತರೆಲ್ಲಾ ಒಂದು ಎಂದು ಭಾವಿಸಿ ಇಡೀ ದೇಶದಾದ್ಯಂತ ಶಿವಭಕ್ತಿ ಮಹಿಮೆಯನ್ನು ಸಾರಿ, ನೇಮ-ನಿಷ್ಠೆ ಪರಿಪಾಲನೆಯ ಮಹತ್ವವನ್ನು ದರ್ಶಿಸಿದರು. ಈ ಪುರಾತನರ ಪ್ರಭಾವಕ್ಕೆ ವಚನಕಾರರು, ಹರಿಹರ, ಭೀಮಕವಿ, ಲಕ್ಕಣ ದಂಡೇಶ, ಗುಬ್ಬಿಯ ದಂಡೇಶ, ಗುಬ್ಬಿಯ ಮಲ್ಲಣಾರ್ಯ, ಲಿಂಗರಾಜ ಮತ್ತು ಸುರಂಗ ಕವಿಗಳ ಮೇಲೂ ಆಗಿ ಉತ್ತಮ ಕೃತಿಗಳನ್ನು ರಚಿಸಲು ಪ್ರೇರೇಪಣೆ ಪಡೆದಿದ್ದಾರೆ ಎಂಬ ಮಾತು ಹಲವು ವಿದ್ವಾಂಸರಿಂದ ಪುಷ್ಟೀಕರಿಸಿದೆ.

ಕರ್ನಾಟಕದಲ್ಲಿ ಕ್ರಿ.ಶ. ೧೨ ಶತಮಾನದ ವಚನ ಸಾಹಿತ್ಯದ ಕಾಲಘಟ್ಟದಲ್ಲಿ ಶೈವ-ವೀರಶೈವಗಳ ಜೀರ್ಣೋದ್ಧಾರವು ಬಹಳ ಉತ್ಸುಕತೆಯಿಂದ ಸಾಗಿತ್ತು. ಕಾಶ್ಮೀರ ಪ್ರಾಂತ್ಯ ಭಾಗದಲ್ಲಿ ಮುಸಲ್ಮಾನರಿಂದ ಆಳ್ವಿಕೆಗೊಳಗಾಗಿ ಅಲ್ಲಿದ್ದ ಶೈವ ಪಂಡಿತರು ದಕ್ಷಿಣಭಾಗಕ್ಕೆ ಬಂದು ಸೇರಿದ್ದೂ ಒಂದು ಕಾರಣವಾಗಿದೆ.

ಹರಿಹರನ ರಗಳೆಗಳ ಕುರಿತಾದ ಸಂಶೋಧನೆಯು ಅಂದಿನ ಚಾರಿತ್ರಿಕ ಸಂದರ್ಭವೊಂದರ ಸಾಮಾಜಿಕ ವ್ಯವಸ್ಥೆಯ ಸ್ವರೂಪವನ್ನು ಅರ್ಥೈಸಿಕೊಳ್ಳುವ ಜೊತೆಗೆ ಅವುಗಳ ನಡುವಿನ ಅಂತರ ಸಂಬಂಧವನ್ನು ತಿಳಿಯುವುದಾಗಿದೆ. ಈ ಹಿನ್ನೆಲೆಗಳಿಂದ ಹರಿಹರನ ಸಾಹಿತ್ಯವನ್ನು ಓದುವಾಗ ವರ್ತಮಾನದಲ್ಲಿ ಅದರ ಪ್ರಸ್ತುತತೆ ಎಷ್ಟು ಎಂಬುದು ನಮ್ಮ ಮುಂದಿರುವ ಪ್ರಶ್ನೆಯೇ ಆಗಿದೆ.

ಹರಿಹರನ ರಗಳೆಗಳನ್ನು ಅಧ್ಯಯನ ಮಾಡುವ ಮೊದಲು ಅವನ ಸಾಹಿತ್ಯಕೃತಿಗೆ ಪ್ರೇರಣೆ, ಪ್ರಭಾವ ಬೀರಿರುವಂತಹ ವಲಯಗಳು ಯಾವುವು ಎಂಬ ಶೋಧನೆಯಲ್ಲಿ ತೊಡಗಬೇಕು. ಅದಲ್ಲದೆ ಅಂತಹ ಸಾಹಿತ್ಯಕೃತಿಗಳ ರಚನೆಗೆ ಒತ್ತಡವೇನಾದರೂ ಅನ್ಯಮೂಲಗಳಿಂದ ಒದಗಿರಬಹುದೇ ಎಂಬ ಅಂಶವನ್ನು ಗಮನಿಸುವುದು ಅಧ್ಯಯನಕ್ಕೆ ಅವಶ್ಯಕವೆನಿಸುತ್ತದೆ. ಬಸವಣ್ಣನವರು, ಶಿವಶರಣರ ಅಂತರಂಗ ಶುದ್ಧಿ, ಬಹಿರಂಗ ಶುದ್ಧಿಗೆ ಪ್ರಾಧಾನ್ಯತೆಯನ್ನು ನೀಡಿರುವ ಹರಿಹರ ಒಂದು ಸಮಾಜ, ಆ ಸಮಾಜದಲ್ಲಿ ಧರ್ಮ ಮತ್ತು ವೃತ್ತಿಗಳನ್ನು ಅವಲಂಬಿಸಿರುವ ನಿಷ್ಠೆಯನ್ನು ಸಾರುತ್ತಾನೆ. ಹರಿಹರನ ಕಾಲದಲ್ಲಿ ಚಾರಿತ್ರಿಕ ನೆಲೆಗಳಿಂದ ಬಂದಿರುವ ಅಂತಃಶಕ್ತಿ ಒಂದೆಡೆಯಾದರೆ, ವಚನ ಸಾಹಿತ್ಯದ ಪ್ರಭಾವ ಪ್ರೇರಣೆ ಮತ್ತೊಂದೆಡೆಯಾಗಿದೆ. ಹರಿಹರನು ಪಂಪನ ಕಾಲದಿಂದಲೂ ಬೆಳೆದು ಬಂದಿದ್ದ ಸಂಪ್ರದಾಯ ಧಾರ್ಮಿಕ ಮತ್ತು ಲೌಕಿಕವನ್ನು ಬೇರೆ ಬೇರೆ ಕೃತಿಗಳಲ್ಲಿ ವ್ಯಕ್ತಪಡಿಸದೆ ಎರಡರ ಸಂಬಂಧವನ್ನು ಒಂದೆಡೆಯೇ ಕಲೆ ಹಾಕಿದ್ದಾನೆ. ಇಲ್ಲಿ ಧಾರ್ಮಿಕ ಮನೋಭಾವ ಲೌಕಿಕವನ್ನು ಮೆಟ್ಟಿನಿಂತು ಕೇಂದ್ರ ಪ್ರಭುತ್ವದ ಸ್ಥಾನ ಪಡೆದಿದೆ ಎನ್ನಬಹುದು.

"ಪುರಾತನರ ರಗಳೆಗಳಿಗೆ ಆಕರವಾಗಿ ಕ್ರಿ.ಶ.ಐದನೇ ಶತಮಾನದಿಂದ ಒಂಭತ್ತನೇ ಶತಮಾನದವರೆಗೆ ಬದುಕಿ ಬಾಳಿರುವ ನೂರಾರು ಜನ ತಮಿಳು ಶೈವಭಕ್ತರ ಕಥೆಗಳನ್ನು ಸುಂದರಮೂರ್ತಿ 'ತಿರುತ್ತೊಂಡತ್ತೊಗೈ' ಎಂಬ ಹೆಸರಿನ ಪದ್ಯಗಳಲ್ಲಿ ೬೩ ಜನರನ್ನು ಸ್ತುತಿಸಿದ್ದಾನೆ. ಇದರ ಮುಂದಿನ ರಚನೆಯಾದ ನಂಬಿ ಆಂಡಾರ್, ನಂಬಿಯ ತಿರುತ್ತೊಂದರ್ ತಿರುವನ್ದಾದಿ

ಎಂಬುದರಲ್ಲಿ ೬೦ ಪದ್ಯಗಳಲ್ಲಿ ಈ ೭೩ ಜನರನ್ನು ಸ್ತುತಿಸಿದ್ದಾನೆ. ಹನ್ನೆರಡನೇ ಶತಮಾನದಲ್ಲಿ ಈ ಭಕ್ತರು ರಚಿಸಿದ ತೇವಾರಂಗಗಳನ್ನು ಬಳಸಿಕೊಂಡು ಶೇಕ್ಕಿಳಾರ್ 'ಪೆರಿಯ ಪುರಾಣ' ವನ್ನು ರಚಿಸಿದ್ದಾನೆ. ಹರಿಹರದೇವನಿಗೆ ಮೂಲ ಪೆರಿಯಪುರಾಣವೇ ಎಂದು ಹೇಳಲು ಬರುವುದಿಲ್ಲ. ಏಕೆಂದರೆ ರಗಳೆಗಳ ಕಥೆಗಳಲ್ಲಿ ಸಾಕಷ್ಟು ಬದಲಾವಣೆಗಳಿವೆ. ಇವಕ್ಕೆ ಮೂಲ ಎಲ್ಲಿಯದೆಂದು ಗೊತ್ತಾಗುವುದಿಲ್ಲ. ಹರಿಹರದೇವನೇ ತಮಿಳುನಾಡಿನಲ್ಲಿ ಜನಜನಿತವಾಗಿದ್ದ ಕಥೆಗಳನ್ನು ಕೇಳಿ ಈ ರಗಳೆಗಳನ್ನು ರಚಿಸಿರಬಹುದು ಇಲ್ಲವೇ ಇನ್ನೂಗೊತ್ತಿರದ ಮೂಲವೊಂದರಿಂದ ಪ್ರಭಾವಿತನಾಗಿರಬಹುದು." ೧

ಹನ್ನೆರಡನೆ ಶತಮಾನದ ಪ್ರತಿಯೊಬ್ಬ ವಚನಕಾರರು ಒಂದೊಂದು ಬಗೆಯ ವಿಶಿಷ್ಟ ವ್ಯಕ್ತಿತ್ವ ಪಡೆದಿದ್ದಾರೆ. ಅದಕ್ಕೆ ಅವರ ಭಕ್ತಿ, ಆಧ್ಯಾತ್ಮ, ವೃತ್ತಿ ನಿಷ್ಠೆಯೇ ಪ್ರಮುಖ ಕಾರಣವಾಗಿದೆ. ವಚನಕಾರರ ವಾರಸುದಾರನಂತೆ ಬಂದ ಹರಿಹರ ಶಿವಭಕ್ತ, ಶಿವಶರಣರ ಜೀವನಚರಿತ್ರೆಗಳನ್ನು ತನ್ನ ರಗಳೆಗಳಲ್ಲಿ ತಂದಿದ್ದಾನೆ. ಇವರ ವ್ಯಕ್ತಿತ್ವದ ಒಳನೋಟಗಳನ್ನು ಅರ್ಥೈಸಿಕೊಳ್ಳುವುದರ ಮೂಲಕ ಇಂದಿನ ಜನಸಮುದಾಯ ತನ್ನ ವ್ಯಕ್ತಿತ್ವವನ್ನು ವಿಕಾಸಗೊಳಿಸಿಕೊಳ್ಳಲು ಇವು ನೆರವಾಗುತ್ತದೆ.

ತನ್ನ ಕೃತಿಗಳಲ್ಲಿ ಧಾರ್ಮಿಕ ಚೌಕಟ್ಟನ್ನು ನಿರ್ಮಾಣಮಾಡಿಕೊಂಡು ಏಕದೇವೋಪಾಸನೆಯನ್ನು ಪ್ರತಿಪಾದಿಸುವ ಹರಿಹರ, ಶರಣರ ಬದುಕಿನ ಆದರ್ಶವನ್ನು ಚಿತ್ರಿಸಿದ್ದಾನೆ. ಹರಿಹರನನ್ನು ಮತ್ತು ಶರಣರ ಭಕ್ತಿಯನ್ನೊಳಗೊಂಡ ಸಾರ್ಥಕ ಜೀವನವನ್ನು ಅರಿಯುವ ಮೂಲಕವೇ ಅಂದಿನ ಧಾರ್ಮಿಕ ಸಂಸ್ಕೃತಿಯನ್ನು ಹಾಗು ಅದರ ಮೂಲ ತಿರುಳಿನಲ್ಲಿ ರಚನೆಗೊಂಡ ಇಂದಿನ ವರ್ತಮಾನವನ್ನು ಅರ್ಥೈಸಿಕೊಳ್ಳುವ ವಿವಿಧ ಆಯಾಮಗಳನ್ನು ಚರ್ಚಿಸಬೇಕಾದ ಅವಶ್ಯಕತೆ ಇದೆ. ಆದ್ದರಿಂದ ಈ ಚಾರಿತ್ರಿಕ ದರ್ಶನವನ್ನು ಮುಂದಿಟ್ಟುಕೊಂಡು, ಪ್ರಸ್ತುತ ಜೀವನವನ್ನು ಜವಾಬ್ದಾರಿ ನೆಲೆಯಲ್ಲಿ ಕಟ್ಟಿಕೊಳ್ಳುವ ಪ್ರಯತ್ನಕ್ಕೆ ಅವಶ್ಯವೆನಿಸುವ, ಪೋಷಕವಾಗಿ ನಿಲ್ಲಬಲ್ಲ ಮೂಲಧಾತುಗಳ ವಿವೇಕವನ್ನು ಪಡೆಯುವುದಕ್ಕೆ ಹರಿಹರನ ಸಾಹಿತ್ಯ ಹೇಗೆ ಮಾರ್ಗದರ್ಶಕವಾಗಬಹುದು ಎಂಬ ಸಾಧ್ಯತೆಗಳನ್ನು ಚರ್ಚಿಸುವುದು ಅವಶ್ಯಕ. ಆದ್ದರಿಂದ ಹರಿಹರನ ರಗಳೆಗಳ ಮಹತ್ವವನ್ನು ವಿವೇಚಿಸುವ ಹಿನ್ನೆಲೆಯಿಂದ, ಪ್ರಧಾನವಾಗಿ ೩ ನೆಲೆಗಳಲ್ಲಿ ಗುರುತಿಸಬಹುದು.

---

**ಅಡಿಟಿಪ್ಪಣಿಗಳು** : ೧. ಕನ್ನಡ ಸಾಹಿತ್ಯ-ಚಾರಿತ್ರಿಕ ಬೆಳವಣಿಗೆ-೨ (ಮಧ್ಯಕಾಲೀನ ಸಾಹಿತ್ಯ) ಡಾ.ಸಿ.ವೀರಣ್ಣ, ನವಕರ್ನಾಟಕ ಪ್ರಕಾಶನ ಪು.ಸಂ.೨೮

**(೨.೨) ಚಾರಿತ್ರಿಕ ಹಿನ್ನೆಲೆ :-**

ಕರ್ನಾಟಕ ರಾಜಕೀಯ ಚರಿತ್ರೆಯಲ್ಲಿ ಆಳ್ವಕೆ ನಡೆಸಿಹೋದ ಹಲವು ಪ್ರಬಲರಾಜವಂಶಸ್ಥರಲ್ಲಿ ಹೊಯ್ಸಳರು ಪ್ರಮುಖರು. ಇವರು ಕರ್ನಾಟಕ ದ್ರಾವಿಡಗಳೆರಡರಲ್ಲಿಯೂ ಅತ್ಯಂತ ಪ್ರಭಾವಶಾಲಿಗಳಾಗಿದ್ದರು. ಇವರಿಂದ ಕಲೆ, ಸಾಹಿತ್ಯ, ಸಂಸ್ಕೃತಿ, ಭಾಷೆ ಮೊದಲಾದ ಅಂಶಗಳಿಗೆ ಬಹು ಪ್ರಾಧಾನ್ಯ ಸಿಕ್ಕಿದ್ದರಿಂದ ಶ್ರೀ ರಾಮಾನುಜಾಚಾರ್ಯರನ್ನೊಳಗೊಂಡಂತೆ ಹಲವಾರು ಕವಿಗಳು, ಕಲಾವಿದರು, ವಾಗ್ಮಿಗಳು ರಾಜಾಶ್ರಯವನ್ನು ಪಡೆದುಕೊಂಡಿದ್ದರು. ವಿಷ್ಣುವರ್ಧನನ ಕಾಲದಲ್ಲಿ ಹೇರಳವಾದ ಪ್ರೋತ್ಸಾಹ ಸಿಕ್ಕಿದ್ದರೂ ಧರ್ಮಗಳ ನಡುವೆ ಸಂಘರ್ಷದ ಸಾಧ್ಯತೆಯನ್ನು ಗುರುತಿಸಲು ನಮಗೆ ಅವಕಾಶವಿದೆ. ಅದು ನರಸಿಂಹ ಬಲ್ಲಾಳನ ಕಾಲದಲ್ಲಿ ಮುಂದುವರಿದು ಶ್ರೀ ವೈಷ್ಣವ ಮತ್ತು ಜೈನಧರ್ಮಗಳ ನಡುವಿನ ಕಲಹದ ಮಧ್ಯೆ ವೀರಶೈವ ಧರ್ಮದ ಅಸ್ತಿತ್ವಕ್ಕಾಗಿ ಕಾಲ ಹುಡುಕುತ್ತಿದ್ದ ಸಂದರ್ಭದಲ್ಲಿ ರಚನೆಗೊಂಡ ಹರಿಹರನ ಸಾಹಿತ್ಯ ಸಾಮಾನ್ಯ ಜನರ ಪ್ರೀತಿ-ವಿಶ್ವಾಸ-ನಂಬಿಕೆಯನ್ನು ತನ್ನತ್ತ ಸೆಳೆದುಕೊಳ್ಳಲು ಯತ್ನಿಸುತ್ತಿತ್ತು. ವೀರಶೈವ ಪರಂಪರೆಯಲ್ಲಿಯೂ ವೈದಿಕನೆಲೆ ಇತ್ತೆನ್ನಬಹುದು. ಈ ಹಿನ್ನೆಲೆಯಲ್ಲಿ ವಿದ್ಯಾಭ್ಯಾಸವನ್ನು ಮುಗಿಸಿದ ಹರಿಹರನು ನರಸಿಂಹ ಬಲ್ಲಾಳನಲ್ಲಿ ಕರಣಿಕ ಹುದ್ದೆಯಲ್ಲಿದ್ದು, ಕುಹಕಿಗಳ ವರ್ತನೆಗಳಿಂದ ಆ ಸ್ಥಳ ಇವನಿಗೆ ಒಗ್ಗದೆ ರಾಜಾಸ್ಥಾನವನ್ನು ತೊರೆದು ಹಂಪೆಯ ವಿರೂಪಾಕ್ಷನೊಬ್ಬನೇ ಶಾಶ್ವತ ಎಂದು ಹಂಪೆಗೆ ಬಂದು ತನ್ನ ಭಕ್ತಿಯನ್ನು ಸಾಹಿತ್ಯದಲ್ಲಿ ಬಿಂಬಿಸುತ್ತಾ ಭಾವ ಪರವಶನಾಗುತ್ತಾ ಹೋದ ಎನ್ನಬಹುದು. ಇತ್ತ ಉತ್ತರದಲ್ಲಿ ರಾಜಕೀಯ-ಧಾರ್ಮಿಕ ಸಂಘರ್ಷಗಳಿಂದ ಅರಾಜಕತೆ ತಲೆದೋರಿ ಬಿಜ್ಜಳನ ಕೊಲೆಯಾಗಿತ್ತು. ಶರಣರೆಲ್ಲಾ ಕಲ್ಯಾಣವನ್ನು ತೊರೆದು ಬಸವಣ್ಣನವರ ಹಿಂದೆ ಹೋಗಿದ್ದರು. "ಹರಿಹರ ಬರುವ ಹೊತ್ತಿಗೆ ವೈಷ್ಣವರು, ಅದಕ್ಕಿಂತ ಜೈನರು ತಮ್ಮ ತಮ್ಮ ಬರವಣಿಗೆಯಲ್ಲಿ ಶಿವನ ಪರಿಕಲ್ಪನೆಗಳನ್ನು ವಿಗ್ರಹಭಂಜನ ರೀತಿಯಲ್ಲಿ ವಿರೂಪಗೊಳಿಸಿದ್ದರು. ವಿಷ್ಣು, ವಿಷ್ಣುವಿನ ಅವತಾರವಾದ ರಾಜರ ಪ್ರತಿಷ್ಠೆ ಬೆಳೆದು ಕಾವ್ಯದಲ್ಲಿ ಶಿವ-ಶಿವಭಕ್ತರು ಎರಡನೆಯ ದರ್ಜೆಗೆ ತಳ್ಳಲ್ಪಟ್ಟರು. ಸಾಹಿತ್ಯದಲ್ಲಿ ಈ ವಿಗ್ರಹವನ್ನು ಮತ್ತೆ ಕಟ್ಟಿಕೊಡಲು, ಕಳೆದುಕೊಂಡಿದ್ದ ಸ್ಥಾನವನ್ನು ಅದಕ್ಕೆ ಮತ್ತೆ ದೊರಕಿಸಿಕೊಡಲು ಮಾಡಿದ ಪ್ರಥಮ ಕೀರ್ತಿ ಹರಿಹರನಿಗೆ ಸಲ್ಲುತ್ತದೆ."೨ ಎಂಬ ಮಾತು ಅರ್ಥಪೂರ್ಣವಾದುದು. ಹರಿಹರ ಹಂಪೆಯ ಕವಿ, ಸಂಗೀತ-ಸಾಹಿತ್ಯ ಕ್ಷೇತ್ರದಲ್ಲಿ ದೇಸೀಯತೆಗೆ ವಿಪತ್ತು ಸಂಭವಿಸುವ

---

ಅಡಿಟಿಪ್ಪಣಿಗಳು : ೨. ಕನ್ನಡ ಸಾಹಿತ್ಯ-ಚಾರಿತ್ರಿಕ ಬೆಳವಣಿಗೆ-೨ (ಮಧ್ಯಕಾಲೀನ ಸಾಹಿತ್ಯ) ಡಾ.ಸಿ.ವೀರಣ್ಣ, ನವಕರ್ನಾಟಕ ಪ್ರಕಾಶನ ಪು.ಸಂ.೨೮೨

ಸಂದರ್ಭಗಳಲ್ಲಿ ಇಲ್ಲಿಯ ಪ್ರಬುದ್ಧರು ಉದ್ದಕ್ಕೂ ಸಿಡಿದೆದ್ದು, ಮತ್ತೆ ಅದನ್ನೇ ಮೆರೆದುದು ಚಾರಿತ್ರಿಕ ಸತ್ಯವೆನಿಸಿದೆ.

ಹರಿಹರ ತನ್ನ ರಗಳೆಗಳಲ್ಲಿ ಬಸವಣ್ಣ, ಅಕ್ಕಮಹಾದೇವಿ, ಚೆನ್ನಯ್ಯ, ಪ್ರಭುದೇವರಂತಹ ಕಥಾನಾಯಕರ ಚರಿತ್ರೆ ಬರೆದಿದ್ದರೂ ಒಮ್ಮೊಮ್ಮೆ ಅವು ಪೌರಾಣಿಕ ಚೌಕಟ್ಟು ಎನ್ನುವಷ್ಟು ಪ್ರಯೋಗಶೀಲತೆ ಕಾಣುತ್ತದೆ. ಈ ರಗಳೆಗಳಲ್ಲಿ ಭಕ್ತಿಯ ತಾತ್ವಿಕತೆ ಇದೆ. ಅದಕ್ಕೆ ಇತಿಹಾಸ ರೂಪುರೇಷೆಯನ್ನು ತೊಡಿಸಿದಂತಿದೆ. "ಭಕ್ತಿಗೆ ದ್ರಾವಿಡದೇಶ ತವರು ಮನೆ ಎಂಬ ಮಾತಿದೆ. ದ್ರಾವಿಡದಲ್ಲಿ ಹುಟ್ಟಿದ ಭಕ್ತಿ ಕನ್ನಡನಾಡಿನಲ್ಲಿ ಬೆಳೆದ ಬಗ್ಗೆ ಸಂಶಯವಿಲ್ಲ. ತಮಿಳುನಾಡಿನಲ್ಲಿ ಕ್ರಿ.ಶ. ೮ ನೆಯ ಶತಮಾನದಷ್ಟೊತ್ತಿಗೆ ಶೈವಧರ್ಮ ತನ್ನ ವ್ಯಾಪಕವಾದ ಪ್ರಭಾವವನ್ನು ಬೀರಿ ಭಕ್ತಿಯ ಸುಗ್ಗಿಯನ್ನೇ ಉಂಟುಮಾಡಿತು. ನಂತರ ವೈಷ್ಣವ ಆಳ್ವಾರರು ಸೇರಿ ಭಕ್ತಿಯ ಎರಡು ಕವಲುಗಳಾಗಿ ಹರಿಹರ ಪಾರಮ್ಯವನ್ನು ಸಾರಿದ್ದಾನೆ. ಸುಮಾರು ೧೨ ಮತ್ತು ೧೩ನೇ ಶತಮಾನಗಳಲ್ಲಿ ರಾಮಾನುಜರೂ, ಬಸವೇಶ್ವರರೂ, ಮಧ್ವಾಚಾರ್ಯರೂ ಕನ್ನಡನಾಡಿನಲ್ಲಿ ಭಕ್ತಿಚಳುವಳಿಯನ್ನು ಪ್ರಾರಂಭಿಸಿದರು. ಈ ಭಕ್ತಿ ಚಳುವಳಿ ಸಾಹಿತ್ಯದ ಮೇಲೂ ಪ್ರಭಾವ ಬೀರಿತು. ಧಾರ್ಮಿಕ ನಾಯಕರಾದವರು ತಾವು ಬೋಧಿಸುವ ತತ್ವಸಿದ್ಧಾಂತಗಳು ಜನಸಾಮಾನ್ಯರಿಗೆ ತಿಳಿಯಬೇಕೆಂದು ಜನರ ಆಡುನುಡಿಯ ಸರಳಭಾಷೆಯಲ್ಲಿ ವ್ಯಕ್ತಪಡಿಸಿದರು, ಪರಿಣಾಮವಾಗಿ ಸಾಹಿತ್ಯದಲ್ಲೆ ವಿಶಿಷ್ಟ ಎನಿಸುವ ವಚನದ ಸಾಹಿತ್ಯ ಪ್ರಕಾರವೊಂದು ಬಸವಣ್ಣನವರ ಧಾರ್ಮಿಕ ಕ್ರಾಂತಿಯ ಫಲವಾಗಿ ಉದಯಿಸಿತು. ಈ ಪರಂಪರೆಯಲ್ಲಿ ಬಂದ ಹರಿಹರ ಧಾರ್ಮಿಕ ಕ್ರಾಂತಿಯಿಂದ ಪ್ರಭಾವಿತನಾಗಿ ಭಕ್ತಿಯ ಬದುಕನ್ನು ರೂಪಿಸಿಕೊಂಡನು. ಮಹಾಕವಿಯಾಗಿ ಬೆಳೆದ ಹರಿಹರ ತನ್ನ ಸ್ಫೂರ್ತಿಗೆ ಶಿವಶರಣರ ಜೀವನಾದರ್ಶಗಳನ್ನು ವಸ್ತುವಾಗಿಟ್ಟುಕೊಂಡು ಕಾವ್ಯ ರಚಿಸಿದನು. ಹರಿಹರನ ಭಕ್ತಿ ಆಡಂಬರ ರಹಿತ ನಿಷ್ಕಲ್ಮಷವಾದ ಭಕ್ತಿ" ೩. ಕ್ರಿ.ಶ. ೧೨ನೇ ಶತಮಾನದ ಕಾಲದಲ್ಲಿ ಔನತ್ಯಕ್ಕೇರಿದ ವಚನ ಸಾಹಿತ್ಯನಂತರದ ಕಾಲ ಅಂದರೆ ೧೩ನೇ ಶತಮಾನದ ಆದಿಯಲ್ಲಿ ಬಂದ ಹರಿಹರನ ಮೇಲೆ ಆ ವಚನ ಸಾಹಿತ್ಯದ ಸಾರ, ಸತ್ವ, ಸಮಷ್ಟಿಯಾಗಿ ಪ್ರಭಾವ ಬೀರಿದಂತಿದೆ. ವೀರಶೈವ ಧರ್ಮದ ಮತ್ತು ಬಸವಾದಿ ಶಿವಶರಣರ ತತ್ವ ಚಳುವಳಿಯ ಪ್ರಭಾವಕ್ಕೆ ಒಳಗಾಗಿರುವ ಹರಿಹರ ವೈಷ್ಣವ, ಜೈನಧರ್ಮಗಳ ನಡುವೆ ವೀರಶೈವಧರ್ಮವನ್ನು ಕಾಪಾಡಿ ಸಾಮಾನ್ಯರ ಉದ್ಧಾರಕ್ಕಾಗಿ ಅದು ಹೇಗೆ ಶ್ರಮಿಸುತ್ತದೆ

---

ಅಡಿಟಿಪ್ಪಣಿಗಳು : ೩. ಮಹಾಕವಿ ಹರಿಹರನ ಪುರಾತನ ಶರಣರು – ಡಿ.ನಾಗೇಂದರಪ್ಪ, ಪ್ರಸ್ತಾವನೆ xxi

ಎಂಬುದನ್ನು ಕತೆಗಳ ಮೂಲಕ ಆದರ್ಶ ಬೋಧನೆಯನ್ನು ಮಾಡಿದಂತಿದೆ. ರಾಜಾಶ್ರಯದ ಹಂಗನ್ನು ತೊರೆದ ಅವನಿಗೆ ರಾಜನಿಗಿಂತ ಸಾಮಾನ್ಯ ಜನರೇ ಮುಖ್ಯರೆನಿಸಿತು. ಅವರ ಉದ್ಧಾರಕ್ಕಾಗಿ ಇರುವವನು ಒಬ್ಬನೇ....! ಅದು ಏನಿದ್ದರೂ ಶಿವನು ಮಾತ್ರ ಎಂದು ನಂಬಿ, ಭಕ್ತಿ ಸಾಧನೆಯಲ್ಲಿ ವ್ಯಕ್ತಿ ಶರಣನಾಗಿ ಬೆಳೆಯುತ್ತ ಹೋದಂತವರ ಉದಾತ್ತ ಚರಿತ್ರೆಯನ್ನು ದೇಸಿಯ ನೆಲೆಯಲ್ಲಿ ಕಟ್ಟುತ್ತಾ ಹೋದ. "ಕಾಯಕವೇ ಕೈಲಾಸ" ಎಂಬ ಬಸವಣ್ಣನ ನುಡಿಯನ್ನು ಶಿರಸಾವಹಿಸಿ ಪಾಲಿಸುವ ಶಿವಶರಣರ ಆದರ್ಶ ಮೌಗಳನ್ನು ಎಲ್ಲರೂ ತಿಳಿಯುವಂತೆ ಸಾರಿದ. ಕಾಯಕ ನಿಷ್ಠೆ, ಮೌಲ್ಯಾದರ್ಶ, ವ್ಯಕ್ತಿತ್ವ ಇರುವ ಜನಸಮೂಹ ಪಂಥಗಳನ್ನು ಹುಟ್ಟುಹಾಕುವ ಪ್ರಯತ್ನದಲ್ಲಿ ತೊಡಗಿದ, ಆದರ್ಶ ಸಮಾಜ ನಿರ್ಮಾಣಕ್ಕೆ ಹಾತೊರೆದ ಹರಿಹರನು ರಾಜನಿಷ್ಠೆಗಿಂತ ದೈವನಿಷ್ಠೆಗೆ ಒತ್ತುಕೊಟ್ಟು, ಶೋಷಕ ಸ್ಥಿತಿಯಿಂದ ಶ್ರಮಿಕರನ್ನು, ಬಡವರನ್ನು, ಕೀಳುಕುಲದವರನ್ನು ಪಾರುಮಾಡುವ ಸುಪ್ರಯತ್ನವನ್ನು ಮಾಡಿದನು. ಹೆಣ್ಣಿಗೂ ತನ್ನ ಕಾವ್ಯದಲ್ಲಿ ಸ್ಥಾನ ನಿರ್ಮಿಸಿಕೊಡುವ ಮೂಲಕ ಅವರ ಸ್ಥಾನಮಾನವನ್ನು ಹೆಚ್ಚಿಸಿದ.

ಅವರಿಗೆ ಧಾರ್ಮಿಕ ಕ್ಷೇತ್ರಕ್ಕೆ ಒದಗಿಸಿಕೊಟ್ಟಿದ್ದಲ್ಲದೆ ಅವರ ಸಮಾನತೆಯ ಬದುಕಿಗೆ ಕರೆಕೊಟ್ಟ. ಹಾಗಾಗಿ ಧಾರ್ಮಿಕ-ಸಾಮಾಜಿಕ ಕ್ಷೇತ್ರದಿಂದ ವಂಚಿತಳಾದ ಮಹಿಳೆಯರಿಗೂ ಕಾವ್ಯದಲ್ಲಿ ನಾಯಕಿಯ ಸ್ಥಾನ ನೀಡುವ ಮೂಲಕ ಧಾರ್ಮಿಕಕ್ಷೇತ್ರಕ್ಕೆ ಹೆಣ್ಣು ಅನಿವಾರ್ಯವಾಗಿರುವುದು ತುಂಬಾ ಮುಖ್ಯವೆಂದು ತಿಳಿಸಿಕೊಟ್ಟನು. ಶ್ರಮಿಕಮಾರ್ಗದವರು ಯಾರ ಹಂಗಿಗೂ ಒಳಗಾಗದೆ ಮುಕ್ತ ಬದುಕನ್ನು ಕಟ್ಟಿಕೊಳ್ಳುವ ಆತ್ಮಸ್ಥೈರ್ಯವನ್ನು ತನ್ನ ಸಾಹಿತ್ಯದ ಮುಖೇನ ತುಂಬುವ ಪ್ರಯತ್ನವನ್ನು ನಿಶ್ಚಲತೆಯಿಂದ ಮಾಡಿದ್ದಾನೆ.

ವೈಜಕವ್ವೆ, ಹೆರೂರು ಹೆಣ್ಣು, ಪಾಂಡ್ಯಮಹಾದೇವಿ, ಏಕಾಂತರಾಮಿತಂದೆ ರಗಳೆಗಳನ್ನು ವೀರಶೈವ ಮತ್ತು ಜೈನ ಧರ್ಮದ ನಡುವೆ ಸಂಘರ್ಷಗಳಿದ್ದವು ಎಂಬುದಕ್ಕೆ ಸಾಕ್ಷಿಯಾಗಿ ನೋಡಬಹುದು. ಇಲ್ಲಿ ಜೈನಧರ್ಮ, ಜೈನಮೂರ್ತಿ ಮತ್ತು ಜೈನರನ್ನು ಅವಮಾನಗೊಳಿಸುವಂತಹ, ಅವರ ಸೊಕ್ಕನ್ನು ಅಡಗಿಸುವಂತಹ, ಮೂರ್ತಿಗಳನ್ನು ಭಂಗಗೊಳಿಸಿ ಶಿವಲಿಂಗ ಸ್ಥಾಪಿಸುವಂತಹ ಪ್ರಯತ್ನಗಳು ನಡೆದಿದೆ. ಈ ಮೂಲಕ ಅವರ ಮನಃಪರಿವರ್ತನೆ ಮಾಡಿ, ಮತಾಂತರಗೊಳಿಸುವ ಪ್ರಯತ್ನವನ್ನು ಹರಿಹರನ ಕೃತಿಗಳಲ್ಲಿ ಕಂಡುಬರುತ್ತದೆ. ಜೈನರ ವಿರೋಧ ಮನಸ್ಸು ಎದುರಾದಾಗ ಅವನ್ನು ಅಡಗಿಸಲು ಹರಿಹರನು ಏರುಧ್ವನಿ, ಕ್ರಾಂತಿಕಾರಕ ನೆಲೆಯಲ್ಲಿ ಕೃತಿ ರಚನೆ ಮಾಡಿದ್ದಾನೆ.

ಈ ರೀತಿಯ ಸನ್ನಿವೇಶಗಳು ಎದುರಾದಾಗ ಅದು ಹಿಂಸೆಯ ಮಾರ್ಗವಾಗಿಯೇ ಚರಿತ್ರೆಯಲ್ಲಿ ದಾಖಲುಗೊಳ್ಳುತ್ತದೆ. ಜೈನಧರ್ಮವನ್ನು ಉತ್ತೇಜಿಸುವ ರಾಜಾಶ್ರಯ ಧರ್ಮವೂ ಇರದೆ ಕಳೆಗುಂದಿತ್ತು. ಆದರೆ ವೀರಶೈವ ಧರ್ಮ ವಚನ ಸಾಹಿತ್ಯದ ಹೋರಾಟದ ಪ್ರಭಾವದಿಂದ ಗರಿಗರಿಯಾಗಿತ್ತು. ಇತ್ತ ದಕ್ಷಿಣದಲ್ಲೂ ಅದೇ ಸ್ಥಿತಿ ಎದುರಾಗಿತ್ತು. ಆಗ ತಮಿಳುನಾಡಿನ ಕವಿಗಳಿಂದ ರಚನೆಗೊಂಡ ಶೈವ ಪುರಾಣಗಳು, ೧೨ ನೇ ಶತಮಾನದ ಶೇಕ್ಕಿಳಾರ್‌ನಿಂದ ಪೆರಿಯ ಪುರಾಣವನ್ನು ರಚನೆಮಾಡುವಂತಾಯಿತು ಈ ಮೂಲಗಳನ್ನನುಸರಿಸಿ ಹರಿಹರನು ರಗಳೆಗಳನ್ನು ರಚಿಸಿದ್ದಾನೆ.

"ಹರಿಹರ ಹಂಪೆಯ ಕವಿ, ಸಂಗೀತ-ಸಾಹಿತ್ಯ ಕ್ಷೇತ್ರಗಳಲ್ಲಿ ದೇಶಿಗೆ ವಿಪತ್ತು ಸಂಭವಿಸಿದ ಸಂದರ್ಭಗಳಲ್ಲಿ ಇಲ್ಲಿಯ ಪ್ರಬುದ್ಧರು ಉದ್ದಕ್ಕೂ ಸಿಡಿದೆದ್ದು, ಮತ್ತೆ ಅದನ್ನು ಮೆರೆದುದು ಚಾರಿತ್ರಿಕ ಸತ್ಯವೆನಿಸಿದೆ. ಸಂಗೀತ ಕ್ಷೇತ್ರದಲ್ಲಿ ಮಾರ್ಗ ಒತ್ತಿಬಂದಾಗ ವ್ಯಾಪಕ ಅಭ್ಯಾಸಮಾಡಿ, ದೇಶೀ ಸಂಗೀತವನ್ನು ಕುರಿತ "ಬೃಹದ್ದೇಶೀ" ಕೃತಿ ರಚಿಸಿದ ಮತಂಗ ಬಹುಶಃ ಹಂಪೆಯ ಮತಂಗಪರ್ವತ ನಿವಾಸಿ. ಮುಂದೆ ಸಾಹಿತ್ಯ ಕ್ಷೇತ್ರದಲ್ಲಿ ಮಾರ್ಗ ಒತ್ತಿಬಂದಾಗ ಸಮರಸಾರುತ್ತ ದೇಶಿಯನ್ನು ಎತ್ತಿನಿಲ್ಲಿಸಿ, ಅದನ್ನು ಪರಂಪರೆಯಾಗಿಸಿದ ಹರಿಹರದೇವ ಹಂಪೆಯ ನಿವಾಸಿ. ಬಳಿಕ ಪದ್ಯಸಾಹಿತ್ಯದಲ್ಲಿ ಛಂದೋಲಯವೇ ಎದ್ದು ಕೇಳಿಸಲು ಆರಂಭಿಸಿದಾಗ, ಅದಕ್ಕೆ ಕರ್ನಾಟಕ ಸಂಗೀತಲಯದ ಸ್ಪರ್ಶಕೊಟ್ಟ ಹರಿದಾಸರು ಹಂಪೆಯ ನಿವಾಸಿಗಳು. ಹೀಗೆ ಉದ್ದಕ್ಕೂ ದೇಶಿಯನ್ನು ರಕ್ಷಿಸಲು ಇಲ್ಲಿಯ ಜನ ಪ್ರಯೋಗ ರೂಪದ ಇಲ್ಲವೆ ಚಳುವಳಿ ರೂಪದ ಚಟುವಟಿಕೆಯಲ್ಲಿ ತೊಡಗಿರುವುದು ವಿಶೇಷ ಸಂಗತಿಯಾಗಿದೆ. ಇದೇ ಕಾಲಕ್ಕೆ ದೇಶೀ ಸೃಷ್ಟಿಯಾದ ವಚನಸಾಹಿತ್ಯ ನಾಶವಾಗಲಿರುವಾಗ, ಅದನ್ನು ಸಂಗ್ರಹ-ಸಂಕಲನ-ಸಂಪಾದನ ರೂಪದಲ್ಲಿ ಸಂರಕ್ಷಿಸಿ, "ಸಂಯೋಜನ ಸಾಹಿತ್ಯ" ಸೃಷ್ಟಿಗೆ ಶ್ರೀಕಾರ ಹಾಕಿದ, ರಕ್ಷಿಸಿದ ನೂರೊಂದು ವಿರಕ್ತರು ಹಂಪೆ ನಿವಾಸಿಗಳು ಹೀಗೆ ಹಂಪೆಯ ಮಣ್ಣಿಗೂ ಒಂದು ಸಂಬಂಧವಿದೆ ಹರಿಹರದೇವ ಈ ಸಂಬಂಧದ ಒಂದು ಮುಖ್ಯಪ್ರತಿಭೆ."೪ ಅದರಲ್ಲೂ ಹರಿಹರನಂಥ ಪ್ರತಿಭಾ ಮತ್ತು ಪ್ರಭಾವಶಾಲಿಯಾದ ಭಕ್ತಕವಿ ಅನೇಕ ಚಾರಿತ್ರಿಕ, ಐತಿಹಾಸಿಕ ದಾಖಲೆಯಾಗಿ ಉಳಿಯುತ್ತಾನೆ. ಇದರೊಂದಿಗೆ ಅನೇಕ ಕಟ್ಟುಕಥೆಗಳೂ, ಪವಾಡಗಳೂ ಹೆಣೆದುಕೊಂಡು ಪವಾಡ ಪುರುಷನಂತೆಯೂ ಹೆಸರಾಗಿದ್ದಾನೆ.

---

ಅಡಿಟಿಪ್ಪಣಿಗಳು : ೪. ಹರಿಹರನ ರಗಳೆಗಳು, ಸಂ. ಡಾ|| ಎಂ.ಎಂ. ಕಲಬುರ್ಗಿ ಪ್ರಸಾರಂಗ, ಕನ್ನಡ ವಿ.ವಿ, ಹಂಪಿ, ವಿದ್ಯಾರಣ್ಯ (ಪು.ಸಂ.ಪೀಠಿಕೆ–೧೧)

## ತಮಿಳುನಾಡಿನಲ್ಲಿ ಭಕ್ತಿ ಚಳುವಳಿ :-

ಭಾರತದಲ್ಲಿ ಭಕ್ತಿ ಸಾಹಿತ್ಯವೆಂಬುದು ಒಂದು ಪ್ರಮುಖವಾದ ಕಾಲಘಟ್ಟವಾಗಿದೆ. ಅದರಲ್ಲಿ ವಿಶೇಷವಾಗಿ ನಾವು ತಮಿಳುನಾಡಿನಲ್ಲಿ ಗುರುತಿಸಬಹುದು. ತಮಿಳುನಾಡಿನಲ್ಲಿ ಪ್ರಾರಂಭವಾದ ಈ ಭಕ್ತಿ ಚಳುವಳಿಯ ಜೊತೆಗೆ ರಾಜಕೀಯ, ಸಾಮಾಜಿಕ, ಧಾರ್ಮಿಕ, ಸಾಹಿತ್ಯಕದಂತಹ ವೈವಿಧ್ಯಮಯ ಕ್ಷೇತ್ರಗಳೂ ಒಳಗೊಂಡಿದೆ. ಕ್ರಿ.ಶ. ೭ ರಿಂದ ೯ನೇ ಶತಮಾನದವರೆಗೆ ತಮಿಳುನಾಡು ಪ್ರಾಂತ್ಯದಲ್ಲಿ ನಡೆದ ಮಹತ್ತರ ಬೆಳವಣಿಗೆಯ ಹಿಂದೆ ಈ ಕಾರ್ಯಕ್ಷೇತ್ರಗಳ ಚಟುವಟಿಕೆ ಕಾರಣವಾಗಿದೆ. ಪ್ರಾಥಮಿಕ ಹಂತದಲ್ಲಿ ಇದು ರಾಜಕೀಯ ಮತ್ತು ಧಾರ್ಮಿಕ ಕ್ಷೇತ್ರಕ್ಕೆ ಸಂಬಂಧಿಸಿದ್ದರೂ, ನಂತರದ ಸಂದರ್ಭದಲ್ಲಿ ತಮಿಳುನಾಡಿನ ಸಾಹಿತ್ಯಕ ಇತಿಹಾಸದ ಅಧ್ಯಯನದಲ್ಲಿ ವಿಶೇಷ ಸ್ಥಾನ ಪಡೆದಿದೆ. ಚೋಳರ ಕಾಲದಿಂದ ಸಮಾಜದಲ್ಲಿದ್ದ ಸಾಹಿತ್ಯವನ್ನು ಭಕ್ತಿ ಚಳುವಳಿಯೆಂದು ಪರಿಗಣಿಸಲಾಗುತ್ತದೆ. ಅದಕ್ಕಿಂತ ಮೊದಲು ಭಕ್ತಿ ಸಾಹಿತ್ಯವನ್ನು ಭಕ್ತಿ ಚಳುವಳಿಯೆಂದು ಪರಿಗಣಿಸಿರಲಿಲ್ಲ. ಭಕ್ತಿಸಾಹಿತ್ಯವೆಂದರೆ ತಮಿಳುನಾಡಿನಲ್ಲಿ ಪಲ್ಲವರ ಕಾಲದಲ್ಲಿ ಶಿವಸಂತ ನಾಯನಾರರು ಹೇಳಿರುವ ಭಕ್ತಿಪ್ರಧಾನ ಶ್ಲೋಕಗಳು ಮತ್ತು ವೈಷ್ಣವ ಸಂತ "ಆಳ್ವಾರರು' ಹೇಳಿರುವ ಶ್ಲೋಕಗಳು ಒಳಪಟ್ಟಿದ್ದವು. ವೈಷ್ಣವ ಗೀತೆಗಳನ್ನು ೧೦ನೇ ಶತಮಾನದಲ್ಲಿ ವೈಷ್ಣವ ದೇವಾಲಯಗಳಲ್ಲಿ ಹೇಳಿರುವ ಗೀತೆಗಳನ್ನು ನಾಥಾಮುನಿ ಎಂಬುವವರು "ನಾಲಾಯಿರಾ ದಿವ್ಯ ಪ್ರಾಪಂಥಂ" (೪೦೦೦ ಶ್ಲೋಕಗಳಿರುವ ಪವಿತ್ರ ಗ್ರಂಥ) ಎಂಬ ಕೃತಿಯಲ್ಲಿ ಸಂಗ್ರಹಿಸಲಾಗಿದೆ. ಮತ್ತೆ ಚೋಳರ ಕಾಲದಲ್ಲಿಯೇ ಶೈವಗೀತೆಗಳನ್ನು "ನಂಬಿಯಾಂದರ್ ನಂಬಿ" ಎಂಬ ಕವಿಯು 'ತೆವರಾಮ' ಮತ್ತು 'ತಿರುವಚಕಂ' ಎಂಬ ಕೃತಿಗಳಲ್ಲಿ ಸಂಗ್ರಹಿಸಿದ್ದಾರೆ. ಇವೆಲ್ಲವನ್ನು ಒಟ್ಟಾಗಿ ಭಕ್ತಿ ಸಾಹಿತ್ಯವೆಂದು ಹೇಳಲಾಗುತ್ತದೆ. ಭಕ್ತಿ ಚಳುವಳಿಯಿಂದ ತಮಿಳುನಾಡಿನಲ್ಲಿ ರಾಷ್ಟ್ರೀಯತೆಯ ಕ್ರಾಂತಿ ಬೆಳಗಿತು. ಭಕ್ತಿ ಚಳುವಳಿಯಲ್ಲಿ ಪ್ರಮುಖವಾದ ಎರಡು ಮುಖಗಳೆಂದರೆ ದೇವರು ಮತ್ತು ಭಕ್ತರು. ಈ ಅಭಿಪ್ರಾಯವನ್ನು ಒಪ್ಪುತ್ತಾ, ಹರಿಹರನು ತಮಿಳುನಾಡಿನ ಪೆರಿಯಪುರಾಣದ ನೇರ ಅನುವಾದ ಮಾಡದೆ ತಮಿಳುನಾಡಿನಲ್ಲಿ ಸಂಚರಿಸಿ ಕೇಳಿಪಡೆದ, ಅನುಭವವೇದ್ಯದಿಂದ ಸ್ವಂತಿಕೆಯನ್ನು ಮೆರೆದಿದ್ದಾನೆ. ಅದೇ ರೀತಿ ಶೇಕ್ಕಿಳಾರ್ ಕಥೆಗಿಂತ ಭಿನ್ನವಾದ ನೆಲೆಯಿಂದ ವಿವರಿಸಿದ್ದಾನೆ. ಅದಕ್ಕೆ ಅವನ ಕಾವ್ಯಪ್ರತಿಭೆ, ಭಾವ, ಭಾಷೆ ಮತ್ತು ಭಕ್ತಿಯ ಪ್ರಭೆ ಕಾರಣವೆನ್ನಬಹುದು.

ತಮಿಳುನಾಡಿನಲ್ಲಿ ಪೆರಿಯಪುರಾಣದ ರಚನೆಯೂ, ಶೈವಭಕ್ತಿ ಪಂಥದ ಪ್ರಚಾರವೂ ಉಂಟಾಗಿ ಆ ಭಕ್ತಿ ಪ್ರವಾಹವು ಕರ್ನಾಟಕಕ್ಕೂ ಪ್ರಸಿದ್ಧಿಗೆ ಬಂದಿತು. ವೀರಶೈವ ಮತೋದ್ಧಾರ ಕೇಂದ್ರಗಳು ನಿರ್ಮಾಣವಾಗಿ ಧಾರ್ಮಿಕ ನಂಬಿಕೆ ಪ್ರಧಾನವಾಗಿ ಭಕ್ತಿಯ ನೆಲೆ ಎಲ್ಲೆಲ್ಲೂ ಹಬ್ಬಿತ್ತು. ತಮಿಳನಂತೆ ತೆಲುಗುಭಾಷೆ ಮತ್ತು ಸಂಸ್ಕೃತ ಸಾಹಿತ್ಯಕ್ಕೂ ವೀರಶೈವ ಧರ್ಮಕ್ಕೂ ನಿಕಟ ಸಂಬಂಧವಿರುವುದು ತಿಳಿದುಬರುತ್ತದೆ.

## (೨.೩) ಸಾಮಾಜಿಕ ಹಿನ್ನೆಲೆ :-

ಹರಿಹರನು ಶಿವಭಕ್ತನಾಗಿದ್ದರೂ ಅವನೊಬ್ಬ ಸಮಾಜ ಜೀವಿಯಾಗಿರುವ ಕಾರಣದಿಂದ ಆ ಕಾಲದ ನಿರ್ಧಿಷ್ಟ ಸಮುದಾಯ ಪ್ರಜ್ಞೆ, ಸಾಂಸ್ಕೃತಿಕ ತಿಳುವಳಿಕೆ, ಧಾರ್ಮಿಕ ನಂಬಿಕೆ, ಆಶಯ, ಮನಸ್ಸಿನ ಹಂಬಲಗಳ ಅರಿವನ್ನು ತನ್ನ ಕೃತಿಗಳಲ್ಲಿ ಗುರುತಿಸಿರುತ್ತಾನೆ. ಈ ಹಿನ್ನೆಲೆಯಲ್ಲಿ ರಗಳೆಗಳನ್ನು ಸಮಕಾಲೀನ ಪ್ರಜ್ಞೆಯ ಮೂಲಕ ಅಧ್ಯಯನ ಮಾಡಬೇಕು. ಕೃತಿಯ ಒಟ್ಟು ಚೌಕಟ್ಟು ಅದರಲ್ಲಿ ಅಡಗಿರುವ ತಾತ್ವಿಕ ನೆಲೆಯನ್ನು ಅದರ ಸಾಮಾಜಿಕ ಹಿನ್ನೆಲೆಯಿಂದ ಲಕ್ಷಿಸಬೇಕು, ಆಗ ಹರಿಹರನ ಕಾಲ, ದೇಶ, ಕೃತಿಗೆ ಸಂಬಂಧಪಟ್ಟ ಒಂದು ಪರಂಪರೆ ಪ್ರಜ್ಞೆ ಬರುತ್ತದೆ.

ಈ ಪ್ರಜ್ಞೆಯಿಂದ ವರ್ತಮಾನ ಜಗತ್ತಿಗೆ ದೊರಕುವ ಜೀವಂತ ಮೌಲ್ಯಗಳನ್ನು ಗ್ರಹಿಸಿಕೊಳ್ಳಲು ನೆರವಾಗುತ್ತದೆ. ಈ ಬಗೆಯ ಭೂತ ಹಾಗು ವರ್ತಮಾನಗಳ ಮುಖಾಮುಖಿಯಲ್ಲಿ ವ್ಯಕ್ತವಾಗುವ ಹಿನ್ನೆಲೆಯಿಂದ ಭವಿಷ್ಯತ್ತಿಗೂ ಆ ಕೃತಿಗಳು ಹೇಗೆ ಬೆಳಕಾಗಿ ನಿಲ್ಲುತ್ತದೆ. ಎಂಬ ಪ್ರಶ್ನೆಯು ಮುಖ್ಯವೆನಿಸುತ್ತದೆ. ಏಕೆಂದರೆ ಪ್ರತಿಯೊಂದು ಕಾಲಮಾನದ ಸಾಮಾಜಿಕ ಪರಿಸರವು ವ್ಯಕ್ತಿಯ ಪ್ರಜ್ಞೆಯನ್ನು ರೂಪಿಸುತ್ತದೆ, ಬದಲಿಸುತ್ತದೆ ಹಾಗು ವಿಸ್ತಾರಗೊಳಿಸುತ್ತದೆ. "ಲೋಕದ ಅಪರಿಪೂರ್ಣ ಮತ್ತು ಅಸಂಬದ್ಧ ಜಾತಿವ್ಯವಸ್ಥೆಯನ್ನು ನಿರಾಕರಿಸುತ್ತಲೇ ವೀರಶೈವ ಸಮಾಜವನ್ನು ಸಂಸ್ಥೀಕರಿಸಿ ಗಟ್ಟಿಗೊಳಿಸುವ ಪರಿಶ್ರಮವನ್ನು ಹರಿಹರನ ರಗಳೆಗಳಲ್ಲಿ ಕಾಣಬಹುದು."[೫] ಹರಿಹರನ ರಗಳೆಗಳಲ್ಲಿ ಐತಿಹಾಸಿಕವಾದ ಸಂಗತಿಗಳ ಋಜುವಾತು ಕಂಡುಬರುತ್ತಾದಾದರೂ ಖಚಿತ ಐತಿಹಾಸಿಕ ಆಧಾರಗಳ ನೆರವಿನಿಂದಲೇ ಚಾರಿತ್ರಿಕ ಸಂಗತಿಗಳನ್ನು ನಿರ್ಧಿಷ್ಟ ಪಡಿಸಬೇಕಾಗುತ್ತದೆ.

ಹರಿಹರನ ರಗಳೆಗಳು ವೈಯಕ್ತಿಕ, ಸಾಮಾಜಿಕ ಮತ್ತು ಸಾಂಸ್ಥಿಕ ಸಂಬಂಧಗಳನ್ನು ಧ್ವನಿಸುತ್ತದೆ. ಸಾಮಾಜಿಕ ಬದುಕಿನ ಹಿನ್ನೆಲೆಯಿಂದ ಗಮನಿಸಿದಾಗ ಅದರಲ್ಲಿ ಸಾಂಸ್ಕೃತಿಕ

---

ಅಡಿಟಿಪ್ಪಣಿಗಳು : ೫. ಹರಿಹರನ ರಗಳೆಗಳು – ಸಾಂಸ್ಕೃತಿಕ ಮುಖಾಮುಖಿ, ಪು.ಸಂ. ೮೩

ಅಂಶಗಳನ್ನು ಗಮನಿಸಲೇಬೇಕಾಗುತ್ತದೆ. ವರ್ಣಾಶ್ರಮ ವ್ಯವಸ್ಥೆಯಡಿ ಬಂದಿರುವ ಸಂಪ್ರದಾಯ ಆಚರಣೆಗಳನ್ನು ಅಲ್ಲಗಳೆಯುವ ಅಂಶಗಳೂ ಹೇರಳವಾಗಿದ್ದು, ಸರಳ ಸುಲಭದ ಆಚರಣೆಗಳು ಜನರ ಕಣ್ಣನ್ನು ಸೆಳೆಯುವಂತೆ ಮಾಡುತ್ತದೆ. ಒಮ್ಮೊಮ್ಮೆಯಂತೂ ಪವಾಡ ಸದೃಶ ಘಟನೆಗಳೊಂದಿಗೆ ಜೈನರ ಎದುರು ಶೈವರ ಸಮುದಾಯ ಗಟ್ಟಿಯಾಗಿ ನೆಲೆನಿಲ್ಲುವಂತಹ ಶೈವ ವ್ಯಕ್ತಿತ್ವಗಳನ್ನು ಶಿವಭಕ್ತರ ಜೀವನಚರಿತ್ರೆಯಲ್ಲಿ ಮೌಲ್ಯಗಳನ್ನು ಕಟ್ಟಿಕೊಡುತ್ತಾನೆ. ರಗಳೆಗಳ ಸಂಕಥನದಲ್ಲಿ ಸಮಾಜದಲ್ಲಿ ವಾಸವಿದ್ದ ಜೈನರು, ವೈಷ್ಣವರು, ವೈದಿಕ ಬ್ರಾಹ್ಮಣರು ಶೈವರ ನಡುವೆ ಧರ್ಮ-ದೈವ ಪಾಲನೆಗೆ ಸಂಬಂಧಪಟ್ಟಂತೆ ಎಷ್ಟೇ ಸಂಘರ್ಷಗಳು ತಲೆದೋರಿದರೂ ಆ ಧರ್ಮದ ಅನುಯಾಯಿಗಳೆಲ್ಲಾ ಸೋಲುಣ್ಣುವಂತೆ ಮಾಡಿ ತನ್ನ ಧರ್ಮದ ಅಸ್ತಿತ್ವದ ವಿಜಯಪತಾಕೆಯನ್ನು ಹಾರಿಸಿದ್ದಾನೆ.

ಸಮಾಜದಲ್ಲಿ ಯಾವುದೇ ಬಗೆಯ ಹಿಂಸೆ, ಕ್ರೂರತೆ, ಅಶಾಂತಿ, ನಾಸ್ತಿಕತೆ ಇಂಥ ಅಪಮೌಲ್ಯಗಳು ಇಲ್ಲದೆ ನೆಮ್ಮದಿ, ಪ್ರಶಾಂತತೆಯಿಂದ ನೆಡೆಯಬೇಕಾದರೆ ನಮ್ಮ ವ್ಯವಹಾರ ಜೀವನದಲ್ಲಿ ಧರ್ಮ, ಭಯ ಭಕ್ತಿ, ನೀತಿ-ನೇಮಗಳನ್ನು ಅನುಸರಿಸಬೇಕಾಗುತ್ತದೆ. ಆದ್ದರಿಂದ ವಚನಕಾರರು ನೀತಿ-ಸಂಹಿತೆ, ಸುಧಾರಣಾಕ್ರಮಗಳನ್ನು ತಮ್ಮ ಸಾಹಿತ್ಯದಲ್ಲಿ ಅಭಿವ್ಯಕ್ತಿಸಿರುವುದು. ಇಂಥ ಸಮಾಜ ಸುಧಾರಣೆ, ಬೇಧಭಾವರಹಿತ, ಕಾಯಕಗೌರವ, ಶ್ರದ್ಧಾಭಕ್ತಿ ಮೊದಲಾದ ಆದರ್ಶಯುತ ಮೌಲ್ಯಗಳನ್ನು ಶಿವಭಕ್ತಿಯ ಕಥೆಗಳ ಮೂಲಕ ಹೇಳಿರುವ ಹರಿಹರನ ಆಂದೋಲನ ಕ್ರಮ ಗಮನಾರ್ಹವಾದುದು. 'ದಯೆಯೇ ಧರ್ಮದ ಮೂಲವಯ್ಯ' ಎಂಬ ವಚನಕಾರರ ಆದರ್ಶವನ್ನು ಪರಿಪಾಲಿಸುವ ಶಿವಭಕ್ತರು ದಯಾಪರ ಸಮಾಜವನ್ನೇ ನಿರ್ಮಾಣ ಮಾಡಿ ಸಮಾಜದಲ್ಲಿ ಶಾಂತಿನೆಲೆಸಲು ದ್ಯೋತಕರಾಗಿ ನಿಲ್ಲುತ್ತಾರೆ. ಅದರಂತೆ ತನ್ನ ರಗಳೆಗಳಲ್ಲಿ ಹರಿಹರ ಶಿವ ಮತ್ತು ಭಕ್ತರ ನಡುವೆ ಒಂದು ಸುಭದ್ರವಾದ ಸಂಬಂಧವನ್ನು ಬೆಸೆದಿದ್ದಾನೆ. ಯಾವಾಗಲೂ ತನ್ನ ಭಕ್ತರನ್ನು ಮುಕ್ತಕಂಠದಿಂದ ಹೊಗಳುವ ಶಿವನು "ಎನ್ನ ಭಕ್ತರು ನಡೆದುದೇ ಬಟ್ಟೆ ಕೇಳಯ್ಯ, ನುಡಿದುದೇ ವೇದವಾದುದು ಲಿಂಗವಂತರಿಗೆ" ಎಂಬ ಮಾತಿನಲ್ಲಿ ಶಿವಭಕ್ತರು ಸಮಾಜದಲ್ಲಿ ಸನ್ಮಾರ್ಗದಲ್ಲೇ ನಡೆದು, ಸದ್ಬೋಧೆಯನ್ನು ಮಾಡುವುದು ಎಂಬ ಬಲವಾದ ನಂಬಿಕೆ ಎಂಬುದು ರಗಳೆಗಳಿಂದ ವೇದ್ಯವಾಗುತ್ತದೆ.

ವೈಜಕವ್ವೆಯ ರಗಳೆಯಲ್ಲಿ ಶಿವಶರಣನೊಬ್ಬನಿಗೆ ಊಟವನ್ನು ನೀಡಿದ್ದು ತಪ್ಪು ಎಂದು ವಾದಿಸಿ, ಹೆಂಡತಿಯನ್ನು ಥಳಸಿ ಹೊರಹಾಕಿದ್ದರಿಂದ ಜೈನಮಂದಿರದ ಬಾಗಿಲುಗಳೆಲ್ಲಾ ತೆರೆಯದಂತಾದುದು ಜೈನರೆಲ್ಲಾ ಸೋತು ಶಿವಭಕ್ತೆ ವೈಜಕವ್ವೆಗೆ ಶರಣಾಗಿ ಶಿವನಿಗೆ ಶರಣುಹೋದ ಸಂದರ್ಭವು ಶೈವರ ವಿಜಯ ಸಂಕೇತವಾಗಿದೆ. ಅದೇ ರೀತಿ ಏಕಾಂತರಾಮಿ ತಂದೆ ಜೈನರ ಮುಂದೆ ಸವಾಲೆಸೆದು ತನ್ನ ತಲೆಯನ್ನು ಕತ್ತರಿಸಿಕೊಂಡು ಏಳು ದಿನಗಳ ನಂತರ ಜೀವ ಬರಿಸಿಕೊಂಡಾಗ ಜೈನರೆಲ್ಲಾ ಸೋತು ಶೈವಧರ್ಮಕ್ಕೆ ಶರಣಾಗತರಾದರು.

ಭೋಗಣ್ಣನು ಹೊಲೆಯನ ಸತ್ಕಾರ ಮಾಡಿದನೆಂಬ ಆಪಾದನೆಯ ಮೇಲೆ ರಾಜನು ಊರಿನಿಂದ ಅವನನ್ನು ಬಹಿಷ್ಕರಿಸಿದಾಗ ಊರನ್ನು ತೊರೆದ ಅವನ ಹಿಂದೆ ಶಿವಲಿಂಗಗಳೆಲ್ಲಾ ನಡೆದು ಹೋದವು. ಈ ಕಥೆಯನ್ನು ನಂಬುವುದಕ್ಕೆ ಕಷ್ಟ ಎನ್ನಬಹುದಾದರೂ ತನ್ನ ಯಜಮಾನನಿಗೆ ಅಥವಾ ಸ್ನೇಹಿತನಿಗೋ ಅವಮಾನವಾಗಿ ಮುಂದೆ ನಡೆದು ಊರನ್ನು ಬಿಡಬೇಕಾದ ಸನ್ನಿವೇಶ ಒದಗಿದರೆ ಅವನ ಸೇವಕರು, ಸ್ನೇಹಿತರೂ ದುಃಖಿಸಿ, ಅವರ ಕಷ್ಟದಲ್ಲಿ ಭಾಗಿಯಾಗಿ ಅವರ ಬೆನ್ನಹಿಂದೆ ನಡೆಯುವಂತೆ ಸಾಮಾನ್ಯ ಜನರ ಪ್ರತಿನಿಧಿಗಳಂತೆ ಲಿಂಗಗಳು ನಡೆದುಕೊಂಡಿವೆ. ಲಿಂಗ ಮತ್ತು ಜಂಗಮವೆರಡೂ ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಒಂದರ ಪರವಾಗಿ ಇನ್ನೊಂದು ಚೈತನ್ಯಶೀಲವಾಗಿರುತ್ತದೆ. ಹಾವಿನ ಹಾಳ ಕಲ್ಲಯ್ಯ ನಾಯಿಯ ಬಾಯಿಯಲ್ಲಿ ವೇದ ಪಠಣ ಮಾಡಿಸಿದ ಪ್ರಸಂಗ, ಸಾಮವೇದಿಗಳಿಗೆ ಶಿವನ ನೈವೇದ್ಯಕ್ಕೆ ಬೇಯಿಸುತ್ತಿದ್ದ ನಾಯಿ ಮಾಂಸ ಕಾಣದಂತೆ ತನ್ನ ಕೆರವನ್ನು ಮುಚ್ಚಿದ ಶ್ವಪಚಯ್ಯನ ಕಾರ್ಯ, ಇಂತಹ ಹಲವು ಕಥೆಗಳಲ್ಲಿ ಶೈವರ ವಿರೋಧಿಗಳನ್ನು ಭವಿಗಳೆಂದು ಟೀಕಿಸಿ ಅವರಿಗೆ ತಕ್ಕಶಾಸ್ತಿ ಮಾಡುವಂತೆ ರಚಿತವಾಗಿದೆ. ಸಮಾಜದಲ್ಲಿ ಇತರ ಧರ್ಮಗಳಿಗಿಂತ ಶೈವಧರ್ಮ ಸಾರಯುತವಾದುದು ಎಂದು ಸಾರುವ ತಾತ್ವಿಕ ನೆಲೆ ನಿರೂಪಣಾಕ್ರಮದಲ್ಲಿಯೇ ಕಟ್ಟಿಕೊಡುವ ಹರಿಹರನ ಸಾಹಿತ್ಯವು ಅಂದಿನ ಸಾಮಾಜಿಕ ಹಿನ್ನೆಲೆಯೊಂದಿಗೆ ಸಾಂಸ್ಕೃತಿಕ ವಿಚಾರಗಳನ್ನು ಚರ್ಚಿಸುತ್ತದೆ. ಆದ್ದರಿಂದ ಹರಿಹರನ ರಗಳೆಗಳು ಒಂದು ಸಾಮಾಜಿಕ ಗುಂಪಿನ ನಂಬಿಕೆಗಳು, ನಿಲುವುಗಳು, ಆಶೋತ್ತರಗಳು ಇಡೀ ಸಮಾಜದ ಒಳಿತನ್ನು ಸಾಧಿಸುವಂತಹ ಸಾಮಾನ್ಯ ನಿಲುವುಗಳು ಎನ್ನುವಂತೆ ಪ್ರತಿಬಿಂಬಿಸುತ್ತದೆ. "ಪಂಪಾಕ್ಷೇತ್ರವು ಆ ಕಾಲದಲ್ಲಿ ಸುಪ್ರತಿಷ್ಠಿತ ಧಾರ್ಮಿಕ ಮತ್ತು ಸಾಂಸ್ಕೃತಿಕ ಕೇಂದ್ರವೂ ಆಗಿದ್ದಿತು. ದೂರದ ದೇಶಗಳಿಂದ ಕಲಾವಿದ ಭಕ್ತರು ಅಲ್ಲಿಗೆ ಬಂದು ಪಂಪಾಧೀಶ ಶ್ರೀ ವಿರೂಪಾಕ್ಷನಿಗೆ

ನಾಟ್ಯಸೇವೆಯನ್ನೂ, ಸಂಗೀತ ಕಲಾಸೇವೆಯನ್ನೂ ಸಲ್ಲಿಸುತ್ತಿದ್ದರು. ಹರಿಹರನು ಈ ಕಾರ್ಯಕ್ರಮಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದಿರಬೇಕು"೭. ಆದ್ದರಿಂದಲೇ ಆ ಸಾಮಾಜಿಕ ಮತ್ತು ಸಾಂಸ್ಕೃತಿಕ ಅಂಶಗಳೂ ತಲೆದೋರಿ ಅವನ ರಗಳೆಗಳ ಮೇಲೆ ಪ್ರಭಾವಬೀರಿದೆ.

ಕ್ರಿ.ಶ. ೧೩ನೇ ಶತಮಾನವು ಕರ್ನಾಟಕದಲ್ಲಿ ರಾಜಕೀಯ, ಧಾರ್ಮಿಕ, ಸಾಮಾಜಿಕ ಮತ್ತು ಆರ್ಥಿಕ ಸುಧಾರಣೆಗಳೊಂದಿಗೆ ಅತ್ಯಂತ ಚೈತನ್ಯಶೀಲವಾದ ಕಾಲಘಟ್ಟವಾಗಿದೆ. ಇವುಗಳ ಮಧ್ಯೆ ವಾಗ್ವಾದಗಳು, ಸಂಘರ್ಷಗಳು ತಲೆದೋರಿದ್ದವು. ಕಾಪಾಲಿಕ ಕಾಳಮುಖ ಪಾಶುಪತದಂತಹ ಶಿವಭಕ್ತರು ಸುಡುಗಾಡುಗಳಲ್ಲಿ ಅಲೆದಾಡುತ್ತಾ ಶೈವಾಚರಣೆಗಳನ್ನು ಆಚರಿಸುತ್ತಿದ್ದರು. ಶೈವಧರ್ಮವನ್ನು ಒಂದೆಡೆ ನೆಲೆಸುವಂತೆ ಮಾಡಿ ಸೌಮ್ಯವಾದಿ ನೆಲೆಯಲ್ಲಿ ನಿಂತು ಮನುಷ್ಯಸಮಾಜದ ಅಪರಿಪೂರ್ಣತೆಯನ್ನು ತೊಡೆದುಹಾಕಿ ಸಾಧನೆಯ ಹಾದಿಯಲ್ಲಿ ಶಿವಭಕ್ತಿಯನ್ನು ಗಟ್ಟಿಗೊಳಿಸುವ ಪ್ರಯತ್ನದಲ್ಲಿ ಹರಿಹರ ತನ್ನ ವಾದಮಂಡನೆಯೇ ಸರಿಯಾದುದು ಎನ್ನುವ ಹಾಗೆ ಶೈವ ಪರಂಪರೆಯನ್ನು ಸ್ಥಾಪಿಸುತ್ತಾನೆ. ಲೋಕದ ಅಪರಿಪೂರ್ಣ ಮತ್ತು ಅಸಂಬದ್ಧ ಜಾತಿವ್ಯವಸ್ಥೆಯನ್ನು ನಿರಾಕರಿಸುತ್ತಲೇ ವೀರಶೈವ ಸಮಾಜವನ್ನು ಸಾಂಸ್ಥೀಕರಿಸಿ ಗಟ್ಟಿಗೊಳಿಸುವ ಪರಿಶ್ರಮವನ್ನು ಹರಿಹರನು ನಿರ್ವಹಿಸಿದ್ದಾನೆ ಎಂಬ ವಿಷಯವು ಅವನ ಸಮಗ್ರ ಸಾಹಿತ್ಯದಿಂದ ವೇದ್ಯವಾಗುತ್ತದೆ. ಸಮಾಜದ ಜನಸಾಮಾನ್ಯರನ್ನು ನಾಯಕರನ್ನಾಗಿ ಸ್ವೀಕರಿಸುವ ಮೂಲಕ ಸಮಾನತೆ, ನ್ಯಾಯಬದ್ಧತೆ ಮತ್ತು ಬೆಂಬಲವನ್ನು ಪಡೆಯುವುದು ಹರಿಹರನಿಗೆ ಅನಿವಾರ್ಯವಾಗಿತ್ತು. ಆದ್ದರಿಂದ ಹೊಯ್ಸಳ ಸಾಮ್ರಾಜ್ಯದ ಕರಣಿಕ ಹುದ್ದೆಯಿಂದ ಹೊರನಡೆದ ಹರಿಹರನಿಗೆ ಭಕ್ತಿ ಪ್ರಪಂಚವೇ ಹಿರಿದೆನಿಸಿತು. ಹರಿಹರನು ತನ್ನ ಗುರುವಾದ ಮಾಯಿದೇವರೊಂದಿಗೆ ದ್ರಾವಿಡ, ಗುಜರಾತ್, ಸೌರಾಷ್ಟ್ರ, ಆಂಧ್ರ, ಕಾಶಿ, ಕೇದಾರ, ಕಾಶ್ಮೀರ ಮುಂತಾದ ದೇಶಗಳಲ್ಲಿ ಸಂಚರಿಸಿ ಅಲ್ಲಲ್ಲಿಯ ಶೈವಕ್ಷೇತ್ರಗಳ ಪರಿಚಯ ಮಾಡಿಕೊಂಡಿರುವ ಸಾಧ್ಯತೆಗಳಿವೆ ಎಂಬ ಸಂಗತಿಯನ್ನು ತಿಳಿಯಬಹುದು. ಸಾಹಿತ್ಯ, ಸಂಸ್ಕೃತಿ ಜನಜೀವನಗಳ ಸ್ಥೂಲ ಪರಿಚಯವನ್ನಾದರೂ ಪಡೆದಿರಬೇಕು. ನಮ್ಮ ರಾಷ್ಟ್ರದ ಪ್ರಕೃತಿ ಸೌಂದರ್ಯದ ವೈವಿಧ್ಯ ವಿಸ್ತಾರ ವೈಭವವನ್ನು ಕಣ್ಣಾರೆ ಕಂಡು ತನ್ನ ಅನುಭವದ ಕೋಶವನ್ನು ತುಂಬಿಕೊಂಡಿರಬೇಕು. ಅಲ್ಲಿಂದ ತನಗೆ ಬೇಕಾದ ಗ್ರಂಥಗಳನ್ನು ಸಂಗ್ರಹಿಸಿಕೊಂಡು ಬಂದಿರಲೂಬಹುದು. ಈತನ ಕಾವ್ಯರಾಶಿಯ ವಸ್ತುವೈವಿಧ್ಯವನ್ನೂ ಅಲ್ಲಿ ಬರುವ ಸುರುಚಿರ ವರ್ಣನೆಗಳನ್ನು ನೋಡಿದರೆ ಈ ಊಹೆ

---

ಅಡಿಟಿಪ್ಪಣಿಗಳು : ೭. ಹರಿಹರನ ರಗಳೆಗಳು: ಡಾ|| ಎಂ.ಎಂ. ಕಲಬುರ್ಗಿ, ಪ್ರಸ್ತಾವನೆ

ನಿಜವೆಂಬುದು ಅರಿವಾಗುತ್ತದೆ ಎಂಬ ಹಲವು ವಿದ್ವಾಂಸರ ಅಭಿಪ್ರಾಯಗಳು ಒಪ್ಪುವಂತಹ ವಿಷಯವಾಗಿದೆ.

೧೩ನೇ ಶತಮಾನದ ಸಾಮಾಜಿಕ ಸಂದರ್ಭದಲ್ಲಿ ಒಂದು ಧರ್ಮದ ಸಾಂಸ್ಥೀಕರಣಕ್ಕೆ ಅನ್ಯಧರ್ಮದ ನಂಬುಗೆಗಳು ಹೇಗೆ ಅಡ್ಡಲಾಗುತ್ತದೆ, ಅವುಗಳನ್ನು ಹಿಮ್ಮೆಟ್ಟಿಸಿ ಪರಸ್ಪರ ಧರ್ಮಗಳು ರೂಪಿಸಿಕೊಳ್ಳುತ್ತಿದ್ದ ಸಾಹಿತ್ಯಕ ಸಾಂಸ್ಕೃತಿಕ ಹೋರಾಟಗಳ ಸ್ವರೂಪವನ್ನು ರಗಳೆಗಳ ಮೂಲಕ ಅರ್ಥೈಸಿಕೊಳ್ಳಬಹುದಾಗಿದೆ. ತಮಿಳುನಾಡಿನ ಪುರಾತನರು ಕನ್ನಡನಾಡಿನ ವಚನ ಸಾಹಿತ್ಯದ ಶಿವಶರಣರು ಮತ್ತು ಶಿವಭಕ್ತ ಜನಸಾಮಾನ್ಯರು ಹರಿಹರನ ಕಾವ್ಯ ಪ್ರಪಂಚದಲ್ಲಿ ಪ್ರಧಾನ ಸ್ಥಾನಪಡೆದುಕೊಂಡು ವೀರಶೈವಧರ್ಮದ ಬಲವನ್ನು ಹೆಚ್ಚಿಸಿ, ಒಗ್ಗೂಡಿಸಿದ ಸಾಂಸ್ಥಿಕ ದೃಷ್ಟಿಕೋನ ಅತಿಮುಖ್ಯವಾದುದು.

ಶಿವ ಮತ್ತು ಭಕ್ತಕುಲವನ್ನು ಮುಖಾಮುಖಿಯಾಗಿಸುವ ಸಂಕಥನಗಳಲ್ಲಿ ಮಾನವ ಸಮಾಜದ ಪ್ರಗತಿಗಾಗಿ ಮತ್ತು ಒಳಿತಿಗಾಗಿ ಮೌಲ್ಯಗಳಲ್ಲಿ ದರ್ಶಿಸಿ ಜನರನ್ನು ನಂಬಿಸಲು ಸಾಹಿತ್ಯಕ ಹೋರಾಟವನ್ನು ಮಾಡಿ ವೀರಶೈವ ಧರ್ಮದ ಅಸ್ಮಿತೆಯನ್ನು ರಗಳೆಗಳು ಕಟ್ಟಿಕೊಡುತ್ತವೆ. ಹರಿಹರನ ದೃಷ್ಟಿಯಲ್ಲಿ ಕೈಲಾಸವೆನ್ನುವುದು ದಿವ್ಯಪ್ರಭೆ, ಶಿವನೇ ಅಲ್ಲಿ ಒಡೆಯ, ಹೋಗಿ ಸಂಗಮವಾಗುವ ಶಿವಶರಣರು ಆದರ್ಶ ವ್ಯಕ್ತಿಗಳು. ಆ ಸ್ಥಾನಕ್ಕೇರಲು ಹವಣಿಸುವ ಶಿವಭಕ್ತರಿಗೆ ಕುಟುಂಬ, ಸಮಾಜ, ಜಾತಿ, ಧರ್ಮ, ಭಾಷೆಯೇ ಮೊದಲಾದ ಅಂಶಗಳು ಮನುಷ್ಯನ ಬೆಳವಣಿಗೆಯ ಹಾದಿಯ ಮೆಟ್ಟಿಲುಗಳೇ ಹೊರತು ಮನುಷ್ಯನನ್ನು ಬಂಧಿಸುವ ಸಂಕೋಲೆಗಳಾಗಬಾರದು. ಬದಲಾಗಿ ಮಾನವೀಯತೆಯಿಂದ ಬದುಕಬೇಕು, ಆಗ ಮಾತ್ರ ಸಮಾಜ ಪರಿವರ್ತನೆಯಾಗಲು ಸಾಧ್ಯವಾಗುತ್ತದೆ ಎಂಬ ಆಶಯವನ್ನು ಹರಿಹರ ಪಾಲಿಸಿದಂತಿದ್ದಾನೆ. ಸಮಾಜದಲ್ಲಿದ್ದ ಜಾತಿ–ಕುಲ ಬೇಧವನ್ನಳಿಸಿ, ರೀತಿ–ನೀತಿ ಕಟ್ಟುಪಾಡುಗಳನ್ನು ದಾಟಿ ಮನುಷ್ಯ ಸಂಬಂಧಗಳ ಪಾವಿತ್ರ್ಯ, ಮಾನವೀಯತೆ, ಮೌಲ್ಯಾದರ್ಶಗಳು, ಭಕ್ತಿ–ಭಾವೈಕ್ಯತೆ, ಏಕದೇವೋಪಾಸನೆ, ಶೈವಧರ್ಮಪ್ರಸಾರ ಮಾಡುವುದು ಕವಿಯ ಪ್ರಧಾನ ಆಕಾಂಕ್ಷೆಯಾಗಿದೆ ಎಂಬುದು ಹರಿಹರನ ರಗಳೆಗಳ ಕುರಿತಾದ ಅಧ್ಯಯನದಿಂದ ತಿಳಿದುಬರುತ್ತದೆ.

"ಮೌಲ್ಯವನ್ನು ವೈಯಕ್ತಿಕವಾಗಿ ಬದುಕುವವರು, ಸಾಹಿತ್ಯಕವಾಗಿ ಬರೆಯುವವರು, ಆದರೆ ಸಾಮಾಜಿಕವಾಗಿ ಕಾರ್ಯಗತಗೊಳಿಸುವವರು ವಿರಳ. ಕನ್ನಡದಲ್ಲಿ ಬಸವಣ್ಣ ಮಾತ್ರ ಈ ಮೂರೂ

ಅಂಶಗಳ ಸಮನ್ವಯನೆನಿಸಿದ್ದಾನೆ. ಹರಿಹರ ಮೌಲ್ಯವನ್ನು ವೈಯಕ್ತಿಕವಾಗಿ ಬದುಕಿ, ಸಾಹಿತ್ಯಿಕವಾಗಿ ಬರೆಯುವ ಎರಡು ಅಂಶಗಳ ಸಮನ್ವಯವೆನಿಸುತ್ತಾನೆ. ಮೌಲ್ಯವನ್ನು ಸಾಹಿತಿಯಾಗಿ ಮಾತ್ರ ಬರಿಯಬಲ್ಲ ಪಂಪ, ವ್ಯಕ್ತಿಯಾಗಿ ಬದುಕುವುದಿಲ್ಲ. ಸಾಮಾಜಿಕವಾಗಿ ಕಾರ್ಯಗೊತಗೊಳಸುವುದಿಲ್ಲ ಹೀಗಾಗಿ "ಮೌಲ್ಯ" ವಿಷಯದಲ್ಲಿ ಹರಿಹರ ಬಸವಣ್ಣನಿಗಿಂತ ಕೆಳಗೆ, ಪಂಪನಿಗಿಂತ ಮೇಲೆ ನಿಲ್ಲುತ್ತಾನೆ. ಇಂಥ ವ್ಯಕ್ತಿತ್ವದ ಹರಿಹರ ಸಾಹಿತ್ಯಕವಾಗಿ ಮಾಡಿದ ಪರಿವರ್ತನೆಗಳಗೆ ಹಲವು ಆಯಾಮಗಳವೆ. ಕಾವ್ಯದ ವಸ್ತು, ಭಾಷೆ, ಶೈಲಿ, ತಂತ್ರ, ಶಿಲ್ಪ ಮತ್ತು ಕಥಾವಿನ್ಯಾಸ."೭ ಇವುಗಳ ವಿಶ್ಲೇಷಣೆಯನ್ನು ಅಧ್ಯಯನ ಮಾಡಲಾಗಿದೆ. ಏಕದೇವೋಪಾಸನೆಯ ಮೂಲಕ ಒಂದು ಧರ್ಮವನ್ನು ಕಟ್ಟುವ ಹಲವು ಕಾರ್ಯಗಳಲ್ಲಿ ಸಾಹಿತ್ಯಕ ಹೋರಾಟವು ಪ್ರಧಾನವಾದುದು. ಆ ಪ್ರಯತ್ನವನ್ನು ಹರಿಹರ ಯಶಸ್ವಿಯಾಗಿ ನಿರ್ವಹಿಸಿದ್ದಾನೆ. ಹರಿಹರನ ಈ ಧೋರಣೆಯು ಅವನನ್ನು ರಾಜಾಶ್ರಯದ ಬದುಕಿನಿಂದ ದೂರಮಾಡಿ ಸಾಮಾಜಿಕ ಜನಸಾಮಾನ್ಯರ ಬದುಕಿನೆಡೆಯ ಕಡೆಗೆ ಸೆಳೆದು ಶೈವಧರ್ಮವನ್ನು ಪುಷ್ಟಿಗೊಳಸುವ ಪ್ರಯತ್ನವನ್ನು ಮಾಡಿದ್ದಾನೆ.

ಧರ್ಮದ ಸಾತ್ವಿಕ ಸ್ವರೂಪವನ್ನು ಎತ್ತಿಹಿಡಿದ ಬಸವಣ್ಣನವರು ಶಿವಭಕ್ತರಿಗೆ ಲಿಂಗದೀಕ್ಷೆಯನ್ನು ನೀಡಿ ಕಾಯಕಯೋಗಿಗಳನ್ನಾಗಿ ಮಾಡಿದರೆ, ಹರಿಹರನು ಶಿವಭಕ್ತಿಯನ್ನು ಆಧ್ಯಾತ್ಮಿಕತೆಯ ಕಡೆ ತಿರುಗಿಸಿ ಕೈಲಾಸದಲ್ಲಿ ಶಿವನಿಂದ ಗಣಪದವಿಯನ್ನು ಪಡೆಯುವ ಮಹತ್ವದ ಸ್ಥಾನವನ್ನು ಕಲ್ಪಿಸಿಕೊಟ್ಟಿದ್ದಾನೆ. ಆದ್ದರಿಂದ ಎಲ್ಲರ ದೃಷ್ಟಿ ಶಿವನೆಡೆಗೆ ಹಾಯುವ ಮೂಲಕ ವೀರಶೈವ ಧರ್ಮವನ್ನು ಜನತೆಯ ಬಳಗೆ ಸರಿಯಾದ ರೂಪಬಳಸಿಕೊಂಡಿರುವ ಹರಿಹರ ಜನಸಾಮಾನ್ಯರ ಉದ್ಧಾರಕ್ಕಾಗಿ ಶ್ರಮಿಸಿದ್ದಾನೆ. ಶಿವನೆಂಬ ಸತ್ಯಸ್ವರೂಪಿ, ಜ್ಞಾನದ ಬೆಳಕನ್ನು ಮನೆಮನೆಗಳಲ್ಲಿ ಬೆಳಗುವ ಕಾರ್ಯವನ್ನು ಸತತವಾಗಿ ಮಾಡಿದಂತಿದೆ. ಇದು ಧಾರ್ಮಿಕ ಮತ್ತು ಸಾಮಾಜಿಕ ಸಮಾನತೆಯ ನೆಲೆಗೆ ಬುನಾದಿಯಾಗುವಂತೆ ಸಾಹಿತ್ಯ ನಿರ್ಮಾಣ ಮಾಡಿದಂತಿದ್ದಾನೆ. ತನ್ನ ರಗಳೆಗಳಲ್ಲಿ ಶಿವಲಿಂಗ ನಿಷ್ಠೆಯೆಂಬ ಭಕ್ತಿಯ ಅರಿವಿನ ಪರಿಸರವನ್ನು ಮೂಡಿಸಿದ್ದಾನೆ. ಹರಿಹರನ ರಗಳೆಗಳಲ್ಲಿ ಮುಖ್ಯವಾದುದು ವೀರಕ್ಕೆ ಪ್ರತಿಯಾಗಿ ಸ್ಥಾಪಿಸಿದ ಭಕ್ತಿಯು ಕೇವಲ ಧಾರ್ಮಿಕ ಭಕ್ತಿಯಾಗಿ ಉಳಯದೆ, ಸಮಾಜೋಧಾರ್ಮಿಕ ಭಕ್ತಿಯ ನೆಲೆಗೂ ಇಳದ ಕಾರಣ, ಇದು ಆವೇಶ ಪ್ರತಿಭಟನೆ ಇತ್ಯಾದಿ ರೂಪಗಳಲ್ಲಿ ಬಿಚ್ಚಿಕೊಂಡಿದೆ.

---

ಅಡಿಟಿಪ್ಪಣಿಗಳು : ೭. ಹರಿಹರನ ರಗಳೆಗಳು: ಡಾ|| ಎಂ.ಎಂ. ಕಲಬುರ್ಗಿ, ಪ್ರಸ್ತಾವನೆ

“ಧಾರ್ಮಿಕ ಭಕ್ತಿಮೌಲ್ಯಕ್ಕೆ ಅನೇಕ ರಗಳೆಗಳಲ್ಲಿ ಬರುವ ಪೂಜೆ, ದೀಕ್ಷೆ ಇತ್ಯಾದಿ ಪ್ರಸಂಗಗಳನ್ನು ಉದಾರಿಸಬಹುದು. ಸಮಾಜೋಧಾರ್ಮಿಕ ಭಕ್ತಿ ನೆಲೆಗೆ ಇಳಿದಲ್ಲೆಲ್ಲ ವರ್ಗಬೇಧ, ಲಿಂಗಬೇಧ, ವರ್ಣಬೇಧ ಸಂಸ್ಕೃತಿಗಳ ವಿರುದ್ಧ ಎತ್ತಿದ ಧನಿ ಇಲ್ಲಿ ಎದ್ದು ಕೇಳಸುತ್ತದೆ” [೮]. ಇಡೀ ಭಾರತದಲ್ಲಿ ಭಕ್ತಿ ಪರಂಪರೆ ಅಲೆಅಲೆಯಾಗಿ ಎದ್ದಿತು. ಹೀಗೆ ಹರಿಹರನ ರಗಳೆಗಳು ಆದಿಕಾಲದಿಂದಲೂ ಬೆಳೆದುಬಂದಿದ್ದ ವರ್ಗ-ವರ್ಣ-ಲಿಂಗ ಬೇಧಗಳನ್ನು ಕಡೆಗಣಿಸಿ, ನಿರ್ಬೇಧ ಮೌಲ್ಯಗಳನ್ನು ಕಟ್ಟುವ ಕಾರ್ಯವನ್ನು ಯಶಸ್ವಿಯಾಗಿ ನಿರ್ವಹಿಸಿದೆ ಎನ್ನಬಹುದು. ಸಮಾಜದಲ್ಲಿನ ಅಂಕುಡೊಂಕುಗಳನ್ನು ತಿದ್ದಿತೀಡುವ ಪ್ರಯತ್ನ ಇವನ ರಗಳೆಗಳಲ್ಲಿ ಯಶಸ್ವಿಯಾಗಿ ನಡೆದಿದೆ. ಆದ್ದರಿಂದ ಆಗಿನ ಸಾಮಾಜಿಕ ಸಂದರ್ಭದೊಂದಿಗಿನ ಅಧ್ಯಯನವು ಇಲ್ಲಿ ಅವಶ್ಯಕವೂ ಹಾಗು ಪರಿಪೂರ್ಣವೆನಿಸಿದೆ.

## (೨.೪) ಪ್ರಸ್ತುತತೆ-ವರ್ತಮಾನದ ಪ್ರಶ್ನೆಗಳು :-

ಹರಿಹರನ ರಗಳೆಗಳನ್ನು ವರ್ತಮಾನದಲ್ಲಿಟ್ಟು ಓದುವುದು ಭೂಷಣವೆನಿಸಿದರೂ, ಪ್ರಸ್ತುತ ಸಮಸ್ಯೆಗಳಿಗೆ ಅದು ಪರಿಹಾರ ನೀಡುತ್ತದೆ ಎಂಬ ಪರಿಕಲ್ಪನೆಯೊಂದಿಗೆ ವಿಶ್ಲೇಷಿಸಿದರೆ ತಪ್ಪಾಗುತ್ತದೆ. ಏಕೆಂದರೆ ೧೩ ನೇ ಶತಮಾನದ ಕಾಲದ ಸಾಮಾಜಿಕ ವಿಚಾರಗಳಿಗಿಂತ ೨೧ ನೇ ಶತಮಾನದ ನಮ್ಮ ಕಾಲದ ಸಾಮಾಜಿಕ ವಿಚಾರಗಳು ಭಿನ್ನವೇ ಆಗಿರುತ್ತದೆ. ಶಿವನು ತನ್ನಲ್ಲಿ ಅಗಾಧ ಭಕ್ತಿಯನ್ನು ಹೊಂದಿರುವ ಭಕ್ತನನ್ನು ಬೆಂಬಿಡದೆ ಕಾಯುವುದು, ಧರ್ಮಮಾರ್ಗ, ಮೌಲ್ಯಗಳ ಕಥೆಗಳು ವರ್ತಮಾನದಲ್ಲಿ ಶ್ರೀ ಸಾಮಾನ್ಯನ ಮೈನವಿರೇಳಿಸಿ, ಭಕ್ತಿಯಲ್ಲಿ ಪುಳಕಿತರನ್ನಾಗಿ ಮಾಡುತ್ತದೆ. ಆದ್ದರಿಂದ ೧೨ ಮತ್ತು ೧೩ ನೇ ಶತಮಾನದಲ್ಲಿ ಬೇರೂರಿದ್ದ ಶಿವಭಕ್ತಿಯಾಚರಣೆಗಳು ಇವತ್ತಿಗೂ ನಮ್ಮಲ್ಲಿ ಕಾಣುವುದು ಹರಿಹರನ ರಗಳೆಗಳಲ್ಲಿ ಏಕದೇವೋಪಾಸನೆಯ ಆಚರಣೆಯಿಂದ ‘ಶಿವನು’ ಕೇಂದ್ರಿಕೃತನಾಗಿದ್ದರೂ ಆಯಸ್ಕಾಂತದ ಆಕರ್ಷಣೆಯೆಂಬಂತೆ ಭಕ್ತನನ್ನು ತನ್ನತ್ತ ಸೆಳೆಯುವ ಪ್ರಯೋಗಶೀಲತೆ ಗಮನಾರ್ಹ. ‘ಶಿವ ಮತ್ತು ಭಕ್ತನ’ ನಡುವಿನ ಸಂಬಂಧಗಳು ಕಾಲಕಾಲಕ್ಕೆ ಬದಲಾದರೂ ಅವರ ನಡುವೆ ಅಂಟಿನ ರೀತಿಯಿರುವ “ಭಕ್ತಿ” ಮಾತ್ರ ಬದಲಾಗುವುದಿಲ್ಲ. ಅದು ಕಾಲದಿಂದ ಕಾಲಕ್ಕೆ ಬೆಳೆಯುತ್ತಾ
ರೀತಿಯಿರುವ “ಭಕ್ತಿ” ಮಾತ್ರ ಬದಲಾಗುವುದಿಲ್ಲ. ಅದು ಕಾಲದಿಂದ ಕಾಲಕ್ಕೆ ಬೆಳೆಯುತ್ತಾ
ಹೋಗುತ್ತದೆ. ವರ್ತಮಾನದಲ್ಲಿ ಈ ರಗಳೆಗಳನ್ನು ಇಟ್ಟು ನೋಡಿದರೆ ‘ಶಿವನ’ ಸ್ಥಳದಲ್ಲಿ ಅಯ್ಯಪ್ಪ,

---

ಅಡಿಟಿಪ್ಪಣಿಗಳು : ೮. ಹರಿಹರನ ರಗಳೆಗಳು: ಡಾ।। ಎಂ.ಎಂ. ಕಲಬುರ್ಗಿ, ಪ್ರಸ್ತಾವನೆ

ರಾಘವೇಂದ್ರ ಸ್ವಾಮಿ, ಸಾಯಿಬಾಬಾ, ಗಣೇಶ, ಕೃಷ್ಣ, ಪೈಗಂಬರ್, ಯೇಸು ಅಥವಾ ಇನ್ನಾವುದೇ ದೇವನಿರಬಹುದು. ಆರಾಧನೆ ಮತ್ತು ಸೇವೆಯ ಹಿಂದೆ ಅಡಗಿರುವುದು ಒಂದೇ ನಿಯಮ, ಅದು 'ಭಕ್ತಿ', ಧರ್ಮ ಅಥವಾ ಭಕ್ತಿಯೆಂಬುದು ಮನುಷ್ಯನ ಒಳಗೊಮ್ಮೆ ಹೊಕ್ಕರೆ ಸಾಕು, ಅದರಿಂದ ಬಿಡಿಸಿಕೊಳ್ಳುವುದು ಅಷ್ಟು ಸುಲಭಸಾಧ್ಯವಲ್ಲ. ಪ್ರಸ್ತುತ ಸಮಾಜದಲ್ಲಿ ದೇವರನ್ನು ಆರಾಧಿಸುವ, ತಮ್ಮ ಕಷ್ಟಗಳಿಗೆ ಮೊರೆಹೋಗುವ ಜನಸಾಮಾನ್ಯರು ಹೇರಳವಾಗಿಯೇ ಇದ್ದಾರೆ. ಆದ್ದರಿಂದ ಭಕ್ತಿಯೆಂಬುದು ಎಂದೆಂದಿಗೂ ಜನಮಾನಸದಲ್ಲಿ ಉಳಿಯುವಂತಹ ಒಂದು ಬಲವಾದ ನಂಬಿಕೆ. ಭಕ್ತಿಯೆಂಬುದಕ್ಕೆ ನಿರ್ದಿಷ್ಟ ಮಿತಿಯೆಂಬುದಾಗಲಿ ಅಥವಾ ಇಂತಿಷ್ಟೇ ಎಂದು ಗೆರೆ ಎಳೆಯುವಂತಿಲ್ಲ. ಅದು ವಿಶ್ವ ವ್ಯಾಪ್ತಿಯಾದುದು.

ಹರಿಹರನ ರಗಳೆಗಳಲ್ಲಿ ಎದ್ದುಕಾಣುವ ಶಿವನು ಜನಸಾಮಾನ್ಯರ ಪಾಲಿಗೆ ಶಕ್ತಿ, ಮೌಲ್ಯ, ನಂಬಿಕೆ, ಸಂವೇದನೆ ಇದ್ದಂತೆ. ಈ ನೆಲೆಗಳೆಲ್ಲಾ ಭಕ್ತಿಯಿಂದ ಆವೃತಗೊಂಡಿರುತ್ತದೆ. ಈ ಭಕ್ತಿ ಎನ್ನುವ ಅಸ್ತಿತ್ವ ಸಮಾಜದಲ್ಲಿ ಎಲ್ಲಿಯವರೆಗೂ ಇರುತ್ತದೆಯೋ ಅಲ್ಲಿಯವರೆಗೂ ಹರಿಹರನ ಭಕ್ತಿಯ ಮೂಲ ತಿರುಳು ಸಂಪರ್ಕವನ್ನು ಬೆಸೆಯುತ್ತಲೇ ಇರುತ್ತದೆ ಆದ್ದರಿಂದ ದೇವರೊಂದಿಗೆ, ಸಂಬಂಧ-ಸಂವೇದನೆಯನ್ನು ಏರ್ಪಡಿಸುವ ಭಕ್ತಿಯು ಪ್ರಸ್ತುತತೆಯಿಂದ ಕೂಡಿದುದೂ ಹಾಗು ನಿರಂತರವಾದುದೂ ಹೌದು. ಪ್ರಸ್ತುತ ಕಂಪ್ಯೂಟರ್, ಐ.ಟಿ ಮತ್ತು ವೈಜ್ಞಾನಿಕ ಯುಗವೆನಿಸಿದ್ದರೂ ದೇವರ ಮೇಲಿನ ಭಕ್ತಿ-ಭಾವವಾಗಲೀ, ನಂಬಿಕೆಯಾಗಲೀ ಸಡಿಲವಾಗದೆ ಸದೃಢವಾಗಿಯೇ ಬೆಳೆದು ನಿಂತಿದೆ. ಆದ್ದರಿಂದ ಪ್ರತಿಯೊಬ್ಬ ಮನುಷ್ಯನೂ ಇಂದಿಗೂ ದೈವಭಕ್ತಿ, ದೇವರ ದರ್ಶನ, ಧ್ಯಾನ, ಪೂಜೆ-ಪುನಸ್ಕಾರಗಳು, ವ್ರತಗಳು, ಹಬ್ಬಹರಿದಿನ, ಜಾತ್ರಾ ಮಹೋತ್ಸವಗಳೊಂದಿಗೆ ದಿನನಿತ್ಯ ಕಷ್ಟಗಳನ್ನು ಪರಿಹರಿಸೆಂದು ಶರಣುಹೋಗುವ ನಿತ್ಯಸತ್ಯವಾಗಿದೆ. ಅದರಲ್ಲೂ ಶೈವಧರ್ಮೀಯರು ೧೨ ನೇ ಶತಮಾನದ ಶೈವಾಚರಣೆಯ ತಿರುಳಾದ ಶಿವಭಕ್ತಿ, ಲಿಂಗಪೂಜೆ, ಪಂಚಾಕ್ಷರಿ ಮಂತ್ರ ಪಠಣ ಶೈವಕ್ಷೇತ್ರಗಳ ದರ್ಶನ, ಸತ್ಕಾರ್ಯಗಳನ್ನೊಳಗೊಂಡ ಭಕ್ತಿಯಾಚರಣೆಗಳನ್ನು ಇಂದಿಗೂ ಪಾಲಿಸುತ್ತಿರುವುದನ್ನು ಗಮನಿಸಿದರೆ, ಧರ್ಮದ ಛಾಯೆಯು ಇನ್ನೂ ಹಸಿರಾಗಿಯೇ ಇದೆ ಎಂಬುದು ಗೋಚರಿಸುತ್ತದೆ. ಹೀಗಿದ್ದರೂ ಪ್ರಸ್ತುತ ಹರಿಹರನ ರಗಳೆಗಳನ್ನು ಓದಿಕೊಂಡು ಅಲ್ಲಿನ ಶಿವಭಕ್ತರ ಸಾರ್ಥಕ ಜೀವನವನ್ನು ಅನುಸರಿಸಿ ಅದನ್ನು ಮಾರ್ಗದರ್ಶಕ ಕೃತಿಗಳನ್ನಾಗಿ ಸ್ವೀಕರಿಸುತ್ತಾರೆ ಎಂದು ಹೇಳಿದರೆ ಅದು ಸರಿಯೆನಿಸುವುದಿಲ್ಲ.

ಶಿವಭಕ್ತಿಯ ಕಥೆಗಳನ್ನು ದೇವಸ್ಥಾನದ ಸಭಾ ಮಂಟಪದಲ್ಲಿ ಜಿಜ್ಞಾಸಕರು, ಇಲ್ಲವೆ ಶಾಲಾಕಾಲೇಜುಗಳಲ್ಲಿ ಪಠ್ಯಗಳಾಗಿ, ನಿರ್ದೇಶಕರುಗಳು ಪಾತ್ರಹೊಂದಿಸಿ ಚಲನಚಿತ್ರಗಳಾಗಿ ಹೊರತಂದಿರುತ್ತಾರೆ. ಆದ್ದರಿಂದ ಹರಿಹರನ ಸಾಹಿತ್ಯ ಭಕ್ತಿಪರಂಪರೆಯಿಂದ ಜನವರ್ಗವನ್ನು ಮುಟ್ಟಿದೆ. ಈ ಕಥೆಗಳ ಉಪನ್ಯಾಸವನ್ನೋ, ಚಲನಚಿತ್ರ ಇಲ್ಲವೆ ಪಠ್ಯಗಳಾಗಿ ಓದಿದಾಗ ಮೈಯಲ್ಲಿ ಮಿಂಚೊಂದು ಬಂದು ಹೋದಂಗಾದರೂ ಸೀಮಿತ ಕಥಾನಾಯಕರನ್ನು ಅನುಕರಿಸಿಕೊಂಡು ಹೋಗುತ್ತಾರೆ ಎಂಬ ಮಾತು ಸತ್ಯಕ್ಕೆ ದೂರವಾದುದು.

ದೇವರ ಅಸ್ತಿತ್ವವನ್ನು ಪ್ರಶ್ನೆ ಮಾಡುವವರು ಬೇಕಾದಷ್ಟು ಮಂದಿಯಿದ್ದಾರೆ. ದೇವಸ್ಥಾನಗಳಲ್ಲಿ ನಡೆಯುವ ಪೂಜೆಗಳನ್ನು ಮಾತ್ರವಲ್ಲ, ವೈಯಕ್ತಿಕ ಭಕ್ತಿಯನ್ನು ಲೇವಡಿ ಮಾಡುವವರಿದ್ದಾರೆ. ಯಾವುದು ಕಣ್ಣಿಗೆ ಕಾಣುತ್ತಿಲ್ಲವೋ ಅದನ್ನು ನಂಬುವುದು ಹೇಗೆ? ಎನ್ನುವುದು ವರ್ತಮಾನದಲ್ಲಿ ಹಲವರ ಪ್ರಶ್ನೆಗಳಾಗಿವೆ. ಆದರೆ ಭಗವಂತ ಬಯಸುವುದು ಕೇವಲ ಭಕ್ತಿಯನ್ನು ಮಾತ್ರ! ಉಳಿದ ಪೂಜೆ, ಅರ್ಚನೆ, ಆರಾಧನೆಗಳೆಲ್ಲಾ ಆ ಭಕ್ತಿಯಿಂದ ಹುಟ್ಟಬೇಕೆ ವಿನಃ, ಪೂಜೆ ಮಾಡುವುದರಿಂದ ಭಕ್ತಿ ಹುಟ್ಟುವುದಿಲ್ಲ. ಪರಿಪೂರ್ಣ ಮನಸ್ಸಿನಿಂದ ಕೂಡಿದ ಭಕ್ತಿಯಿಂದ ಏನನ್ನೇ ಸಮರ್ಪಿಸಿದರೂ ಭಗವಂತ ಸ್ವೀಕಾರ ಮಾಡುತ್ತಾನೆ ಎನ್ನುವುದನ್ನು ಹರಿಹರನ ಶಿವಭಕ್ತ ಕಥೆಗಳು ತಿಳಿಸುತ್ತವೆ. ಆದ್ದರಿಂದ ಭಗವಂತನನ್ನು ಮೆಚ್ಚಿಸುವುದಕ್ಕೆ ಭಕ್ತಿಯನ್ನು ಬಿಟ್ಟು ಬೇರೆ ಯಾವ ಸಾಧನವೂ ಇಲ್ಲ ಎಂಬುದು ಸರ್ವಕಾಲಕ್ಕೂ ಸಲ್ಲುವಂತ ತತ್ವವಾಗಿದೆ.

ಹೀಗೆ ಹರಿಹರನ ಕಾವ್ಯಪ್ರಪಂಚ ಒಂದು ವಿಸ್ತಾರವಾದ ತೋಟವಿದ್ದಹಾಗೆ. ಅಲ್ಲಿ ಹಲವು ಜಾತಿಯ ಹಣ್ಣುಗಳನ್ನು ಬಿಡುವ ಮರಗಳಿರುವಂತೆ. ಉತ್ತಮ ವ್ಯವಸಾಯದಿಂದ ತರತರದ ಧವಸಧಾನ್ಯಗಳನ್ನು ಬೆಳೆಯಲು ಅವಕಾಶವಿದೆ. ತನ್ನ ಅನುಭವದಿಂದ ತಾನೇ ಕೃಷಿಕನಂತೆ ನಿಂತು ಅವನ್ನು ಬೆಳಸಿದ. ಇದನ್ನು ಸಾಹಿತ್ಯ ಪ್ರಪಂಚಕ್ಕೆ ಹೋಲಿಸಿನೋಡಿದರೆ, ಹರಿಹರನರಗಳೆಗಳಲ್ಲಿ ವಿವಿಧ ಪ್ರಕಾರದ ಕಥಾನಾಯಕ-ಕಥಾನಾಯಕಿಯರು ತಮ್ಮ ಆತ್ಮೋದ್ಧಾರ ಮಾಡಿಕೊಂಡು ಆ ಮೂಲಕ ಸಮಾಜೋದ್ಧಾರಕ್ಕೂ ಕಾರಣಕರ್ತರಾಗಿರುತ್ತಾರೆ. ಕೊಡಗೂಸು, ಬಾಲಕ-ಬಾಲಕಿಯರು, ತರುಣ-ತರುಣಿಯರು, ಮಧ್ಯಮವಯಸ್ಕರು, ವೃದ್ಧರು, ಕೂಲಿ-ಕೃಷಿಕಾರ್ಮಿಕರು, ದಂಪತಿಗಳು ಬಡವರು, ಕೆಳಜಾತಿಯವರು, ವ್ಯಾಪಾರಿಗಳು, ವಿಲಾಸಿಯರು, ಅಬಲೆಯರು, ಪ್ರೇಮಿಗಳು, ರಾಜರು, ಮಂತಿವರ್ಯರು ಹೀಗೆ ಎಲ್ಲಾ ಪ್ರತಿನಿಧಿಗಳ ಬಾಳನ್ನು ತನ್ನ ಕಾವ್ಯದಲ್ಲಿ ಅರ್ಥಪೂರ್ಣವಾಗಿ, ಅನುಭಾವಿಕವಾಗಿ ಚಿತ್ರಿಸಿದ್ದಾನೆ.

# ಅಧ್ಯಾಯ – ೩

## ಶಿವ ಮತ್ತು ಭಕ್ತರ ಸಂಬಂಧ ಹಾಗು ಭಾವಗಳ ವಿಶ್ಲೇಷಣೆ

ಅರವತ್ತಮೂರು ಪುರಾತನರ ಚರಿತೆಗಳು "ಪೆರಿಯಪುರಾಣ" ಎಂಬ ತಮಿಳು ಕಾವ್ಯಗಳನ್ನು ಆಧರಿಸಿ, ಹರಿಹರನು ಆ ಕಥೆಗಳನ್ನು ತನ್ನದೇ ಆದ ನಿರರ್ಗಳವಾದ ಶೈಲಿಯಲ್ಲಿ ಅತ್ಯಂತ ಪರಿಣಾಮಕಾರಿಯಾಗಿ ಚಿತ್ರಿಸಿದ್ದಾನೆ. ಕನ್ನಡ ನಾಡಿನ ಶರಣರ ರಗಳೆಗಳು ಮತ್ತು ಸಂಕೀರ್ಣ ರಗಳೆಗಳನ್ನು ರಚಿಸಿರುವ ಹರಿಹರನ ಕೃತಿಗಳಲ್ಲಿ ಕಾಣುವ ಶಿವಶರಣರೆಲ್ಲ ಶಿವನ ಅತಿಭಕ್ತರು. ವೈವಿಧ್ಯಮಯವಾಗಿ ಕೂಡಿರುವ ಈ ಶಿವಶರಣರ ಕಥೆಗಳು ಭಕ್ತರ ಜೀವನದ ಆಧ್ಯಾತ್ಮಿಕ ವರ್ಣನೆಗಳಿಂದ ಕೂಡಿದೆ.

ರಗಳೆಗಳಲ್ಲಿ ಹರಿಹರನು ಒಂದು ನಿರ್ದಿಷ್ಟ ಚೌಕಟ್ಟನ್ನು ಅನುಸರಿಸಿದ್ದಾನೆ. ರಗಳೆಯ ಪ್ರಾರಂಭದಲ್ಲಿ ಒಂದು ಕಂದ ಪದ್ಯ ಇರುತ್ತದೆ. ಪ್ರಾರಂಭದ ಕಂದ ಪದ್ಯದಲ್ಲಿ ಅತ್ಯಂತ ಸ್ಥೂಲವಾಗಿ ಕಥಾನಾಯಕನನ್ನು ಪರಿಚಯಿಸಿ, ಶಿವನನ್ನು ಬೇಡಿಕೊಳ್ಳುವ ಪ್ರಾರ್ಥನೆಯ ಪದ್ಯವಿರುತ್ತದೆ. ಕೊನೆಯಲ್ಲಿ ಈ ಭಕ್ತನನ್ನು ಉದ್ಧಾರ ಮಾಡಿದ ಹಾಗೆ ನನ್ನನ್ನೂ ಉದ್ಧರಿಸು ಎಂಬ ವಿನಯಪೂರ್ವಕ ಬೇಡಿಕೆ ಇರುತ್ತದೆ. ಇವುಗಳ ಮಧ್ಯೆ ಭಕ್ತ ಹಾಗು ಶಿವ ಭಕ್ತಿಯ ಕಥೆ ಬರುತ್ತದೆ. ಆವೇಶಪೂರಿತ ಭಕ್ತಿ ಹಾಗೂ ಶಿವಸಾಕ್ಷಾತ್ಕಾರವನ್ನು ಪಡೆಯುವ ವಿಷಯವನ್ನೇ ಮತ್ತೆ ಮತ್ತೆ ಧ್ವನಿಸುವುದು ಹರಿಹರನ ವೈಶಿಷ್ಟ್ಯವಾಗಿದೆ.

"ಹರಿಹರನ ಕಥಾ ಜಗತ್ತಿನಲ್ಲಿ ಮೂರು ವಾಸ್ತವಗಳಿವೆ ಅವು ಭಕ್ತ-ನಿರೂಪಕ ಪ್ರಜ್ಞೆ, ಭಕ್ತ ಕಥನ ಮತ್ತು ಶಿವ, ಹರಿಹರನ ಮಟ್ಟಿಗೆ ಈ ಮೂರು ವಿಶಿಷ್ಟ ಹಾಗೂ ಭಿನ್ನ. ತಾನು ಕಥಿಸುತ್ತಿರುವ ಎಲ್ಲಾ ಭಕ್ತರೂ ತನಗಿಂತ ದೊಡ್ಡವರು ಎಂಬ ತಿಳುವಳಿಕೆ ಆತನ ಕಥನಕ್ಕೊಂದು ಅರ್ಹತೆ ನೀಡಿದೆ. ಮತ್ತು ಆ ಭಕ್ತರಿಗಿಂತ ಶಿವ ಹೋಲಿಕೆಗೆ ಸಿಗದಷ್ಟು ದೊಡ್ಡವನು ಹೀಗೆ ಮೂರು ವಿಭಿನ್ನ ಸ್ತರಗಳಲ್ಲಿ ಹರಿಹರ ತನ್ನ ಭಕ್ತನ ಕಥನ ಮಾಡುತ್ತಾ ಹೋಗುತ್ತಾನೆ. ಈ ಮೂರೂ ಸ್ತರಗಳು ಆಗಾಗ ಸಂಬಂಧಿಸಿದಂತೆ ಕಂಡುಬಂದರೂ ಅವು ಬೇರೆಯಾಗಿಯೇ ಉಳಿಯುತ್ತದೆ ಎನ್ನುವುದು ದ್ವೈತ ಶೈವ ಪ್ರತಿಭೆಯ ಒಂದು ವಿಶಿಷ್ಟ ಧಾರೆಯಾಗಿ ಹರಿಹರನನ್ನು ನಮಗೆ ಪರಿಚಯಿಸುತ್ತವೆ." ೧ ಹರಿಹರನ ಶಿವಭಕ್ತಿ ತೀವ್ರವಾದುದು, ಹೆಚ್ಚು ಆತ್ಮೀಯವಾದುದು ತನ್ಮಯ ಸ್ವರೂಪದ್ದು.

---

**ಅಡಿಟಿಪ್ಪಣಿಗಳು** : ೧. ಅಲ್ಲಮ ಪ್ರಭು ಮತ್ತು ಶೈವ ಪ್ರತಿಭೆ-ಡಿ.ಆರ್.ನಾಗರಾಜ್ ಅಕ್ಷರ ಪ್ರಕಾಶನ ಹೆಗ್ಗೋಡು, ಸಾಗರ. ಕರ್ನಾಟಕ -೫೭೭೪೧೭, ಪು.ಸಂ.೩೪

ಅದನ್ನು ಭಕ್ತಿ ಪ್ರವಾಹ ಎನ್ನಬಹುದು ಕನ್ನಡ ಸಾಹಿತ್ಯಕ್ಕೇ, ಅದರಲ್ಲಿಯೂ ಭಕ್ತಿ ಸಾಹಿತ್ಯಕ್ಕೇ ಇದು ಒಂದು ಅಪೂರ್ವಕೊಡುಗೆ. ರಗಳೆಗಳು ಅವನ ಪಾಲಿಗೆ ಶಿವನನ್ನು ಒಲಿಸುವ ಸಾಧನೆ. ಇಷ್ಟಾದರೂ ಭಕ್ತ ಕವಿ ಕುಮಾರವ್ಯಾಸನಿಗೆ ಸಿಕ್ಕಷ್ಟು ಓದಗರು ಮತ್ತು ವಿಮರ್ಶಕರು ಹರಿಹರನಿಗೆ ದೊರಕಲಿಲ್ಲ. ಮಧ್ಯಯುಗದ ಯಾವ ಭಕ್ತಿ ಕಾವ್ಯದಲ್ಲಿಯೂ ಮತೀಯ ಅಂಶಗಳು ಇಲ್ಲದೇ ಇಲ್ಲ, ಭಕ್ತಿ ಕಾವ್ಯವೂ ಸಾಹಿತ್ಯದ ಒಂದು ಭಾಗವಾಗಿದೆ. ಮಹಾಭಾರತಕ್ಕೆ ಕುಮಾರವ್ಯಾಸ ಬರೆದ ಭಕ್ತಿಯ ವ್ಯಾಖ್ಯಾನ ಸೃಜನ ಶೀಲವಾಯಿತು. ಲೋಕದ ಅನುಭವವನ್ನು ಭಕ್ತಿ ಸೆರೆ ಹಿಡಿಯಿತು.

ಹರಿಹರನ ರಗಳೆಗಳಲ್ಲಿ ಸಾಮಾನ್ಯವಾಗಿ ಗೋಚರವಾಗುವ ಸಾಮಾನ್ಯ ಸಂಗತಿಗಳು ಹೀಗಿವೆ. ವರ್ಣನಾ ವೈಖರಿ, ಭಕ್ತಿಯ ಆವೇಶ, ಪೂಜಾವಿಧಾನಗಳು, ವ್ರತನಿಯಮ ಪಾಲನೆ, ಗುರು-ಲಿಂಗ-ಜಂಗಮ ಸೇವೆ ಶಿವನೊಲುಮೆಗೆ ಪಾತ್ರರಾಗುವ ಭಕ್ತರ ಕಥೆಗಳು, ಶಿವದರ್ಶನ, ಕೈಲಾಸ-ಗಣಪದವಿ, ಹೀಗೆ ಸಕಲವನ್ನೂ ಭಕ್ತರ ಹೃದಯಕ್ಕೆ ಹೋಗುವಂತೆ ಸ್ಪಷ್ಟವಾಗಿ ಕಾಣಿಸಿದೆ. ರಕ್ತವಿಲ್ಲದೆ ದೇಹವು ಹೇಗೆ ಬದಕಲು ಸಾಧ್ಯವಿಲ್ಲವೋ ಹಾಗೆಯೇ ಶ್ರದ್ಧೆ-ಪ್ರಾರ್ಥನೆಗಳಿಲ್ಲದೆ ಆತ್ಮವೂ ಕೂಡ ಬದುಕಲು ಸಾಧ್ಯವಿಲ್ಲ ಎಂಬ ಮಹಾತ್ಮಗಾಂಧಿಯವರ ಮಾತು ಹರಿಹರನ ಶಿವಶಿರಣರು ಶಿವನ ಮೇಲೆ ಇಟ್ಟಿದ್ದ ಭಕ್ತಿ ಮತ್ತು ಶ್ರದ್ಧೆಯಿಂದಲೇ ಈ ಜೀವನ್ಮುಕ್ತಿ ಎಂಬ ಮಾತನ್ನು ಪುಷ್ಟೀಕರಿಸುವಂತಿದೆ.

ಈ ಸಂಶೋಧನೆ ಅಧ್ಯಯನದಲ್ಲಿ ಡಾ॥ ಎಂ.ಎಂ.ಕಲಬುರ್ಗಿ ಸಂಪಾದಿತ "ಹರಿಹರನ ರಗಳೆಗಳು"-ಕೃತಿಯ ಒಟ್ಟು ೧೦೮ ರಗಳೆಗಳನ್ನು ಬಳಸಿಕೊಳ್ಳಲಾಗಿದೆ. ಈ ಕಥೆಗಳನ್ನು ಆಧಾರವಾಗಿಟ್ಟುಕೊಂಡು ಹೊಸತಾತ್ವಿಕ ನೆಲೆಗಟ್ಟಿನಲ್ಲಿ ಶಿವ ಮತ್ತು ಭಕರ ನಡುವಿನ ಸಂಬಂಧದ ಸ್ವರೂಪ ಮತ್ತು ಭಾವಗಳ ವಿಶ್ಲೇಷಣೆಯನ್ನು ಎಳೆಎಳೆಯಾಗಿ ಬಿಡಿಸಿಕೊಂಡು ಅಧ್ಯಯನ ಮಾಡಲಾಗಿದೆ.

**<u>ಶಿವಭಕ್ತರ ವೈಶಿಷ್ಟ್ಯ</u>:-**

ಕೆಲವು ಶಿವಭಕ್ತರ ಜೀವನದಲ್ಲಿ ಸಂಕಲ್ಪ ಪೂರ್ವಕವಾದ ನೇಮ-ನಿಷ್ಠೆ, ಸತತ ಶಿವ ಪೂಜೆ, ಧ್ಯಾನ, ದಾನ-ಧರ್ಮದ ಆಚರಣೆ ಇಲ್ಲವೆ ಮೌಲ್ಯಾದರ್ಶ ಪರಿಪಾಲನೆಯ ಮೂಲಕ ಶೈವಧರ್ಮದ ಅನುಯಾಯಿಗಳಾಗಿ ಸಾಧಕರಾಗುತ್ತಾರೆ.

ಉದಾ: ಇಳೆಯಾಂಡ ಗುಡಿಮಾರ, ಇಹಃ ಪಗೆಯಾಂಡರ, ಸೇದಿರಾಜ, ಅಮರನೀತಿ, ಮಾನಕಂಜರ, ಬಸವಣ್ಣ, ಅಕ್ಕಮಹಾದೇವಿ ಮೊದಲಾದವರು. ಇನ್ನು ಕೆಲವು ಶಿವಭಕ್ತರ ಜೀವನದಲ್ಲಿ ಆಕಸ್ಮಿಕವಾಗಿ ಎದುರಾದ ಘಟನೆಯಿಂದ ಮನಸ್ಸಿನಲ್ಲಿ ತಳಮಳ, ಭಯ-ಭಕ್ತಿಯ ಗಾಢತೆ ಹೆಚ್ಚಿ ಸಾಧಕರಾಗುತ್ತಾರೆ. ಉದಾ: ತಿರುನೀಲಕಂಠ, ಬೇಡರ ಕಣ್ಣಪ್ಪ, ಪ್ರಭುದೇವ, ಮಲುಹಣದೇವ, ಉಧ್ಭಟದೇವ, ಚಂಡೇಶಪಿಳ್ಳೆ, ಕಲಿಕಾಮದೇವರು, ಮೆರೆಮಿಂಡದೇವ, ನಂಬಿಯಣ್ಣ ಮೊದಲಾದ ಶಿವಭಕ್ತರು.

ಭಕ್ತ ಮತ್ತು ಶಿವ – ಈ ಎರಡೂ ಸ್ಥಲದಲ್ಲಿ ಭಕ್ತನಾದವನು ಯಾವುದೇ ಒಂದು ಮಾರ್ಗದ ಮುಖೇನ ಶಿವನನ್ನು ಒಲಿಸಿಕೊಳ್ಳುವ ಗುರಿಯಲ್ಲಿ ಸಾಗುತ್ತಿರುತ್ತಾನೆ. ಶಿವನನ್ನು ತಲುಪಲು ಭಕ್ತನು ತನ್ನನ್ನೇ ತಾನು ಅರ್ಪಿಸಿಕೊಳ್ಳಲು ಸಿದ್ಧನಿರುತ್ತಾನೆ. ಭಕ್ತನಲ್ಲಿ ತನ್ಮಯತೆ, ಏಕನಿಷ್ಠೆ, ಭಾವೋದ್ರೇಕ, ಹೃದಯವಂತಿಕೆ, ಶ್ರದ್ಧಾಭಕ್ತಿಗಳು ಅವರ ಗುಣಗಳಾಗಿಯೇ ಬೆಳೆದು ಶಿವನನ್ನು ಪ್ರೇಮ, ವಾತ್ಸಲ್ಯ, ದಾಸ್ಯ ಮತ್ತು ಸ್ನೇಹ ರೂಪಗಳಲ್ಲಿ ನೋಡಲೆತ್ನಿಸುತ್ತಾನೆ. ಭಕ್ತರಿಗಿರುವ ಈ ಒಡನಾಟದ ಕಾತುರ ತನ್ನ ಭಕ್ತರನ್ನು ಕೈಲಾಸಕ್ಕೆ ಕರೆದೊಯ್ಯಬೇಕೆಂಬ ಹಂಬಲ ಶಿವನಿಗೂ ಇರುತ್ತದೆ. ಶಿವನು ಏನೇ ಸಂಕಷ್ಟ ತಂದೊಡ್ಡಿದರೂ ಅಂಜದ ಭಕ್ತನು ಜಯಸಾಧಿಸುತ್ತಾನೆ. ಈ ಮೂಲಕ ಇಹ-ಪರಗಳೆರಡರ ಸಮನ್ವಯತೆಯನ್ನು ಭಕ್ತಿಮಾರ್ಗ ಸಾಧಿಸುತ್ತದೆ. ಶಿವಭಕ್ತರ ನಿಷ್ಠೆ, ಆದರ್ಶದ ಮಹತ್ವವನ್ನು ವಚನಕಾರರು ಹೀಗೆ ಸಾರಿದ್ದಾರೆ.

ಒಲಿದು ಒಲಿಸಿಕೊಳ್ಳಬೇಕು, ಒಲಿದಲ್ಲದೆ ಇಲ್ಲ
ಹಲವು ಕೊಂಬೆಗೆ ಹಾರದಿರು ಮರುಳೇ
ಅಟ್ಟಿ ನೋಡುವ, ಮುಟ್ಟಿನೋಡುವ, ತಟ್ಟಿನೋಡುವ, ಒತ್ತಿನೋಡುವ
ಅಟ್ಟಿದಡೆ, ಮುಟ್ಟಿದಡೆ, ತಟ್ಟಿದಡೆ, ಒತ್ತಿದಡೆ,
ನಿಷ್ಠೆಯ ಬಿಡದಿದ್ದಡೆ ತನ್ನನೀವ ಮಹಾಲಿಂಗ ಕಲ್ಲೇಶ್ವರ (ವಚನ ಸಾಹಿತ್ಯ ಸಂಪುಟ)

ಶಿವನು ತನ್ನ ಭಕ್ತರಿಗೆ ಭಕ್ತಿಯ ಆನಂದವನ್ನು ಹಲವು ರೀತಿಯ ಮಾನವೀಯ ಸಂಬಂಧಗಳಲ್ಲಿ ಉಣಿಸುತ್ತಾನೆ. ಒಮ್ಮೆ ಶಿವನು ದೈವಶಕ್ತಿಯಂತಿದ್ದರೆ, ಮತ್ತೊಮ್ಮೆ ಪತಿಯಂತೆ, ಒಡೆಯನಂತೆ, ಸ್ನೇಹಿತನಂತೆ, ತಂದೆಯಂತೆ ಹಲವು ಸಂಬಂಧಗಳನ್ನು ಪಡೆಯಲೆತ್ನಿಸಿ ತನ್ನ

ಭಕ್ತರನ್ನು ಉದ್ಧರಿಸುತ್ತಾನೆ. ಅಂತೆಯೇ ಭಕ್ತರೂ ಶಿವನೊಡನೆ ಮಧುರ ಭಾವದಿಂದ ಅನೇಕ ವಿಧದ ಸಂಬಂಧಗಳನ್ನಿರಿಸಿಕೊಳ್ಳುತ್ತಾರೆ.

ಉದಾ : ಇಳೆಯಾಂಡ ಗುಡಿಮಾರ, ಸೇದಿರಾಜ, ಅಮರನೀತಿ, ತಿರುನೀಲಕಂಠ, ತಿರುಕುರುಂಪೆತೊಂಡರ ಮೊದಲಾದ ಶಿವಭಕ್ತರು ದಾಸ್ಯತನದಿಂದ ಶಿವನ ಸೇವಕರಂತೆ ಭಾವತೃಪ್ತಿಯನ್ನು ಪಡೆಯುತ್ತಾರೆ. ಕಾರಿಕಾಲಮ್ಮೆಯು ಶಿವನೊಡನೆ ಸ್ನೇಹಸಂಬಂಧವನ್ನು ಹೊಂದಿದ್ದರೆ, ಶಿವನು ಅವಳನ್ನು ತನಗೆ ತಾಯಿ ಹಾಗು ಪಾರ್ವತಿಗೆ ನಿಮ್ಮತ್ತೆ ಕೈಲಾಸಕ್ಕೆ ಆಗಮಿಸಿರುವಳೆಂದು ಸಂತೋಷ ವ್ಯಕ್ತಪಡಿಸುತ್ತಾನೆ. ನಂಬಿಯಣ್ಣ, ನಿಂಬಿಯಕ್ಕ, ಕಣ್ಣಪ್ಪ, ಕುಂಬಾರ ಗುಂಡಯ್ಯ ಮೊದಲಾದ ಶಿವಭಕ್ತರು ಸ್ನೇಹಮಯ ಸಂಬಂಧಗಳಲ್ಲೊಂದಾಗುತ್ತಾರೆ. ತಾನು ತಂದ ಬಟ್ಟಲು ಹಾಲುಣಿಸಿ ಕೊಡಗೂಸು ಶಿವನಿಗೆ ತಾಯಾಗುತ್ತಾಳೆ. ಶಿವನನ್ನೇ ಮಗನನ್ನಾಗಿ ಪಡೆದು ಬಿಗಿದಪ್ಪಿ, ಮುದ್ದಾಡಿ ಸದಾ ಸುಖದಿಂದ ಇರು ಎಂದು ಹರಸುವ ಅಮ್ಮವ್ವೆಯ ತಾಯಿ ಸಂಬಂಧ ವಾತ್ಸಲ್ಯಯುತವಾದುದು.

ಈ ರೀತಿಯ ಭಕ್ತಿ ಮತ್ತು ದೈವದೊಡನೆ ಹೊಂದುವ ಸಂಬಂಧ ದಾಸರ ಕಾಲದಲ್ಲಿ ಅಧಿಕವಾಗಿಯೇ ಕಾಣುತ್ತದೆ. ದಾಸರು ವಿಷ್ಣುವನ್ನು ಕುರಿತು "ದಾಸನ ಮಾಡಿಕೋ ಎನ್ನ ಸ್ವಾಮಿ, ಸಾಸಿರ ನಾಮವ ವೆಂಕಟರಮಣ" ಎಂದು ಒಮ್ಮೆ ಹಾಡಿದರೆ ಮತ್ತೊಮ್ಮೆ ಮಗನೆಂದು ತಿಳಿದು ಎಂದಪ್ಪಿಕೊಂಬೆ ರಂಗಯ್ಯನ ಎಂದಪ್ಪಿಕೊಂಡು ಮುದ್ದಾಡುವೆ ಎಂಬ ದೈವದೊಡನೆಯ ವಾತ್ಸಲ್ಯಭಾವ ವ್ಯಕ್ತವಾಗುತ್ತದೆ. ಕೃಷ್ಣನ ಮೇಲಿನ ಮಧುರ ಭಾವವನ್ನು ಹೊಂದಿದ್ದ ಮೀರಾಳ ಭಕ್ತಿ ವಿಶೇಷಯುತವಾದುದು. ಹೀಗೆ ಶರಣರ ಶಿವ ಮತ್ತು ದಾಸರ ವಿಷ್ಣುವನ್ನು ಕುರಿತು ಚರ್ಚಿಸಿದರೆ ಶಿವನೇ ವಿಷ್ಣುವಿಗಿಂತ ಮೇಲಿನ ಸ್ಥಾನದಲ್ಲಿ ನಿಲ್ಲುತ್ತಾನೆ. ಏಕೆಂದರೆ ಶಿವನು ತನ್ನ ಭಕ್ತರನ್ನು ಕೈಲಾಸಕ್ಕೆ ಕರೆದೊಯ್ದು ಗಣಪದವಿ ನೀಡುವಷ್ಟು ಆಪ್ತನಾಗಿರುತ್ತಾನೆ. ತನ್ನ ಭಕ್ತ ಸಮೂಹವನ್ನೊಡಗೂಡಿಕೊಂಡು ಕೈಲಾಸದಲ್ಲಿ ಮಾಡಿಕೊಂಡಿರುವ ಗಣರಚನೆಯ ಕಲ್ಪನೆ, ಭಕ್ತ ಮತ್ತು ಭಗವಂತನ ಸಂಬಂಧದಲ್ಲಿನ ಪ್ರೀತಿ ವಾತ್ಸಲ್ಯವನ್ನು ಅಧಿಕವಾಗಿಯೇ ಗುರುತಿಸಬಹುದು.

ಹರಿಹರನ ರಗಳೆಗಳಲ್ಲಿನ ಶಿವಭಕ್ತರ ಭಕ್ತಿಯಲ್ಲಿ ಸಂಕುಚಿತತೆ ಇಲ್ಲ, ಭಯವಿಲ್ಲ, ಕಲ್ಮಷವಿಲ್ಲ, ಆಡಂಬರ ವೈಭವವಿಲ್ಲ, ಬೇಧವಿಲ್ಲ, ಸ್ವಾರ್ಥವಿಲ್ಲ, ಪರಿಪೂರ್ಣ ಮನಸ್ಸಿನ ಭಕ್ತರಾದ ಅವರಲ್ಲಿ ಮುಗ್ಧತೆ, ನಿಷ್ಠೆ, ನೇಮ, ಪ್ರೀತಿ–ವಾತ್ಸಲ್ಯ, ಛಲ, ನಿಷ್ಠುರವಾದ, ನಿಶ್ಚಲ ಮನಸ್ಸೂ ಇರುತ್ತದೆ.

ರಗಳೆಗಳಲ್ಲಿ ವರ್ಣಿತರಾಗಿರುವ ಶಿವ ಸರಳ ಸಜ್ಜನಿಕೆಯವನು. ಭಕ್ತರ ಮೇಲೆ ಯಾವುದೇ ಒತ್ತಾಯಪೂರ್ವಕವಾಗಿ ಕಠಿಣ ನೀತಿವ್ರತಗಳನ್ನು ಹೇರುವಂತವನಲ್ಲ. ಶಿವಭಕ್ತರನ್ನು ಭಯದ ವಾತಾವರಣದಲ್ಲಿ ಇರಿಸುವವನಲ್ಲ, ಶಿಕ್ಷೆ, ಶಾಪಗಳನ್ನು ನೀಡುವಂತವನಲ್ಲ. ಅವನಿಗೆ ಭಕ್ತನ ಕುಲ, ಜಾತಿ, ವೃತ್ತಿ, ಬಡವ, ಶ್ರೀಮಂತ ಯಾವುದೊಂದೂ ಮುಖ್ಯವಲ್ಲ. ತಮ್ಮ ಶುದ್ಧ ವ್ಯಕ್ತಿತ್ವಕ್ಕೆ ನೇರವಾಗಿ ನಡೆದುಕೊಳ್ಳುವವರನ್ನು ತನ್ನ ಪರೀಕ್ಷೆಗೆ ಒಳಮಾಡಿ ಅವರ ವಿಜಯವನ್ನು ಲೋಕಕ್ಕೆ ಸಾರುತ್ತಾನೆ. ಶಿವನು ತನ್ನ ಭಕ್ತರನ್ನು ಮುದ್ದಾಡಿ ಕೊಂಡಾಡಿ ತನ್ನ ಬಳಿಯಲ್ಲಿಯೇ ಅವರನ್ನು ಇರಿಸಿಕೊಳ್ಳುವಂತಹ ಪ್ರಿಯ ಬಂಧುವಾಗಿದ್ದಾನೆ. ಆದ್ದರಿಂದ ಹರಿಹರನ ರಗಳೆಗಳಲ್ಲಿ ಶಿವ ಮತ್ತು ಭಕ್ತರ ಹೃದಯದ ಒಡನಾಟವೇ ಜೀವಾಳವಾಗಿದೆ.

"ಭಕ್ತಿ ಸಾಹಿತ್ಯದಲ್ಲಿ ಭಕ್ತಿ ಎನ್ನುವುದು ಭಗವಂತನಲ್ಲಿಡುವ ನಿಶ್ಚಲಪ್ರೇಮ; ತನ್ನ ಅವಗುಣಗಳೊಡನೆ, ಅರಿಷಡ್ವರ್ಗದೊಡನೆ ನಡೆಸುವ ಒಂದು ಹೋರಾಟ; ಮನಸ್ಸನ್ನು ಪರಮಾತ್ಮನಲ್ಲಿ ಸೇರಿಸುವ ಒಂದು ಸಾಧನೆ" ೨ ಎಂಬ ನಿಲುವನ್ನು ಒಪ್ಪತಕ್ಕಂತಹುದು, ಇಂಥ ಉಜ್ವಲವಾದ ಶಿವಭಕ್ತಿಯೇ ಹರಿಹರನ ರಗಳೆಗಳ ಪ್ರಧಾನಸ್ಥಾಯಿ. ಇಲ್ಲಿರುವ ಶಿವಶರಣರೆಲ್ಲರೂ ಸರ್ವಸಮರ್ಪಣಾಭಾವದಿಂದ ವೀರಭಕ್ತರೇ ಆಗಿ ಶಿವಸಾಯುಜ್ಯವನ್ನು ಪಡೆಯುವುದೇ ಅವರ ಅಂತಿಮಗುರಿ.

ಹರಿಹರನ ಶಿವಭಕ್ತರು "ಅಂತರಂಗ ಶುದ್ಧಿಗೆ ಪ್ರಥಮಸ್ಥಾನವನ್ನು ನೀಡಿ, ತಮ್ಮ ಮನಸ್ಸನ್ನು ತಾವೇ ಪರೀಕ್ಷಿಸಿಕೊಂಡು, ಪರಮಾತ್ಮನ ಸಾಕ್ಷಾತ್ಕಾರ ಪಡೆಯುವವರೆಗಿನ ಹೋರಾಟದ ಏಳು-ಬೀಳುಗಳನ್ನೆಲ್ಲ ಅನುಭವಿಸಿದ್ದರಿಂದ ಅವರ ಭಕ್ತಿ ಸಾಧನೆಯಲ್ಲಿ ಮನುಷ್ಯತ್ವದಿಂದ ದೈವತ್ವಕ್ಕೇರಿದ ಮನುಷ್ಯ ಸಹಜವಾದ ರಸಭಾವ ವಿಶೇಷಗಳು ನಮಗೆ ಹೆಚ್ಚು ಆತ್ಮೀಯವಾಗಿ ತೋರುತ್ತದೆ." ೩ ಈ ಸಾಲುಗಳನ್ನು ಅನುಮೋದಿಸುತ್ತಾ ಹರಿಹರನ ಪ್ರತಿಯೊಂದು ರಗಳೆಗಳಲ್ಲಿಯೂ ಭಕ್ತನ ಭಕ್ತಿಸ್ವರೂಪ-ಪರೀಕ್ಷೆ-ಶಿವನ ಪ್ರಶಂಸೆ-ಗಣಪದವಿಯು ಅನುಕ್ರಮವಾಗಿ ಬಂದು ಶಿವ ಮತ್ತು ಭಕ್ತನ ಸಂಬಂಧದ ಸ್ವರೂಪ ಹಾಗು ಭಾವದ ನೆಲೆಯನ್ನು ಗುರುತಿಸಿಕೊಡುತ್ತದೆ.

---

ಅಡಿಟಿಪ್ಪಣಿಗಳು : ೨. ವಚನ ಧರ್ಮಸಾರ – ಎಂ.ಆರ್.ಶ್ರೀನಿವಾಸಮೂರ್ತಿ, ಪು.ಸಂ. ೩೧,
೩. ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ – ಪ್ರಸಾರಾಂಗ, ಬೆ.ವಿ.ವಿ.ಸಂ.ಚಾ.ಹಿ.ಎಸ್.ಎಸ್, ೧೯೭೩

"ಭಕ್ತಿಯೆಂಬುದ ಮಾಡಬಾರದು, ಗರಗಸದಂತೆ ಹೋಗುತ್ತಾ ಕೊಯ್ವುದು, ಬರುತ್ತಾ ಕೊಯ್ವುದು; ಅಷ್ಟೊಂದು ತೀಕ್ಷ್ಣ ಪರೀಕ್ಷೆಗೆ ಭಕ್ತನಾದವನು ಒಳಗಾಗಬೇಕಾಗುತ್ತದೆ"೪ ಹೌದು ಈ ಮಾತು ನಿಜ. ಜೀವನದ ಘನೋದ್ದೇಶವನ್ನು ಮರೆತು ಸುಖ-ದುಃಖದಲ್ಲಿ ಭಾಗಿಯಾಗದೆ ಅರಿತು ಶರಣನಾಗಬೇಕಾದರೆ ಭಕ್ತಿ ಭಾವ ಅತ್ಯವಶ್ಯಕ. ಆದರೆ ಭಕ್ತಿಯ ಹಾದಿ ಅಷ್ಟು ಸುಲಭವಲ್ಲ. ನಿಶ್ಚಲವಾದ, ನಿಷ್ಕಪಟವಾದ ಆತ್ಮಾರ್ಪಣೆಗೆ ಭಕ್ತ ಸಿದ್ಧನಾಗಿರಬೇಕು. ವಿನಯ ಮತ್ತು ನಮ್ರತೆಗಳು ಸತ್ವಪೂರ್ಣವಾಗಿರಬೇಕು. "ವಿನಯ ಭಕ್ತಿಯ ಪ್ರಥಮ ಲಕ್ಷಣ, ಸದುವಿನಯವೇ ಸದಾಶಿವನ ಒಲುಮೆಯಯ್ಯ ಎಂಬಂತೆ ಅದು ತೋರಿಕೆಯ ಭಕ್ತಿಯಾಗಬಾರದು." ಕೋಟಿ ಸನ್ಮಾನವ ಮಾಡಿದರೇನು? ನಿಮಿಷದ ಉದಾಸೀನ ಕೆಡಿಸಿತು. ನಿಜವಾದ ಭಕ್ತ ಮೈ ತುಂಬಾ ಎಚ್ಚರವುಳ್ಳವನಾಗಿರಬೇಕು. "ಹೆಂಡದ ಮಡಕೆಯ ಹೊರಗೆ ತೊಳೆದಂತೆ-ಒಳಗಿನ ಅಶುದ್ಧಿ ಡಾಂಭಿಕತೆಯ ದುರ್ಗುಣವನ್ನೇ ಮೆರೆಯುತ್ತದೆ. "ಎನಗಿಂತ ಕಿರಿಯರಿಲ್ಲ, ಶಿವಭಕ್ತರಿಗಿಂತ ಹಿರಿಯರಿಲ್ಲ" "ಮಾಡುವಾತ ನಾನಲ್ಲಯ್ಯ, ನೀಡುವಾತ ನಾನಲ್ಲಯ್ಯ" ಎಂಬ ನಿರಹಂಭಾವದಿಂದ ಭಕ್ತಿಯ ಪರಾಕಾಷ್ಠೆಯು ವ್ಯಕ್ತವಾಗುತ್ತದೆ. "ತನುವುಕ್ಕಿ, ಮನವುಕ್ಕಿ ಭಕ್ತಿಯ ಮಾಡಬೇಕು" – ಈ ಎಲ್ಲಾ ವಚನಕಾರರ ವಚನದ ಸಾಲುಗಳು ಭಕ್ತನು ತನ್ನ ಅಂತರಂಗ ನಿರೀಕ್ಷಣೆ, ಆತ್ಮಪರೀಕ್ಷೆ, ಭಕ್ತಿಯ ಪರಾಕಾಷ್ಠತೆಗಳಿಂದ ಮುಕ್ತಿಯ ಸುಖವನ್ನು ಕಾಣಲು ಹಂಬಲಿಸುವ ಅವರು ಶಿವನ ಸೇವೆ, ಒಡನಾಟದಲ್ಲೇ ತೃಪ್ತಿಯನ್ನು ಕಾಣುತ್ತಾರೆ.

"೬೩ ಪುರಾತನರ ಜೀವನದ ಸಾರಸರ್ವಸ್ವವೆಂದರೆ ಶಿವಭಕ್ತಿಯ ರೂಪದಲ್ಲಿ ಪ್ರಕಟವಾದ ವಿಶ್ವಧರ್ಮ. ಮೋಕ್ಷ ಸಾಧನೆಗೆ ಶಿವಧ್ಯಾನ (ಯೋಗ)ವಷ್ಟೇ ಸಾಲದು, ಧ್ಯಾನದ ಜೊತೆಗೆ ನಿತ್ಯ ಶಿವಪೂಜೆ ನಡೆಯಬೇಕು. ಆದರೂ ಅವರು ಬಾಹ್ಯ ಆಚರಣೆಗಳಿಗೆ ಮಹತ್ವಕೊಡದೆ ಅಂತರಂಗದ ನೈಜಭಕ್ತಿಗೆ ವಿಶೇಷ ಮಹತ್ವಕೊಟ್ಟರು. ಅವರ ಪ್ರಕಾರ ಶಿವಭಕ್ತರಿಗೆ ಎಲ್ಲೆಲ್ಲಿಯೂ ಶಿವದರ್ಶನ; ಮಾನವ ಜೀವನದ ಸುಖ ಶಾಂತಿಯೇ ಅವರ ಗುರಿ; ವಿಶ್ವ ಪ್ರೇಮವೇ ಅವರ ಸಂದೇಶ; ಸೇವೆ ಅವರ ಪರಮ ಅಸ್ತ್ರ, ಅವರು ನುಡಿದಂತೆ ನಡೆದು ಸದಾ ಶಿವಧ್ಯಾನದಲ್ಲಿ ನಿರತರಾದರು, ಲೋಕವಂದ್ಯರಾದರು."೫ ಎಂಬ ಅಭಿಪ್ರಾಯವನ್ನು ಪುಷ್ಟೀಕರಿಸುತ್ತಾ ಹರಿಹರನ ರಗಳೆಗಳಲ್ಲಿ ಶಿವಭಕ್ತರನ್ನು ಪ್ರಧಾನವಾಗಿಸಿ ಅವರ ಮೌಲ್ಯ, ಮತ, ಜೀವನಾದರ್ಶಗಳು ಸಮಾಜದ ಜನರ ಮೇಲೆ ಪರಿಣಾಮ ಬೀರುವಂತಹ ಅಂಶಗಳನ್ನೇ ಬಿಂಬಿಸಿದ್ದಾನೆ.

---

ಅಡಿಟಿಪ್ಪಣಿಗಳು : ೪. ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ – ಪು.ಸಂ. ೧೦೪,
೫. ಹರಿಹರ ದೇವಕೃತ ಪುರಾತನರ ಆರು ರಗಳೆಗಳು – ಸಂ.ಆರ್.ಸಿ.ಹಿರೇಮಠ, ಕರ್ನಾಟಕ ವಿಶ್ವವಿದ್ಯಾಲಯ ಪ್ರಕಾಶನ ೧೯೬೮

| ಪುರಾತನ ಶಿವಶರಣರು | ನೂತನ ಶಿವಶರಣರು |
|---|---|
| **ಸಮಭಾವ** | |
| ೧) ಶಿವಭಕ್ತಿಯ ಪರಾಕಾಷ್ಠೆ ಇವರ ಜೀವನದ ಉಸಿರಾಗಿತ್ತು. ಹಲವಾರು ದೇವರುಗಳ ಜಂಜಾಟವನ್ನು ತಪ್ಪಿಸಿ ನರನೇ ಹರನಾಗಿ ಬೆಳೆಯುವ ಪ್ರಕ್ರಿಯೆ ಇವರಲ್ಲಿದೆ. | |
| ೨) ಸಮನಾದ ಶಿವಭಕ್ತಿಯ ಆಧಿಕ್ಯ ಇಬ್ಬರಲ್ಲೂ ಕಾಣಬಹುದು. | |
| ೩) ಜಾತ್ಯಾತೀತ ಮನೋಭಾವ, ಕಾಯಕನಿಷ್ಠೆಗೆ ಸಮನಾದ ಪ್ರಾಶಸ್ತ್ಯ ನೀಡಿದ್ದರು. | |
| ೪) ಶಿವನು ಪ್ರತ್ಯಕ್ಷವಾದ ಸಂದರ್ಭಗಳ ನಿರೂಪಣೆಯಲ್ಲಿ ಏಕರೂಪತೆ ಇದೆ. ಪಂಪಾ ವಿರೂಪಾಕ್ಷನ ಸ್ತುತಿ ಮತ್ತು ಕಥಾನಾಯಕನ ವಿವರಗಳೊಂದಿಗೆ ಪ್ರಾರಂಭವಾಗುವ ಕಥಾಹಂದರ ನೇರವಾಗಿ ಶಿವನ ಪ್ರತ್ಯಕ್ಷ, ಕೈಲಾಸ ಪ್ರವೇಶದೊಂದಿಗೆ ಕಥೆ ಮುಗಿಯುತ್ತದೆ. | |
| ೫) ವೃತ್ತಿ ಬೇಧವಿಲ್ಲ. (ತಾವು ಹಿಡಿದ ವೃತ್ತಿಯಿಂದಲೇ ಮುಕ್ತಿಪಡೆದು, ಶಿವಸಾಯುಜ್ಯ ಸಂಪಾದಿಸುತ್ತಾರೆ). | |
| ೬) ನುಡಿದಂತೆ ನಡೆಯುವವರು, ನೇಮನಿಷ್ಠೆ, ಮೌಲ್ಯಾದರ್ಶನಗಳ ಪರಿಪಾಲನೆ. | |
| ೭) ಶಿವನೊಡ್ಡಿದ ಅಡ್ಡಿಗಳನ್ನು ಭಕ್ತಿಯ ಆಯುಧ ಮಾಡಿಕೊಂಡು ಗೆಲ್ಲುವುದರಲ್ಲಿ ಯಶಸ್ವಿಯಾಗುತ್ತಾರೆ. | |
| ೮) ಜೀವನದೊಡನೆ ಹೋರಾಟಮಾಡಿ ಜೀವನವನ್ನೇ ಗೆದ್ದ ಮಹಾನುಭವಿಗಳೇ ಇದ್ದಾರೆ. | |
| ೯) ಶಿವಭಕ್ತರದು ಒಬ್ಬೊಬ್ಬರದು ಒಂದೊಂದು ವಿಧ – ಸ್ವಾಮಿಭೃತ ಭಾವ, ಸತಿ ಪತಿಭಾವ, ಸಖ್ಯಭಾವ ಮತ್ತು ವಾತ್ಸಲ್ಯ – ಮಧುರಭಾವ. | |
| ೧೦) ಶಿವನಿಗಿಂತ ಶಿವಭಕ್ತ, ಶಿವಶರಣನಧಿಕ ಎಂಬ ಮಾತನ್ನು ಸಾಕಾರಗೊಳಿಸಿದರು. | |
| ೧೧) ಧರ್ಮದೇವರುಗಳ ಹೆಸರಿನಲ್ಲಿ ನಡೆಯುತ್ತಾ ಬಂದಿದ್ದ ಶೋಷಣೆಯನ್ನು ತಪ್ಪಿಸಿದರು. | |
| ೧೨) ಬಾಹ್ಯದ ಆಚರಣೆಗಿಂತ ಅಂತರಂಗ ಶುದ್ಧಿಗೆ ಒತ್ತು ನೀಡಿ ಅದರ ಮಹತ್ವವನ್ನು ಸಾರಿದ್ದಾರೆ. | |

| ೧೩) ಲಿಂಗದ ಉಪಾಸಕರಾಗಿದ್ದರು. | ಇಷ್ಟಲಿಂಗದ ಉಪಾಸಕರು. |
| --- | --- |
| ೧೪) ಶಿವಕ್ಷೇತ್ರ ದರ್ಶನಕ್ಕೆ ಒತ್ತುಕೊಟ್ಟು ಪರ್ಯಟನೆ ಮಾಡುತ್ತಿದ್ದರು. ದೇಶದಾದ್ಯಂತ ಸುತ್ತಿ ಶಿವಭಕ್ತಿಯ ಮಹಿಮೆಯನ್ನು ಸಾರುವುದು, ಇದರಿಂದಲೇ ಶೈವ ಧರ್ಮದ ಪ್ರಭೆಯನ್ನು ಬೆಳಗಿಸಿದರು. | ತಾವಿರುವ ಸ್ಥಳವೇ, ಅಲ್ಲಿನ ಶಿವಾಲಯವೇ ಅವರಿಗೆ ಮುಖ್ಯವಾಗಿತ್ತು. ವಚನಸಾಹಿತ್ಯದಲ್ಲಿ ಶಿವಶರಣರ ಇಷ್ಟಲಿಂಗ ಪೂಜೆಗೆ ಒತ್ತು ನೀಡಿದ್ದರು. ಇದರಿಂದಲೇ ಶೈವಧರ್ಮದ ಪ್ರಭೆ ಬೆಳಗಿಸಿದರು. |
| ೧೫) ತಮಿಳುನಾಡಿನ ಪುರಾತನರ ಆಚಾರ-ವಿಚಾರಗಳು ನೂತನರಿಗೆ ಆದರ್ಶಪ್ರಾಯವಾಗಿಲ್ಲ | ಕನ್ನಡನಾಡಿನ ನೂತನ ಶಿವಶರಣರು ಸಮಾನತೆಗಾಗಿ ಹೋರಾಟಮಾಡಿ, ಸಾಮಾಜಿಕವಾಗಿ ಕ್ರಾಂತಿಯನ್ನೇ ನಡೆಸಿದವರು. |
| ೧೬) ಸ್ತ್ರೀ ಪಾತ್ರ ಕಡಿಮೆ, ಸ್ತ್ರೀ ಸ್ವಾಭಿಮಾನವನ್ನು ಪ್ರಕಟಪಡಿಸುತ್ತಲೇ ಭಕ್ತಿಯಿಂದ ಹೋರಾಡುವುದು.<br>ಉದಾ: ಕಾರಿಕಾಲಮ್ಮೆ, ಪಾಂಡ್ಯ ಮಹಾದೇವಿ, ಯಸ್ಯಜ್ಞಾನದೇವಿ | ಸ್ತ್ರೀ ಪಾತ್ರ ಹೆಚ್ಚು. ಸ್ತ್ರೀ ಸ್ವಾಭಿಮಾನವನ್ನು ಪ್ರಕಟಪಡಿಸುತ್ತಲೇ ವೈಯಕ್ತಿಕ ಸಮುದಾಯದೊಂದಿಗೆ ಹೋರಾಟ ಕಾಣುತ್ತದೆ.<br>ಉದಾ: ವೈಜಕವ್ವೆ, ಅಮ್ಮವ್ವೆ, ನಿಂಬಿಯಕ್ಕ, ಅಕ್ಕಮಹಾದೇವಿ, ಕೊಡಗೂಸು, ಹೆರೂರು ಹೆಣ್ಣು |
| ೧೬) ಮರ್ತ್ಯದಲ್ಲಿ ಹುಟ್ಟಿದವರ ಕಥೆ ಭೂಲೋಕದಿಂದ ಪ್ರಾರಂಭವಾಗುತ್ತವೆ. | ನೂತನರು ಕೈಲಾಸದ ಗಣಸಮೂಹದವರು, ಕನ್ನಡನಾಡಿನ ಶರಣರ ಕಥೆಗಳು ಕೆಲವು ಕೈಲಾಸದಿಂದ ಪ್ರಾರಂಭವಾಗುತ್ತಿತ್ತು. |
| ೧೭) ಅನಾದರಕ್ಕೆ ಪಾತ್ರರಾದಂತಹವರು ಹೆಚ್ಚು, ಇವರನ್ನೇ ತನ್ನ ಕಥಾನಾಯಕರನ್ನಾಗಿ ಮಾಡಿಕೊಂಡಿದ್ದಾನೆ. ವಿಶ್ವಪ್ರೇಮ ಸಂದೇಶವನ್ನು ಸಾರಿದ್ದಾನೆ. | ಮೌಢ್ಯಗಳ ವಿರುದ್ಧ ಹೋರಾಡಿದ ಮೌಢ್ಯಮುಕ್ತ ಪ್ರಪಂಚ ಮತ್ತು ಮಾನವತಾಧರ್ಮದ ಸಂದೇಶಕ್ಕೆ ಒತ್ತು ನೀಡಿದ್ದಾರೆ. ಸಾಮಾಜಿಕ ಕಳಕಳ ಇದೆ. |
| ೧೮) ಶೈವಧರ್ಮದ ಪುನರುತ್ಥಾನಕ್ಕೆ ಪ್ರೇರಕರು. | ಪುರಾತನರ ಪ್ರಭಾವಕ್ಕೊಳಗಾಗಿ ಶೈವಧರ್ಮದ ಅಭಿವೃದ್ಧಿಗೆ ಹೋರಾಟ ನಡೆಸಿದ್ದಾರೆ. |

| ೧೯) ಯಾವ ಮತಪಂಥಗಳನ್ನು ತಮ್ಮ ಬೆನ್ನಿಗೆ ಕಟ್ಟಿಕೊಂಡು ತಿರುಗಿದವರಲ್ಲ. ಭಕ್ತಿರಸವನ್ನು ಹಾಡು, ಪ್ರವಚನಗಳ ರೂಪದಲ್ಲಿ ತಿಳಿಸಿ ಎಲ್ಲಾ ಕಡೆ ಶಿವಭಕ್ತಿಯ ಪ್ರಚಾರ ಮಾಡುತ್ತಿದ್ದರು. | ಯಾವ ಮತಪಂಥಗಳ ಪ್ರಭಾವಕ್ಕೊಳಗಾಗದೆ ಮೋಕ್ಷಸಾಧನೆಗೆ ಶಿವಧ್ಯಾನದ ಜೊತೆಗೆ ಶಿವಪೂಜೆ, ನೇಮನಿತ್ಯ, ವೃತ್ತಿ ನಿಷ್ಠೆಯಲ್ಲಿ ನಿರಂತರವಾಗಿರಬೇಕೆಂದು ಅರಿತವರು. |
|---|---|
| ೨೦) ತಮ್ಮ ಅಂತರಂಗದ ಅಭಿಪ್ರಾಯಗಳನ್ನು ಹೊರಹಾಕಲು ವಚನರಚನೆ ಅವರಿಂದ ರಚಿತವಾಗಿಲ್ಲ. | ಧರ್ಮಕ್ಕೂ-ಸಾಹಿತ್ಯಕ್ಕೂ, ಬದುಕಿಗೂ-ಸಾಹಿತ್ಯಕ್ಕೂ ಇರುವ ಆತ್ಮೀಯ ಸಂಬಂಧವನ್ನು ವಚನಸಾಹಿತ್ಯದ ಮುಖೇನ ಹಿಡಿದಿಟ್ಟಿದ್ದಾರೆ. |

ಒಟ್ಟಾರೆ ಹರಿಹರನ ರಗಳೆಗಳಲ್ಲಿನ ಶಿವಭಕ್ತರು ಸಾಮಾನ್ಯರಲ್ಲ, ಅವರಲ್ಲಿ ಮೌಲ್ಯಗಳು ಮತ್ತು ಆದರ್ಶಗಳು ಮನೆಮಾಡಿವೆ. ವಿವಿಧ ವೃತ್ತಿಗಳಲ್ಲಿ ತೊಡಗಿದ ಶಿವಭಕ್ತರು ಆ ವೃತ್ತಿಯನ್ನೇ ಭಕ್ತಿಸಾಧನೆಗೆ ದುಡಿಸಿಕೊಳ್ಳುವ ಪರಿಪೂರ್ಣ ವ್ಯಕ್ತಿತ್ವದವರು. ಅವರ ಒಂದೊಂದು ಕಥೆಗಳು ಶಿವದರ್ಶನ ಮಾಡಿಸಿಕೊಡುವಂತಹವು. ಶಿವಭಕ್ತರೇ ಶಿವಸ್ವರೂಪಿಗಳಾಗಿ ಶಿವಭಕ್ತಿಯ ಮಹಿಮೆಯನ್ನು ಸಾರುವಂತಹ ಹರಿಹರನ ರಗಳೆಗಳು ಶಿವತತ್ವದ ಪ್ರತಿಮೆಗಳಾಗಿವೆ.

ತಮ್ಮ ನೇಮವನ್ನು ಆಚರಿಸುವ ಶಿವಭಕ್ತರು ಎಷ್ಟು ಪ್ರಾಮಾಣಿಕರಾಗಿರುತ್ತಾರೆ ಎಂದರೆ ಕನಸು ಮನಸ್ಸಿನಲ್ಲಿಯೂ ಅದಕ್ಕೆ ಧಕ್ಕೆ ಬಾರದಂತೆ ನೋಡಿಕೊಳ್ಳುತ್ತಿದ್ದರು. ಅವರಲ್ಲಿ ಒಳಗೊಂದು ಹೊರಗೊಂದು ಇರಲಿಲ್ಲ. ನೇರನುಡಿ, ನಿಷ್ಠುರವಾದ ಶುದ್ಧ ಜೀವನ, ವೃತ್ತಿಗೌರವ, ಆತ್ಮಾಭಿಮಾನ ಮತ್ತು ಭಕ್ತಿಯೇ ಅವರ ಆಸ್ತಿಗಳಾಗಿದ್ದವು.

ಉದಾ : ತಿರುನೀಲಕಂಠರು ತಮ್ಮ ಹೆಂಡತಿಯ ಕೈಹಿಡಿದು ಮುಳುಗೇಳುವ ಪ್ರಸಂಗ ಬಂದಾಗ ಗುಪ್ತ ವ್ರತಾಚರಣೆಯ ವಿಚಾರ ಇಡೀ ಊರಿಗೆ ತಿಳಿದಿರುವುದಿಲ್ಲ. ಆಗ ಬಂದೊದಗಿದ ಸಂಕಷ್ಟದ ನಿವಾರಣೆಗಾಗಿ ಕೈಹಿಡಿದೇಳಬಹುದಾಗಿತ್ತು. ಆದರೆ ಶಿವ ಮತ್ತು ತನ್ನ ಶುದ್ಧ ಮನಸ್ಸಿನ ಭಕ್ತಿಗೆ ಮೋಸಮಾಡಲು ಇಚ್ಛಿಸದೆ ಹಾಗೆ ಮಾಡಲಿಲ್ಲ. ಶಿವ ಪರಿಪರಿಯಾಗಿ ಕಾಡಿದರೂ, ಟೀಕಿಸಿದರೂ ಹೆದರದೆ ತನ್ನ ಗುಪ್ತಭಕ್ತಿಯನ್ನು ಪ್ರಕಟಪಡಿಸಲು ಇಚ್ಛಿಸದೆ ಶಿವಭಕ್ತಿಯನ್ನೇ ಮೆರೆದರು.

ಹರಿಹರನ ರಗಳೆಗಳಲ್ಲಿ ಶಿವ ಮತ್ತು ಭಕ್ತರು ಪರಸ್ಪರ ಮುಖಾಮುಖಿಯಾಗುತ್ತಾರೆ. ಭೂಲೋಕದಲ್ಲಿ ಇರುವ ಶಿವಭಕ್ತರು ತಮ್ಮ ಅವಧಿ ಮುಗಿದೊಡನೆ ದೇವಲೋಕಕ್ಕೆ ಹಾರಿಹೋಗುತ್ತಾರೆ. ಅವರು ಮೇಲೆ ಹಾರುವುದಕ್ಕೆಂದೇ ಇರುವ ಎರಡು ರೆಕ್ಕೆಗಳು ನಿರ್ಲಿಪ್ತಮನಸ್ಸು ಮತ್ತು ಭಕ್ತಿ. ಭಕ್ತಿಯನ್ನು ವ್ಯಕ್ತಪಡಿಸುತ್ತಲೇ ಮರ್ತ್ಯ ಜೀವನದ ನಿರರ್ಥಕತೆಗಳನ್ನು ಮೀರಿ ಎತ್ತರಕ್ಕೆ ಹಾರುತ್ತಾರೆ. ಭಕ್ತರು ಭಕ್ತಿ ಮಾರ್ಗದ ಮುಖೇನ ಭಗವಂತನತ್ತ ಹೆಜ್ಜೆ ಇರಿಸಿದಾಗ, ಶಿವನು ಭಕ್ತರತ್ತ ಧಾವಿಸಿ ಬರುತ್ತಾನೆ. ಇದೊಂದು ರೀತಿಯ ಧರ್ಮ ದ್ವಿಮುಖವಾದ ಸಂಚಾರ. ಭಕ್ತನ ಆತ್ಮದೊಳಗೆ ಭಗವಂತನ ಅವತರಣವಾಗುತ್ತದೆ ಎಂಬುದನ್ನು ಇದು ಸೂಚಿಸುತ್ತದೆ.

ಶಿವನು ಭಕ್ತನೆಡೆಗೆ ಆಗಮಿಸಿ ಅವನ ಹೃದಯವನ್ನು ಆಕ್ರಮಿಸಿಬಿಡುತ್ತಾನೆ. ಅವನ ಆತ್ಮವನ್ನು ಪುನರುಜ್ಜೀವನಗೊಳಿಸಲು ಯಾವ ರೂಪದಲ್ಲಾದರೂ ಬರುತ್ತಾನೆ. ಅದೇ ರೀತಿ ಭಕ್ತನು ಶಿವನನ್ನು ತನ್ನ ಬಂಧುವಾಗಿಯೇ ತಿಳಿದು ಭಾವನಾತ್ಮಕವಾಗಿ ಭಕ್ತಿಯಿಂದ ತಲ್ಲೀನನಾಗಿಬಿಡುತ್ತಾನೆ. ಇಲ್ಲಿ ಒಬ್ಬ ಭಕ್ತನು ಪ್ರೀತಿಯಿಂದ ಪೂಜಿಸಿ ಶಿವನ ಸೇವೆ ಮಾಡಿದರೆ ಮತ್ತೊಬ್ಬ ಭಕ್ತ ಕಲ್ಲಿನಿಂದ ಒಡೆಯುತ್ತಾನೆ. ಆದರೆ ಎರಡನ್ನೂ ಆತ್ಮೀಯವಾಗಿಯೇ ಸ್ವೀಕರಿಸುವ ಶಿವನು ಭಕ್ತರ ಪಾಲಿಗೆ ಓರ್ವ ಸಖನೂ ಹೌದು, ಒಡೆಯನೂ ಹೌದು. ವಾತ್ಸಲ್ಯದಾಯಕನಾಗಿದ್ದಾನೆ.

ಜೀವಿಯ ಆತ್ಮ ಪ್ರಾಣಿಯಿಂದ ಮನುಷ್ಯನ ಹಂತಕ್ಕೆ ಬರತೊಡಗಿದಂತೆ ಅದು ಮಾನವನಿಂದ–ದೈವತ್ವಕ್ಕೆ ಏರಿ ಆಧ್ಯಾತ್ಮಿಕ ಸಾಧನೆಯ ಜೊತೆಗೆ ಭೌತಿಕವಾದ ವಿಕಾಸವೂ ಆಗುತ್ತದೆ. ಮಾನವ ಜೀವಿಯ ಭವ್ಯತೆಯನ್ನು ಪ್ರಕಟಗೊಳಿಸಿಕೊಳ್ಳಲು ಭಗವಂತನ ಸಂಕಲ್ಪದ ಸರ್ವೋತ್ಕೃಷ್ಟ ಈಡೇರಿಕೆ ಆಗುತ್ತದೆ. ಇಲ್ಲಿ ನಿಜವಾಗಿಯೂ ಶಿವನೇ ಅನ್ವೇಷಕ, ಇದು ಆತನ ನಿಗೂಢವಾದ ಲೀಲೆ. ಇಲ್ಲಿ ಭಕ್ತ ಮತ್ತು ಶಿವ "ಜೀವ ಮತ್ತು ಪರಮಾತ್ಮ"ನು ಒಬ್ಬರೇ ಆಗುತ್ತಾರೆ. ಕೈಲಾಸಕ್ಕೆ ಕರೆದೊಯ್ದು ಶಿವನು ಭಕ್ತನ ಆಧ್ಯಾತ್ಮಿಕ ಸಾಧನೆಗಳ ವೈಭವವನ್ನು ಪ್ರಕಟಪಡಿಸುತ್ತಾನೆ. ರಗಳೆಗಳಲ್ಲಿ ಅಭಿವ್ಯಕ್ತವಾಗುವಂತೆ ಶಿವ ಮತ್ತು ಭಕ್ತರ ಸಂಬಂಧದ ನಡುವೆ ಆರಂಭವಾದ ನಿಕಟ ಮತ್ತು ವೈಯಕ್ತಿಕ ಸಂಬಂಧ ಕ್ರಮೇಣ ಆತ್ಮೀಯ ಮತ್ತು ಶಾಶ್ವತವಾಗಿ ಪರಿಣಮಿಸುತ್ತದೆ. ಇದರಿಂದ ಶಿವಭಕ್ತನು ಪರಿಪೂರ್ಣ ಅಸ್ತಿತ್ವ, ಪ್ರಜ್ಞೆ ಮತ್ತು ಆನಂದಮಯನಾಗುತ್ತಾನೆ. ಈ ಅಚಲವಾದ ಶಿವಭಕ್ತಿ ಮತ್ತು ಸ್ಮರಣೆಯಿಂದ ಶಿವಭಕ್ತನ ಮನಸ್ಸು ಪವಿತ್ರವಾಗುತ್ತದೆ.

## (೧) ಶಿವ ಮತ್ತು ಭಕ್ತರ ನಡುವಿನ ಸಂಬಂಧ ಸ್ವರೂಪ, ಬಗೆಗಳು :-

ಮಾನವನು ಸಂಘಜೀವಿ ಹಾಗೆಯೇ ವಿವೇಕ ಉಳ್ಳವನು. ಅವನ ಬುದ್ಧಿಶಕ್ತಿಯೇ ಅವನನ್ನು ಎತ್ತರದ ಸ್ಥಾನದಲ್ಲಿ ನಿಲ್ಲಿಸಿದೆ ಮತ್ತು ಪ್ರಾಣಿಗಳಿಂದ ಬೇರ್ಪಡಿಸಿದೆ. ಅವನು ಸಮಾಜದ ಮಧ್ಯೆ ವಾಸಮಾಡುವ ಜೀವಿಯಾದ್ದರಿಂದ ಪ್ರಮುಖವಾಗಿ ಹುಟ್ಟಿನಿಂದ ರಕ್ತಸಂಬಂಧವನ್ನು, ಅನಂತರ ಸ್ನೇಹ ಸಂಬಂಧವನ್ನು ಸಂಪಾದಿಸಿಕೊಂಡು ಜೋಪಾನವಾಗಿ ಕಾಪಾಡಿಕೊಂಡು ಬರಲು ಹಾತೊರೆಯುತ್ತಾನೆ. ಈ ಸಂಬಂಧಗಳ ಮಧ್ಯೆ ಗೌರವ ಪ್ರೇಮ, ವಾತ್ಸಲ್ಯ, ಭಯ-ಭಕ್ತಿ, ಆತ್ಮೀಯ ಭಾವಗಳನ್ನು ಹೊಂದಿದ್ದು ಅದರಿಂದ ಸಂತೃಪ್ತನಾಗಿರುತ್ತಾನೆ. ಇಂಥ ಭಾವಗಳಿಂದಲೇ ಸಂಬಂಧ ಗಟ್ಟಿಗೊಂಡು ಅದು ತಾಯಿ-ಮಗ, ತಂದೆ-ಮಗಳು, ಸೋದರ-ಸೋದರಿ ಒಡೆಯ-ಸೇವಕ ನಲ್ಲ-ನಲ್ಲೆ, ಗುರು-ಶಿಷ್ಯ ಮತ್ತು ಸ್ನೇಹ ಸಂಬಂಧಗಳು ಅನ್ಯೋನ್ಯತೆಯಿಂದ ಕೂಡಿದ್ದು ಸಲುಗೆ ಎದ್ದು ಕಾಣುತ್ತದೆ. ಈ ಬಗೆಯ ಭಾವಗಳನ್ನು ದೇವರಲ್ಲಿ ತೋರಿದಾಗ ಆ ಸಂಬಂಧ ಮತ್ತಷ್ಟು ಹದಗೊಂಡು ಸವಿಯಾಗಿರುತ್ತದೆ ಎನ್ನುವ ಮಾತು ಅನುಭಾವಿಕ ಸತ್ಯ.

ಹರಿಹರನು ಭಕ್ತಿಯೆಂಬ ಉನ್ಮಾದದಲ್ಲಿ ಮುಳುಗಿ ಶಿವನ ಹುಚ್ಚನ್ನು ಹಿಡಿಸಿಕೊಂಡು ಬಿಟ್ಟಿದ್ದ ಎಂದರೆ ತಪ್ಪಾಗಲಾರದು. ಶಿವಭಕ್ತಿಯೊಂದೇ ಆತನಿಗೆ ಆದ್ಯ ಗುರಿಯಾಗಿತ್ತು. ಶಿವ ಮತ್ತು ಭಕ್ತನ ಸಂಬಂಧದ ಬಗ್ಗೆಯೇ ಸದಾ ಆಲೋಚನಾ ಮಗ್ನನಾಗಿದ್ದ. ಹರಿಹರನು ಮನಸ್ಸಿನ ಪರಿಶುದ್ಧ ಭಕ್ತಿಯ ಚಿತ್ರಣವನ್ನು ಮಾಡಿದ್ದಾನೆ ಶಿವ ತನ್ನ ಭಕ್ತರ ಒಳಮನಸ್ಸಿನಲ್ಲಿರುವ ಆ ಹೃದಯ ಶ್ರೀಮಂತಿಕೆಯನ್ನು ಲೋಕಕ್ಕೆ ಅಭಿವ್ಯಕ್ತಿಸುವುದಕ್ಕಾಗಿ ಅವನೊಂದಿಗೆ ಜಗಳ, ಪರೀಕ್ಷೆ, ಕೋಪವುಂಟು ಮಾಡುವ ಸಂದರ್ಭಗಳನ್ನು ಚಿತ್ರಿಸುತ್ತಾನೆ. ಎಲ್ಲಿ ಪ್ರೀತಿ-ಬಾಂಧವ್ಯ, ಸ್ನೇಹ ಸಂಬಂಧಗಳು ಗಾಢವಾಗಿ ಬೇರೂರಿರುತ್ತದೆಯೋ ಅಲ್ಲೇ ನಿಜವಾದ ಬಾಂಧವ್ಯ ನಂಟು ಒಡಮೂಡಿರುವುದನ್ನು ತಿಳಿಸಿದ್ದಾನೆ. ಸಾಮಾನ್ಯವಾಗಿ ದೇವರು ಎಂದರೆ ಜನಸಾಮಾನ್ಯರು ಭಕ್ತಿಯಿಂದ ಹೆಚ್ಚಾಗಿ ಭಯ ಭೀತಿಯಿಂದ ಪೂಜಿಸುವುದು ವಾಡಿಕೆಯಿರುತ್ತದೆ. ಆದರೆ ಹರಿಹರ ತನ್ನ ಕಥೆಗಳಲ್ಲಿ ಶಿವ ಮತ್ತು ಭಕ್ತರ ನಡುವೆ ಭೀತಿಯನ್ನು ಹುಟ್ಟಿಸದೆ ಮಧುರ ಬಾಂಧವ್ಯದ ನಂಟಿನಲ್ಲಿ ಪೋಣಿಸಿದ್ದಾನೆ. ಇಲ್ಲಿನ ಶಿವನು ಭಕ್ತನು ತಪ್ಪು ಮಾಡಿದನೆಂದು ಶಾಪವನ್ನು ಕೊಡುವಂತದಾಗಲಿ, ಮಡಿವಂತಿಕೆಯಿಂದ ಪೂಜಿಸಲಿಲ್ಲ ಎಂದು ದೇವನೊಲಿಯುವುದಿಲ್ಲ ಎಂಬ ಸಂಗತಿಗಳಿಗೆ ಇಲ್ಲಿ ಅವಕಾಶವಿರಲಿಲ್ಲ. ಶಿವ ಮತ್ತು ಭಕ್ತನ ಸಂಬಂಧದ ಬಗೆಗೆ ಹೇಳುತ್ತಲೇ

ಆದರ್ಶಮಯ ಸಮಾಜವೊಂದರ ಸೃಷ್ಟಿಯ ಅಗತ್ಯತೆಯನ್ನು ತಿಳಿಸಿದ ಇಹ-ಪರ ಜೀವನದ ಸಾಮರಸ್ಯವನ್ನು ತನ್ನ ಕೃತಿಯಲ್ಲಿ ಸಾರಿದನು.

ಈ ಭಾವಗಳ ಮೂಲಕವೇ ಭಗವಂತನನ್ನು ಅರಿಯುವುದು ಭಕ್ತನಿಗೆ ಮೊದಲ ಹೆಜ್ಜೆ ಆಗುತ್ತದೆ. ಈ ರೀತಿಯ ಸಂಬಂಧಗಳಲ್ಲಿ ಒಳಗೊಂಡಿರುವ ಪ್ರೀತಿ ವಾತ್ಸಲ್ಯಾದಿಗಳೇ ಭಗವಂತನನ್ನು ಪ್ರೀತಿಸಲು ಹಾಗು ಭಕ್ತಿಯನ್ನು ಸಮರ್ಪಿಸಲು ತಳಹದಿಯಾಗುತ್ತದೆ. "ಭಕ್ತನು ಮಾನವ ಸಹಜವಾದ ರೀತಿಯಲ್ಲಿಯೇ ಭಗವಂತನನ್ನು ಪ್ರೀತಿಸತೊಡಗುತ್ತಾನೆ. ಅದಕ್ಕೆ ಯೋಗ್ಯವಾದ ಆಚರಣೆಗಳನ್ನು ನಡೆಸುತ್ತಾನೆ. ಮಗ ತಂದೆಯನ್ನು, ಸೇವಕ ಒಡೆಯನನ್ನು, ನಲ್ಲ ನಲ್ಲೆಯನ್ನು ನೋಡುವ, ಪ್ರೀತಿಸುವ ಭಾವವನ್ನು ಭಗವಂತನ ಕಡೆಗೆ ತಿರುಗಿಸಿದರೆ ಅದು ಭಕ್ತಿಗೆ ಮಾರ್ಗವಾಗಿ ಪರಿಣಮಿಸುತ್ತದೆ. ಯಾವ ರೀತಿಯಲ್ಲಿ ಭಗವಂತನನ್ನು ಪ್ರೀತಿಸತೊಡಗಿದರೆ ಮತ್ತು ಭಗವಂತನಲ್ಲಿ ಯಾವ ರೀತಿಯ ಸಂಬಂಧದಲ್ಲಿ ತನ್ನನ್ನು ತೊಡಗಿಸಿಕೊಂಡರೆ ಅದು ಆತ್ಮಸಾಕ್ಷಾತ್ಕಾರಕ್ಕೆ ಮತ್ತು ಈಶ್ವರನ ಸಾಕ್ಷಾತ್ಕಾರಕ್ಕೆ ದಾರಿಯಾಗುತ್ತದೆ ಎಂಬುದನ್ನು ಹೀಗೆ ಎಂದು ಹೇಳಲು ಬರುವುದಿಲ್ಲ. ಭಕ್ತನು ಈ ವಿಷಯದಲ್ಲಿ ಸ್ವತಂತ್ರ, ಅವನು ಭಕ್ತಿಯನ್ನು ಹೇಗೆ ಬೇಕಾದರೂ ಆರಂಭಿಸಬಹುದು. ಭಕ್ತನು ಭಗವಂತನೊಡನೆ ಒಂದು ಇಲ್ಲ ಹಲವು ಸಂಬಂಧಗಳನ್ನು ಕಲ್ಪಿಸಿಕೊಳ್ಳುವುದರ ಮೂಲಕ ಅವನ ಪ್ರೀತಿಯನ್ನು ಸಂಪಾದಿಸಲು ಪ್ರಯತ್ನಿಸಬಹುದು. ಭಗವಂತನಲ್ಲಿ ಆತ್ಮಾನುಸಂಧಾನಕ್ಕೆ ಇವೆಲ್ಲಾ ಸಹಾಯ ಮಾಡುತ್ತದೆ."೬ ಭಕ್ತನು ಶಿವನಿಗೆ ನನ್ನ ತಂದೆ ನೀನು, ತಾಯಿ ನೀನು, ಬಂಧು-ಬಳಗ ನೀನು, ನೀನಲ್ಲದೆ ಎನಗೆ ಯಾರಿಲ್ಲವೆಂದು ನಿವೇದಿಸುತ್ತಿರುತ್ತಾನೆ.

ನಮ್ಮ ಭಾರತೀಯ ಸಂಸ್ಕೃತಿಯಲ್ಲಿ ಶಿವನ ಆರಾಧನೆ ಪ್ರಾಚೀನ ಕಾಲದಿಂದಲೂ ನಡೆದಿರುವುದು ಕಂಡುಬರುತ್ತದೆ. ಧಾರ್ಮಿಕ ನಂಬಿಕೆಗಳ ಅನುಸಾರವಾಗಿ ತ್ರಿಮೂರ್ತಿಗಳನ್ನು ಅತ್ಯಂತ ಶಕ್ತಿಶಾಲಿಗಳೆಂದೂ, ಶ್ರೇಷ್ಠರೆಂದೂ ವಿವರಿಸಲಾಗಿದೆ. ಬ್ರಹ್ಮನನ್ನು ಸೃಷ್ಟಿಕರ್ತನೆಂದೂ, ವಿಷ್ಣುವನ್ನು ಸೃಷ್ಟಿಯ ಪರಿಪಾಲಕನೆಂದು ಮತ್ತು ಶಿವನನ್ನು ಸೃಷ್ಟಿಯ ಸಂಹಾರಕನೆಂದೂ ಹೇಳಲಾಗುತ್ತದೆ. ವಿಶ್ವೇಶ್ವರನಾದ ಪರಶಿವನನ್ನು ಸಂತುಷ್ಟಗೊಳಿಸಿ, ಬದುಕಿನಲ್ಲಿ ನಿರಂತರವಾಗಿ ಎದುರಾಗುವ ಸಮಸ್ಯೆಗಳನ್ನು, ಸಂಕಷ್ಟಗಳನ್ನು ದೂರಮಾಡಲು ಅತ್ಯಂತ ಸೂಕ್ತ, ಸರಳ ಹಾಗು

---

ಅಡಿಟಿಪ್ಪಣಿಗಳು : ೬. ಹರಿಹರನ ರಗಳೆಗಳಲ್ಲಿ ಭಕ್ತಿ-ಕೆ.ಎಸ್.ಕೃಷ್ಣಮೂರ್ತಿ, ಪ್ರಕಾಶನ-ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, ಮೈಸೂರು ಪು.ಸಂ.೬೦

ಉಪಯುಕ್ತವಾದಂತಹ ಹಲವಾರು ವಿಧಾನಗಳವೆ. ಶಿವನನ್ನು ಮೂರ್ತಿರೂಪ ಮತ್ತು ಲಿಂಗರೂಪದಲ್ಲಿ ಅಭಿಷೇಕ, ಪೂಜೆ, ಭಜನೆ ಹೋಮಾದಿಗಳನ್ನು ನೆರವೇರಿಸಿ, ಪುರಾಣಪ್ರಸಿದ್ಧವಾದ ಶಿವಕ್ಷೇತ್ರಗಳನ್ನು ದರ್ಶಿಸುವುದು ಈ ರೀತಿಯ ಆಚರಣಾ ವಿಧಾನಗಳನ್ನು ಶಿವಭಕ್ತರು ಪಾಲಿಸುತ್ತಾ ಬಂದಿರುವುದನ್ನು ಆದಿಕಾಲದಿಂದಲೂ ನಾವು ಗುರುತಿಸಬಹುದು. ಆದರೆ ಹರಿಹರನ ರಗಳೆಗಳಲ್ಲಿ ಕಾಣುವ ಶಿವಭಕ್ತರ ಭಕ್ತಿ ಮತ್ತು ಶಿವನೊಂದಿಗಿನ ಸಂಬಂಧ ಮತ್ತು ಶಿವಗಣ ಪ್ರಾಪ್ತಿ ಇವೆಲ್ಲಾ ಕಲ್ಪನೆಗಳು ವಿಭಿನ್ನವಾಗಿದ್ದರೂ ವಿಶಿಷ್ಟವೆನಿಸಿದೆ.

"ಹರಿಹರನ ದೃಷ್ಟಿಯಲ್ಲಿ ಶಿವನಿಗೂ ಶಿವಭಕ್ತರಿಗೂ ಅಂತರವಿಲ್ಲ. ಶಿವನೇ ತತ್ವ ಶಿವಭಕ್ತರೇ ಮುಕ್ತರು. ನಡೆಗೆ ತಕ್ಕ ನುಡಿ, ವಿಚಾರಕ್ಕೆ ತಕ್ಕ ಆಚಾರವಿದ್ದಲ್ಲಿ ಶಿವನೇ ಇರುತ್ತಾನೆ. ಹೀಗಿರುವಲ್ಲಿ ಮೇಲು ಮತ್ತು ಕೀಳಿನ ಪ್ರಶ್ನೆಯಿಲ್ಲ. ಶಿವನೇ ಭಕ್ತ, ಭಕ್ತನೇ ಶಿವ ತನಗೊಲಿದವರನ್ನು ತನ್ನಂತೆ ಮಾಡಿಕೊಳ್ಳುತ್ತಾನೆ. ಅಲ್ಲಿನ ಶಿವ ಇಂತಹ ಶಿವನನ್ನು ಶಿವಭಕ್ತನನ್ನು ಹಾಡಿಹೊಗಳ ತನ್ನಂತೆ ಮಾಡಿಕೊಂಡಿದ್ದಾನೆ ಭಕ್ತ ಹರಿಹರ. ಕಾವ್ಯಕ್ಕೂ ಕವಿಗೂ ಸಂಬಂಧವಿರುವುದು ಸ್ವಾಭಾವಿಕ ಆದ್ದರಿಂದಲೇ ಕವಿ ಹರಿಹರದೇವನ ಕಾವ್ಯದಲ್ಲಿ ಮೂಡಿದ ಭಕ್ತರ ಚಿತ್ರಗಳು ಹರಿಹರದೇವನ ಪ್ರತಿರೂಪವೆಂಬಂತೆ ಗೋಚರಿಸುತ್ತದೆ."೨ ಹರಿಹರ ನಿರ್ಮಿಸಿರುವ ಈ ಭಕ್ತಿ ಪ್ರಪಂಚದಲ್ಲಿ ಬರುವ ಶಿವಭಕ್ತರಿಗೂ ಒಂದು ಬಗೆಯ ತಾಳ್ಮೆ, ಮನೋಧೈರ್ಯ ಮತ್ತು ಎಂದಿಗೂ ನಂಬಿರುವ ಶಿವನು ನಮ್ಮ ಕೈ ಬಿಡುವುದಿಲ್ಲ ಎಂಬ ಮನೋಬಲವಿರುವುದರಿಂದ ಯಾವುದೇ ಪರೀಕ್ಷೆಗೂ ಮೈಯೊಡ್ಡಿ ನಿಲ್ಲುತ್ತಾರೆ, ಜಯಶೀಲರಾಗುತ್ತಾರೆ. ಅವರ ಭಕ್ತಿಭಾವಕ್ಕೆ ಶಿವ ಸೋಲುತ್ತಾನೆ. ಗಣಪದವಿಯನ್ನು ನೀಡುತ್ತಾನೆ. ಆ ಸೋಲಲ್ಲಿ ಭಕ್ತರ ಗೆಲುವಿನ ಹರ್ಷವನ್ನು ವಿಶ್ವಕ್ಕೆ ಸಾರುತ್ತಾನೆ. ಶಿವಭಕ್ತರಾಗುವುದಕ್ಕೆ ನಿರ್ದಿಷ್ಟ ಸೂತ್ರ ನಿಯಮಾವಳಿಗಳ ಅವಶ್ಯಕತೆ ಬೇಕಿಲ್ಲ, ಬದಲಿಗೆ ಭಕ್ತನು ಹೇಗೆ ನಡೆದುಕೊಳ್ಳಬೇಕು, ಅವನ ನಡೆ-ನುಡಿ ಹೇಗಿದ್ದರೆ ಶಿವನಿಗೆ ಪ್ರಿಯವಾಗುತ್ತದೆ. ಭಕ್ತನಿಂದ ಅಂತಹ ಅರ್ಹತೆ, ಲಕ್ಷಣಗಳನ್ನು ಶಿವನು ಬಯಸುತ್ತಾನೆ ಎಂಬಂತಹ ಅಂಶಗಳು ಭಕ್ತಿಯಲ್ಲಿ ಇಲ್ಲಿ ಮುಖ್ಯವೆನಿಸುತ್ತದೆ.

ಉದಾ:- ದಿನ ನಿತ್ಯ ಪೂಜೆ, ನೇಮ, ಸ್ತುತಿ, ಧ್ಯಾನ, ಕಲಾ ಸೇವೆ, ಅತಿಥಿ ಸತ್ಕಾರ, ಗುರು-ಲಿಂಗ-ಜಂಗಮ ಸೇವೆ, ಸಮರ್ಪಣಾ ಭಾವ, ನಿರ್ಮೋಹ, ಪ್ರೀತಿಯಿಂದ ಬಾಳುವೆ ನಡೆಸಿ ಎಲ್ಲರಲ್ಲೂ ಮಾನವೀಯತೆ ಮೆರೆಯುವುದು. ಏಕತಾಮನೋಭಾವ, ಛಲ, ವಿಶ್ವಾಸ, ನಂಬಿಕೆಯಿಂದ

---

ಅಡಿಟಿಪ್ಪಣಿಗಳು : ೭. ಶಿವಭಕ್ತಿ ಮಹಿಮಾರಗಳೆಗಳು-ಕರ್ನಾಟಕ ವಿಶ್ವ ವಿದ್ಯಾನಿಲಯ ಹೀರಿಕೆ - ಪು.ಸಂ.೧೦

ಬದುಕುವುದು, ನಡೆ-ನುಡಿ ಶುದ್ಧವಾಗಿರುವುದು, ಕಾಯಕ ಶುದ್ಧಿ, ಮನಃಶುದ್ಧಿ, ತ್ಯಾಗ, ದಾನ-ಧರ್ಮ, ಶಾಂತಿ, ತಾಳ್ಮೆ, ನಿರಹಂಕಾರ ಮನೋಭಾವ ಇದೇ ಮೊದಲಾದ ಅಂಶಗಳು ಮುಖ್ಯವಾಗಿ ಶಿವಭಕ್ತರಲ್ಲಿ ಇರಬೇಕೆಂದು ಶಿವನು ಬಯಸುತ್ತಾನೆ. ಅದರ ಪ್ರಮಾಣವು ಭಕ್ತರಲ್ಲಿ ಶೇ.೧೦೦% ಭಾಗದಷ್ಟೂ ಸಂಪೂರ್ಣವಾಗಿ ಹೊಂದಿದ್ದು ಅವನ ಗುಣದಲ್ಲಿ ಎಲ್ಲೂ ಸೋರಿಕೆ ಇಲ್ಲದಿದ್ದಾಗ "ತುಂಬಿದ ಕೊಡ ತುಳುಕುವುದಿಲ್ಲ" ಎಂಬ ಗಾದೆಯ ಮಾತಿನ ಸಾರದಂತೆ ಶಿವನು ತನ್ನ ಭಕ್ತರನ್ನು ಸ್ವೀಕರಿಸುತ್ತಾನೆ. ಹೀಗೆ ಭಕ್ತನೊಂದಿಗೆ ಒಡನಾಟದಲ್ಲಿರುವ ಶಿವನು ಕೆಲವೊಮ್ಮೆ ಕಾಡುತ್ತಾನೆ ಆದರೂ ಬೆಂಬಿಡದೆ ರಕ್ಷಕನಂತೆ ಕಾಯುತ್ತಾನೆ. ಈ ಎಲ್ಲದರ ಹಿಂದೆ ಇರುವುದೊಂದೆ..! ಭಕ್ತ-ಭಗವಂತನ ನಡುವಿನ ಪ್ರೀತಿಯ ಸಂಬಂಧದ ಒಲುಮೆ. ಆ ಸಂಬಂಧ ಗಟ್ಟಿಯಾದಷ್ಟೂ ಭಕ್ತಿ ಹದಗೊಳ್ಳುತ್ತದೆ ಎಂಬ ಆಶಯ ಹರಿಹರನ ರಗಳೆಗಳಿಂದ ನಮಗೆ ತಿಳಿದು ಬರುತ್ತದೆ.



ಹರಿಹರನ ರಗಳೆಗಳಲ್ಲಿ ಶಿವಶರಣರ ಜೀವನವನ್ನು ಶ್ರದ್ಧೆ, ಭಕ್ತಿ, ಉತ್ಸಾಹ, ನಂಬಿಕೆ, ಆಕಾಂಕ್ಷೆ, ಹೋರಾಟ ಪ್ರಯತ್ನಗಳಿಂದ ಅಲಂಕರಿಸಿದ್ದಾನೆ. ಇಲ್ಲಿ ಇವರ ಜೀವನಕ್ಕೆ ಕೊನೆ ಎಂಬುದಿಲ್ಲ. ಔನತ್ಯಕ್ಕೆ ಮಿತಿ ಇಲ್ಲ, ಆತ್ಮಕ್ಕೆ ಸಾವಿಲ್ಲ, ಒಬ್ಬರಿಗಿಂತ ಒಬ್ಬರು ಮೇರು ಭಕ್ತರೇ ಸರಿ ಎಂಬಂತೆ ಚಿತ್ರಿಸಿದ್ದಾನೆ. ಅಸಂಖ್ಯ ಶಿವಭಕ್ತರು ತಮ್ಮ ನೇಮನಿಷ್ಠೆ, ಧ್ಯಾನಧಾರಣಗಳಿಂದ ತೇಜಸ್ಸಿನ ದಾರಿ ಸವೆಸಿದ್ದಾರೆ. ಮನುಷ್ಯನು ಶಿವನಾಗುವ ರಾಜಮಾರ್ಗ ಇಲ್ಲಿ ಕಾಣಿಸುತ್ತದೆ. ಚೈತನ್ಯಮಯನಾಗುವ ರಹಸ್ಯ ಪ್ರಕಟವಾಗಿದೆ. ಇಲ್ಲಿನ ಶಿವಶರಣರು ಯಾವುದೇ ಸಂಕಟಕ್ಕೆ ಹೆದರದೆ ತನ್ನ ಅಭೀಷ್ಟ ಕಾರ್ಯದಲ್ಲಿ ಪ್ರತಿದಿನವೂ ಹೆಚ್ಚಿನ ಉತ್ಸಾಹ, ನಿಷ್ಠೆಯಿಂದ ತೊಡಗುವುದನ್ನು ತೇಜಸ್ಸು ಎನ್ನಬಹುದು. ಮತ್ತೊಂದೆಡೆ, ಭಕ್ತರು ಇಲ್ಲಿ ಆರಾಧಿಸುವ ಶಿವನನ್ನು ಹರಿಹರನು ಕೋಟಿ ಸೂರ್ಯ ಪ್ರಭೆ ಎಂದು ಕರೆದಿರುವುದು ಔಚಿತ್ಯ ಪೂರ್ಣವಾಗಿದೆ. ಏಕೆಂದರೆ ಶಿವನು ಬ್ರಹ್ಮಾಂಡವನ್ನೆಲ್ಲ ಬೆಳಗುವ ಅನಂತ ತೇಜಸ್ಸು ಎಂದು ತಿಳಿದುಕೊಂಡು ಶಿವಶರಣರು ಶಿವನನ್ನು ಆರಾಧಿಸುತ್ತಾರೆ.

ಶಿವನು ಶಿವಭಕ್ತರಿಗೆ ಕಷ್ಟಗಳೆಂಬ ಸರಮಾಲೆಯನ್ನು ನೀಡಿ, ಮಾರುವೇಷದಲ್ಲಿ ಪರೀಕ್ಷಿಸಲು ಬರುವುದನ್ನು ಗಮನಿಸಿದಾಗ ಶಿವಭಕ್ತರು ಬೆಂಕಿಯಲ್ಲಿ ಬೂದಿಯಾದಂತೆ ಕಂಡು ಬಂದರೂ ಒಳಗಿನ ಬೆಂಕಿ ಆರದೆ ಪ್ರಜ್ವಲ ಕಿಡಿಯಂತೆ ಶೋಭಿಸುತ್ತಿರುತ್ತದೆ. ಇದರಂತೆ ಭಕ್ತಮಹಾಶಯರು ತಮ್ಮ ಜೀವನವನ್ನು ಆರಿ ಹೋಗಲು ಬಿಡದೆ ಮನಸ್ಸಿನ ಧ್ಯೇಯವನ್ನು ಮುಟ್ಟಲು ಕಾತುರರಾಗಿ ಶಿವಭಕ್ತಿಯೆಂಬ ಕಿಡಿ ಉರಿಯುತ್ತಿರುವಂತೆ ನೋಡಿಕೊಳ್ಳುತ್ತಾರೆ. ಅಂತಹವರಲ್ಲಿ ತೇಜಸ್ಸು ಇರುತ್ತದೆ.

ಸುಖ-ಭೋಗ-ಮೋಹವೆಂಬ ಹಲವು ಅಂಶಗಳಿಂದ ತಪ್ಪಿಸಿಕೊಂಡು ಶಿವನ ಧ್ಯಾನದೊಂದಿಗೆ ಅಲೌಕಿಕ ಸಾಧನೆಯ ಕಡೆಗೆ ಕಷ್ಟಗಳೆಂಬ ಕಲ್ಲು-ಮುಳ್ಳುಗಳೆಂಬ ದಾರಿಯಲ್ಲಿ ಸಂತೋಷದಿಂದಲೇ ನಡೆಯುತ್ತಿರುತ್ತಾನೆ. ಅವನ ಈ ಭಕ್ತಿಯಿಂದ ತೇಜಸ್ವಿಯೆನಿಸಿಕೊಳ್ಳುತ್ತಾನೆ. ಈ ನಿಟ್ಟಿನಲ್ಲಿ ಇಲ್ಲಿನ ಶಿವಭಕ್ತರು ತೇಜಸ್ವಿಗಳೇ ಸರಿ.

ಈ ತೇಜಸ್ವಿಯೆನಿಸಿದ ಶಿವಭಕ್ತರಿಗೆ ವಯಸ್ಸು, ಲಿಂಗ, ಜಾತಿ, ಶ್ರೀಮಂತಿಕೆ ಮುಖ್ಯವಲ್ಲ. ಅವರ ವೃತ್ತಿ ಮತ್ತು ಆದರ್ಶ ಮೌಲ್ಯಗಳಿಂದ ತೇಜಸ್ಸು ಲಭಿಸುತ್ತದೆ. ಅದು ಬಾಹ್ಯಕ್ಕೆ ಸಂಬಂಧಿಸಿದ್ದಲ್ಲ, ಆಂತರಿಕ ಶಕ್ತಿಗೆ ಸಂಬಂಧಿಸಿದ್ದು, ಕೆಸರಿನಲ್ಲಿ ಕಮಲ ಹೇಗೆ ಅರಳುತ್ತದೆಯೋ ಹಾಗೆಯೇ ಈ ತೇಜಸ್ವಿಗೆ ರಾಜನ ಅಂತಸ್ತು ಬಡವನ ಗುಡಿಸಲಿನ ಮನೆ ಎಂಬ ಭೇದವಿಲ್ಲ. ಈ ತತ್ವವನ್ನೇ ಹರಿಹರ ತನ್ನ ರಗಳೆಗಳಲ್ಲಿ ತಂದಿದ್ದಾನೆ. ಇಲ್ಲಿನ ಶಿವಶರಣ ತೇಜಸ್ವಿಗಳಂತೆ ಹೊಳಪಿರುವವರು.  ಈ ಬೆಳಕಿನಡಿಯಲ್ಲಿ ಸಾಮಾನ್ಯರಿಗೂ ಬೆಳಕಿನ ಪ್ರಭಾವ ಬೀರಿದ್ದರು. ಬೆಂಕಿಯನ್ನು ಕೆಳಮುಖವಾಗಿ ಹಿಡಿದರೆ ಅದರ ಜ್ವಾಲೆ ಮತ್ತಷ್ಟೂ ಹರಡುವಂತೆ ಇಂಥ ತೇಜಸ್ವಿ ವ್ಯಕ್ತಿಗಳ ಜೀವನದಲ್ಲಿ ಪರೀಕ್ಷೆಗಳೆಂಬ ಸಂಕಟ ಬಂದಾಗ ದುಪ್ಪಟ್ಟು ವೇಗದಿಂದ ಪ್ರಜ್ವಲಿಸಿ ಸಂಕಟವನ್ನು ಎದುರಿಸುತ್ತಾರೆ. ಮೇಣ ತಾನುರಿದು ಇತರರಿಗೆ ಬೆಳಕು ನೀಡುವಂತೆ ಶಿವಶರಣರು ಪ್ರಜ್ವಲಿಸುತ್ತಾ ಇತರರಿಗೂ ಬೆಳಕು ನೀಡಲಿ ಮತ್ತು ಮಾರ್ಗದರ್ಶಕರಂತಾಗಲಿ ಎಂಬ ಹಿನ್ನೆಲೆಯಲ್ಲಿ ಹರಿಹರ ರಚಿಸಿರುವ ಈ ರಗಳೆಗಳು ಭಕ್ತ ಪಂಥದಲ್ಲಿ ಶ್ರೇಷ್ಠ ಎನಿಸುತ್ತದೆ.

"ಭಕ್ತಿ ಹೃದಯದ ಬದುಕು, ಅದು ಹೃದಯಸ್ಥ ದೇವಶಿಶುವಿಗೆ ಜೀವರಸ-ಸಂಜೀವರಸ ಒದಗಿಸುವುದು. ಜೀವನು ಆನಂದದೊಳಗಿಂದ ಬಂದು ಆನಂದದೊಳಕ್ಕೆ ಹೋಗಬಲ್ಲನಾದರೆ ನಡುವಿನ ಶತಾಯುಷ್ಯದಲ್ಲಿ ಏಕೆ ಬೇಡ ? ಆನಂದವು ಎಟುಕದಂತೆ ಮಾಡುವುದು ಬುದ್ಧಿ, ಆನಂದ ಸೂಸುವಂತೆ ಮಾಡುವುದು ಹೃದಯ. ಅದಕ್ಕೆ ಭಕ್ತಿಯೇ ಬಾಳಗುಲಾಬಿ. ಸ್ಥೂಲಶರೀರಕ್ಕೆ ತಾಯಸಂಬಂಧವನ್ನು ಒದಗಿಸಿಕೊಟ್ಟ ಹುರಿಯನ್ನು ಕೊಯ್ದು ಬಿಟ್ಟ, ಬಳಿಕ, ಶಿಶುವಿಗೆ ಶಿವನ ಸಂಬಂಧವನ್ನು ತಂದೊಗಿಸುವುದು ಭಕ್ತಿಯ ಹುರಿ. ಅದರ ಮುಖಾಂತರವಾಗಿಯೇ ಜೀವನ ಶಿವಸತ್ತ್ವವನ್ನು ಪಡೆಯಲು ಸಾಧ್ಯ ಅದೇ ಸಹಜ ಮಾರ್ಗ, ವಾಸ್ತವಿಕ ಉಪಾಯ." ಲ  ಶಿವಶರಣರ ಜೀವನ ಹಾಗು ಸಿದ್ಧಿಗಳು ಈ ರಗಳೆಗಳಿಗೆ ವಸ್ತುವನ್ನು ಒದಗಿಸಿದೆ.  ರಗಳೆಗಳಲ್ಲಿ ಹರಿಹರ ತನ್ನದೇ ಆದ ಒಂದು ಭಕ್ತಿ ಪ್ರಪಂಚವನ್ನೇ ನಿರ್ಮಿಸಿ ಅಲ್ಲಿ ಶಿವ ಭಕ್ತರನ್ನು ಸಂಬಂಧಗಳಲ್ಲಿ ಬೆಸೆದಿದ್ದಾನೆ.

---

**ಅಡಿಟಿಪ್ಪಣಿಗಳು :** ಲ. ರಸಿಕಚಕ್ರಿ ಹರಿಹರದೇವ, ಸಂ.ಡಾ|| ಬಿ.ಸಿ ಜವಳಿ, ಶ್ರೀ. ಶಾಂತರಸ, ಮು.ಸ.೩೯೪

ಹರಿಹರನು ಚಿತ್ರಿಸಿರುವ ಪ್ರಾಚೀನ ಶರಣರ ಕಥೆಗಳು ಭಕ್ತರ ಜೀವನದ ಯಶೋಗಾಥೆ ಆಗಿವೆ. ಶಿವಶರಣರು ಭಕ್ತಿ ಮಾರ್ಗವನ್ನು ಸಾಧಿಸುವ ಮೂಲಕ ಆಧ್ಯಾತ್ಮಿಕ ಸಾಧಕರಾಗಿರುವ ಕಥೆಗಳು ಇಲ್ಲಿವೆ. ಈ ಕಥೆಗಳು ಜನರಿಗೆ ಮಾರ್ಗದರ್ಶಕ ಗ್ರಂಥದ ಹಾಗೆ ಸ್ವೀಕರಿಸಿ, ಭಕ್ತಿದರ್ಶನವನ್ನು ಮೈಗೂಡಿಸಿಕೊಂಡು ಶಿವನ ಆರಾಧಕರಾಗಲೆಂಬ ಆಶಯವು ಹರಿಹರನಲ್ಲಿ ಎದ್ದು ಕಾಣುತ್ತದೆ. ಶಿವ ಮತ್ತು ಭಕ್ತರ ನಡುವಿನ ಸಂಬಂಧಕ್ಕೆ ಸೇತುವೆಯೇ ಈ ಭಕ್ತಿ. ಭಕ್ತಿ ಎಂದರೆ ಭಗವಂತನ ಮೇಲೆ ಇಡುವ ಪರಮಪ್ರೇಮ, ಅಂದರೆ ಆರಾಧನೆ, ಸೇವೆ, ಉಪಾಸನೆ ಇವೇ ಮೊದಲಾದ ಅರ್ಥಗಳಿವೆ. ಇಲ್ಲಿ ಶಿವನಲ್ಲಿ ತೋರುವ ಅನುರಾಗದ ಒಲವು ಎಂದು ಅರ್ಥೈಸಿಕೊಳ್ಳಬಹುದು. ಈ ಅನುರಾಗವು ಶಿವ ಮತ್ತು ಭಕ್ತರ ನಡುವೆ ಸಂಬಂಧವನ್ನು ಉಂಟು ಮಾಡುತ್ತವೆ. ಈ ಸಂಬಂಧದ ನೆಲೆ ಗಟ್ಟಿಯಾದಷ್ಟು ಭಕ್ತಿ ಪ್ರಖರಗೊಳ್ಳುತ್ತದೆ. ಆದ್ದರಿಂದ ಅಧ್ಯಯನದಲ್ಲಿ ಶಿವ ಮತ್ತು ಭಕ್ತರ ನಡುವಿನ ಸಂಬಂಧಗಳ ಬಗೆಯನ್ನು ಈ ರೀತಿಯಲ್ಲಿ ವಿಂಗಡಿಸಿಕೊಳ್ಳಲಾಗಿದೆ.

೧) ಸ್ನೇಹ ಸಂಬಂಧ

೨) ಕೌಟುಂಬಿಕ ವಾತ್ಸಲ್ಯ ಸಂಬಂಧ

೩) ದಾಸ್ಯ ಸಂಬಂಧ

### ೩.೧) ಸ್ನೇಹ ಸಂಬಂಧ :-

ಸ್ನೇಹ ಎಂದರೆ ಗೆಳೆತನ, ಸಖ್ಯ. ಈ ಪ್ರಪಂಚದಲ್ಲಿ ರಕ್ತ ಸಂಬಂಧಕ್ಕಿಂತಲೂ "ಸ್ನೇಹ ಸಂಬಂಧ" ಹೆಚ್ಚು ಪವಿತ್ರವಾದುದು. ಸ್ನೇಹದಲ್ಲಿ ಆತ್ಮೀಯತೆ, ನಲ್ಮೆಯತೆ ಅಡಿಪಾಯವಾಗಿರುತ್ತದೆ. ಅದರೊಂದಿಗೆ ಪ್ರೀತಿ, ಸಲುಗೆ ಒಡನಾಟ ಇರುತ್ತದೆ. ಇಲ್ಲಿ ಅಂಜಿಕೆ, ಮುಜುಗರ, ಸಂಘರ್ಷ, ಬೇದ-ಭಾವಗಳಿಗೆ ಅವಕಾಶವಿರುವುದಿಲ್ಲ. ನಿರ್ಭಯ ವಾತಾವರಣದಲ್ಲಿ ಮುಕ್ತ ಮನಸ್ಸಿನಿಂದ ಹೃದಯ ಬಿಚ್ಚಿ ಮಾತನಾಡುವುದಕ್ಕೆ ಸಾಧ್ಯವಿರುತ್ತದೆ. ಕಷ್ಟ, ದುಃಖ ಸಂಕಟಗಳು ಬಂದಾಗ ರಕ್ತ ಸಂಬಂಧಿಕ ಇಲ್ಲವೆ ಯಜಮಾನರಿಗೆ ಹೇಳಿಕೊಂಡಾಗ ಬಿಗುಮಾನದ ವಾತಾವರಣದಿಂದ ಕೂಡಿದ್ದು ಪರಿಹಾರಕ್ಕಿಂತ ಅಪಹಾಸ್ಯವೇ ಹೆಚ್ಚಾಗುತ್ತದೆ. ಆದರೆ ಇಂತಹ ಸಂಧರ್ಭದಲ್ಲಿ ನೆರವಾಗುವುದೇ ಸ್ನೇಹ ಸಂಬಂಧ. "ಸ್ನೇಹಿತರು, ಯಾರಿಗೆ ಯಾರು ಬೇಕಾದರೂ ಸ್ನೇಹಿತರಾಗಬಹುದು ಮುಚ್ಚುಮರೆ ಎಂಬುದು ಇಲ್ಲಿರುವುದಿಲ್ಲ. ಸ್ನೇಹ ಸಂಬಂಧದಲ್ಲಿ ಆಪ್ತತೆ ಗಾಢವಾಗಿರುತ್ತದೆ.

ಯಾವುದೇ ಅಳುಕಾಗಲಿ ತಲೆದೋರುವುದಿಲ್ಲ. ಇಲ್ಲಿ ಸ್ನೇಹ ಭಾವದಿಂದ ಶಿವನನ್ನು ಪೂಜಿಸುವ ಭಕ್ತ ವಲಯದ ಪ್ರಸ್ತಾವಿದೆ. ಶಿವನನ್ನು ತನ್ನ ಗೆಳೆಯನೆಂದು ತಿಳಿದುಕೊಂಡು ಪ್ರೀತಿ, ಆತ್ಮೀಯತೆಯಿಂದ ನಡೆದುಕೊಳ್ಳುವ ಭಕ್ತನು ಶಿವನಿಗೂ ಅಷ್ಟೇ ಪ್ರಿಯನಾಗುತ್ತನೆ. ಶಿವನು ಮತ್ತು ಭಕ್ತ ಒಂದಾಗುವ ಅಬೇಧ ಕಲ್ಪನೆಯ ಹಿಂದೆ ಅವರ ನಡುವೆ ಸ್ನೇಹ ಸಂಬಂಧ ತಳಪಾಯವಾಗಿದೆ."೬ ಕರೆದಾಗ ಮಾತ್ರ ಹತ್ತಿರ ಹೋಗಬೇಕು, ಇದು ನೆಂಟರ ಸ್ವಭಾವವಾದರೆ, ಕರೆಯದೆ ಇದ್ದರೂ ಸ್ನೇಹಿತನ ಬಳಿಗೆ ಹೋಗಿ ಆತ್ಮೀಯತೆಯಿಂದ ಮಾತುಗಳನ್ನಾಡಿಕೊಂಡು ಕಾಲ ಕಳೆಯುವ ಅವಕಾಶವಿರುತ್ತದೆ. ಸ್ನೇಹದ ಮಧ್ಯೆ ಏನನ್ನು ಬೇಕಾದರೂ ಹಂಚಿಕೊಳ್ಳಬಹುದು, ಏನೇ ಕೇಳಿದರೂ ಇಲ್ಲ ಎನ್ನದೆ ಕೊಡುವ ಮನೋಭಾವವುಳ್ಳ ಈ ಸ್ನೇಹಿತರು ಒಂದೇ ನಾಣ್ಯದ ಎರಡು ಮುಖಗಳಂತಿರುವುದೇ ಸ್ನೇಹ.

ಸರ್ವಕ್ಕೂ ಸ್ವಾಮಿಯಾದ ಪರಮಾತ್ಮನು ಎಷ್ಟಾದರೂ ಕರುಣಾಶಾಲಿ, ಹೀಗಿರುವಾಗ ಅವನು ಮಿತ್ರನೇ ಆದರೆ ಭಕ್ತನಿಗೆ ಈಶ್ವರನಲ್ಲಿ ಆತ್ಮೀಯತೆಯಿಂದ ನಡೆದುಕೊಳ್ಳುವ ಸ್ವಾತಂತ್ರ್ಯ ಲಭಿಸುತ್ತದೆ. ಯಾವಾಗ ಬೇಕಾದರೂ ಆಪ್ತನಾದ ಪರಮೇಶ್ವರನನ್ನು ಪ್ರಾರ್ಥಿಸಬಹುದು ತನ್ನ ಮನಸ್ಸಿನಲ್ಲಿರುವುದನ್ನು ನಿವೇದಿಸಬಹುದು. ಇದರಿಂದ ಶಿವ ಮತ್ತು ಭಕ್ತರ ನಡುವೆ ಸಲಿಗೆ, ಪ್ರೀತಿ, ವಿಶ್ವಾಸ, ಒಡನಾಟ ಬೆಳೆಯುತ್ತದೆ. ಭಕ್ತನು ತನ್ನ ಮನಸ್ಸೋ ಇಚ್ಛೆ ಭಾವ ತಲ್ಲೀನನಾಗಿ ಶಿವನನ್ನು ಆರಾಧಿಸುತ್ತಾನೆ. ಶಿವನಿಗಾಗಿ ತನ್ನ ಸರ್ವಸ್ವವನ್ನು ಅರ್ಪಿಸಲು ಮುಂದಾಗುತ್ತಿದ್ದರೆ ಅವನ ರಕ್ಷಣೆಗಾಗಿ ಶಿವನೂ ಅಷ್ಟೇ ಹಾತೊರೆಯುತ್ತಾನೆ. ಇಬ್ಬರ ಮುಖಾಮುಖಿಯಲ್ಲಿ ಪರಸ್ಪರ ಭಾವುಕರಾಗುತ್ತಾರೆ, ಅಪ್ಪಿಮುದ್ದಾಡಿ ಕುಣಿದು ಕುಪ್ಪಳಿಸುತ್ತಾರೆ.

## ಸ್ನೇಹ ವಾತ್ಸಲ್ಯದಡಿ ಬರುವ ರಗಳೆಗಳ ವಿಶ್ಲೇಷಣೆ :-

### ೧. ಇಹಃ ಪಗೆಯಾಂಡರ ರಗಳೆ :-

ಶಿವಭಕ್ತಿಗೆ ಆಗರವಾಗಿದ್ದ ಚೋಳನಾಡಿನಲ್ಲಿ ಬೇಡಿ ಬಂದವರಿಗೆ ಇಲ್ಲ ಎನ್ನದೆ ದಾನವನ್ನು ನೀಡುವ ವಿಶಾಲ ಹೃದಯಿ ಸದ್ಭಕ್ತನೊಬ್ಬವಾಸವಾಗಿದ್ದನು. ಹೇರಳ ಸಂಪತ್ತನ್ನು ಶಿವಭಕ್ತಿಗೆ ಸವೆಸುವ ಆ ಶಿವಭಕ್ತನ ಹೆಸರು ಇಹಃ ಪಗೆಯಾಂಡರ ಇವರ ವೈಭೋಗದ ಜೀವನದಲ್ಲಿ

ಅಡಿಟಿಪ್ಪಣಿಗಳು : ೬. ಹರಿಹರನ ರಗಳೆಗಳ ಭಕ್ತಿ – ಕೆ.ಎಸ್.ಕೃಷ್ಣಮೂರ್ತಿ, ಪು.ಸಂ.೬೨

ನೂರು ಹೆಂಡತಿಯರನ್ನು ಸಹಸ್ರ ಸೇವಕಿಯರನ್ನು ಹೊಂದಿದ್ದನು ತಾನು ಮಾಡುವ ದಾನವನ್ನು ಹಿಗ್ಗಿ, ಸಂತೋಷದಿಂದಲೇ ನೀಡುವ ಗುಣಉಳ್ಳವನಾದ ಇವನು ಆ ದಾನದ ಕಾರ್ಯದಲ್ಲೇ ಅರವತ್ತುವರ್ಷ ಕಳೆದನು.

ಒಮ್ಮೆ ಶಿವನು ಇವನನ್ನು ಪರೀಕ್ಷೆ ಮಾಡುವ ಸಲುವಾಗಿ ಎಲ್ಲರ ಮನಃ ಸೂರೆಗೊಳ್ಳುವ ಹಾಗೆ ವಿಟಪುರುಷನ ವೇಷಧರಿಸಿ ನಿಂತನು. ಸುಂದರನಾದ ಆ ವಿಟಪುರುಷನು ಇಹಃ ಪಗೆಯಾಂಡರನ ಅರಮನೆಗೆ ಬಂದಾಗ ಅವನನ್ನು ಅಭೂತ ಪೂರ್ವವಾಗಿ ಸ್ವಾಗತಿಸಿ ಸಂತೃಪ್ತ ಭೋಜನಾದಿಗಳನ್ನು ನೀಡಲು ಹೋದಾಗ ಇವುಗಳ ಕೊರತೆ ತನಗಿಲ್ಲ ಎಂದು ನಿರಾಕರಿಸಿದನು. ಕೇಳಿದ್ದನ್ನು ಇಲ್ಲ ಎನ್ನದೆ ನೀಡುವವನು ನೀನು ಎಂದು ತಿಳಿದು ಬಂದಿದ್ದೇನೆ, ಕೊಡುವುದಾದರೆ ನಮ್ಮ ಮನೆಯಲ್ಲಿ ಶಿವಪೂಜೆಯನ್ನು ಮಾಡಿಕೊಂಡು ಹೋಗುವ, ಸದ್ಗುಣ ಹೊಂದಿರುವ ಮುಗ್ಧೆ ಮತ್ತು ಸುಂದರಳಾಗಿರುವ ಒಂದು ಹೆಣ್ಣನ್ನು ನೀಡು ನಮ್ಮ ಮನಸ್ಸಿನ ಇಚ್ಚೆಯನ್ನು ಪೂರೈಸುವುದಾದರೆ ಆಗಲಿ, ಇಲ್ಲದಿದ್ದಲ್ಲಿ ಸ್ಪಷ್ಟವಾಗಿ ಆಗುವುದಿಲ್ಲ ಎಂದು ಬಿಡು, ನಾವು ಹೊರಡುತ್ತೇವೆ ಎಂದು ಮನ್ಮಥನ ಹಾಗೆ ಇದ್ದ ಆ ವಿಟವೇಷಿ ಹೇಳಿದನು. ಇದನ್ನು ಕೇಳಿದ ತಕ್ಷಣ ಇಹಃ ಪಗೆಯಾಂಡನು ತನ್ನ ಬಳಿ ಇರುವ ವಿಲಾಸಿನಿಯರು, ಸತಿಯರನ್ನೆಲ್ಲಾ ತೋರಿಸಿದರೂ, ಆ ವಿಟವೇಷಿಗೆ ಒಪ್ಪಿಗೆಯಾಗದೆ ಅಸಮ್ಮತಿಯನ್ನು ಸೂಚಿಸಿದನು. ಆಗ ಇಹಃ ಪಗೆಯಾಂಡರನು ತನ್ನ ಮನದಿಚ್ಛೆಯ ಪತಿಹಿತವೆಯನ್ನು ತೋರಿಸಿದಾಗ ಹರುಷದಿಂದ ಒಪ್ಪಿಕೊಂಡು ಅವಳನ್ನು ತನ್ನೊಂದಿಗೆ ಕರೆದೊಯ್ಯಲು ಮುಂದಾದಾಗ ಊರಿಗೇ ಊರೇ ಈ ವಿಷಯವನ್ನು ತಿಳಿದು ಪ್ರತಿಭಟಿಸಿ, ಯುದ್ಧಕ್ಕೆ ಮುಂದಾದರು. ಇದರಿಂದ ಕೋಪಗೊಂಡ ವಿಟವೇಷಿಯು ಇಹಃ ಪಗೆಯಾಂಡರನಲ್ಲಿ ಮರಳಿಬಂದು ದಾನ ಕೊಡುವ ನೆಪದಲ್ಲಿ ಊರಿನವರನ್ನೆಲ್ಲರನ್ನು ನನ್ನ ವಿರುದ್ಧ ಎತ್ತಿಕಟ್ಟಿರುವೆಯಾ ಇದು ನಾಟಕದ ವರ್ತನೆ, ಹಾಗಿದ್ದರೆ ಇವಳನ್ನು ಇಲ್ಲೇ ಬಿಟ್ಟು ನಾವು ಹೊರಡುತ್ತೇವೆ. ನಿರಾಸೆಯನ್ನು ಉಂಟು ಮಾಡಿರುವ ನಿಮ್ಮ ಈ ನೇಮ ನಮಗೆ ಸರಿಕಾಣುವುದಿಲ್ಲ ಎಂದು ಹೇಳಿ ಹೊರಡಲು ಮುಂದಾದಾಗ ಅವರನ್ನು ವಿಧವಿಧವಾಗಿ ಬೇಡಿ ಇಹಃ ಪಗೆಯಾಂಡರನು ಅಷ್ಟೂ ಜನರವನ್ನು ತನ್ನ ಶೌರ್ಯ, ಸಾಹಸದಿಂದ ಎದುರಿಸಿ ರಕ್ತದೋಕುಳಿಯನ್ನೇ ಮಾಡಿ ಎಲ್ಲರನ್ನು ನಾಶಮಾಡಿ, ತಾವು ಪತಿಹಿತವೆಯನ್ನು ಕರೆದುಕೊಂಡು ಹೋಗಿರಿ ಎಂದು ಕಳಿಸಿದನು. ಅನಂತರ ಶಿವನು ನಿನ್ನಯ ಭಕ್ತಿಗೆ ನಾವು ಮೆಚ್ಚಿದ್ದೇವೆ ಎಂದು ತೇಜಸ್ವಿಯಿಂದ ಹೊಳೆಯುವ ತನ್ನ ರೂಪವನ್ನು ತೋರಿಸಿನು ಕಾಲಿಗೆರಗಿದ ಇಹಃ ಪಗೆಯಾಂಡರನ ಭಕ್ತಿ ಚರಿತ್ರೆಯನ್ನು ನಾವು

ಕಾಣಬಹುದು. "ಶಿವಭಕ್ತಿ-ಪತಿ-ಪತ್ನಿಯರಿಬ್ಬರಿಗೂ ಸಂಬಂಧಿಸಿದುದು ಅದರಂತೆ 'ಪತಿಹಿತವೆ' ತನ್ನ ಗಂಡನ ಮಾತನ್ನು ಪಾಲಿಸಿದ ಪತಿವ್ರತೆ, ಅವಳ ಪತಿಭಕ್ತಿ ಹಿರಿದು, ಅವಳ ತ್ಯಾಗವೂ ಅಂತಹುದೇ, ತನ್ನ ಗಂಡನ ವಿಚಾರದಲ್ಲಿ ಯಾವ ಕುಂದನ್ನು ಕಾಣದ ಭಾವ ಅವಳದು. ಲಗ್ನವಾದ ಮೇಲೆ ಗಂಡನ ವಿಚಾರದಲ್ಲಿ ಯಾವ ದೋಷವೆಣಿಸದ ಋಜು ಮನಸ್ಸು ಮತ್ತು ಶಿವವೇಷದಲ್ಲಿ ಅನೀತಿಯನ್ನು ಕಾಣದ ಭಾವ ಅವಳದು. ಲಗ್ನವಾದ ಮೇಲೆ ಗಂಡನಿಗಿಂತ ಬಂಧುಗಳನ್ನು ಮೇಲಾಗಿ ಕಾಣಲಿಲ್ಲ, ಶಿವಭಕ್ತಿ-ಪತಿಭಕ್ತಿಯ ಮುಂದೆ "ಕುಲದಘಾಸಿ", "ವಂಶದ ಕೇಡು", "ಲೋಕಾಪವಾದ", "ಕುಲಾಚಾರ" ಯಾವುದನ್ನೂ ಮಹತ್ವದವೆಂದು ಪರಿಗಣಿಸದ ಸ್ತ್ರೀ ಇವಳು."೧೦

ಈ ಕಥೆಯನ್ನು ಸೂಕ್ಷ್ಮವಾಗಿ ಗಮನಿಸಿದಾಗ, ಬೇಡಿ ಬಂದವರನ್ನು ಇಲ್ಲ ಎನ್ನದೆ ದಾನಕೊಟ್ಟ, ಕಳಸುವ ನೇಮದ ಮೂಲಕ ಶಿವಭಕ್ತಿಯನ್ನು ಮೆರೆಯುವ ಇಹಃ ಪಗೆಯಾಂಡರನ ವ್ಯಕ್ತಿತ್ವ ಶ್ರೇಷ್ಠವಾದುದೇ ಸರಿ, ಆದರೆ ಆತನನ್ನು ಪರೀಕ್ಷಿಸುವ ವೇಷಧಾರಿ ಶಿವನು ಆತನ ಬಳಿ ಬಂದು ಅವನ ಹೆಂಡತಿಯನ್ನು ಕೇಳಿ ಪಡೆದುಕೊಂಡು ಹೋಗುವ ಸನ್ನಿವೇಶ ಸೋಜಿಗವೆನಿಸುತ್ತದೆ. ದಾನಭಾಗ್ಯಕ್ಕೆ ಎದುರಾದ ಸರ್ವರನ್ನೂ ಕೊಂದು ತನ್ನ ಹೆಂಡತಿಯನ್ನು ವಿಟವೇಷಿಗೆ ಅರ್ಪಿಸುವ ಇಹಃ ಪಗೆಯಾಂಡರನಲ್ಲಿ ದಾನಕೊಡುವ ನೇಮಕ್ಕೆ ಭಂಗ ಬಾರದಂತೆ ನೋಡಿಕೊಂಡು ತನ್ನ ಭಕ್ತಿಯ ಛಲವನ್ನು ಪ್ರದರ್ಶಿಸಿ ಗೆಲ್ಲುವ ಅವನ ಹೋರಾಟ ಮನೋಭಾವ ಹಾಗೂ ಶಿವನಿಗೆ ಸರ್ವಸ್ವವನ್ನು ನೀಡುವ ಸಮರ್ಪಣ ಮನೋಭಾವ ಗಮನಾರ್ಹವಾದುದು ಇದಕ್ಕೆ ಪ್ರಮುಖವಾಗಿ ಅವನು ಶಿವನಲ್ಲಿ ಇಟ್ಟಿರುವ ಭಕ್ತಿಯ ಹಿಂದೆ ಇರುವ ಆತ್ಮೀಯ ಸ್ನೇಹ ಬಾಂಧವ್ಯ ಎಂಥ ವಿಶಿಷ್ಟ ಕಾರ್ಯವನ್ನೂ ಮಾಡಿಸುತ್ತದೆ ಎಂಬುದು ವೇದ್ಯವಾಗುತ್ತದೆ. ಶಿವನನ್ನು ಒಲಿಸಿಕೊಳ್ಳುವಲ್ಲಿ ಭಕ್ತರು ಅನುಸರಿಸುವ ನೇಮನಿಷ್ಠೆಯ ಮುಂದೆ ಸಮನಾಗಿ ವೈಯಕ್ತಿಕ ರಕ್ತ ಸಂಬಂಧಗಳು ಗೌಣವಾಗುತ್ತದೆ. ಇಲ್ಲಿ ಶಿವನ ಮೇಲಿಟ್ಟಿರುವ ಸ್ನೇಹದ ನಂಟೇ ಪ್ರಧಾನವಾದುದು.

ಈ ಶಿವಭಕ್ತರ ಜೀವನದಲ್ಲಿ ಶಿವನ ಒಲುಮೆಯ ಮುಂದೆ ಯಾವುದೂ ಮುಖ್ಯವಲ್ಲ. ಸತಿಯಾದವಳೂ ಸಹ ಪತಿಧರ್ಮ ಪಾಲಿಸುವುದಕ್ಕೆ ನೆರವಾಗಿ ಶಿವಭಕ್ತಿಯನ್ನು ಮೆರೆಯುತ್ತಾಳೆ ಹೊರತು ಸ್ವಇಚ್ಛೆಯಂತೆ ಪತಿಯ ವಿರೋಧಿಯಾಗಿ ನಡೆಯಳು. ಶಿವಭಕ್ತಿಯಲ್ಲಿ ಸತಿ-ಪತಿಗಳ ಆದರ್ಶವೂ ಮುಖ್ಯವೆನಿಸುತ್ತದೆ.

---

**ಅಡಿ ಟಿಪ್ಪಣಿಗಳು** : ೧೦. ರಸಿಕಚಕ್ರಿ ಹರಿಹರದೇವ-ಸಂ. ಡಾ|| ಬಿ.ಸಿ. ಜವಳಿ, ಶ್ರೀ. ಶಾಂತರಸ, ಪು..ಸ. ೨೨

## ೨. ಸೇದಿರಾಜನ ಕಥೆ:-

ಚೋಳ ದೇಶದಲ್ಲಿ ಮಹಾ ಸಾಮಾಂತನಾದ ಸೇದಿರಾಜನೆಂಬ ಒಬ್ಬ ಶಿವಭಕ್ತನಿದ್ದನು. ಶಿವಭಕ್ತಿಯ ಆಚರಣೆಗೆ ಅಡ್ಡಲಾಗುವ ಅಂತರಂಗ, ಬಹಿರಂಗ ಶತ್ರುಗಳನ್ನು ಹಿಮ್ಮೆಟ್ಟಿಸುವ ಮನೋನಿಲುವನ್ನು ಹೊತ್ತವನಾಗಿದ್ದ. ಅವನ ಪ್ರಪಂಚವೇ ಶಿವೋಮಯವಾಗಿತ್ತು. ಪ್ರಾಮಾಣಿಕ ಮನಸ್ಸಿನ ನಿಷ್ಠುರವಾದಿ ವ್ಯಕ್ತಿತ್ವವನ್ನು ಹೊಂದಿದ್ದ ಇವನ ವಿರುದ್ದ ಕಿಚ್ಚು ತುಂಬಿಕೊಂಡಿದ್ದ ಅವನ ದಾಯಾದಿ ಅವನ ವಿರುದ್ಧ ಯುದ್ಧದಲ್ಲಿ ಗೆಲ್ಲಲಾರದೆ ಸೇಡನ್ನು ತೀರಿಸಿಕೊಳ್ಳಲು ಹೊಂಚು ಹಾಕುತ್ತಿದ್ದನು. ಕೊನೆಗೆ ಶಿವಭಕ್ತನಂತೆ ಕಪಟ ವೇಷವನ್ನು ಹಾಕಿಕೊಂಡು ಬಂದು ಸೇದಿರಾಜನ ಅರಮನೆಯಲ್ಲಿ ಶಿವಭಕ್ತನಂತೆ ನಟಿಸಿ ಆದರಾತಿಥ್ಯವನ್ನು ಸ್ವೀಕರಿಸಿದನು. ಸೇದಿರಾಜನನ್ನು ಉದ್ದೇಶಿಸಿ, ನಿನಗೆ ಶುಭವಾಗಲಿರುವ ಜಗತ್ತಿನಲ್ಲಿ ಯಾರೂ ಕೇಳರಿಯದ ಶೈವಾಗಮ ನಿನ್ನೊಬ್ಬನಿಗೆ ಮಾತ್ರ ಅರುಹಬೇಕೆಂದಿರುವೆ ಎಂದು ಸಭೆಯನ್ನು ನಂಬಿಸಿದನು. ಅದರಂತೆ ಅದಕ್ಕೆ ಅಣಿ ಮಾಡಿದ ಸೇದಿರಾಜನ ಮುಂದೆ ಕಪಟ ಶಿವಭಕ್ತಿಯನ್ನು ಪ್ರಕಟಿಸಿ ಅವನಿಗೆ ಬಾಗಿ ನಮಸ್ಕರಿಸಲು ಹೇಳಿ ತನ್ನ ಜೋಳಿಗೆಯಲ್ಲಿದ್ದ ಕತ್ತಿಯಿಂದ ಅವನನ್ನು ಇರಿದನು. ಸಂಚುಮಾಡಿ ಹೊಂಚು ಹಾಕಿ ಅವನ ಕಾರ್ಯಸಾಧನೆ ಮಾಡಿಕೊಂಡ ಕಪಟ ವೇಷಧಾರಿಯಲ್ಲಿ ಶಿವನ ನಾಮಸ್ಮರಣೆ ವಿಭೂತಿ, ರುದ್ರಾಕ್ಷಿ ಎಲ್ಲವೂ ಹೇಸಿದವು, ಇದರಿಂದ ಕುಪಿತನಾಗದ ಸೇದಿರಾಜನು ನನ್ನನ್ನು ಇರಿದ ನಿನ್ನ ಕೈಗಳು ನೊಂದವೇ ಆಯಾಸವಾಯಿತೇ? ಎಂದು ಉಪಚರಿಸಿ ಅವನಿಗೆ ಸಹಸ್ರ ಹೊನ್ನು ಕೊಡಿಸಿ ಕ್ಷೇಮವಾಗಿ ಅವನ ಸ್ಥಳಕ್ಕೆ ಬಿಡುವಂತೆ ಆಜ್ಞಾಪಿಸಿದನು. ಕಪಟ ವೇಷಧಾರಿ ಕ್ಷೇಮ ಸ್ಥಳಕ್ಕೆ ತಲುಪಿದ ಸುದ್ದಿ ಬಂದ ಮೇಲೆ ತನಗಾದ ಸ್ಥಿತಿಯನ್ನು ಅರಮನೆಯಲ್ಲಿ ಆಪ್ತರನ್ನೆಲ್ಲಾ ಕರೆಸಿಕೊಂಡು, ಎಲ್ಲರಿಗೂ ತಿಳಿಸಿದಾಗ ದುಃಖದಿಂದ ಮರುಕಪಟ್ಟರು, ಶಿವಧ್ಯಾನ ಮಾಡುತ್ತ ಕುಳಿತ ಅವನ ಮೈಗಂಟಿದ ಕತ್ತಿಯನ್ನು ಕೀಳುತ್ತಿದ್ದಂತೆಯೇ ಅವನ ಸರ್ವೇಂದ್ರಿಯಗಳೆಲ್ಲವೂ ಶಿವೋಮಯವಾಗುತ್ತಿದ್ದವು, ಅಂತೆಯೇ ಪರಮೇಶ್ವರನು ಪ್ರತ್ಯಕ್ಷನಾಗಿ ಅವನ ಭಕ್ತಿಯನ್ನು ಮುಕ್ತಕಂಠದಿಂದ ಹೊಗಳಿ ಗಣಪದವಿಯನ್ನಿತ್ತು ಹರಸಿದನು.

ಈ ಕಥೆಯಲ್ಲಿ ಮನುಷ್ಯನ ಏಳಿಗೆಗೆ ಪೂರಕವಾಗುವ ಸಕರಾತ್ಮಕ ಅಂಶಗಳ ಕಡೆಗೆ ಮನಸ್ಸು ಗಮನ ಹರಿಸಿ ಅವನ್ನು ಪೋಷಿಸಬೇಕು. ಅಂತೆಯೇ ನಮ್ಮಲ್ಲಿ ಕೆಟ್ಟದ್ದನ್ನು ಸೃಷ್ಟಿಸುವ ಅಂತರಂಗ ಮತ್ತು ಬಾಹ್ಯ ಶತ್ರುಗಳನ್ನು ನಾವೇ ಹಿಮ್ಮೆಟ್ಟಿಸಬೇಕು. ಆಗಲೇ ಆತ್ಮೋದ್ಧಾರ ಎನ್ನುವ ಹಿತಚಿಂತನೆ ಎದ್ದು ತೋರುತ್ತದೆ. ನಮಗೆ ಯಾರೇ ಕೇಡು ಬಯಸಿದರೂ ಅವರಿಗೆ ನಾವು ಪ್ರತಿ

ಕೇಡು ಬಯಸದೆ ಪ್ರೀತಿಯಿಂದಲೇ ಕಾಣಬೇಕು ಆಗ ಮಾತ್ರ ನಾವು ದೇವರಿಗೆ ಪ್ರಿಯರಾಗುತ್ತೀವಿ ಎಂಬ ಧಾರ್ಮಿಕ ಸತ್ಯ ಗೋಚರವಾಗುತ್ತದೆ.

ಮೊದಲಿನಿಂದಲೂ ಶಿವಭಕ್ತಿಯಲ್ಲಿ ನಿಶ್ಚಲತ್ವವನ್ನು ಮತ್ತು ಶಿವನಲ್ಲಿ ಆತ್ಮೀಯ ನಂಟನ್ನು ಬೆಳೆಸಿಕೊಂಡಿದ್ದ ಸೇದಿರಾಜನು ಅರಿಷಡ್ವರ್ಗಗಳಿಗೆ ಬಲಿಯಾಗದೆ ಕೊನೆಯವರೆಗೂ ಶಿವನನ್ನೇ ನಂಬಿ ಬಾಳಿದ್ದಕ್ಕೆ ಪ್ರತಿಯಾಗಿ ಕೈಲಾಸದ ಗಣಪದವಿ ಪ್ರಾಪ್ತವಾಗಿ ಸಂತೃಪ್ತಿಯನ್ನು ಪಡೆದನು. ಎಲ್ಲಾ ಕಥೆಗಳಲ್ಲೂ ಸಾಮಾನ್ಯವಾಗಿ ಶಿವನು ವೇಷಧಾರಿಯಾಗಿ ಬಂದು ಪರೀಕ್ಷಿಸುವುದು ವಾಡಿಕೆಯಾಗಿದ್ದರೆ, ಈ ಕಥೆಯಲ್ಲಿ ಮಾತ್ರ ಕಪಟವೇಷಧಾರಿಯ ಕುತಂತ್ರಕ್ಕೆ ಬಲಿಯಾಗಿ ಸೇದಿರಾಜನ ಪ್ರಾಣ ಹೋಗುವ ಸಂದರ್ಭದಲ್ಲಿ ಶಿವನು ಪ್ರತ್ಯಕ್ಷನಾಗಿ ಹರಸುವುದು ವಿಶೇಷವೆನಿಸಿದೆ. ನಾವು ಮಾಡುವ ಎಲ್ಲಾ ಒಳ್ಳೆಯ ಹಾಗೂ ಕೆಟ್ಟಕೆಲಸಗಳೇ ನಮ್ಮನ್ನು ಪುಣ್ಯವಂತ ಹಾಗೂ ಪಾಪಿಯನ್ನಾಗಿ ಮಾಡುವುದು ಎಂಬ ಗೋಚರ ಸತ್ಯವನ್ನು ತಿಳಿಸುತ್ತದೆ. ಸದಾ ಸದ್ಭಕ್ತಿ ಸದ್ಭಾವನೆ, ಸಚ್ಚಾರಿತ್ರ್ಯ ಬೆಳೆಸಿಕೊಳ್ಳಬೇಕೆಂಬ ಆಶಯವನ್ನು ಸಾರಿರುವ ಕವಿ ಹರಿಹರನು ಮಾರ್ಗ ಪ್ರವರ್ತಕನಾಗಿ ನಿಲ್ಲಬಲ್ಲನು.

**೩. <u>ಕಣ್ಣಪ್ಪನ ರಗಳೆ :-</u>**

ಚೋಳ ಮಂಡಲದಲ್ಲಿ ತಿರುಕಾಳ ಹಸ್ತಿ ಎಂಬ ದೊಡ್ಡ ಪಟ್ಟಣದಲ್ಲಿ ಬೇಡನೊಬ್ಬ ವಾಸವಿದ್ದನು. ಪ್ರತಿನಿತ್ಯ ಪ್ರಾಣಿಗಳನ್ನು ಬೇಟೆಯಾಡುವುದರಲ್ಲೇ ತನ್ನ ಸಮಯವನ್ನು ಕಳೆಯುತ್ತಿದ್ದನು ಹೀಗಿರುವಾಗ, ಒಮ್ಮೆ ಮಾಯಾ ಜಿಂಕೆಗಳು ಅಲ್ಲಲ್ಲಿ ಸುಳಿದಾಡಿ ಅವನ ಕಣ್ಣು ತಪ್ಪಿಸಿ ಓಡಿಹೋದವು. ಅದು ಹೋದಲೆಲ್ಲೆಡೆ ಬೇಡನು ಹಿಂಬಾಲಿಸಿಕೊಂಡು ಹೋದರೂ ಪ್ರಯೋಜನವಿಲ್ಲದೆ ಆಯ್ತು. ಇದರಿಂದ ಬೇಸರಗೊಂಡ ಕಣ್ಣಪ್ಪನು ಕಾಡಿನಲ್ಲಿದ್ದ ಶಿವಾಲಯಕ್ಕೆ ಆಗಮಿಸಿ, ಶಿವಲಿಂಗವನ್ನು ಉದ್ದೇಶಿಸಿ, ನಿನ್ನ ಸತ್ಯವನ್ನು ಪರೀಕ್ಷಿಸಿ ನೋಡುತ್ತೇನೆ. ನನ್ನ ಕಣ್ಣು ತಪ್ಪಿಸಿಕೊಂಡು ಹೋಗಿರುವ ಜಿಂಕೆಯನ್ನು ನೀನು ದೊರಕಿಸಿಕೊಟ್ಟಲ್ಲಿ ಒಂದು ಪಾಲನ್ನು ನಿನಗೊಪ್ಪಿಸುತ್ತೇನೆ ಎಂದು ಕೇಳಿಕೊಂಡು ಹೊರಬಂದನು. ಆವರಣದ ಒಂದು ಮೂಲೆಯಲ್ಲಿ ಅವನು ಮತ್ತೆ ಜಿಂಕೆಯನ್ನು ನೋಡಿದಾಗ ಸಂತೋಷದಿಂದ ನನ್ನ ನಂಬಿಕೆ ನಿಜವಾಯಿತು. ಶಿವನು ಸತ್ಯವಂತನು ಎಂದುಕೊಂಡು ಜಿಂಕೆಯನ್ನು ಬೇಟೆಯಾಡಿ ತಂದು ಮೃದುವಾದ ಮಾಂಸವನ್ನು ಭಕ್ತಿ- ಪ್ರೇಮದಿಂದ ಶಿವನಿಗೆ ಒಪ್ಪಿಸಿದನು. ಶಿವನ ನಿದ್ರೆಗೆ ತೊಂದರೆಯಾಗಬಾರದೆಂದು ಬಹಳ

ಎಚ್ಚರವಹಿಸಿ ದೇವಾಲಯದಲ್ಲೇ ರಕ್ಷಕನಂತೆ ಕಾಯುತ್ತಾ, ಶಿವನ ಹಸಿವು ನೀಗಿಸುವುದಕ್ಕೆ ಬಗೆ ಬಗೆಯ ಪ್ರಾಣಿಗಳನ್ನು ದಿನನಿತ್ಯ ಬೇಟೆಯಾಡುತ್ತಾ, ನನ್ನವನೆ.....! ನನ್ನವನೆ.....! ಎಂದು ಹಾಡಿ ಕುಣಿದು ಬಹಳ ಪ್ರೀತಿಯಿಂದ, ಭಕ್ತಿಯಿಂದ ಅವನ ಸ್ಮರಣೆ ಮಾಡುತ್ತಿದ್ದನು. ಹೀಗಿರುವಲ್ಲಿ ಅಲ್ಲಿಗೆ ಪೂಜೆ ನೆರವೇರಿಸಲು ದಿನಾ ಆಗಮಿಸುತ್ತಿದ್ದ ಅರ್ಚಕನಿಗೆ ದೇವಾಯಲದಲ್ಲಿ ಮೃಗಗಳ- ರಕ್ತ ಮಾಂಸಗಳನ್ನು ಕಂಡು ಕೋಪಗೊಂಡು, ಶಪಿಸಿ, ದೇವಾಲಯವನ್ನು ಶುಚಿಗೊಳಿಸಿ ಪೂಜಾ ಸಾಮಾಗ್ರಿಗಳಿಂದ ಪೂಜಿಸಿ ಮನೆಗೆ ತೆರಳುತ್ತಿದ್ದನು ಕಣ್ಣಪ್ಪನು ನನ್ನವನು ಹಸಿದಿರಬೇಕೆಂದು ಬೇಗನೆ ಎಳೆಮಾಂಸವನ್ನು ತಂದು ಅಲ್ಲಿದ್ದ ಹಣ್ಣು-ಕಾಯಿ-ಪುಷ್ಪಾದಿಗಳನ್ನೆಲ್ಲಾ ಎಸೆದು ತನ್ನ ಬಾಯಿಯಿಂದ ತಂದ ನೀರಿನಿಂದ ಅಭಿಷೇಕ ಮಾಡಿ, ಊಟವನ್ನು ಮಾಡಲು ಮಾಂಸವನ್ನು ನೀಡುತ್ತಿದ್ದನು. ಇವರಿಬ್ಬರ ಭಕ್ತಿಯಲ್ಲಿ ಶಿವನ ಶಿವನ ಒಲವು ಮುಗ್ಧ ಕಣ್ಣಪ್ಪನ ಕಡೆಗೆ ಇದ್ದುದ್ದನ್ನು ನೋಡಿ ಪಾರ್ವತಿದೇವಿಗೆ ಆಶ್ಚರ್ಯವಾಯಿತು. ಅತಿ ಶುದ್ಧಿಯಿಂದ ಪೂಜೆ ಪುನಸ್ಕಾರ ಮಂತ್ರಾದಿಗಳನ್ನು ಹೇಳ ಪೂಜಿಸುತ್ತಿರುವ ಅರ್ಚಕನ ಭಕ್ತಿಗೆ ಮಾರು ಹೋಗದ ಈ ಶಿವನು ಕೊಳಕು, ಮಾಂಸಾದಿಗಳನ್ನು ಅರ್ಪಿಸುವ ಈ ಕಣ್ಣಪ್ಪನ ಭಕ್ತಿಗೆ ಒಪ್ಪಿರುವುದು ಮುಜುಗರವೆನಿಸಿತು. ಆಗ ಶಿವನು ನಿಜವಾದ ಭಕ್ತಿ ಯಾವುದೆಂದು ಜಗತ್ತಿಗೆ ಅರಿವಾಗುವಂತೆ ಅವರಿಬ್ಬರ ನಡುವೆ ಪರೀಕ್ಷೆಯನ್ನೊಡ್ಡಿ ತೋರುತ್ತಾನೆ. ಪೂಜಿಸಲೆಂದು ನಿತ್ಯ ಬರುವಂತೆ ದೇವಾಲಯದೊಳಗೆ ಬಂದ ಅರ್ಚಕನು ಶಿವಲಿಂಗದ ಕಣ್ಣಲ್ಲಿ ರಕ್ತ ಸುರಿಯುತ್ತಿರುವುದನ್ನು ನೋಡಿ ಗಾಬರಿಯಿಂದ ಕೇಡುಂಟಾಗುವುದೆಂದು ಅಲ್ಲಿಂದ ಓಟಕಿತ್ತನು. ಆದರೆ ಕಣ್ಣಪ್ಪ ದೇವಾಲಯದೊಳಗೆ ಬಂದಾಗ ಶಿವಲಿಂಗದ ಕಣ್ಣಲ್ಲಿ ರಕ್ತ ಸುರಿಯುವುದು ಗಮನಿಸಿ ಆತಂಕದಿಂದ ಉಪಚರಿಸಿದನು. ರಕ್ತ ಸುರಿಯುವುದು ನಿಲ್ಲದಿದ್ದಾಗ ಉಪಾಯವೊಂದನ್ನು ಮನಸ್ಸಿನಲ್ಲಿಯೇ ಯೋಚಿಸಿ ತಕ್ಷಣ ತನ್ನಲ್ಲಿದ್ದ ಹರಿತವಾದ ಬಾಣದಿಂದ ತನ್ನ ಕಣ್ಣನ್ನು ಕಿತ್ತು ಶಿವಲಿಂಗಕ್ಕೆ ಜೋಡಿಸಿದನು. ಕ್ಷಣ ಮಾತ್ರದಲ್ಲಿಯೇ ಲಿಂಗದ ಮತ್ತೊಂದು ಕಣ್ಣಲ್ಲಿ ರಕ್ತ ಸುರಿಯುವುದನ್ನು ನೋಡಿ, ಅಂಜದೆ ಕಣ್ಣಪ್ಪನು ತನ್ನ ಇನ್ನೊಂದು ಕಣ್ಣನ್ನು ಕಿತ್ತು ಶಿವಲಿಂಗಕ್ಕೆ ಅರ್ಪಿಸಿದನು. ಕೋಟಿ ಸೂರ್ಯ ಪ್ರಭೆಯುಳ್ಳ ಶಿವನು ಪ್ರತ್ಯಕ್ಷನಾಗಿ ಕಣ್ಣಪ್ಪನ ಮುಗ್ಧಭಕ್ತಿ ಚರಿತೆಯೆಂದು ಸಾರಿ ಕೈಲಾಸಕ್ಕೆ ಕರೆದೊಯ್ದು ಶಿವಗಣ ಪದವಿಯನ್ನು ನೀಡಿದನು.

ಈ ಕಥೆಯನ್ನು ಗಮನಿಸಿದಾಗ, ಬಹಿರಂಗ ಶುದ್ಧಿಗಿಂತ ಅಂತರಂಗ ಶುದ್ಧಿಗೆ ಪರಮಾತ್ಮನು ಒಲಿಯುವುದು ಎಂದು ಗೋಚರವಾಗುತ್ತದೆ. ಸ್ನಾನಾದಿಗಳನ್ನು ಮಾಡಿ ಹೂ-ಹಣ್ಣು-ಕಾಯಿ, ಪವಿತ್ರವಾದ ಮಂತ್ರಾದಿ ಜಪ- ತಪಾದಿಗಳಿಗೆ ದೇವನು ಒಲಿಯುವುದು, ಅದೇನಿದ್ದರೂ ನಮ್ಮಂತಹ

ಬ್ರಾಹ್ಮಣರಿಗೆ ಮೀಸಲು ಎಂದು ಭೂ ಲೋಕಕ್ಕೆ ನಾವೇ ಅಧಿಪತಿಗಳು ಎಂದು ಆದಿಯಿಂದ ಎಲ್ಲರನ್ನು ಮೂಲೆಗುಂಪು ಮಾಡುತ್ತಿದ್ದರು. ಬೇಡನಾದ ಕಣ್ಣಪ್ಪನ ಮುಗ್ಧ ಮನಸ್ಸಿನ ಮತ್ತು ಸಮರ್ಪಣ ಭಕ್ತಿಗೆ ಶಿವನು ಮೆಚ್ಚಿ ಗಣಪದವಿಯನ್ನು ನೀಡಿದಾಗ ಯಾರ ಭಕ್ತಿ ಮತ್ತು ಯಾವ ಪದ್ಧತಿ ಶ್ರೇಷ್ಠ ಎಂಬುದು ಅರ್ಥವಾಗುತ್ತದೆ. ನಾವು ಯಾವುದೇ ಕೆಲಸವನ್ನು ಪ್ರತಿಫಲಾಪೇಕ್ಷೆ ಇಲ್ಲದೆ ಮನಸ್ಸಿಟ್ಟು ಮಾಡುವ ಮುಗ್ಧತೆಗೆ ಜಯವಿದೆ ಎಂಬ ಸತ್ಯ ಪ್ರಕಟವಾಗುತ್ತದೆ. ಶಿವನಿಗೆ ತನ್ನೆರಡೂ ಕಣ್ಣುಗಳನ್ನು ನೀಡುವಲ್ಲಿ ಹಿಂಜರಿಯದ ಕಣ್ಣಪ್ಪ ಬಳಿಕ ಎನಗೆ ನೀನುಂಟು ಎಂದು ಹೇಳುವ ಕಣ್ಣಪ್ಪ ಶಿವನನ್ನು ತನ್ನ ಮಿತ್ರನಂತೆ ತಿಳಿದು ಅವನ ಮೇಲಿಟ್ಟಿರುವ ಭರವಸೆ, ಪ್ರೀತಿ, ನಂಬಿಕೆ, ಸ್ನೇಹದ ಪರಿಯನ್ನು ತಿಳಿಯಬಹುದು.

ಇಲ್ಲಿ ಕಣ್ಣಪ್ಪನು ಮತ್ತು ಶಿವನ ನಡುವಿನ ಬಾಂಧವ್ಯ ಆತ್ಮೀಯವಾದುದು. ಕಣ್ಣಪ್ಪನು ಶಿವನನ್ನು ಎನ್ನವನೇ, ಎನ್ನವನೇ ಎಂದು ಕರೆಯುವಲ್ಲಿ ಸ್ನೇಹದ ಮುಗ್ಧತೆ ಗೋಚರಿಸುತ್ತದೆ. ಶಿವನೊಂದಿಗೆ ಪಡೆದ ಆತ್ಮೀಯತೆಯು ಶಿವನನ್ನೇ ಮೆಚ್ಚಿಸುತ್ತಿದೆ. ಬೆರಿಕೆಯಿಲ್ಲದ ಆಡಂಬರ ರಹಿತ ಪೂಜೆಗೆ ದೇವನೊಲಿದು ಸತ್ಯದ ಪೂಜೆಯೆಂದು ಸಂತೋಷಿಸುತ್ತಾನೆ. ಕಣ್ಣಪ್ಪನಿಗೆ ಧರ್ಮಕ್ಕಿಂತ ತನ್ನ ಭಕ್ತಿಯ ನಿವೇದನೆ ದೊಡ್ಡದಾಗಿತ್ತು. ಶಿವನನ್ನು ಒಲಿಸಿಕೊಂಡ ಕಣ್ಣಪ್ಪನ ಬಹಿರಂಗ ಶುದ್ಧಿಗಿಂತ ಅವನ ಅಂತರಂಗದ ಕೃಷಿಯೇ ಮುಖ್ಯವೆನಿಸಿದೆ. ದೇವನಿಗೆ ರಾತ್ರಿ ಚಳಿಯಾಗಬಾರದೆಂದು ದೇವಾಲಯದ ಸುತ್ತ ಬೆಂಕಿಹಾಕುವ ಕಾರ್ಯವಾಗಲಿ, ತಾನು ಹೋಗುವುದು ತಡವಾಯಿತೆಂದು ತವಕ ಪಡುವುದಾಗಲಿ ಮತ್ತು ತಾಯಿ ಮಮತೆಯಂತೆ ಊಟ ಮಾಡಿಸುವ ಗುಣ ಶಿವನಿಗೆ ಮೆಚ್ಚಿಗೆಯಾಗುತ್ತದೆ. ಶಿವ ಮತ್ತು ಭಕ್ತರ ಈ ಸ್ನೇಹದಲ್ಲಿ ಅಂಜು-ಅಳುಕು, ಕಪಟ, ಮುಜುಗರ, ಮುನಿಸು, ಅಂಜಿಕೆಯಾಗಲಿ ಯಾವುದೂ ಇಲ್ಲ. ಶಿವಲಿಂಗವನ್ನು ತನ್ನಂತೆಯೇ ಅದಕ್ಕೂ ಹಸಿವು, ನಿದ್ರೆ, ಬಾಯರಿಕೆ ಇತ್ಯಾದಿ ಇದೆ ಎಂದು ತಿಳಿದು ಅವಕ್ಕೆ ಉಪಚರಿಸುವ ರೀತಿಯೂ ಬಹಳ ಆತ್ಮೀಯತೆಯಿಂದ ಕೂಡಿದೆ ಆದ್ದರಿಂದ ಕಣ್ಣಪ್ಪನ ಮುಗ್ಧ ಭಕ್ತಿಗೆ ಶಿವನು ಸೋತು ಒಲಿದಿದ್ದಾನೆ.

### ೪. <u>ಮಾನಕಂಜರ ರಗಳೆ :-</u>

ಚೋಳನಾಡಿನಲ್ಲಿ ಕಂಜಾರೆಂಬ ಹೆಸರಿನ ಪಟ್ಟಣ ಶಿವಭಕ್ತರಿಗೆ ನೆಲೆಬೀಡಾಗಿದ್ದ ಶಿವಪುರ, ಅಲ್ಲಿ ಮಾನಕಂಜರನೆಂಬ ಶಿವಭಕ್ತನು "ಸತ್ಯವನ್ನೇ ತನ್ನ ತಾಯಿ, ಸುಜ್ಞಾನವೇ ತನ್ನ ತಂದೆ, ದಯೆಯೇ ನಿತ್ಯಸುಖಿ, ಧರ್ಮವನ್ನೇ ಒಡಹುಟ್ಟಿದವರು" ಎಂದು ನಂಬಿ ನಿತ್ಯ

ನೇಮವನ್ನಾಗಿ ಈ ಮೌಲ್ಯಗಳನ್ನೆಲ್ಲ ತನ್ನ ಬಂಧುಗಳೆಂದು, ತನ್ನ ಸಂಪತ್ತನೆಲ್ಲಾ ಶಿವಭಕ್ತರಿಗೇ ಮೀಸಲು ಮಾಡಿದ್ದನು. ಮಾನಕಂಜರ ದಂಪತಿಗಳಿಗೆ ಮಕ್ಕಳಿಲ್ಲವೆಂಬ ಕೊರಗಿತ್ತು ಆದ್ದರಿಂದ ದಂಪತಿ ಶಿವನ ಮೊರೆ ಹೊಕ್ಕರು. ಆಗ ಅವನ ಹೆಂಡತಿಯು ಗಂಡುಮಗುವನ್ನು ಬೇಡಿದರೆ, ತನ್ನ ಭಕ್ತಿ ಬೇಡುವುದಕ್ಕಲ್ಲ ಎಂದು ಹೆಣ್ಣು ಮಗುವನ್ನು ಬೇಡಿದನು. ಅದರ ಪ್ರತಿಫಲ ಅವನಿಗೆ ಹೆಣ್ಣು ಮಗು ಜನಿಸಿತು. ತಿರುಮುಡಿಯೊಡೆಯಳು ಎಂದು ಹೆಸರಿಟ್ಟನು. ರೂಪ ಸದೃಶ್ಯವಾಗಿ ಬೆಳೆದ ಅವಳಿಗೆ ಪ್ರಾಪ್ತ ವಯಸ್ಸಿಗೆ ಚೋಳರಾಜನ ಮಗನೊಂದಿಗೆ ಮದುವೆ ನಿಶ್ಚಯವಾಗುತ್ತದೆ ಅತ್ಯಂತ ವಿಜೃಂಭಣೆಯಿಂದ ಮದುವೆ ನೆರವೇರುತ್ತಿರುವ ಸಭಾಮಂಟಪಕ್ಕೆ ಆಗಮಿಸಿದ ವೇಷಾಕಿಂತ ಶಿವನನ್ನು ಮಾನಕಂಕರನು ಆದರಾತಿಥ್ಯದಿಂದ ಸತ್ಕರಿಸಿ ಮನಸ್ಸಿನ ಇಚ್ಛೆಯನ್ನು ಕೇಳಬೇಕೆಂದು ವಿನಂತಿಸಿದನು. ಆಗ ಸ್ವಲ್ಪ ಮುಜುಗರದಿಂದಲೇ ತನ್ನ ಕಟ್ಟಿಗೆಯ ಪಾದುಕೆಗಳು ಕಾಲ್ಬೆರಳುಗಳಿಗೆ ತುಂಬ ನೋವು ಉಂಟುಮಾಡುತ್ತಿದ್ದು, ಅದರ ನಿವಾರಣೆಗಾಗಿ ನಿಮ್ಮ ಮಗಳ ಮೃದುವಾದ ಮುಡಿಗೂದಲನ್ನು ನೀಡಬೇಕೆಂದು ಕೇಳಿದನು, ಈ ಬೇಡಿಕೆಯನ್ನು ಸಂತೋಷದಿಂದಲೇ ಒಪ್ಪಿ ಮದುವೆ ಮಂಟಪದಿಂದ ಅಲಂಕೃತಗೊಂಡಿದ್ದ ಮಗಳ ತಲೆಗೂದಲನ್ನು ಹಿಡಿದು ಕತ್ತರಿಸಿ ನೀಡಿದನು. ಶಿವಭಕ್ತಿಯ ಪರಿಪಾಲನೆಯ ಮುಂದೆ ವೈಯಕ್ತಿಕ ಹಿತಾಸಕ್ತಿಗಳು ಗೌಣವೆನಿಸುತ್ತದೆ. ಭಕ್ತನು ಲೋಕಾಪವಾದಕ್ಕೆ ಗುರಿಯಾದರೂ ಲೆಕ್ಕಿಸದ ಭಕ್ತ ಶಿವಭಕ್ತಿಯನ್ನು ಮಾತ್ರ ಮೆರೆಯುತ್ತಾನೆ.

ಇಲ್ಲಿ ಮಗಳ ಮುಡಿಯನ್ನು ಕೊಯ್ದು ಭಕ್ತಿ ತೋರಿದ ಮಾನಕಂಜರನು ಶಿವಭಕ್ತರಿಗೆ ದಾನ ಮಾಡುವ ಒಲವಿರುವವನು. ಅದರ ಮುಂದೆ ಅವನಿಗೆ ಮತ್ತಾವುದು ದೊಡ್ಡದಲ್ಲ ಎಂದು ಸಾಭೀತು ಪಡಿಸಿದನು. ಆಸೆ- ವ್ಯಾಮೋಹ, ಕೌಟುಂಬಿಕ ಪ್ರೀತಿಗಿಂತಲೂ ಶಿವಭಕ್ತಿ, ಶಿವಭಕ್ತರ ಸೇವೆಯೇ ಮಹತ್ತರವಾದುದು ಎಂದು ಮಾನಕಂಜರನ ಮೂಲಕ ಸರ್ವರ ಹೃದಯದಲ್ಲೂ ಇಂತಹ ಶಿವಭಕ್ತಿ ಹುಟ್ಟಬೇಕು ಎಂದು ಹರಿಹರನು ಸಾರಿದನು. ಸಾಮಾನ್ಯವಾಗಿ ಹೆಣ್ಣುಮಕ್ಕಳ ತಲೆಗೂದಲನ್ನು ಕತ್ತರಿಸುವುದು ಅಮಂಗಳ ಎಂದು ಭಾವಿಸುವುದು ಪೂರ್ವಕಾಲದಿಂದಲೂ ಬೆಳೆದು ಬಂದಿರುವ ನಂಬಿಕೆ, ಅಂತಹುದರಲ್ಲಿ ಮಗಳ ಮದುವೆಯ ದಿನದಂದು ಯಾವ ತಂದೆಯೂ ಈ ರೀತಿಯ ಅಮಂಗಳ ಕಾರ್ಯಕ್ಕೆ ಕೈಹಾಕುವುದಿಲ್ಲ. ಆದರೆ ಇಲ್ಲಿ ಮಾನಕಂಜರನು ತನ್ನ ಮಗಳ ಮುಡಿಯನ್ನು ಕತ್ತರಿಸಿ ಕೊಡುವುದು ಸೋಜಿಗವೆನಿಸಿದರೂ ಶಿವನ ಮೇಲೆ ಆತ ಇಟ್ಟಿರುವ ಸ್ನೇಹ – ಆತ್ಮೀಯ ನಂಟು ಎಂತಹ ಕಾರ್ಯವನ್ನಾದರೂ ಮಾಡಿಸುತ್ತದೆ ಎಂಬ ಅಂಶ ವ್ಯಕ್ತವಾಗುತ್ತದೆ.

## ೫. ರುದ್ರ ಪಶುಪತಿಗಳ ರಗಳೆ :-

ಚೋಳ ದೇಶದ ಶಿವಪುರದಲ್ಲಿ 'ರುದ್ರ ಪ್ರಭು' ಎಂಬ ಶಿವಭಕ್ತನಿದ್ದ, ಆತನ ಹೆಂಡತಿ ಶುಚಿ. ಇವರಿಗೆ ಶಿವನ ಭಕ್ತಿಯನ್ನು ರೂಪುತಾಳುವಂತಹ ರುದ್ರಪಶುಪತಿಯೆಂಬ ಮಗನು ಹುಟ್ಟುತ್ತಾನೆ. ಹುಟ್ಟುತ್ತಲೇ ಇವನ "ಭಕ್ತಿಯ ಒಲಿಸುವಂ, ನಿಷ್ಠೆಯ ಬಲಿಸುವಂ, ಧರೆಗೆ ಈಶನ ಭಕ್ತಿ ಬಟ್ಟೆಯಂ ಕಲಿಸುವಂ" ಎಂದು ಭವಿಷ್ಯ ಹೇಳುತ್ತಾರೆ. ಬಾಲ್ಯದಿಂದಲೂ ಹರಭಕ್ತಿಯನ್ನು ಬೆಳೆಸಿಕೊಂಡು ಹದಿನಾರರ ಹರಯಕ್ಕೆ ಕಾಲಿಡುತ್ತಾನೆ. ಮುಗ್ಧನಾಗಿದ್ದ ಇವನು ಶಿವಲಿಂಗದೊಡನೆ ಆತ್ಮೀಯ ಸಂಬಂಧವನ್ನು ಇಟ್ಟುಕೊಂಡಿದ್ದನು. ರುದ್ರಪಶುಪತಿಗೆ ಶಿವನೇ ಸರ್ವಸ್ವ ಎಂಬಂತೆ ನಿತ್ಯ ಶಿವಾನಂದದಲ್ಲಿಯೇ ಮುಳುಗಿರುತ್ತಿದ್ದ. ಒಮ್ಮೆ ಶಿವಪುರಾಣ ಕೇಳಲು ನೆರೆದ ಸಭೆಯನ್ನು ಕಂಡು ತಾನೂ ಅಲ್ಲಿ ಕುಳಿತು ಕೇಳತೊಡಗಿದನು. ಅಂದಿನ ಪುರಾಣದಲ್ಲಿ ಸಮುದ್ರ ಮಥನದಿಂದ ಹುಟ್ಟಿದ ಹಾಲಾಹಲವನ್ನು ಶಿವನು ಕುಡಿದನೆಂದೂ ಅದು ಇನ್ನೂ ಶಿವನ ಕಂಠದಲ್ಲಿದೆಯೆಂದೂ ಹೇಳಿದ್ದನ್ನು ಕೇಳಿ ಮುಗ್ಧನಾದ ರುದ್ರಪಶುಪತಿಯು ಆಶ್ಚರ್ಯಚಕಿತನಾದ, ವಿಷವನ್ನು ಕುಡಿದ ಶಿವನು ಇನ್ನು ಉಳಿಯಲಾರನೆಂದು ಬಗೆದು ಪ್ರಲಾಪಿಸಹತ್ತಿದ, ಮರುಗಿದ. ಶಶಿಧರನನ್ನು ಕಾಪಾಡುವವರಾರು? ಹರಿಬ್ರಹ್ಮರು ಮೊದಲೇ ಈ ಕುರಿತು ವಿಚಾರಿಸಲಿಲ್ಲವೆ? ಪಾಪಿಗಳು ಸುಮ್ಮನಿರುವರೆ? ಮಹಾದೇವಿ ಹೇಗೆ ಸಹಿಸಿದ್ದಾಳೆ? ಶಿವನನ್ನು ಯಾರೂ ಉಳಿಸಿಲಿಲ್ಲವೇ? ಎಂದು ಚಿಂತಿಸಿ ನಾನೇ ಅವನನ್ನು ಕಾಪಾಡಬೇಕೆಂದು ಪಣತೊಟ್ಟು ಸಮುದ್ರ ದಡಕ್ಕೆ ಬಂದು ಕಂಠ ಪ್ರಮಾಣ ನೀರಿನಲ್ಲಿ ಮುಳುಗಿ ಮಂತ್ರ ಪಠಿಸುತ್ತಾ ನಿಲ್ಲುತ್ತಾನೆ. ಅವನ ಮನಸ್ಸನ್ನು ಕವಿಯು ಹೃದಯಂಗಮವಾಗಿ ಬಣ್ಣಿಸಿದ್ದಾನೆ. ಅಗ್ನಿಗೆ ಜ್ವರ ಬಂದುದೆಂದು, ನೀರಿಗೆ ಚಳಿ ಬಂದುದೆಂದು, ಗಾಳಿಗೆ ಉರಿ ಹತ್ತಿತ್ತೆಂದು, ಇಂತಹ ಮುಗ್ಧ ಶಿವಭಕ್ತ ರುದ್ರ ಪಶುಪತಿಯಂತವರು ಮಾತ್ರ ನಂಬಬಹುದು. ಇದೊಂದು ಅನುಪಮವಾದ ಮುಗ್ಧ ನಿಷ್ಠೆಯ ಭಕ್ತಿ, ನೀರಿನಲ್ಲಿ ಪಂಚಾಕ್ಷರಿ ಮಂತ್ರ ಜಪಿಸುತ್ತಾ ನಿಂತ ಇವನು ಜಲಚರಗಳಿಗೆ ಬಲಿಯಾದರೂ ಎಲುಬಿನ ಅಸ್ತಿಗಳೇ ಉಳಿದು ಆಯುಷ್ಯ ತೀರಿಹೋದರೂ ಭಕ್ತನಿಷ್ಠೆ ತೀರದೆ ಶಿವನ ಪರಮ ಸ್ನೇಹವನ್ನು ಅಗಲಿರಲಾರದೆ ಧ್ಯಾನಾಸಕ್ತನಾದನು. ಈ ಮುಗ್ಧ ಶಿವಭಕ್ತಿಯನ್ನು ಪರೀಕ್ಷಿಸಲೆಂದು ಅಲ್ಲಿಗೆ ವೇಷಧಾರಿ ಶಿವನು ಬಂದು ಶಿವನಿಂದೆಯನ್ನು ಮಾಡುತ್ತಾನೆ. ಅದರಿಂದ ಕೋಪಗೊಂಡ ರುದ್ರಪಶುಪತಿ ಎಲೆಲೆ ಶಿವನಿಂದಕನೆ ಅಡಗಡಗೆಂದು ಹೀಗಳೆಯುತ್ತಾನೆ. ಭಕ್ತನ ಆ ಅಚಲ ಭಕ್ತಿ ನಿಷ್ಠೆಗೆ ಮೆಚ್ಚಿ ಶಿವ ತನ್ನ ನಿಜರೂಪವನ್ನು ತೋರಿಸುತ್ತಾನೆ.

ಶಿವನನ್ನು ಕಂಡ ಪಶುಪತಿಗೆ ಆನಂದವಾಗುತ್ತದೆ. ಕೂಡಲೇ ಅವನ ಕೊರಳಲ್ಲಿ ವಿಷವಿರುವುದೇ ಎಂದು ಪರೀಕ್ಷಿಸಿ, ಇಲ್ಲದ್ದನ್ನು ಕಂಡು ಸಂತೋಷ ಹೊಂದುತ್ತಾನೆ. ಶಿವನು ಆಪತ್ತಿನಿಂದ ಉಳಿದನಲ್ಲಾ ಎಂದು ಸಮಾಧಾನ ಪಡುತ್ತಾನೆ. ಮನುಷ್ಯನ ಆಯುಷ್ಯ ತೀರಿದರೂ ಆತನ ಭಕ್ತಿ-ನಿಷ್ಠೆ ಎಂದಿಗೂ ತೀರದು. ಮನುಷ್ಯ ಜೀವನಕ್ಕೆ ಭಕ್ತಿ ತಳಪಾಯವಾಗಿದ್ದರೆ ಜೀವನದ ದರ್ಶನ ಹಸನಾಗುವುದು ಎಂಬುದು ಇಲ್ಲಿ ಗೋಚರವಾಗುತ್ತದೆ.

ಇಲ್ಲಿ ರುದ್ರ ಪಶುಪತಿಗೆ ಶಿವನ ಜೀವವೇ ಮುಖ್ಯ ನನ್ನ ಶಿವನು ವಿಷ ಕುಡಿದಿದ್ದಾನೆ ಎಂದು ಪುರಾಣದ ಕಥೆಯ ಮೂಲಕ ತಿಳಿದ ಇವನು ಶಿವನನ್ನು ಉಳಿಸಲೇಬೇಕು ಎಂದು ಪಣತೊಟ್ಟು ಛಲದಿಂದ ಬಿಡದೆ ಸಮುದ್ರದಲ್ಲಿ ನಿಂತು ಏಕಾಗ್ರತೆಯಿಂದ ಧ್ಯಾನಾಸಕ್ತನಾಗುತ್ತಾನೆ. ತನ್ನ ಆಯಸ್ಸು ಕಳೆದು ಹೋದರೂ ಶಿವಭಕ್ತಿಯ ನಿಷ್ಠೆ ತೀರಬಾರದು ದೇಹನಾಶವೊಂದಿದರೂ ಶಿವನ ಮೇಲಿಟ್ಟಿರುವ ಸ್ನೇಹ ತೀರಬಾರದು ಎಂಬ ಸಾರ ರುದ್ರಪಶುಪತಿಯ ರಗಳೆಯಲ್ಲಿದೆ. ತನ್ನ ದೇಹ ಆಯುಷ್ಯ ಅಡಗಿದರೂ ಅವನ ಅಸ್ಥಿಗಳೇ ಶಿವಧ್ಯಾನದಲ್ಲಿ ತೊಡಗುವ ಇಂತಹ ಶಿವಭಕ್ತರಿಗೆ ಶಿವನಲ್ಲದೆ ಬೇರೆ ಏನೂ ಬೇಕಿಲ್ಲ. ಶಿವನಲ್ಲಿ ಇನ್ನೂ ವಿಷವಿದೆಯೇ ಎಂದು ತಿಳಿಯಲು, ಶಿವನ ಕೊರಳನ್ನು ಮೂಸಿ ನೋಡಿ, ನಾಲಿಗೆಯನ್ನು ಚೀಪಿ ನೋಡುತ್ತಾನೆ. ಶಿವನ ಕಂಠದಲ್ಲಿ ವಿಷವಿಲ್ಲವೆಂದು ತಿಳಿದಾಗ ಆನಂದ ಪುಳಕಿತನಾಗುವ ಅವನ ಹಾವಾಭಾವದಲ್ಲಿ ಮುಗ್ಧತೆ, ಶಿವನ ಮೇಲೆ ಇಟ್ಟಿರುವ ಅಗಾಧ ಸ್ನೇಹ ಪೂರ್ವಕ ಸಂಬಂಧ ತಿಳಿಯುತ್ತದೆ. ತಾಯಿಯು ತನ್ನ ಮಗು ಏನಾದರೂ ಕಸಕಡ್ಡಿ ತಿಂದಿದೆಯೇ ಎಂದು ಪರೀಕ್ಷಿಸಿ ಇನ್ನು ಮುಂದೆ ಹಾಗೆಲ್ಲಾ ತಿನ್ನಬಾರದು ಎಂದು ಗದರಿಸುವ ರೀತಿಯಲ್ಲಿ ಆ ವಾತ್ಸಲ್ಯ ಮತ್ತು ಆತ್ಮೀಯತೆ ಇವರಲ್ಲಿ ಮೂಡಿದೆ. ಇಂತಹ ಹುಚ್ಚುಕಾರ್ಯ ಇನ್ನೆಂದೂ ಮಾಡಬಾರದೆಂದು, ಅದಕ್ಕೆ ನಾನೆಂದೂ ಅವಕಾಶ ನೀಡುವುದಿಲ್ಲವೆಂದು ಮತ್ತು ನಿನ್ನನ್ನು ಜೋಪಾನವಾಗಿ ಕಾಯುತ್ತೇನೆಂದು ಹೇಳುವ ಆ ಶಿವಭಕ್ತ ಶಿವನ ಮೇಲಿಟ್ಟಿರುವ ದೃಢವಾದ ಶಿವಭಕ್ತಿ ಅಮೋಘವಾದುದು. ಮಮತೆ ಆತ್ಮೀಯತೆಯಿಂದ ಕೂಡಿರುವ ಶಿವ ಭಕ್ತರ ಸಂಬಂಧ ಅಮೂಲ್ಯವಾದುದು.

## ೭. <u>ಅರಿವಾಳ್ತಾಂಡರ ರಗಳೆ :-</u>

ಚೋಳ ದೇಶದ ಕಣ್ಣಮಂಗಲ ಎಂಬ ಶಿವಪುರದಲ್ಲಿ ಅರಿವಾಳ್ತಾಂಡರ ಎಂಬ ಹೆಸರಿನ ಶಿವಭಕ್ತನಿದ್ದನು, ಭತ್ತ ಕೊಯ್ಯುವ ಬಡ ಕೂಲಿಯವನಾದ ಈತ ಶಂಭುವಿಗೆ

ಪ್ರಸಾದವನರ್ಪಿಸಿ ಊಟ ಮಾಡುವ ನೇಮವನ್ನು ಇಟ್ಟುಕೊಂಡಿದ್ದನು. ಸುಳ್ಳು ಮೋಸ ಕಪಟವರಿಯದ ಇವನು ಸತ್ಯವಂತನಾಗಿದ್ದು ಲಾಭದ ಆಸೆಗೆ ಎಂದೂ ಬಾಯಿಬಿಟ್ಟವನಲ್ಲ. ಇವನು ಶಿವನನ್ನು ತನ್ನ ಬಂಧುವೆಂದು ಭಾವಿಸಿ. ಕೂಲಿಯಿಂದ ಬಂದ ಅಕ್ಕಿಯಿಂದ ಕೀರೇ ಸೊಪ್ಪಿನೊಂದಿಗೆ ನೈವೇದ್ಯ ಮಾಡಿ ತಿರುವಾರೂರು ದೇವರಿಗೆ ಅರ್ಪಿಸಿ, ತನ್ನ ಆಯುಷ್ಯ ನೀನೇ ಪಡೆದುಕೊಂಡು ಬದುಕು ಎಂದು ಹಾರೈಸಿ ಬಂದು ಸತಿಯೊಡನೆ ಕುಳಿತು ಲಿಂಗಪ್ರಸಾದ ಉಣ್ಣುತ್ತಿದ್ದನು.

ಅರಿವಾಳ್ತಾಂಡರನು ಎಲ್ಲಿಗೆ ಕೂಲಿಗೆಂದು ಹೋದರೂ ಅಲ್ಲಿರುವವರನ್ನೆಲ್ಲಾ ಪ್ರೀತಿಯಿಂದ ನುಡಿಯಾಡಿ ಶಿವನೆಂದೇ ಭಾವಿಸುತ್ತಿದ್ದನು. ಇವನ ಕಾರಣದಿಂದ ಕಡಿಮೆಯಾಗಿದ್ದ ಇಳುವರಿಯೂ ಹೆಚ್ಚಾಗುತ್ತಿತ್ತು. ಶಿವಭಕ್ತರೆಂದರೆ ಅವನಿಗೆ ಪಂಚಪ್ರಾಣ. ಅವರಿಗೆ ಮೊದಲು ಉಪಚರಿಸಿ ಭಕ್ತಿ-ಭಾವದಿಂದ ನಮಸ್ಕರಿಸುತ್ತಿದ್ದನು. ಹೀಗೆ ಹಲವು ವರ್ಷಗಳೂ ಕಳೆದ ಮೇಲೆ ಅವನಿಗೆ ಕೂಲಿ ದೊರೆಯದೆ ನಿತ್ಯ ಉಪವಾಸವಾಗಿ ಹೋಯಿತು. ಈ ಮಧ್ಯೆಯೂ ಎದೆಗುಂದದೆ, ಉಪವಾಸವಿದ್ದರೂ ಶಂಭುವನ್ನು ನೆನೆದು ಹಾರೈಸುತ್ತಾ ಕಾಲ ಕಳೆದನು. ಒಮ್ಮೆ ಸಿಕ್ಕ ಕೂಲಿಯಿಂದ ನೈವೇದ್ಯ ಮಾಡಿಕೊಂಡು ಬಂದು ಶಿವನ ಆರೋಗಣೆಗೆಂದು ಬರುತ್ತಿರುವಾಗ ಶಿವನು ಇವನ ಭಕ್ತಿಯನ್ನು ಮನಸ್ಸಾರೆ ಮೆಚ್ಚಿದರೆ, ಪಾರ್ವತಿಯು ಈ ಸಣ್ಣ ಬಡಕಲು ದೇಹದ ಕೂಲಿಯವನು ನಿನ್ನ ಭಕ್ತನಾ! ಎಂದು ಕೊಂಕು ನುಡಿಯನ್ನಾಡಿದಳು. ಶಿವನ ಪರೀಕ್ಷೆಗೆ ಒಳಗಾದ ಆಕ್ಷಣದಲ್ಲಿ ಆ ಭಕ್ತನು ಎಡವಿಬಿದ್ದು ಅವನ ಕೈಯಲ್ಲಿದ್ದ ನೈವೇದ್ಯ ಮಣ್ಣು ಪಾಲಾಯಿತು. ತನ್ನ ಬಂಧು ಶಿವನು ಸೇವಿಸಬೇಕಾಗಿದ್ದ ಆಹಾರ ಮಣ್ಣು ಪಾಲಾಯಿತೆಂದು ಕಡುನೊಂದು ಇನ್ನು ನನ್ನ ಶಿರವನ್ನೇ ಪ್ರಸಾದವನ್ನಾಗಿ ಅರ್ಪಿಸುವೆ ಎಂದು ಕುತ್ತಿಗೆಯನ್ನು ಕೊಯ್ದುಕೊಂಡ ಶಿರ-ದೇಹ ಭಾಗವಾಗಿ ಹೋಗಲು ಪಾರ್ವತಿಯು ಅದನ್ನು ಕಂಡು ಚೀರಿದಳು. ಶಿವನು ಆ ಭಕ್ತನನ್ನು ಕಂಡು ಹರ್ಷಗೊಂಡು ದೇಹದೊಂದಿಗೆ ಶಿರವನ್ನು ಕೂಡುವಂತೆ ಮಾಡಿದನು. ಶಿವ ಪಾರ್ವತಿಯನ್ನು ನೋಡಿ ಸಂತೋಷಗೊಂಡ ಆ ಭಕ್ತನು ಶಂಭುವನ್ನು ಆಪ್ತನಂತ, ಬಂಧುತ್ವ ಹೊಂದಿರುವ ಮಿತ್ರನೆಂದು ಬಿಗಿದಪ್ಪಿದನು. ಅವನ ಗುಪ್ತಭಕ್ತಿ ಲೋಕ ಪ್ರಕಟವಾಗಿ ಗಣಪದವಿ ಪ್ರಾಪ್ತವಾಯಿತು. ಅವನ ಕೈಯ್ಯಾರೆ ಶಿವನಿಗೆ ಊಟ ಮಾಡಿಸಿದನು. ತಾಯಿಯು ಮಗುವಿಗೆ ಊಟ ಮಾಡಿಸುವಂತೆ ಉಣ್ಣಿಸಿದ ಆ ನಿಜ ಭಕ್ತನ ಶಿವನೊಂದಿಗಿನ ವಾತ್ಸಲ್ಯ ಭಕ್ತಿ ಚಿರವಾದುದು.

ಶಿವನಿಗಿಂತ ಅನ್ಯ ಬಂಧುವಿಲ್ಲ ಎಂದು ನೆಚ್ಚಿ ನಂಬಿ ಸತ್ಯ ಶುದ್ಧಿ ನಡೆನುಡಿಯಿಂದ ಬದುಕಿನ ತನ್ನ ನೇಮವನ್ನು ಇವನು ಬಹುನಿಷ್ಠೆಯಿಂದ ಪಾಲಿಸುತ್ತಿದ್ದನು. ಶಿವನಿಗೆ ಪ್ರಸಾದದ ರೂಪದಲ್ಲಿ ತನ್ನ ಶಿರವನ್ನು ಅರ್ಪಿಸಿದನೆಂಬುದು ಸೋಜಿಗವೆನಿಸಿದರೂ ಪ್ರಾಣಕ್ಕಿಂತ ಶಿವಭಕ್ತಿ ಮುಖ್ಯ ಎಂದು ನಂಬಿದ್ದ ಅವನ ಆದರ್ಶ ಸಮಾಜಕ್ಕೆ ನೀತಿ ಪಾಠವಾಗುತ್ತದೆ.

## ೭. ಕಡವೂರ ಕಾರಿಯರ ರಗಳೆ :-

ಕಟಪುರ ಎಂಬ ಊರಿನಲ್ಲಿ ಕಡವೂರಕಾರಿಯೆಂಬ ಕಲಿಭಕ್ತನು ಘನವಿದ್ವಾಂಸನಿಗೆ ಸಕಲರಿಗೂ ಸದ್ಬೋದೆ ಮಾಡಿ ಬಂದ ಹಣದಿಂದ ಶಿವಾಲಯ ನಿರ್ಮಿಸಿ ನವರಸಗಳಲ್ಲಿ ಶೈವಾಗಮ, ಶಿವಲೀಲೆ ಪುರಾಣಗಳನ್ನು ಹೇಳಿ ಎಲ್ಲರಿಗೂ ಸದ್ಬೋಧೆ ಮಾಡುತ್ತಿದ್ದನು. ಶಿವಗೋಷ್ಠಿಯಲ್ಲಿ ಬೋಧನೆ ಮಾಡಿ ಎಲ್ಲರನ್ನು ಹಾಸ್ಯ ಚಟಾಕಿಯಿಂದ ನಗಿಸುವುದೇ ಅವನ ನೇಮವಾಗಿತ್ತು. ಹೀಗೆ ವರ್ಷಗಳು ನಡೆದಿರಬೇಕಾದರೆ, ಶಿವನು ಒಮ್ಮೆ ಪರೀಕ್ಷಿಸಲೋಸುಗ ಪಾರ್ವತಿ ಸಮೇತ ಆ ಸ್ಥಳಕ್ಕೆ ಧಾವಿಸಿದಾಗ ಇವರನ್ನು ಕಂಡು ನಗೆಯಾಡಿಸಲು ಹತ್ತಿರ ಬಂದು ಸನ್ಯಾಸಿಯ ಹಿಂದಿದ್ದ ಸ್ತ್ರೀಯನ್ನು ನೋಡಿ ಇಷ್ಟು ದಪ್ಪಗಿರುವ ಇವರು ನಿಮ್ಮ ತಾಯಿಯಲ್ಲವೆ ಎಂದಾಕ್ಷಣ ನಗಬಾರದೆಂದು ತೀರ್ಮಾನಿಸಿ ಪರೀಕ್ಷಿಸಲು ಬಂದಿದ್ದ ಶಿವನಿಗೆ ಹೆಂಡತಿಯನ್ನು ತಾಯಿ ಎಂದು ಕರೆದಿದ್ದಕ್ಕೆ ನಕ್ಕುಬಿಟ್ಟನು. ಶಿವನು ನಿಜರೂಪ ತೋರಿಸಿ ಕೈಲಾಸಕ್ಕೆ ಕರೆದೊಯ್ದು ಗಣಪದವಿ ನೀಡಿ ಹರಿಸಿದನು. ನಗಿಸುವುದು ಪರಧರ್ಮ ಎಂದು ನಂಬಿದ್ದ ಕಡವೂರಕಾರಿಯರ ಎಲ್ಲರಿಗೂ ಬೋಧನೆ ಮಾಡಿ ನಗಿಸುವ ಮೂಲಕ ಆರೋಗ್ಯ ಚೇತೋಹಾರಿಗೊಳಿಸುವ ಕಾಯಕದವನು. ವಿಶೇಷತೆ ಏನೂ ಇಲ್ಲದ ಈ ಕಥೆಯು ನೀರಸವಾದುದು. ಆದರೆ ಈ ಶಿವಾಲಯಗಳನ್ನು ನಿರ್ಮಿಸಿದ ಇವನ ಭಕ್ತಿ ಗಮನಾರ್ಹ ಶಿವನಲ್ಲಿ ಆತ್ಮೀಯತೆಯನ್ನು ಹೊಂದಿ ಆ ಮೂಲಕ ಶಿವಸಾಕ್ಷಾತ್ಕಾರ ಮಾಡಿದ ಭಕ್ತನೀತ.

## ೮. ಗುಂಡಯ್ಯನ ರಗಳೆ :-

ಉತ್ತರ ದಿಶಾಭಾಗದಲ್ಲಿ ಬಲ್ಲುಕೆಪುರ ಎಂಬ ಊರಿನಲ್ಲಿ ಮಡಕೆಗಳನ್ನು ಮಾಡುವ ಕುಂಬಾರ ಗುಂಡಯ್ಯ ಎಂಬ ಹೆಸರಿನ ಶಿವಭಕ್ತನಿದ್ದನು. ತನ್ನ ಮಡಕೆ ಮಾಡುವ ವೃತ್ತಿಯನ್ನು ಆಧ್ಯಾತ್ಮಿಕ ಸಾಧನೆಗೆ ಬಳಸಿಕೊಂಡಿದ್ದನು. ಶರೀರವನ್ನೇ ಮತ್ತಿಕೆಯನ್ನಾಗಿ ಮಾಡಿ, ನಿಷ್ಠೆಯೆಂಬ ದಂಡದಿಂದ ಚಕ್ರವನ್ನು ತಿರುಗಿಸಿ ಮಡಿಕೆಯನ್ನು ಮಾಡುತ್ತಿದ್ದನು. ಶಿವಾಲಯಕ್ಕೆ ಹೋಗಿ ಪೂಜೆ-

ಧ್ಯಾನಾದಿಗಳನ್ನು ಮಾಡಿ ಮನೆಗೆ ಬಂದರೂ ಹಗಲು-ರಾತ್ರಿಯೆನ್ನದೆ ಘಟನಾದ ಮಾಡುತ್ತಾ ಶಿವಧ್ಯಾನದಲ್ಲಿ ಮೈಮರೆಯುತ್ತಾ ಶಿವನ ಚಿತ್ತವನ್ನು ತನ್ನತ್ತಲೇ ಸೆಳೆದುಕೊಳ್ಳುತ್ತಿದ್ದ. ಅಲ್ಲಿ ಕೈಲಾಸದಲ್ಲಿನ ಶಿವನು ಇವನ ನಾದಕ್ಕೆ ಕೈಕಾಲು ಕತ್ತುಗಳನ್ನು ಆಡಿಸುತ್ತಾ ನರ್ತನಗೈಯ್ಯುತ್ತಿದ್ದುದ್ದನ್ನು ಗಮನಿಸಿದ ಪಾರ್ವತಿಯು ಪ್ರಶ್ನೆಮಾಡುತ್ತಾಳೆ. ಆಗ ತಾನು ನಾದಮಯ ಭಕ್ತಹೃದಯದಲ್ಲಿ ಇದ್ದುದ್ದನ್ನು ತಿಳಿಸುವನು. ಅವನ ಭಕ್ತಿಯನ್ನು ಮೆಚ್ಚಿ ಪಾರ್ವತಿ ಸಮೇತ ಅವನಿರುವೆಡೆಗೆ ಹೋದಾಗ ಘಟನಾದ ದೃಶ್ಯದೊಂದಿಗೆ ಶಿವಧ್ಯಾನ ತಲ್ಲೀನನಾಗಿದ್ದ ಗುಂಡಯ್ಯನ ನಾದಮಯ ಭಕ್ತಿಗೆ ತಲೆದೂಗಿದನು. ಹೀಗೆ ಶಿವನ ಮನಸ್ಸು ಗೆದ್ದ ಗುಂಡಯ್ಯನ ಆಧ್ಯಾತ್ಮಿಕ ಭಕ್ತಿ ಕೈಲಾಸ ಗಣಪದವಿ ಪ್ರಾಪ್ತವಾಯಿತು. ಇಲ್ಲಿ ಒಬ್ಬ ಭಕ್ತನೆ ದೈವಭಾವದಿಂದ ಶಿವನನ್ನು ಕುಣಿಸಿ, ಜಗತ್ತಿನ ಚರಾಚರ ವಸ್ತುಗಳೇ ಕುಣಿಯುವಂತೆ ಮಾಡಿದ ಭಕ್ತಿ ನಿಷ್ಠೆ ಸೋಜಿಗವೆನಿಸಿದರೂ ಅನುರೂಪವಾದುದು. ಇದಕ್ಕೆಲ್ಲಾ ಒಬ್ಬ ಭಕ್ತನ ದೇಹಭಾವವೇ ಕಾರಣವಾಯಿತು.

ಶಿಷ್ಯನೊಂದಿಗೆ ಗುರುವೂ ಕುಣಿದಾಗ, ಶಿಷ್ಯನಿಗೆ ಆಗುವ ಆನಂದ ಅಮೋಘವಾದುದು. ಗುರು-ವಿದ್ಯಾರ್ಥಿಗಳ ನಡುವೆ ಅಂತರವಿರದೆ ಆತ್ಮೀಯ ಸ್ನೇಹ ನೆಲೆಗೆ ಸೋತ ವಿದ್ಯಾರ್ಥಿಯು ಗುರುವನ್ನು ತನ್ನ ಬಂಧುವೆಂದು ಭಾವಿಸುವುದು ಸಹಜ. ಅಂತಯೇ ಗುಂಡಯ್ಯನೊಂದಿಗೆ ಕುಣಿಯುವ ಶಿವನಿಗೂ-ಅವನಿಗೂ ಯಾವುದೇ ಬೇಧವೇ ಇಲ್ಲ. ಆತ್ಮೀಯ ಸಲುಗೆ ಭಾವ ಎದ್ದು ಕಾಣುತ್ತದೆ. ಇಂಥ ಭಾವನೆಲೆಗಳು ಇಬ್ಬರ ನಡುವಿನ ಬಾಂಧವ್ಯವನ್ನು ಗಟ್ಟಿಗೊಳಿಸುತ್ತದೆ. ಅಂತೆಯೇ ಸಮಾಜದ ಜನತೆಗೆ ಇದು ಪ್ರೇರಣೆಯಾದಾಗ ಅಂತಹ ಶಿವಭಕ್ತಿಗೆ ಒಲಿದು ದಾಸನಾಗುತ್ತಾನೆ.

## ೬. ಕೆಂಭಾವಿ ಭೋಗಣ್ಣನ ರಗಳೆ :-

ಕೆಂಭಾವಿ ಪುರದಲ್ಲಿ ಭೋಗಣ್ಣನೆಂಬ ಶಿವಭಕ್ತನಿದ್ದನು. ಶಿವಶರಣರಾಗಿದ್ದರೆ ಸಾಕು ಬೇರಾವ ಅಂತಸ್ತಿಗೂ ಬೆಲೆಕೊಡದ ಅವರನ್ನು ಮನೆಗೆ ಕರೆಸಿ ಪಾದಸೇವೆ ಅತಿಥಿಸತ್ಕಾರ ಮಾಡುವ ಗುಣ ಹೊಂದಿದ್ದನು. ಹೀಗೆ ದೀರ್ಘಕಾಲ ಗುರು-ಲಿಂಗ-ಜಂಗಮಸೇವೆ ನಡೆಸುತ್ತಿದ್ದ ಆತನ ಭಕ್ತಿ ಪರೀಕ್ಷೆಗೆಂಬಂತೆ ಒಮ್ಮೆ ಹೊಲೆಯ ವೇಷಧಾರಿ ಕೊಳಕು ಬಟ್ಟೆಯ ಶಿವನು ಮನೆಬಾಗಿಲಿಗೆ ಬಂದಾಗ ಆದರ ಸತ್ಕಾರ ಮಾಡಿದ ಭೋಗಣ್ಣನ ಮೇಲೆ ವಿಪ್ರರು ಚಂದಿಮರಸರಿಗೆ ದೂರನ್ನಿತ್ತರು.

ಅವನನ್ನು ಕರೆಸಿ ವಿಚಾರಿಸಿದಾಗ, ಸುಲಭವಾಗಿ ನಾನು ಶಿವನನ್ನರಿಯದ ಸೂರಿಭಟ್ಟ, ವಿಷ್ಣುಭಟ್ಟ, ಕೃಷ್ಣಪೆದ್ದಿಗಳನ್ನು ಕರೆದು ಸತ್ಕರಿಸಲಿಲ್ಲ. ಶಿವಭಕ್ತನನ್ನು ಕರೆದು ಸತ್ಕರಿಸಿದೆ ಎಂದು ದಿಟ್ಟವಾಗಿ ನುಡಿದನು. ಅವನ ಮಾತಿನಿಂದ ಬ್ರಾಹ್ಮಣರೆಲ್ಲರೂ ಕಿಡಿಕಾರಿದರು. ಆದ್ದರಿಂದ ರಾಜನು ಇವನ ಕೃತ್ಯದಿಂದಾಗಿ ಈ ಊರನ್ನು ಇವನು ತ್ಯಜಿಸಬೇಕೆಂದು ಆಜ್ಞೆಹೊರಡಿಸಿದನು. ಇತ್ತ ಭೋಗಣ್ಣನು ಆಜ್ಞೆಯಂತೆ ಊರುಬಿಟ್ಟು ಹೋದರೆ ಅತ್ತ ಲಿಂಗಗಳೆಲ್ಲ ತಮ್ಮತಮ್ಮ ಪೀಠವನ್ನು ಬಿಟ್ಟು ಹೊರನಡೆದು ಇವನನ್ನು ಹಿಂಬಾಲಿಸಿದವು. ಸಂಜೆಯ ಪೂಜೆಯವೇಳೆಗೆ ದೇವಸ್ಥಾನದಲ್ಲಿ ಲಿಂಗಗಳೇ ಇಲ್ಲವೆಂಬ ವಿಷಯವನ್ನು ಪುರೋಹಿತರು ರಾಜನ ಗಮನಕ್ಕೆ ತಂದಾಗ, ಭೋಗಣ್ಣನನ್ನು ಹೊರಗೆ ಅಟ್ಟಿದ್ದರಿಂದ ಅವನೊಂದಿಗೆ ಎಲ್ಲಾ ಲಿಂಗಗಳು ಹೋಗಿವೆ ಎಂಬ ಸುದ್ದಿಕೇಳಿ ಆತಂಕಗೊಂಡನು. ಅನಂತರ ಊರ ಸಮಸ್ತ ಜನರೊಂದಿಗೆ ರಾಜನು ಭೋಗಣ್ಣ ಮತ್ತು ಅವನನ್ನು ಸುತ್ತುವರಿದ ಲಿಂಗಗಳಿರುವ ಸಮೀಪಕ್ಕೆ ಬಂದರು. ಶಿವನನ್ನರಿಯದ ಭಾಗ್ಯ ಹೀನರು ನಾವು, ದಯೆ ತೋರು ಎಂದು ಬೇಡಿದನು. ರಾಜನು, ಬ್ರಾಹ್ಮಣರು ಭೋಗಣ್ಣನಿಗೆ ತಲೆಬಾಗಿದಾಗ ಶಿವಭಕ್ತಿಯ ಶಕ್ತಿಯ ವರ್ಚಸ್ಸಿನ ಮುಂದೆ ಎಲ್ಲರೂ ತೃಣರು ಎಂಬುದು ವೇದ್ಯವಾಗುತ್ತದೆ. ತಕ್ಷಣ ಮನಕರಗಿ ಹಿಂತಿರುಗಿದ ಭೋಗಣ್ಣನ ಹಿಂದೆಯೇ ಲಿಂಗಗಳು ತಮ್ಮ ತಮ್ಮ ಪೀಠದಲ್ಲಿ ಹೋಗಿ ಕುಳಿತವು. ಅವುಗಳ ಕಲ್ಯಾಣ ಪೂಜೆ ನೆರವೇರಿತು. ಶಿವನು ಇವನ ಸದ್ಭಕ್ತಿಗೆ ಮೆಚ್ಚಿ ಕೈಲಾಸಕ್ಕೆ ಕರೆತಂದು ಗಣಪದವಿ ನೀಡಿದನು. ಹೀಗೆ ಭೋಗಣ್ಣನು ಸರಳ ಜೀವಿಯಾದರೂ ಮಹಾನ್ ಶಿವಭಕ್ತ, ಶಿವಲಿಂಗ ಮತ್ತು ಅವನ ನಡುವೆ ಸ್ನೇಹ ಮನೋಭಾವವಿದೆ. ಇಂಥ ಕಥೆಗಳಲ್ಲಿ ಪವಾಡಗಳು ಹೆಚ್ಚಾಗಿ ಸತ್ಯವನ್ನು ಮಾಯಗೊಳಿಸುತ್ತವೆ ಎನಿಸಿದರೂ ಶಿವ ತನ್ನ ಭಕ್ತರನ್ನು ನೆರಳಾಗಿ ಕಾಪಾಡುತ್ತಾನೆ ಹಾಗು ಶಿವಭಕ್ತರ ಕಷ್ಟಸುಖಗಳು ತನ್ನವೇ ಎಂದು ಅವರ ಜೀವನದಲ್ಲಿ ಹಾಸುಹೊಕ್ಕಾಗಿ ಬೆರೆಯುವ ಒಬ್ಬ ಹಿತೈಷಿ, ಸ್ನೇಹ ಜೀವಿಯ ರೀತಿಯಲ್ಲಿ ಚಿತ್ರಿಸುತ್ತಾನೆ ಹರಿಹರ. ಭಕ್ತ ಮತ್ತು ಭಗವಂತನ ನಡುವೆ ಈ ಸ್ನೇಹ ಸಂಬಂಧ ಉತ್ತಮವಾದುದು. ಎಲ್ಲರನ್ನು ಆಕರ್ಷಿಸುವಂತಹುದು. ಭೋಗಣ್ಣನ ನಿಷ್ಪಕ್ಷಪಾತ ಮನಸ್ಸಿನಂತಹ ವ್ಯಕ್ತಿತ್ವ ಮತ್ತು ಸಹೃದಯ ಭಕ್ತರಿಂದ ಸರ್ವರಿಗೂ ಸಮಪಾಲು ಮತ್ತು ಸಮಬಾಳು ಸಿಗುವಂತಾಗಬೇಕೆಂಬ ಆಶಯ ವ್ಯಕ್ತವಾಗಿದೆ. ಒಬ್ಬ ವ್ಯಕ್ತಿಗೆ ಹುಟ್ಟಿನಿಂದಾಗಿ, ಜಾತಿಯಿಂದಾಗಲಿ ಮೇಲುಗೈ ಸಿಗುವುದಿಲ್ಲ ಅವನ ಸತ್ಯಶುದ್ಧ ಮನಸ್ಸಿನ ಗುಣದಿಂದ ಸಿಗುತ್ತದೆ. ಅಸ್ಪೃಶ್ಯತನದ ವಿರುದ್ಧ ಸಫಲ ಹೋರಾಟ ನಡೆಸಿ ಜಯಸಾಧಿಸಿದ್ದಾನೆ. ಈ ಜಯ ಅಸ್ಪೃಶ್ಯರ ಪಾಲಿನ ಜಯವಾಗಿದೆ ಎಂದು ಪರಿಗಣಿಸಬಹುದು. ಆದರೆ ಪ್ರಮುಖವಾಗಿ ಶಿವ ತನ್ನ ಭಕ್ತರನ್ನು ಹೇಗೆ ಬೆಂಬಿಡದೆ ರಕ್ಷಿಸುತ್ತಾನೆ.

ಅವರ ನಡುವಿನ ಒಡನಾಟ ಇಲ್ಲಿ ವ್ಯಕ್ತವಾಗುತ್ತದೆ ಶಿವ ಮತ್ತು ಭಕ್ತರ ನಂಟನ್ನು ಯಾರಿಂದಲೂ ಅಡ್ಡಿಗೊಳಪಡಿಸಲು ಸಾಧ್ಯವಿಲ್ಲ ಎಂಬುದು ವೇದವಾಗುತ್ತದೆ.

## ೧೦. ಉದ್ಭಟದೇವ ರಗಳೆ :-

ಶಿವಭಕ್ತ ಉದ್ಭಟದೇವನು ಮತ್ತು ಅವನ ಹೆಂಡತಿ ಇಬ್ಬರೂ ಅನ್ಯೋನ್ಯವಾಗಿದ್ದು, ಶಿವಪೂಜ ನಿರತರಾಗಿರುತ್ತಿದ್ದರು. ನಿತ್ಯ ಜೀವನವು ಹಾಗೆ ಶಿವನ ಒಲುಮೆಯನ್ನು ಬೇಡಿ ಶಿವಭಕ್ತಿ, ಪೂಜಾಕಾರ್ಯಗಳಲ್ಲಿ ತನ್ಮಯರಾಗಿದ್ದು, ತನು-ಮನವನ್ನೆಲ್ಲಾ ಶಿವನಿಗೆ ಅರ್ಪಿತವಾಗಿತ್ತು. ಒಮ್ಮೆ ಪಗಡೆಯಾಟವನ್ನಾಡುತ್ತಿರುವಾಗ ಉದ್ಭಟಯ್ಯನು ವ್ಯಂಗ್ಯವಾಗಿ ನಸುನಕ್ಕನು. ಅದರಿಂದ ಮುಜುಗರಗೊಂಡಿ ಹೆಂಡತಿಯು ಕಾರಣಕೇಳದಾಗ ಶಿವಭಕ್ತನಾದ ಓಹಿಲಯ್ಯನು ಬಂಧುಮಿತ್ರರಿಲ್ಲದೆ ಒಂಟಿಯಾಗಿ ಕೈಲಾಸಕ್ಕೆ ನಡೆದು ಹೋದನಂತ ಎಂದು ತಿಳಿಸಿದನು. ಅದಕ್ಕೆ ಕುಪಿತಳಾದ ಹೆಂಡತಿಯು, ಅಂಥ ಶಿವಭಕ್ತಿ ನಿಮ್ಮಲ್ಲಿದಿದ್ದರೆ ನೀವೂ ಹೋಗಬಹುದಿತ್ತು ಆದ್ದರಿಂದ ಅವನನ್ನು ತೆಗಳುವುದರಲ್ಲಿ ಅರ್ಥವಿಲ್ಲ ಎಂದಳು. ಆ ತಕ್ಷಣವೇ ಪತ್ನಿಯ ಮಾತುಗಳನ್ನು ಛಲವಾಗಿ ಸ್ವೀಕರಿಸಿದ ಅವನು ಮುಂದಿನ ಸೋಮವಾರ ಈ ಪುರ ಸಮೇತ ಕೈಲಾಸಕ್ಕೆ ಹೋಗುವುದಾಗಿ ತಿಳಿಸಿದನು. ಹೀಗೆ ಛಲ ಸ್ವೀಕರಿಸಿದ ಅವನ ಮಾತಿಗೆ ಓಗೊಟ್ಟು ಆ ದಿನ ಬಂಧು – ಮಿತ್ರರು ಊರವರೆಲ್ಲಾ ಬಂದು ಸೇರಿದರು. ಪತಿಗೆದ್ದರೆ ಕೈಲಾಸ ಪ್ರಾಪ್ತಿ, ಇಲ್ಲವಾದರೆ ಎಲ್ಲರಮುಂದೆ ಅವನನ್ನು ಹಂಗಿಸಬಹುದು. ಎರಡೂ ತನಗೆ ಲಾಭವೇ ಎಂದುಕೊಂಡು ಆಲೋಚಿಸುತ್ತಿದ್ದಳು. ಶಿವಾಲಯದೊಳಗೆ ತರತರದ ಪೂಜೆ ಮತ್ತು ನಿಶ್ಚಲ ಭಕ್ತಿಯಿಂದ ಬೇಡುತ್ತಿದ್ದನು. ಉದ್ಭಟಯ್ಯನ ನಿಜಭಕ್ತಿಗೆ ಒಲಿದ ಶಿವನು ಆ ಪುರ ಸಮೇತ ಕೈಲಾಸಕ್ಕೆ ಕರೆದುಕೊಂಡು ಅವರನ್ನೆಲ್ಲಾ ಹರಸಿ ಉದ್ಭಟಯ್ಯನಿಗೆ ಗಣಪದವಿ ನೀಡಿದನು. ಹೀಗೆ ಹೆಂಡತಿಯ ಮಾತನ್ನು ಛಲವಾಗಿ ಸ್ವೀಕರಿಸಿದ ಉದ್ಭಟಯ್ಯನು ಪುರಸಮೇತ ಕೈಲಾಸಕ್ಕೆ ಕರೆದೊಯ್ದ ಈ ಸುಭಕ್ತಿಯ ಕಥೆಯಲ್ಲಿ ಪವಾಡ ಮೆರೆದು ಸತ್ಯಕ್ಕೆ ದೂರವಾಗಿದೆ ಎನ್ನಬಹುದು. ಆದರೆ ಇಲ್ಲಿನ ಶಿವಭಕ್ತಿಯ ಛಲ, ನಿಶ್ಚಲತೆ ಹಿರಿದೆನಿಸುತ್ತದೆ. ಹೂವಿನಿಂದ ನಾರೂ ಸ್ವರ್ಗಕ್ಕೆ ಎಂಬ ಗಾದೆ ಮಾತಿನ ಸ್ವರೂಪ ಇಲ್ಲಿ ಅನ್ವಯಿಸುತ್ತದೆ. ಪತ್ನಿ ಪತಿಯನ್ನು ಹಂಗಿಸಿದರೂ ಅವನ ಪ್ರಜ್ವಲ ಕಾರ್ಯಕ್ಕೆ ಕಾರಣೀಭೂತಳಾಗಿದ್ದಾಳೆ. ದೀಪದಿಂದ ದೀಪ ಹಚ್ಚುವ ಕಾರ್ಯದಂತೆ ಧರ್ಮನಿರತರಾದವರು ತನ್ನಂತೆ ಉಳಿದವರನ್ನು ಉದ್ಧಾರ ಮಾಡಬೇಕು ಎಂಬ ಆಶಯವನ್ನು ಸಾಫಲ್ಯಗೊಳಿಸುವ ಉದ್ಭಟಯ್ಯ ಸರ್ವಕಾಲಕ್ಕೂ ಆದರ್ಶಪ್ರಾಯ.

"ಪರಮಸುಖ ತನಗೊಬ್ಬನಿಗೆ ಮಾತ್ರವಲ್ಲವೆಂದು ಭಾವಿಸಿ ತನ್ನ ಇಡಿಯ ಪುರವನ್ನೇ ಕೈಲಾಸಕ್ಕೆ ಒಯ್ದವನೀತ. ದೈವೀಕೃಪೆಯಿಂದ ಮಾನವನು ಮಾನವಶಕ್ತಿಯ ಎಲ್ಲೆಯನ್ನು ಮೀರಬಲ್ಲವನೆಂಬುದು ಇಲ್ಲಿಯದೃಷ್ಟಿಯಾಗಿದೆ. ಸಹಜ ದಾಂಪತ್ಯ ಜೀವನದೊಂದಿಗೆ ಈಶ್ವರನ ಭಕ್ತಿಯನ್ನು ಅಳವಡಿಸಿಕೊಂಡು ತನ್ಮೂಲಕ ಆತ್ಮಶ್ರದ್ಧೆಯಿಂದ ಅತಿಮಾನುಷ ಶಕ್ತಿಯನ್ನು ಪಡೆಯುವ ಚಿತ್ರವನ್ನು ಹರಿಹರ ಈ ರಗಳೆಯಲ್ಲಿ ಕೊಟ್ಟಿದ್ದಾನೆ." ೧೧ ಉಧ್ಭಟಯ್ಯನ ಭಕ್ತಿಯ ಮಹಿಮೆಗೆ ಶಿವ-ಪಾರ್ವತಿಯರು ತಲೆದೂಗಿ ಹರಸಿದರೆ, ಪುರಜನರು ಜನಸಹಿತ ನಭಕ್ಕೇರುತ್ತಾರೆ. ಶಿವನು ತನ್ನ ಆತ್ಮೀಯ ಸಖನೆಂದು ನಂಬಿರುವ ಉಧ್ಭಟಯ್ಯ ತನ್ನ ಮನಸ್ಸಿನ ಇಂಗಿತವನ್ನು ಶಿವನು ಪಾಲಿಸಿಯೇ ತೀರುತ್ತಾನೆ ಎಂಬ ಬಲವಾದ ಆತ್ಮವಿಶ್ವಾಸ ಹೊಂದಿರುವುದು ಇಲ್ಲಿ ಗೋಚರಿಸುತ್ತದೆ. ತನ್ನ ಭಕ್ತಿಯನ್ನು ಛಲವಾಗಿ ಸ್ವೀಕರಿಸುವ ಉಧ್ಭಟಯ್ಯನ ಮನಸ್ಸು ನಿಶ್ಚಲವಾದುದು. ಅವನ ಸುಕಾರ್ಯಕ್ಕೆ ಶಿವನು ಒಲಿದು ಹರಸುವನು. ಇಲ್ಲಿ ಶಿವನು ತನ್ನ ಭಕ್ತರ ಮೇಲೆ ಹೊಂದಿರುವ ಸ್ನೇಹ ಸಂಬಂಧ ಬಲಯುತವಾದುದು, ತನ್ನ ಭಕ್ತರ ಇಚ್ಛೆಯನ್ನು ಪೂರೈಸುವ ಶಿವನು ಭಕ್ತರನ್ನು ಆದರಿಸುತ್ತಾನೆ ಎಂಬುದು ವ್ಯಕ್ತವಾಗುತ್ತದೆ.

## ೧೧. <u>ಹಲಾಯುಧನ ರಗಳೆ :-</u>

ಶಿವಭಕ್ತನಾದ ಹಲಾಯುಧನು ಶಿವಗೋಷ್ಠಿಯಲ್ಲಿ ಚರ್ಚೆಯಲ್ಲಿರುವಾಗ ಉತ್ತಮ ಶಿವಭಕ್ತರು ಯಾರು? ಎಂಬ ಪ್ರಶ್ನೆ ಬಂದಿತು, ಆಗ ಕೆಲವರು ದೇಹಸಮೇತ ಹೋದ ಓಹಿಲಯ್ಯನೆಂದು ಇನ್ನೂ ಕೆಲವರು ಪುರಸಮೇತ ಕೈಲಾಸಕ್ಕೆ ಹೋದ ಉಧ್ಭಟಯ್ಯನೇ ಶ್ರೇಷ್ಠ ಶಿವಭಕ್ತನೆಂದ ಒಲವು ತೋರಿ ಅವನ ಸಧ್ಭಕ್ತಿಯನ್ನು ಕುರಿತು ಕೊಂಡಾಡುತ್ತಾರೆ.

ಶಿವನೊಲುಮೆ ಒಂದಿದ್ದರೆ ಸಾಕು ಒಂದು ಪುರವನ್ನೇನು ನವಗ್ರಾಮವನ್ನು ನಾಳೆಯೇ ನಾನು ಕೈಲಾಸಕ್ಕೆ ಒಯ್ಯುತ್ತೇನೆ ಎಂದು ದೀಕ್ಷೆ ತೆಗೆದುಕೊಳ್ಳುತ್ತಾನೆ. ಅವನ ಮಾತನ್ನು ಎಲ್ಲರೂ ಹಂಗಿಸುತ್ತಾರೆ. ಛಲವನ್ನು ಸ್ವೀಕರಿಸಿದ ಹಲಾಯುಧನು ಶಿವಪೂಜನಿರತವಾಗುವನು. ಅವನ ಭಕ್ತಿಗೆ ಮೆಚ್ಚಿದ ಶಿವನು ನವಗ್ರಾಮಪುರ ಸಮೇತ ಕೈಲಾಸಕ್ಕೆ ಕರೆದುಕೊಂಡು ಎಲ್ಲರನ್ನು ಹರಸಿ ಹಲಾಯುಧನಿಗೆ ಗಣಪದವಿ ನೀಡುತ್ತಾನೆ. ಏಕನಿಷ್ಠೆಯಿಂದ ಭಕ್ತಿಯುಕ್ತನು ಆ ಪರಮೇಶ್ವರನನ್ನು ಹೊಗಳ ಕೊಂಡಾಡುತ್ತಾನೆ.

---

ಅಡಿಟಿಪ್ಪಣಿಗಳು : ೧೧. ಹರಿಹರನ ರಗಳೆಗಳಲ್ಲಿ ಜೀವನದರ್ಶನ – ಸ.ಸ.ಮಾಳವಾಡ, ಪು.ಸ. ೮೮;

ಒಂಭತ್ತು ಪುರಸಹಿತವೆಯ್ದಿ ಬಂದವರುಂಟೆ
ಅಂಬರದ ಬಟ್ಟೆಯೊಳ್ನಂಬಿ ಬಂದವರುಂಟೆ
ಎನ್ನ ಭಕ್ತಂಗೆ ಕಟಕಿಯ ಮಾತು ಸೈರಿಪುದೆ
ಎನ್ನ ಭಕ್ತಂಗೆ ಕಪಟಂಗಳೇಂ ಸೊಗಯಿಪುದೆ
ಎನ್ನಭಕ್ತರ್ಗೆ ಹಿಂದೊಂದು ಮುಂದೊಂದುಂಟೆ
ಎನ್ನಭಕ್ತರ್ಗೆ ಹುಸಿಗಳ ಹಸರವೇನುಂಟೆ
ನವವಿಧಂ ನವಪೂಜೆ ನವ ನವ ಪ್ರೇಮವಿದೆ
ನವರಸ ನವ ಭಕ್ತಿ ನವ ನವ ಗ್ರಾಮವಿದೆ. ೧೨

ಈ ರೀತಿಯಲ್ಲಿ ನವಗ್ರಾಮಗಳನ್ನು ತನ್ನ ಭಕ್ತಿಯಿಂದ ಕೈಲಾಸಕ್ಕೆ ಕರೆತಂದ ಅವರನ್ನು ಕೊಂಡಾಡಿದನು. ಮಾನವನ ಮೂದಲಿಕೆಯ ಮಾತನ್ನು ಶಿವನ ಪ್ರೇರಣೆಯೆಂದು ಸ್ವೀಕರಿಸುವ ದೃಷ್ಟಿಯು ಜೀವನದಲ್ಲಿ ಹಿತಕಾರಿಯಾಗಬಲ್ಲದು. ದೇವ ಕರುಣಿಸಿದೊಡೆ ತೀರದದು ಏನುಂಟು? ಶ್ರದ್ಧೆಯಿಂದ ಭಕ್ತಿಯಿಂದ ಏನೆಲ್ಲವನ್ನು ಸಾಧಿಸಬಹುದು ಮಾನವನ ಶಕ್ತಿ ಅಲ್ಪವಾದುದೇನೋ ನಿಜ. ಆದರೆ ದೇವನ ಶಕ್ತಿಯೊಂದಿಗೆ ಆ ಅಲ್ಪ ಶಕ್ತಿಯನ್ನು ಸಂಯೋಜಿಸಬಲ್ಲ ಭಕ್ತರ ಶಕ್ತಿಗೆ ಇತಿಮಿತಿಯಿಲ್ಲವೆಂದು ಹರಿಹರನು ಸ್ಪಷ್ಟವಾಗಿ ನಂಬಿದ್ದ." ೧೩ ಹಲಾಯುಧನ ಏಕನಿಷ್ಠೆ, ಭಾಷೆಭಕ್ತಿಗೆ ಮೆಚ್ಚಿದ ಜನರು ಆಶ್ಚರ್ಯದಿಂದ ತಲೆದೂಗಿ ಸಂತೋಷಿಸುತ್ತಾರೆ.

## ೧೨. ಮಲಯರಾಜದೇವನ ರಗಳೆ :-

ಮಳೆಯವತಿ ಪಟ್ಟಣದ ಭೂಪ ದೇವರಾಜ ಮತ್ತು ಶಚಿ ದಂಪತಿಗಳಿಗೆ ಸಂಪದ್ಭರಿತವಾದ ಎಲ್ಲಾ ಸವಲತ್ತುಗಳೂ ದೇಶದಲ್ಲಿದ್ದರೂ ಮಕ್ಕಳಿಲ್ಲದೆ ಮಾನಸಿಕ ನೆಮ್ಮದಿ ಇರಲಿಲ್ಲ. ಆದ್ದರಿಂದ ಶಿವನನ್ನು ಪೂಜಿಸಿ ಆರಾಧಿಸಿದಾಗ ಪ್ರತ್ಯಕ್ಷನಾದ ಶಿವನು ನಿನಗೆ ಸದ್ಬುದ್ಧಿ, ಸಚ್ಚಾರಿತ್ರ್ಯ ಹೊಂದಿರುವ ೧೬ ವರ್ಷ ಬಾಳುವ ಮಗನು ಬೇಕೋ ಇಲ್ಲವೆ ನೂರುವರ್ಷ ಬಾಳುವ ಅಧಮ ಮಗನು ಬೇಕೋ ಎಂದು ಕೇಳಿದಾಗ ಮೊದಲನೇ ಆಯ್ಕೆಯನ್ನೇ ತಂದೆ ಒಪ್ಪಿಕೊಂಡಾಗ, ಮಗನು ಹುಟ್ಟಿ ಮಲಯರಾಜ ಎಂಬ ಹೆಸರನ್ನಿಟ್ಟು ಅದಕ್ಕೆ ಅವಶ್ಯವಾದ ವಿದ್ಯಾಭಕ್ತಿ ವಿನಯ ಕಲಿಸುತ್ತಾರೆ.

---

ಅಡಿಟಿಪ್ಪಣಿಗಳು : ೧೨. ಹರಿಹರನ ರಗಳೆಗಳು – ಡಾ.ಎಂ.ಎಂ.ಕಲಬುರ್ಗಿ–೪೫೩

೧೩. ಹರಿಹರನ ರಗಳೆಯಲ್ಲಿ ಜೀವನ ದರ್ಶನ (೫೦–೫೧)

ಹುಡುಗನಿಗೆ ೧೫ ವರ್ಷಗಳು ತುಂಬಿದಾಗ ಸಾವಿಗೆ ಕೇವಲ ೧ ವರ್ಷ ಬಾಕಿ ಇದೆ ಎಂದು ತಂದೆ-ತಾಯಿಗಳು ನೊಂದುಕೊಂಡು ಕಣ್ಣೀರು ಮಿಡಿಯುತ್ತಾರೆ. ಮಗ ಅವರನ್ನು ಸಂತೈಸುತ್ತಾ ತದೇಕ ಚಿತ್ತದಿಂದ ಶಿವನನ್ನು ಆರಾಧಿಸುತ್ತಾ ಕಾಲಕಳೆದನು. ಕೊನೆಯದಿನ ಮಲಯರಾಜನು ಶುದ್ಧಾಂಗನಾಗಿ ಭಸ್ಮ ರುದ್ರಾಕ್ಷಿಗಳನ್ನು ಧರಿಸಿಕೊಂಡು ಸಕಲ ಪೂಜಾದಿ ಸಾಮಾಗ್ರಿಗಳಿಂದ ಶಿವನನ್ನು ಭಕ್ತಿಯಿಂದ ಪೂಜಿಸುತ್ತಾನೆ. ಈತನ ಭಕ್ತಿಗೆ ಮೆಚ್ಚಿದ ಶಿವನು ವರವನ್ನು ಕೇಳು ಎಂದಾಗ ಒಂದುನೂರು ವರ್ಷ ಶಿವಪೂಜೆ, ಶಿವಗೋಷ್ಠಿ, ಧ್ಯಾನ ಮತ್ತು ಭಕ್ತಿ ಸಂಪನ್ನನಾಗಿ ರಾಜ್ಯವಾಳಿ, ಜೀವರಾಶಿ ಸಹಿತ ದೇಶವನ್ನು ಕೈಲಾಸಕ್ಕೆ ಕರೆತರಬೇಕೆಂಬ ಇಚ್ಛೆಯನ್ನು ವ್ಯಕ್ತಪಡಿಸುತ್ತಾನೆ.

ಸಕಲ ಜೀವರಾಶಿಗೂ ಶ್ರೇಯಸ್ಸನ್ನುಂಟು ಮಾಡುವ ಬಯಕೆಯನ್ನು ವ್ಯಕ್ತಪಡಿಸಿ, ಶಿವಸಾಯುಜ್ಯ ದೇಶವನ್ನಾಗಿ ಮಾಡುವ ಮಾನವ ಜೀವನದ ಸಫಲತೆ ಇಲ್ಲಿ ಕಾಣುತ್ತದೆ. ಜೀವಿಗಳ ಸಹಿತ ದೇಶವನ್ನೇ ಕೈಲಾಸಕ್ಕೆ ಕರೆದೊಯ್ಯುವ ಪ್ರಸಂಗ ಸೋಜಿಗವೆನಿಸಿದರೂ ಶಿವಭಕ್ತಿಯ ತಲ್ಲೀನತೆ ಗಾಢವಾದುದು.

ಶಿವಭಕ್ತಿಯಲ್ಲಿ ಛಲವನ್ನು ವ್ಯಕ್ತಪಡಿಸಿ, ಸರ್ವರನ್ನು ಕೈಲಾಸಕ್ಕೆ ಕರೆದೊಯ್ಯುವ ಇವರ ಮನೋಃಶಕ್ತಿ ಮೆಚ್ಚುವಂತದ್ದು. ಶಿವನನ್ನು ತನ್ನ ಆತ್ಮೀಯ ಬಂಧು ಎಂದು ಭಾವಿಸಿದ ಅವನು ಅವನ ಮೇಲಿಟ್ಟಿರುವ ಬಲವಾದ ಸ್ನೇಹಭಾವದಿಂದ ತನ್ನೊಟ್ಟಿಗೆ ಎಲ್ಲರನ್ನು ಶಿವ ಸಾನಿಧ್ಯಕ್ಕೆ ಶಿವನ ಕರೆದೊಯ್ಯುವ ಆತ್ಮಬಲ ದೊಡ್ಡದು. ಅಷ್ಟೇ ಸ್ನೇಹ ಮನೋಭಾವವನ್ನು ಶಿವನು ತನ್ನ ಭಕ್ತರೊಂದಿಗೆ ಹೊಂದಿದ್ದಾನೆ ಎಂಬುದು ವೇದ್ಯವಾಗುತ್ತದೆ. ಸಕಲ ಜೀವರಾಶಿಯೊಂದಿಗೆ ದೇಶವೇ ಶಿವಸಾಯುಜ್ಯ ಹೊಂದುವಂತೆ ಮಾಡುವ ಹಲಾಯುಧನ ಭಕ್ತಿಯ ಸಾಫಲ್ಯತೆ ಇಲ್ಲಿದೆ.

### ೧೩. <u>ಕೊಂಡುಗುಳಿ ಕೇಶಿರಾಜನ ರಗಳೆ :-</u>

ಲಿಂಗ ಪೂಜಾ ನಿಷ್ಠಶರಣಸಂಗಿ ಕೇಶಿರಾಜನು ಪೆರ್ಮಾಡಿಯ ದಂಡನಾಯಕನಾದ ಮೇಲೆಯೂ ಮುನ್ನಿನಂತೆ ಶರಣಸಂಗ ಜಂಗಮ ಸೇವೆಯಲ್ಲಿ ನಿರತನಾಗಿರಲು ಅರಸನಿಂದ ಅಡ್ಡಿ ಉಂಟಾಗುತ್ತದೆ. ಸಿರಿಯಸಂಗ ಶರಣಸಂಗಕ್ಕೆ ಕುಂದು ತರಲು ಕೇಶಿರಾಜನು ದಂಡನಾಯಕ ಪದವಿಯನ್ನು ಧಿಕ್ಕರಿಸಿ ರಾಜ್ಯವನ್ನು ತೊರೆದು ಹೊರಟನು. ಶಿವಪುರಕ್ಕೆ ಬಂದು ಶರಣರೊಡಗೂಡಿ

ಶಿವಪೂಜ ನಿರತನಾಗಲು ಆ ಪುರವೇ ಶಿವಕ್ಷೇತ್ರವಾಗುವುದು. ಶಿವಭಕ್ತಿ ಸಂಪನ್ನನಾದ ಕೇಶಿರಾಜನ ಕೀರ್ತಿ ಕೇಳಿ ಪೆರ್ಮಾಡಿಯು ಸೋತು ಪುನಃ ಕೇಶಿರಾಜನನ್ನು ದಂಡನಾಯಕನನ್ನಾಗಿ ಮಾಡಿ ಗೌರವಿಸಿದನು. ಇಲ್ಲಿ ರಾಜಯೋಗವು ಶಿವಯೋಗದ ಮುಂದೆ ಸೋತು ಹೋದ ಘಟನೆ ಎದ್ದು ತೋರುತ್ತದೆ. ಆದರೆ ಕೇಶೀರಾಜನು ಶಿವಭಕ್ತಿಗೆ, ಶರಣ ಸಂಘಕ್ಕೆ ರಾಜವೈಭವವು ಅಡ್ಡಿಮಾಡುತ್ತದೆ ಎಂದು ಅಧಿಕಾರ ಪದವಿಯನ್ನು, ಉಡುಗೊರೆ ಸಕಲವನ್ನು ತೊರೆದಾಗ ಅವನ ಹೆಂಡತಿಯೂ ಪತಿಯನ್ನೇ ಅನುಸರಿಸುವ ಸತಿಯ ನಿಷ್ಠೆ ಮನೋಭಾವ ಅಭಿವ್ಯಕ್ತಿಸುತ್ತದೆ. ಆದರೆ ಪುನಃ ಪೆರ್ಮಾಡಿ ರಾಜನು ದಂಡನಾಯಕ ಹುದ್ದೆಯನ್ನು ಗೌರವಿಸಬೇಕು ಎಂದು ಕೇಳಿಕೊಂಡಾಗ ಅದನ್ನು ಒಪ್ಪಿಕೊಂಡು ಮತ್ತೆ ರಾಜ ವೈಭವಕ್ಕೆ ಬರುವುದು ಎಷ್ಟರ ಮಟ್ಟಿಗೆ ಸರಿಯೆನಿಸುತ್ತದೆ. ಇಲ್ಲಿ ಶಿವಭಕ್ತರ ಏಕನಿಷ್ಠೆ ಮನೋಭಾವಕ್ಕೆ ಧಕ್ಕೆ ಒದಗಿದಂತಾಗಲಿಲ್ಲವೆ ? ಎಂಬ ಪ್ರಶ್ನೆಗಳು ಮೂಡುತ್ತದೆ. ತನ್ನ ಅರಮನೆಯನ್ನು ಅಲಂಕರಿಸಿ ಭಕ್ತ ಜನರ ಕಲ್ಯಾಣಕ್ಕೆ ತನ್ನ ಸಂಪತ್ತನ್ನು ಕೊಂಡ ಪೆರ್ಮಾಡಿದೇವನ ಮಾತನ್ನು ಒಪ್ಪಿ ಆ ಪದವಿಯಲ್ಲಿದ್ದುಕೊಂಡು ಶರಣಸೇವೆ ಮಾಡಹೊರಟ ಕೇಶಿರಾಜನ ವ್ಯಕ್ತಿತ್ವದಲ್ಲಿ ಗೊಂದಲವನ್ನು ಗುರುತಿಸಬಹುದು.

ತೆಲುಗಿನ ಶಿವಶರಣ ಜೊಮ್ಮಣ್ಣನ ಶಿವನಿಷ್ಠೆಯನ್ನು ಮೆಚ್ಚಿ ಆ ಮಹಾಶಿವಭಕ್ತನನ್ನು ಕಾಣಲು ಅವನ ಮನೆಯನ್ನು ಪ್ರವೇಶಿಸಿದಾಗ ಅಲ್ಲಿ ಮಾಂಸವನ್ನು ಕಂಡು ಹೇಸಿಗೆಯನ್ನು ಪಟ್ಟುಕೊಂಡು ಪುನಃ ಸ್ವಸ್ಥಾನಕ್ಕೆ ಬಂದು ಶಿವಧ್ಯಾನಾಸಕ್ತರಾಗಿರ ಬೇಕಾದರೆ ಶಿವನ ಸಂದೇಶದಂತೆ ಮತ್ತೊಮ್ಮೆ ಜೊಮ್ಮಣ್ಣನ ಮನೆಗೆ ಹೋಗುವ ತೀರ್ಮಾನ ಮಾಡಿದನು. ಮಾರ್ಗಮಧ್ಯದಲ್ಲಿ ಎದುರಾದ ನದಿಯನ್ನು ಕಂಡು ಲಿಂಗಪೂಜೆಗೆ ಇದೇ ಪ್ರಶಸ್ತವಾದ ಸ್ಥಳವೆಂದು ಲಿಂಗಪೂಜೆಯಲ್ಲಿ ತೊಡಗಿರುವಾಗ, ಗರುಡವೊಂದು ಲಿಂಗವನ್ನು ವಿಷ್ಣುವಿನ ಕಣ್ಣು ಎಂದು ಭಾವಿಸಿ ಅದನ್ನು ಎತ್ತಿಕೊಂಡು ಹಾರಿಹೋಯಿತು. ಲಿಂಗವಿಲ್ಲದೆ ಅಂಗವುಳಿಯಲು ಸಾಧ್ಯವಿಲ್ಲ ಇದರಿಂದ ಕೇಶಿರಾಜನು ಪ್ರಾಣತ್ಯಾಗ ಮಾಡಬಹುದು ಎಂದು ಶರಣರು ತೀರ್ಮಾನಿಸಿ ಗರುಡ ಪಕ್ಷಿಯು ಎಸೆದುಹೋದ ಲಿಂಗವನ್ನು ನೀರಿನಲ್ಲಿ ಹುಡಕಲಾರಂಭಿಸಿದರು. ಕೇಶಿರಾಜನೇ ಹರಿಗೋಲನ್ನು ಹಿಡಿದು "ಶಿವಲಿಂಗವನ್ನು ಬಿಟ್ಟು ಅನ್ಯದೈವಕ್ಕೆ ಎರಗಿದ್ದರೆ, ಸ್ವಸತಿಯನ್ನು ಬಿಟ್ಟು ಅನ್ಯಸ್ತ್ರಿಯನ್ನು ಬಯಸಿದ್ದರೆ, ಸತ್ಯವನ್ನುಳಿದ ಅಸತ್ಯವನ್ನು ನುಡಿದಿದ್ದರೆ ಇದುವೆ ನನ್ನ ಪರೀಕ್ಷೆಯ ಕಾಲ." ಎಂದು ಘೋಷಿಸಿ ನದಿಯ ಮೇಲೆ ಸಾಗಿದನು.

ಶಿವನೇ ಬಾ, ಭರ್ಗಭೀಮನೇ ಬೇಗ ಬಾ, ನವನಿಧಿ ಸುಖನಿಧಿಯೇ ಕರಸ್ಥಲವನ್ನು ಸೇರು ಬಾ ಎಂದು ಲಿಂಗದೇವನನ್ನು ಕೂಗಿ ಕರೆದಾಗ ಲಿಂಗದೇವನು ತೇಲಿಬಂದನು. ಜಯಕಾರ ಕೂಗಿದ ಶರಣ ಸಮುದಾಯದ ಮಧ್ಯೆ ಕೇಶಿರಾಜನ ಶಿವಭಕ್ತಿಯನ್ನು ಶಿವನು ಮೆಚ್ಚಿ ಗಣಪದವಿ ನೀಡಿದನು. ಕೊಂಡುಗುಳಿ ಕೇಶಿರಾಜನು ಶಿವಭಕ್ತ, ಶಿವನನ್ನು ತನ್ನ ಆತ್ಮೀಯ ಬಂಧು ಎಂಬ ನೆಲೆಯಲ್ಲಿ ಪೂಜಿಸಿರುವುದು ಗೋಚರಿಸುತ್ತದೆ.

### ೧೪. ಪುಷ್ಪರಗಳೆ :-

ಹರಿಹರನು ಶಿವನ ಅನನ್ಯ ಭಕ್ತನು. ಹಂಪೆಯ ವಿರೂಪಾಕ್ಷನನ್ನು ದಿನವೂ ಪೂಜಿಸಿ ಕೃತಾರ್ಥನಾಗುವನು. ಶಿವನನ್ನು ಹಲವು ಬಗೆಗಳಿಂದ ಹೊಗಳಿ ಪೂಜಿಸಿದರೂ ಅವನ ಮನತಣಿಯದು. ಅವನು ಮುಂಜಾವಿನಲ್ಲಿಯೇ ಎದ್ದು ಹಾಡಿ ಹೊಗಳಿ ಕುಣಿದು ಕೊಂಡಾಡುತ್ತ ಹೂದೋಟಕ್ಕೆ ಬಂದು ಹೂಗಳ ಪರಿಮಳವು ಸೋರಿಹೋಗದಂತೆ ಬಿಗಿಯಾಗಿ ಹೆಣೆದು ಹೂ ಬುಟ್ಟಿಯಲ್ಲಿ ದುಂಬಿಗಳು ಎರಗದ, ಗಾಳಿ ಸೋಂಕದ, ಸೂರ್ಯನ ಕಿರಣಗಳು ಮುಟ್ಟದ ಹೂಗಳನ್ನು ಆಯ್ದು ಕೊಯ್ದು ತಂದು, ವಿರೂಪಾಕ್ಷನನ್ನು ಪೂಜಿಸಬೇಕೆಂಬ ಮನದಾಳದ ಬಯಕೆ ಅವನಿಗಿರುತ್ತದೆ. ಅದಕ್ಕಾಗಿ ಅವನು ಇರುವಂತಿಗೆ, ಸಂಪಿಗೆ, ಸೇವಂತಿಗೆ, ಮಲ್ಲಿಗೆ, ಕಣಗಿಲೆ, ಬಿಲ್ವಪತ್ರೆ, ಉತ್ತರಣೆ, ದತ್ತೂರಿ, ಕಕ್ಕೆ, ಬಿಳೀ ಎಕ್ಕ, ರುದ್ರಜಟೆ, ತುಂಬೆ, ಕಂಚುವಾಳ ಭದ್ರಮುಖ, ಮರುಗ, ದವನ ಇವೇ ಮೊದಲಾದ ಹೂಗಳನ್ನು, ಸುಗಂಧ ಸಸ್ಯಗಳನ್ನು ಶಿವನಿಗೆ ಪ್ರೀತಿಯಿಂದ, ಆತ್ಮೀಯತೆಯಿಂದ ಕೂಡಿ ಭಕ್ತಿಭಾವದಿಂದ ಸಮರ್ಪಿಸುವುದು. ಸಂಪಿಗೆಯ ವೃಕ್ಷದ ಬಳಿ ಬಂದು ಏನವ್ವಾ ಸಂಪಿಗೆಯೇ ಶಿವನ ಸಿರಿಮುಡಿ ಹೊಸ ಹೂಗಳನ್ನು ನೀಡುವೆಯಾ? ಎಂದು ಶಿವನ ಮುಡಿಗೇರುವ ಹೂಗಳನ್ನು ವಾತ್ಸಲ್ಯದಿಂದ ಮಾತನಾಡಿಸುವ ಅವನ ಪರಿ ಸೊಬಗಿನಿಂದ ಕೂಡಿದುದು.

ಗಟ್ಟಿಯಾಗಿ ಹೂಗಳನ್ನು ಮುಟ್ಟಿದರೆ ಹೂಗಳಿಗೇನಾದರೂ ಆದೀತು ಎಂದು ಮುಟ್ಟಿಯೂ ಮುಟ್ಟದಂತೆ ಮೆಲ್ಲನೆ ಹೂಗಳನ್ನು ಆಯ್ದುಕೊಳ್ಳುತ್ತಿದ್ದನು. ನೋಡಿದರೆ ಹೂಗಳು ಎಲ್ಲಿ ಬಾಡುವುವೋ ಎಂಬ ಆತಂಕದಿಂದ ಮೃದುವಾಗಿ ಹಿಡಿದು ತಂದು ಒಂದು ಶುಭ್ರವಾದ ಸ್ಥಳದಲ್ಲಿ ಬಾಳೆಎಲೆಗಳ ಮೇಲೆ ಅದನ್ನೆಲ್ಲಾ ಸುರಿದು, ತಾವರೆಯ ದಾರಗಳಿಂದ ಅವುಗಳನ್ನು ಕಟ್ಟಿ ಸುಂದರವಾದ ಹಾರಗಳನ್ನಾಗಿ ನಿರ್ಮಿಸಿದನು. ದೇವಾಲಯದ ಬಾಗಿಲಲ್ಲಿ ನಿಂದು ಶಿವನಿಗೆ

ನಿದ್ರಿಸುತ್ತಿರುವೆಯಾ ತಂದೆ? ತಡಮಾಡಿದೆನೆಂದು ಯೋಚಿಸುತ್ತಿರುವೆಯಾ ಎಂದು, ದುಂಬಿಗಳು ಮುಟ್ಟದ, ಗಾಳಿ ಸೋಂಕದ ಹೊಸ ಹೂಗಳನ್ನು ತಂದಿರುವೆನು ಎಂದು ಹೇಳಿ ಶಿವನನ್ನು ನಿದ್ದೆಯಿಂದ ಎಚ್ಚರಿಸಿದನು.

ಶಿವನಲ್ಲಿ ಭಿನ್ನವಿಸುತ್ತ ಸಮೀಪಕ್ಕೆ ಬಂದು ಹೊಸದೊಂದು ಸೇವಂತಿಗೆಯ ಹೂವಿನ ಪನ್ನೀರಿನಿಂದ ಶಿವನ ಮುಖ ಪ್ರಕ್ಷಾಳನ ಮಾಡಿ ಸ್ನೇಹದಿಂದ ನೋಡುತ್ತ ಮನದಲ್ಲಿಯೇ ಶಿವನಿಗೆ ದೃಷ್ಟಿ ತೆಗೆದು ಕೇದಿಗೆಯ ಎಸಳನ್ನು ಹಿಡಿದು ಅದರಿಂದ ಶಿವನ ಸಿರಿಮುಡಿಯನ್ನು ಸಡಿಲಿಸಿದನು. ಹೆಣೆದ ನೀಳವಾದ ಕೆಂಜೆಡೆಗಳ ಬಾಲಚಂದ್ರನ ಕಳೆ ನೋಯದಂತೆ ಸಿಕ್ಕುಗಳನ್ನು ಬಿಡಿಸಿ, ಸುರನದಿ ತುಳುಕದಂತೆ ಸಿಕ್ಕುಗಳನ್ನು ಹರಿಹರನು ನಿಧಾನವಾಗಿ ಬಿಡಿಸಿದನು. ಪಾಟಲೀ ಹೂವಿನ ಪರಿಮಳದ ಕಸ್ತೂರಿಯನ್ನು ತೀಡಿ ಸೂಸುವ ಜಡೆಗಳಲ್ಲಿ ಚಂದ್ರನನ್ನಿರಿಸಿ, ಇರುವಂತಿಗೆಯನ್ನು ಸಿರಿಮುಡಿಗೆ ಸಿಂಗರಿಸಿದನು ಸೇವಂತಿಗೆಯನ್ನು ಜಡೆಗಳಿಗೆ ಮುಡಿಸಿದನು. ಪರಿಮಳದ ಮಲ್ಲಿಗೆ, ಮೊಲ್ಲೆಗಳ ಚಂದನ, ನಾಗಕುಂಡಲಗಲನ್ನಾಗಿಸಿ ಇರುವಂತಿಗೆಯ ಕಂಠಮಾಲೆಯನ್ನು ಸಮರ್ಪಿಸಿದನು. ಸುಗಂಧ ಭರಿತ ಜಾಜಿ, ದುಂಡುಮಲ್ಲಿಗೆಗಳ ಪದಕ ಹಾರಗಳಿಂದ ಶಿವನನನ್ನು ಹರಿಹರನು ಭಕ್ತಿಭಾವಗಳಿಂದ ಅಲಂಕರಿಸಿದನು. ಮರುಗದ ಒಡ್ಯಾಣ ಮಾಡಿ ಗಜಚರ್ಮದಂತೆ ಶಿವನಿಗೆ ತೊಡಿಸಿದನು ಸಂಪಿಗೆಗಳನ್ನು ಹುಲಿಯ ಚರ್ಮದಂತೆ ಉಡಿಸಿದನು. ಸುರಹೊನ್ನೆಯ ಕುಸುಮಗಳ ಕಂಕಣ ತೊಡಿಸಿದನು. ಪಾದಗಳಿಗೆ ಕಮಲಗಳನ್ನು ಸಮರ್ಪಿಸಿದನು. ಬಿಳಿನೈದಿಲೆಗಳನ್ನು ಚರಣಕಮಲಗಳಲ್ಲಿ ಸಿಂಗರಿಸಿದನು, ಕುಮುದಗಳನ್ನು ಅಕ್ಕಪಕ್ಕದಲ್ಲಿರಿಸಿ ಶೃಂಗರಿಸಿದನು. ಪಾದಗಳ ಬಳಿ ಕೇದಗೆಯನ್ನು ಅಲಂಕರಿಸಿದನು. ಇಂದ್ರಿಯಗಳನ್ನು ಮೋಹಕಗೊಳಿಸುವ ದವನದಿಂದ ಚಾಮರವನ್ನು ಬೀಸಿ ಹರಿಹರನು ಶಿವನನ್ನು ಪೂಜಿಸಿದನು. ಧೂಪದ ಹೊಗೆಯ ಆರತಿಯನ್ನು ಬೆಳಗಲು ಹೊಸ ಕಾಂತಿಯಿಂದ ಶಿವನು ಬೆಳಗುತ್ತಿದ್ದನು. ಹರಿಹರನು ಸಿದ್ಧಗೊಳಿಸಿದ್ದ ದಿವ್ಯಾನ್ನಗಳನ್ನು ನಿವೇದಿಸಿದನು. ಶಿವನಿಗೆ ಎಂದಿನಂತೆ ನೈವೇದ್ಯಗಳನ್ನು ಸಮರ್ಪಿಸಿದನು. ಅನಂತರ ಸವಿಯಾದ ತಾಂಬೂಲವನ್ನು ನೀಡಿದನು. ಶಿವನು ಪ್ರಸನ್ನವದನನಾಗಲು ಹರಿಹರನು ಸಂತೋಷದಿಂದ ಹೊಗಳುತ್ತ ಪ್ರೇಮಭಾವದಿಂದ, ಮೋಹದಿಂದ ಬೇಡುತ್ತ ನಿನ್ನಲ್ಲಿ ನಾನು ಬಂದು ಸೇರುವಂತೆ ಮಾಡೆಂದು ಪರಿಪರಿಯಿಂದ ಬೇಡುತ್ತಿದ್ದನು.

ಹೀಗೆ ದಿನನಿತ್ಯವೂ ಹರಿಹರನು ತನ್ನ ಅನನ್ಯವಾದ ಭಕ್ತಿಯಿಂದ ಶಿವನಿಗೆ ತಾನು ತಂದಿರುವ ಹೂ ಪತ್ರೆಗಳಿಂದ ಸಿಂಗಾರ ಮಾಡಿ ನಲಿದ ಅವನ ಭಕ್ತಿ ಮುಗ್ಧತೆ ಮತ್ತು ಸ್ನೇಹಪೂರ್ವಕವಾದುದೂ ಹೌದು. ತಾನು ಹುಟ್ಟಿರುವುದೇ ಶಿವನ ಸೇವೆಗೆಂದು ತಿಳಿದಿರುವ ಹರಿಹರನ ಜಗತ್ತೇ ಶಿವೋಮಯವಾದುದು. ಹರಿಹರನು ಶಿವನಲ್ಲಿ ಬಲವಾದ ಭಕ್ತಿಯನ್ನು ಮತ್ತು ನಂಬಿಕೆಯನ್ನಿಟ್ಟಿದ್ದಾನೆ. ಶಿವನೊಂದಿಗಿರುವ ಇವನ ಸ್ನೇಹಭಾವ ಅವರ ಆತ್ಮೀಯತೆಯನ್ನು ಮತ್ತಷ್ಟೂ ಗಟ್ಟಿಮಾಡಿದೆ.

೧೫. <u>ಮಾರುಡಿಗೆ ನಾಚಿತಂದೆಯ ರಗಳೆ :-</u>

ಉತ್ತರ ದಿಶಾಭಾಗದಲ್ಲಿರುವ ಮಾರುಡಿಗೆ ಎಂಬ ಪಟ್ಟಣದಲ್ಲಿ ಶಿವಪುರದ ಊರಿನಲ್ಲಿ ಶಿವಶರಣರು ವಾಸಿಸುತ್ತಿದ್ದರು. ಇವರ ಮಧ್ಯೆ ನಿಶ್ಚಲ ಮನಸ್ಸಿನ ನಾಚಿತಂದೆ ಎಂಬ ಹೆಸರಿನ ಶಿವಭಕ್ತನಿದ್ದನು. ದಿನನಿತ್ಯ ಶುಚಿರ್ಭೂತನಾಗಿ ಮಲ್ಲಿಕಾರ್ಜುನ ದೇವನಿಗೆ ನಾನಾವಿಧದಲ್ಲಿ ಪೂಜೆ ಸೇವೆಯನ್ನು ಅರ್ಪಿಸುತ್ತಿದ್ದನು. ತನ್ನ ಸಾಮರ್ಥ್ಯದ ಮೇಲೆ ನಂಬಿಕೆಯಿಟ್ಟು, ತನ್ನ ಬತ್ತೀಸಾಯುಧವನ್ನು ಯಾವಾಗಲೂ ತನ್ನೊಂದಿಗೆ ಇಟ್ಟುಕೊಂಡು ಪರಮೇಶ್ವರನಿಗೆ ರಕ್ಷೆಯನ್ನು ಒದಗಿಸುತ್ತಾ ಸಕಲ ಭೋಗಗಳನ್ನು ಅವನಿಗೇ ಅರ್ಪಿಸುತ್ತಾ ನೇಮವನ್ನು ಆಚರಿಸಿಕೊಂಡು ಶಿವಭಕ್ತಿಯಲ್ಲೇ ಲೀನವಾಗಿದ್ದನು. ಒಂದು ದಿವಸ ಮುಂಜಾವಿನ ಅವನ ಸ್ವಪ್ನದಲ್ಲಿ ಶಿವನು ತನ್ನ ಭಕ್ತನೋರ್ವನಿಗೆ ಜೈನರಿಂದ ಒದಗಿದ ಹೊಡೆತ ಮತ್ತು ಅವಮಾನದಿಂದ ನಾನು ತುಂಬಾ ನೊಂದು, ಸೊರಗಿಹೋಗಿದ್ದೇನೆ, ಅವನಿಗೆ ತಾಗಿರುವ ಎಲ್ಲಾ ಪೆಟ್ಟುಗಳು ನನಗೆ ಬಿದ್ದಿವೆ ನೋಡು ಎಂದು ತೋರಿಸುತ್ತಾ ಆ ಶಿವಶರಣನನ್ನು ರಕ್ಷಿಸು ಎಂದು ಆಜ್ಞೆಗೈದನು. ನಾಚಿತಂದೆಯು ಮಾರುಡಿಗೆಯ ಆ ಸ್ಥಳಕ್ಕೆ ಹೋಗಿ ಅಲ್ಲಿ ಶಿವಶರಣನಿಗಾದ ಗತಿಯನ್ನು ಕಂಡು ಮಮ್ಮಲ ಮರುಗಿ ಅವನಿಗೆ ಪ್ರಥಮೋಪಚಾರವನ್ನು ಮಾಡಿದನು. ಅನಂತರ ಅವನ ದುರವಸ್ಥೆಗೆ ಕಾರಣ ಕೇಳಿದಾಗ, ಆ ಶಿವಶರಣರು ಬಣಜಿಗನಾಗಿದ್ದು, ತನ್ನ ವ್ಯಾಪಾರ ವೃತ್ತಿಯನ್ನು ನೆರವೇರಿಸಿ ಬರುವಾಗ ರಾತ್ರಿ ಸಮಯ ಮತ್ತು ಮಳೆ ಹಿಡಿದಿದ್ದರಿಂದ ಅಲ್ಲೇ ಜೈನ ಬಸದಿಯ ಅಂಗಳದಲ್ಲಿ ನೆಲೆಯೂರಬೇಕಾಯಿತು. ಎಂದಿನಂತೆ ಅಲ್ಲೇ ಶಿವಭಕ್ತಿ-ನೇಮಾಚರಣೆ ಮಾಡುತ್ತಿರುವುದನ್ನು ಕಂಡ ಜೈನನೊಬ್ಬ ತನ್ನ ಬಳಗವನ್ನೆಲ್ಲಾ ಕರೆಸಿ ನನ್ನನ್ನು ಓಡಾಡಿಸಿ, ಹಿಡಿದು ಬಡಿದು ಘಾಸಿಗೊಳಿಸಿದರು ಎಂದು ತಿಳಿಸಿ ತನಗಾಗಿರುವ ಮಾನಸಿಕ ಮತ್ತು ಶಾರೀರಿಕ ಪೆಟ್ಟನ್ನು ತೋರಿಸಿ ನೊಂದನು. ಶಿವಶರಣನ ಮೇಲೆ ನಡೆದ ಈ ಧಾಳಿಯಿಂದ ಮಾರುಡಿಗೆಯ ಜೈನರನ್ನು ಸರಿಯಾಗಿ

ಸದೆಬಡೆಯಬೇಕೆಂದು ಉಪಾಯಾಂತರದಿಂದ ಮದುವೆ ಸಂಭ್ರಮದ ಬಂಡಿಯನ್ನು ತಯಾರು ಮಾಡಿ ಅಲ್ಲಿ ಗಂಡಿನ ಸ್ಥಳದಲ್ಲಿ ಶಿವಲಿಂಗವನ್ನು ಕೂರಿಸಿ ಮೆರವಣಿಗೆ ಹೊರಟರು. ರಾತ್ರಿ ಕತ್ತಲಾದ್ದರಿಂದ ಜೈನರನೇಕರು ಆ ದಿಬ್ಬಣಕ್ಕೆ ಅಲ್ಲೇ ಬೀಡುಬಿಡಲು ಅವಕಾಶ ಮಾಡಿಕೊಟ್ಟರು. ಅದರಂತೆ ತಂದಿದ್ದ ತಮ್ಮ ಆಯುಧಗಳನ್ನು ವೀರಾವೇಶ ಬಳಸಿ ಜೈನ ಬಸದಿ, ಜೈನರ ಮೇಲೆ ಹೋರಾಟ ಮಾಡಿ ನಾಶಮಾಡಿದರು. ಜೈನ ಮಂದಿರದಲ್ಲೆಲ್ಲಾ ಶಿವಲಿಂಗವನ್ನು ಸ್ಥಾಪಿಸಿದರು. ಜೈನರ ಆಕ್ರಮಣಾಕಾರಿ ವರ್ತನೆಗೆ ತಕ್ಕ ಬುದ್ಧಿಕಲಿಸಿದ ಈ ವಿಚಾರ ಎಲ್ಲೆಡೆ ಹಬ್ಬಿ ಶಿವಶರಣರೆಲ್ಲಾ ಸಂತಸಕ್ಕೀಡಾದರು. ಜೈನರೆಲ್ಲಾ ನಾಚಿತಂದೆಯ ಸಾಹಸದ ಮುಂದೆ ಕೈಸೋತು ಶರಣಾದರು.

ಹೀಗೆ ಮಾರುಡಿಗೆಯಲ್ಲಿ ಸದಾ ಶಿವನಾಮ ಸ್ತೋತ್ರ, ಶಿವಪೂಜೆಯಿಂದ ಒಡಗೂಡಿ ಶಿವಪುರವೇ ನಿರ್ಮಾಣವಾದಂತಾಯಿತು. ಇಲ್ಲಿ ಶರಣರ ನಿತ್ಯಸತ್ಯದ ಶಿವಭಕ್ತಿಗೆ ಮೆಚ್ಚಿದ ಶಿವನು ನಾಚಿತಂದೆಯ ಭಕ್ತಿಯ ಅಭಿಮಾನವನ್ನು ಕುರಿತು ಶ್ಲಾಘಿಸಿ, ಕೈಲಾಸಕ್ಕೆ ಕರೆತಂದು ಗಣಪದವಿಯನ್ನು ನೀಡಿ ಹರಸಿದನು. ಇಲ್ಲಿ ಶಿವನಿಗೆ ತನ್ನ ಭಕ್ತರೇ ಬಂಧುಬಳಗ, ಆಪ್ತವರ್ಗ ಎಂಬ ಪ್ರೀತಿಯಿಂದ ತನ್ನ ಮನಸ್ಸಿಗಾದ ದುಃಖವನ್ನು ಭಕ್ತರೊಂದಿಗೆ ಹಂಚಿಕೊಳ್ಳುವುದು ಮತ್ತು ಅವರಲ್ಲಿ ತನ್ನ ಭಕ್ತರಿಗಾಗಿರುವ ಅವಮಾನ ಸರಿದೂಗಿಸಿಕೊಳ್ಳುವುದಕ್ಕಾಗಿ ಅಕ್ಕರೆಯಿಂದ ಆಜ್ಞೆ ಮಾಡುವುದು. ಅನಂತರ ಅಷ್ಟೇ ನಿಷ್ಠೆಯಿಂದ ಶಿವಭಕ್ತರು ತಮ್ಮ ಶೈವಧರ್ಮಕ್ಕಾದ ಅವಮಾನವನ್ನು ಧಿಕ್ಕರಿಸಿ ಕ್ರಾಂತಿಯನ್ನೇ ಮಾಡಿ ಧರ್ಮವನ್ನು ಉಳಿಸುವ ಮಾರುಡಿಗೆ ನಾಚಿತಂದೆಯ ಮೇಲೆ ಶಿವನು ಇಟ್ಟಿರುವ ಆತ್ಮೀಯತೆ ಬಂಧುತ್ವ ಎದ್ದುತೋರುತ್ತದೆ.

### ೧೩. ಆದಯ್ಯನ ರಗಳೆ :-

ಕೈಲಾಸದ ಒಡ್ಡೋಲಗದಲ್ಲಿ ಈಶ್ವರನ ಸನ್ನಿಧಾನದಲ್ಲಿ ಅನಾದಿ ಎಂಬ ಹೆಸರಿನ ಗಣಾಧಿನಾಥನು ದೇವಕನ್ಯೆಯನ್ನು ನೋಡಿ ಪರಸ್ಪರ ಇಬ್ಬರೂ ವ್ಯಾಮೋಹಿತರಾದರು. ಇದನ್ನು ಕಂಡ ಈಶ್ವರನು ಅವರ ಮೇಲೆ ಕರುಣೆದೋರಿ, ನೀವಿಬ್ಬರೂ ಭೂಲೋಕದಲ್ಲಿ ಹುಟ್ಟಿ ತೃಪ್ತಿಯಿಂದ ಕಾಮಸುಖವನ್ನು ಅನುಭವಿಸಿ ಕೈಲಾಸಕ್ಕೆ ಬನ್ನಿರಿ ಎಂದು ಹರಸಿದನು. ಇದರಿಂದ ಮುಜುಗರಕ್ಕೊಳಗಾದ ಅವರಿಬ್ಬರೂ ತಮಗೆ ಕೈಲಾಸದ ಸ್ಥಾನ ಮತ್ತು ತಮ್ಮ ಚರಣ ಸೇವೆಯ ಭಾಗ್ಯವಿಲ್ಲವೆ? ಎಂದು ಕೇಳ ಗದ್ಗದಿತರಾದರು. ಅದಕ್ಕೆ ಪರಮೇಶ್ವರನು ಅಂಜಿಕೆಯ ಅವಶ್ಯಕತೆ

ಬೇಡ ಪುಲಿಗೆರೆಯಲ್ಲಿರುವ ಜೈನರ ಹಾವಳಿಯನ್ನು ನಾಶಪಡಿಸಿ ಶೈವಧರ್ಮದ ಪ್ರಭೆಯನ್ನು ಬೆಳಗಿಸಬೇಕೆಂದು ಆಜ್ಞೆಯನ್ನು ಮಾಡಿ ಪ್ರೀತಿಯಿಂದ ಅವರನ್ನು ಕಳಿಸಿದನು.

ಉತ್ತರ ಭಾಗದ ಶಿವಪುರದ ಶಿವದಂಪತಿಗಳಿಗೆ ಮಗನಾಗಿ ಹುಟ್ಟಿದ ಅನಾದಿಯು ಆದಯ್ಯನೆಂದು ನಾಮಾಂಕಿತನಾಗಿ ಸಜ್ಜನಿಕೆ, ವಿಧೇಯತೆ, ಶಿವಭಕ್ತಿಯನ್ನು ಒಳಗೊಳಗೇ ಮೈಗೂಡಿಸಿಕೊಂಡು ಬೆಳೆದ ಮಗುವನ್ನು ನೋಡಿ ಸಂತೋಷಿಸಿದ ತಂದೆಯು ಅವನಿಗೆ ವ್ಯಾಪಾರ–ವ್ಯವಹಾರ ತಿಳುವಳಿಕೆಯನ್ನು ತಿಳಿಸಿ ಅನ್ಯ ಊರಿಗೆ ವ್ಯಾಪಾರ ವಹಿವಾಟಿಗಾಗಿ ಕಳುಹಿಸಿದರು. ಪುಲಿಗೆರೆ ಪಟ್ಟಣದಲ್ಲಿ ಜೈನ ಪೂಜಾರಿಯ ಸತಿಯ ಹೊಟ್ಟೆಯಲ್ಲಿ ದೇವಕನ್ಯೆಯು ಹುಟ್ಟಿ ಬಹಳ ಸೊಗಸಾಗಿ ಬೆಳೆದು ಪದ್ಮಾವತಿಯೆಂಬ ಹೆಸರಿನಿಂದ ಕರೆಯಲ್ಪಟ್ಟಿರುತ್ತಾಳೆ. ಪದ್ಮಾವತಿಯಲ್ಲಿ ಮನಸ್ಸೂರೆಗೊಂಡ ಆದಯ್ಯ ಇಬ್ಬರೂ ಪರಸ್ಪರ ಒಂದಾಗಿ ಸತಿ ಪತಿಗಳಾಗಿ ಸುಖದಲ್ಲಿ ಜೀವನವನ್ನು ಸಾಗಿಸುತ್ತಿದ್ದರು. ಹೀಗಿರುವಾಗ ಒಮ್ಮೆ ಉದ್ಯಾನವನದಲ್ಲಿ ಮೂವರು ಮಹಾನ್ ತಪಸ್ವಿಗಳು ಈ ಹುಲಿಗೆರೆಯು 'ಹುಲಿ' ಯ ಸ್ವರೂಪವನ್ನೇ ಪಡೆದುಕೊಂಡು ಬಿಟ್ಟಿದೆ ಎಲ್ಲೆಡೆ ಜೈನ ಬಸದಿಗಳು, ಜೈನರ ಉಪಟಳ ಹೆಚ್ಚಾಗಿ ಎರಡು ದಿನಗಳಿಂದ ಉಪವಾಸದಿಂದ ಇದ್ದೇವೆ ಎಂದು ತಿಳಿಸಿ ನಿನ್ನ ವಿಭೂತಿ ಬಳಿದ ಹಣೆಯನ್ನು ನೋಡಿ ಸಂತೋಷಿಸಿ ನಿನ್ನ ಬಳಿ ಬಂದೆವು ಎಂದರು. ಸತಿಯು ಅವರಿಗಾಗಿ ಬೋನವನ್ನು ಮನೆಗೆ ಹೋಗಿ ಸಿದ್ಧಪಡಿಸುವೆನು, ಸ್ವಲ್ಪ ಸಮಯ ಬಳಿಕ ಈ ತಪಸ್ವಿಗಳನ್ನು ಕರೆತನ್ನಿರಿ ಎಂದು ಮನೆಗೆ ಬಂದು ಶುಚಿ–ರುಚಿಯಾದ ಅಡುಗೆಯನ್ನು ಸಿದ್ಧ ಪಡಿಸಿರಬೇಕಾದರೆ, ಇವಳ ತಂದೆ ಪಾರಿಸಪಂಡಿತರು ಜೈನ ಋಷಿಗಳನ್ನು ಮನೆಗೆ ಕರೆಸಿ, ಮಗಳ ಮಾತಿಗೆ ವಿರೋಧವಾಗಿ ಆ ಬೋನವನ್ನೆಲ್ಲಾ ಉಣಬಡಿಸಿದನು. ಆ ಸಮಯಕ್ಕೆ ಅಲ್ಲಿಗೆ ಆದಯ್ಯನು ಕರೆತಂದ ಶಿವಭಕ್ತರಿಗೆ ಅನ್ನವಿಲ್ಲದೆ ಹೋದಾಗ ಕಿಡಿಕಾರಿ ಎಲ್ಲರ ಮೇಲೂ ಹರಿಹಾಯ್ದು ಊರಿನೊಳಗೆ ಹಣ್ಣುಗಳನ್ನು ಕೊಡಿಸಿ ಅವರನ್ನು ಸಂತೃಪ್ತಪಡಿಸಿದನು. ಎಲ್ಲರ ಮೇಲೂ ಕೋಪಿಸಿಕೊಂಡು ಕುಳಿತ ಆದಯ್ಯನು, ಊಟಕ್ಕೆ ಕರೆದ ಪದ್ಮಾವತಿಯನ್ನು ದಂಡಿಸಿ ತಾನು ಉಣ್ಣುವುದಿಲ್ಲ ಎಂದು ಕಿಡಿಕಾರಿದನು. ಇದನ್ನು ಕೇಳಿಸಿಕೊಂಡು ಮಾವ ಪಾರಿಸಪಂಡಿತ ಆದಯ್ಯನು ಸೋಮನಾಥನ ವಿಗ್ರಹವನ್ನು ಪುಲಿಗೆರೆಯ ಬಸದಿಗೆ ತಂದಲ್ಲದೆ ಅವನು ಉಣ್ಣುವುದಿಲ್ಲ ಎಂದು ನಗೆಯಾಡಿದನು. ಇದರಿಂದ ಸಿಡಿದೆದ್ದ ಆದಯ್ಯನು 'ನಿಮ್ಮ ಮಾತೇ ನನಗೆ ಭಾಷೆ, ಅದೇ ನನ್ನ ನೇಮ' ಎಂದು ಹೇಳಿ ಮನೆಯಿಂದ ಹೊರಟನು. ಅನ್ನ ಆಹಾರವಿಲ್ಲದೆ ನಡೆದೇ ಸೌರಾಷ್ಟ್ರದ ಸೋಮನಾಥನ ಲಿಂಗವನ್ನು ಪುಲಿಗೆರೆಗೆ ತರಲು ಹೊರಟನು. ಇಪ್ಪತ್ತೇಳು ದಿನಗಳ ಬಳಿಕ

ವಯೋವೃದ್ಧನ ವೇಷದಲ್ಲಿ ಎದುರಾದ ಶಿವನೊಂದಿಗೆ ಮಾತನಾಡಿ ನಾನೇ ನಾಳೆ ಪುಲಿಗೆರೆಗೆ ಬರುವೆನು. ನೀನು ಇಲ್ಲೇ ಬಿಲ್ವ ವೃಕ್ಷದ ಕೆಳಗೆ ಮಲಗಿರು ನಾಳೆ ಪುಲಿಗೆರೆಯಲ್ಲಿರುತ್ತೇನೆ, ನಾನು ನೇರವಾಗಿ ಅಲ್ಲಿಗೆ ಬರುತ್ತೇನೆ ಎಂಬ ಅಭಯವನ್ನಿತ್ತನು. ಮಾತಿನಂತೆ ಮಾರನೆಯ ದಿನ ಪುಲಿಗೆರೆಯಲ್ಲಿ ಬಂದಿದ್ದ ಆದಯ್ಯನನ್ನು ಕಂಡು ಸಂತೋಷಿಸಿದ ಪದ್ಮಾವತಿಗೆ ಸೋಮನಾಥನು ಬಂದು ಜಿನಬಸದಿಯಲ್ಲಿ ಶಿವಲಿಂಗವಾಗಿ ಉಳಯುವ ವಿಚಾರ ತಿಳಿಸಿದನು. ಎಲ್ಲರೂ ಆಶ್ಚರ್ಯಚಕಿತರಾದರು. ಇದಕ್ಕೆಲ್ಲ ಆಸ್ಪದ ಕೊಡದ ಹಾಗೆ ಜೈನರೆಲ್ಲಾ ಒಂದಾಗಿ ಶೈವರನ್ನು ತಡೆದರು. ಆದರೆ ಬಸದಿಯ ಬಾಗಿಲುಗಳೆಲ್ಲಾ ತೆರೆಯದಾದಾಗ ಆದಯ್ಯನು ಜಿನ ಪ್ರತಿಮೆಗಳ ಬದಲು ಮನಃಪೂರ್ವಕವಾಗಿ ಶಿವನನ್ನು ಧ್ಯಾನಿಸಿದಾಗ ಬಾಗಿಲುಗಳು ತೆರೆದು ಅಲ್ಲಿ ಜಿನ ಪ್ರತಿಮೆಗಳ ಬದಲು ಲಿಂಗ ಪ್ರತಿಷ್ಠಾಪನೆ ಆಗಿರುವುದನ್ನು ಗಮನಿಸಿದ ಜೈನರೆಲ್ಲಾ, ಆದಯ್ಯನು ಮಂತ್ರ ಶಕ್ತಿಯಿಂದ ಸಾಧ್ಯವಾಗಿಸಿದ್ದಾನೆ ಎಂದು ಅವನ ಮೇಲೆ ದಾಳ ಇಡಲು ಆದಯ್ಯನು ತನ್ನ ಬತ್ತೀಸಾಯುಧವನ್ನು ಪ್ರಯೋಗಿಸಿದಾಗ ಜೈನರೆಲ್ಲಾ ಸೋತು ಶರಣಾದರು. ಆಗ ಸೋಮನಾಥ ಲಿಂಗದಿಂದ ಶಿವನು ಪ್ರತ್ಯಕ್ಷನಾಗಿ ಕೈಲಾಸದಲ್ಲಿ ಆದಯ್ಯ-ಪದ್ಮಾವತಿಯರಿಗೆ ಗಣಪದವಿನೀಡಿ ಹರಸಿದನು.

ಕೈಲಾಸದಲ್ಲಿ ಏನಾದರೊಂದು ಸಣ್ಣ ತಪ್ಪೊಂದನ್ನು ಮಾಡಿ ಭೂಲೋಕಕ್ಕೆ ಬಂದು ಶಿವದ್ರೋಹಿಗಳಾದ ಜೈನರನ್ನು ಸಂಹಾರಮಾಡಿ ಶಿವಾಲಯವನ್ನು ನಿರ್ಮಾಣ ಮಾಡಿ ಮತ್ತೆ ಕೈಲಾಸವನ್ನು ಸೇರುವ ಆದಯ್ಯ ಮತ್ತು ಪದ್ಮಾವತಿ, ಪುಲಿಗೆರೆಯನ್ನು ಶಿವಭಕ್ತರಿಂದ ತುಂಬಿದ ಶಿವಪುರವನ್ನು ಸೌರಾಷ್ಟ್ರದ ಸೋಮನಾಥನ ಸುಕ್ಷೇತ್ರವನ್ನಾಗಿ ಮಾಡುವ ಶಿವಭಕ್ತಿ ಗಮನಾರ್ಹವಾದುದು. ಇಲ್ಲಿ ಹರಿಹರನು ಜೈನ ಮತ್ತು ವೀರಶೈವರ ನಡುವಿನ ಸಂಘರ್ಷವನ್ನು ತಿಳಿಸಿ ಶಿವಭಕ್ತನಾದ ಆದಯ್ಯನ ಮೂಲಕ ಜೈನರ ನಾಶವನ್ನು ಮಾಡಿಸಿದ ಕಾರ್ಯವನ್ನು ಪ್ರಧಾನವಾಗಿರಿಸಿರುವುದನ್ನು ಗಮನಿಸಿದರೆ ಶೈವ ಧರ್ಮದ ಏಳಿಗೆಗೆ ಅಡ್ಡಿಯಾದವರನ್ನು ಶಿವಭಕ್ತರು ಬುಡಸಮೇತ ಕಿತ್ತುಹಾಕುವ ಮನೋನಿಷ್ಠತೆಯನ್ನು ಹೊಂದಿರುತ್ತಾರೆ ಎಂಬುದನ್ನು ವಿಶ್ಲೇಷಿಸಿದ್ದಾನೆ. ಆದಯ್ಯನಿಗೆ, ಶೈವ ಧರ್ಮಕ್ಕೆ ಜೈನರಿಂದ ಎದುರಾಗುತ್ತಿರುವ ಉಪಟಳವನ್ನು ನಿರ್ನಾಮ ಮಾಡಬೇಕೆಂಬ ಕಾರ್ಯವನ್ನು ನಿಯುಕ್ತಿಗೊಳಿಸಿ ತಾನು ನಿನಗೆ ರಕ್ಷಕನಾಗಿರುತ್ತೇನೆ ಎಂಬ ದೃಢ ವಿಶ್ವಾಸವನ್ನು ಶಿವನು ನೀಡಿ ಕಳಿಸುತ್ತಾನೆ. ಅಲ್ಲದೆ ಕಾಲ್ನಡಿಗೆಯಲ್ಲಿ ಸೌರಾಷ್ಟ್ರಕ್ಕೆ ಹೋಗಿ ಶಿವಲಿಂಗವನ್ನು ತರಬೇಕೆಂದು ಇಪ್ಪತ್ತೆಂಟು ದಿನಗಳ ಕಾಲ ಅನ್ನ-ಆಹಾರವಿಲ್ಲದೆ ಆಯಾಸವಾಗಿ

ನಡೆದು ಹೋಗುತ್ತಿದ್ದಾಗ ಅವನನ್ನು ಮಗನೆ ಎಲ್ಲಿಗೆ ಹೊರಟಿರುವೆ? ತುಂಬಾ ಬಳಲಿರುವೆಯಲ್ಲಾ ಎಂದು ಉಪಚರಿಸಿ ಪ್ರೀತಿಯಿಂದ ಮಾತನಾಡಿಸಿದಾಗ ಆದಯ್ಯನಿಗೆ ಅನುರೂಪವಾದ ತೃಪ್ತಿ ಉಂಟಾಯಿತು. ತಾನೇ ಸೋಮೇಶ್ವರ ಎಂದು ಹೇಳಿ, ನಿನ್ನ ಭಕ್ತಿಗೆ ಮೆಚ್ಚಿದ್ದೇನೆ, ತನ್ನ ವೃದ್ಧ ಮಾಹೇಶ್ವರನ ವೇಷವನ್ನು ತೋರಿಸಿ ಹರಸಿ, ಪುಲಿಗೆರೆಗೆ ಸೋಮವಾರದ ದಿನದಂದು ನಾನೇ ಬರುವೆನು ಎಂದು ಅವನಿಗೆ ಅಭಯ ನೀಡಿ ಕಳಿಸುತ್ತಾನೆ. ಅನಂತರ ಈಶ್ವರನು ಪ್ರೀತಿಯಿಂದ ಆದಯ್ಯನನ್ನು ಅಪ್ಪಿ ಮುದ್ದಾಡಿ ಜೈನರ ಹಾವಳಿಯನ್ನು ನಾಶಮಾಡಿಸಿ, ಸೋಮೇಶ್ವರ ದೇವಾಲಯ ನಿರ್ಮಾಣವಾಗುವಂತೆ ಮಾಡಿದನು. ಈ ಎಲ್ಲಾ ಸಂಗತಿಗಳಲ್ಲೂ ಆದಯ್ಯನ ವಿಶೇಷಭಕ್ತಿಯನ್ನು ಗುರುತಿಸಿ ಕೊಂಡಾಡಿದ ಶಿವನು ಅವನೊಡನೆ ಪ್ರೀತಿ, ಸ್ನೇಹ ವಾತ್ಸಲ್ಯದಂತಹ ಬಂಧುತ್ವವನ್ನು ಹೊಂದಿರುತ್ತಾನೆ. ತನ್ನ ಭಕ್ತರ ಮೇಲೆ ಕರುಣೆದೋರುವ ಶಿವನು ಅವರನ್ನು ಬೆಂಗಾವಲಿನಂತೆ ಕಾಯ್ದು ಅವರಿಂದ ಲೋಕೋದ್ಧಾರದ ಕಾರ್ಯವನ್ನು ಮಾಡಿಸುವ ಪರಿಯನ್ನು ಹರಿಹರ ಬಣ್ಣಿಸಿದ್ದಾನೆ.

### ೧೭. ಶಂಕರ ದಾಸಿಮಯ್ಯನ ರಗಳೆ :-

ಕಂದಶಿಲೆ ಎಂಬ ಪಟ್ಟಣದಲ್ಲಿ ಗೋವಿಂದ ದೇವ ಅವನ ಹೆಂಡತಿ ಉಮ್ಮವ್ವೆ ಎಂಬ ಶಿವಭಕ್ತರಿದ್ದರು. ಜೀವನದಲ್ಲಿ ವೈರಾಗ್ಯತಾಳಿದ ಗೋವಿಂದ ದೇವ ವಾರಣಾಸಿಗೆ ತೆರಳಿ ಅಲ್ಲಿ ಶಿವಧ್ಯಾನದಲ್ಲಿ ಮುಳುಗುವುದಾಗಿ ಸಂಕಲ್ಪತೊಟ್ಟನು. ಅದರಂತೆ ಹೊರಟು ನವಿಲೆಯೂರಿಗೆ ಬಂದು ಶಂಕರನ ದರ್ಶನ ಮಾಡಿ ಶಿವಾಲಯದ ರಂಗ ಮಂಟಪದಲ್ಲಿ ಕುಳಿತನು. ಅಲ್ಲಿನ ಜನರು ಶಿವಶಂಕರನಿಗೆ ವೈವಿಧ್ಯಾಚಾರಣೆಗಳಿಂದ ವಿಶಿಷ್ಟವಾಗಿ ಪೂಜೆ ಮಾಡಿ ಆರಾಧಿಸುವ ಬಗೆಯನ್ನು ಕಂಡು ಸಂತೋಷಿಸಿ ವಾರಾಣಾಸಿಗೆ ಹೋಗುವ ಬದಲು ಇಲ್ಲೇ ಸದಾ ಶಿವಪೂಜೆಯ ನೇಮವನ್ನು ಕೈಗೊಳ್ಳುವುದು ಉತ್ತಮವೆಂದು ಮಳೆ, ಗಾಳಿ, ಬಿಸಿಲಿಗೆ ಅಂಜದೆ ತನ್ನ ವ್ರತವನ್ನು ಸಾಂಗವಾಗಿ ಮಾಡಿ ಮನೆಗೆ ಮರಳುತ್ತಿದ್ದ ಕೊನೆಗೆ ಶಿವನ ಆಜ್ಞೆಯಂತೆ ಅದೇ ಊರಿನಲ್ಲಿ ಮನೆಮಾಡಿಕೊಂಡು ಸದಾ ಶಿವನ ಸೇವಾತತ್ವರನಾಗಿದ್ದನು.

ಒಮ್ಮೆ ಅವನಿಗೆ ನಿನಗೆ ನೊಸಲಕಣ್ಣನ್ನು ಕೊಟ್ಟು ನಾಳೆ ಹರಸುತ್ತೇನೆ ಎಂದು ಶಿವನ ಆಲಯದಿಂದ ಧ್ವನಿಕೇಳಲು ಅದರಂತೆ ಶುಚಿರ್ಭೂತನಾಗಿ ಬಂದು ಆಲಯದಲ್ಲಿ ಕುಳಿತನು. ಶಿವನು ಅವನನ್ನು ಪ್ರೀತಿಯಿಂದ ಆಲಂಗಿಸಿ ತನ್ನ ಹಣೆಯನ್ನು ಅವನ ಹಣೆಗೆ ಒತ್ತಿ ತನ್ನ

ನೊಸಲಕಣ್ಣು ಗೋವಿಂದ ದೇವನಿಗೆ ಬರುವಂತೆ ಮಾಡಿ ಹರಸಿದನು. ಅನಂತರ ತನಗೆ ಶಿವನು ಪ್ರೀತಿಯಿಂದ ಆ ಕಣ್ಣನ್ನು ಬರಿಸಿದಾಗ ಮಹಾಕೋಲಾಹಲವೇ ಆಗುವಂತೆ ಅಲ್ಲಿ ವಿಷ್ಣುವಿನ ವಿಗ್ರಹಗಳೆಲ್ಲಾ ಒಡೆದು ಪುಡಿಯಾಗಿದ್ದನ್ನು ನೋಡಿ ಅಚ್ಚರಿಗೊಂಡು ತನಗೆ ಈ ಗೋವಿಂದ ದೇವ ಎಂಬ ಹೆಸರು ಬೇಡ, ಶಿವನೇ ಪ್ರೀತಿಯಿಂದ ನೀನೇ ಒಂದು ಹೆಸರು ಸೂಚಿಸು ಎಂದು ಹೇಳ ಶಿವನಿಂದ ಶಂಕರದಾಸಿಮಯ್ಯನೆಂಬ ಹೆಸರು ಪಡೆದು ಸದಾ ಶಿವಪೂಜಾನಿರತನಾಗಿದ್ದನು. ಮನೆ ಮನೆಗೆ ಹೋಗಿ ಭಿಕ್ಷೆ ತಂದ ಧಾನ್ಯದಲ್ಲೇ ದಾಸೋಹಮಾಡಿಕೊಂಡು ಸುಖದಿಂದಿದ್ದರು. ಭಿಕ್ಷೆಗೆ ಹೋದ ಸಂದರ್ಭದಲ್ಲಿ ಶಂಕರಗಂಡ ಜೋಳ ತುಟ್ಟಿಯಾಗಿದೆ ನೀಡಲು ಸಾಧ್ಯವಿಲ್ಲ ಎಂದು ಒಂದು ಮನೆಯಾಕೆ ಹೇಳದಾಗ ತನ್ನ ಶಂಕರ ಹೆಸರನ್ನು ಜೋಳಕ್ಕೆ ಇಟ್ಟಿದ್ದಾರೆಯೇ ಎಂದು ಕಡು ಮುಳದು ಇನ್ನೆಂದೂ ಅದನ್ನು ನಾನು ತಿನ್ನುವುದಿಲ್ಲ ಎಂದು ವರ್ಜಿಸಿದನು. ಆ ಶಿವನು ನೀನು ಸೇವಿಸುವ ಗುಂಜಾದಿ ವಿಷತ್ರಯಗಳನ್ನೇ ನನಗೆ ನೈವೇದ್ಯ ಮಾಡಿಡು ಎಂದು ಹೇಳದಾಗ ಅದರಂತೆ ಹಾಗೆ ಮಾಡಿ ಶಂಕರದಾಸಿಮಯ್ಯ ಶಿವ ಭಕ್ತಿಯಲ್ಲಿ ಮುಳುಗಿ ಸುಖದಿಂದಿದ್ದನು. ಒಮ್ಮೆ ಶಿವನು ಶಿವಪುರ ಕ್ಷೇತ್ರಗಳನ್ನು ಭೇಟಿಮಾಡಿ ನಿನ್ನ ಶಿವಭಕ್ತಿ ಸಾಮರ್ಥ್ಯವನ್ನು ತೋರು ಬಾ ಮಗನೇ ಎಂದು ಆಜ್ಞೆ ಮಾಡಿದನು. ಅದರಂತೆ ತನ್ನ ಶಿವದಾಸಿಯನ್ನು, ಗುಂಜಾದಿ ವಿಷವನ್ನು ಅರೆಯುವ ಶಿಲೆಯನ್ನು ವಕ್ರಪಾದನ ತಲೆಯ ಮೇಲೆ ಹೊರೆಸಿಕೊಂಡು ಮುದುನೂರಿಗೆ ಬಂದನು. ಅಲ್ಲಿ ನನಗೆ ರಾಮನಾಥನಿಂದ ತವನಿಧಿ ದೊರಕಿದೆ ಎಂಬ ಸೊಕ್ಕಿನಿಂದ ಮೆರೆಯುತ್ತಿದ್ದ ಜೇಡರ ದಾಸಿಮಯ್ಯನ ಗರ್ವವನ್ನು ತನ್ನ ಶಿವಭಕ್ತಿಯ ಚಮತ್ಕಾರದಿಂದ ಮುರಿದನು. ದಾಸಿಮಯ್ಯನಲ್ಲಿದ್ದ ಅಹಂಕಾರ ಇಳದು ಹೆಂಡತಿ ದುಗ್ಗಳೆಯು ಜೊತೆಗೂಡಿ ಬಂದು ಶಂಕರ ದಾಸಿಮಯ್ಯನ ಪಾದಗಳ ಮೇಲೆ ಬಿದ್ದು ಕ್ಷಮೆಯಾಚಿಸಿ ರಾಮನಾಥನು ಕೊಟ್ಟ ತವನಿಧಿ ಉಕ್ಕಿ ಬರಲಿ ಎಂದು ವರವನ್ನು ಪಡೆದು ಸುಖದಿಂದಿದ್ದರು. ಮುದನೂರಿನಲ್ಲಿ ಇವನ ನೊಸಲ ಕಣ್ಣನ್ನು ಪರೀಕ್ಷಿಸಬೇಕೆಂದು ಅವನ ಬಗ್ಗೆ ಇರುವ ಸುಳ್ಳು ಮಹಿಮೆಗಳನ್ನು ಅಳಸಿಹಾಕಬೇಕೆಂಬ ಕುಹಕಿಗಳ ಮಾತಿಗೆ ಓಗೊಟ್ಟ ರಾಜನು ಜಯಸಿಂಹರಾಯನು ಮಂತ್ರಿಗಳ ಜೊತೆ ಹೋಗಿ ಶಂಕರದಾಸಿಮಯ್ಯನ ಬಳ ಹೋಗಿ ಪರೀಕ್ಷಿಸಿದಾಗ ಅವನು ಮೊದಲೇ ಹೇಳದ್ದಂತೆ ನರಸಿಂಹ ವಿಗ್ರಹಗಳೆಲ್ಲಾ ಒಡೆದು, ಸಿಡಿದು ಚೂರು ಚೂರಾಗಿ ಬೆಂದು ಹೋದವು. ತಕ್ಷಣ ಅವರೆಲ್ಲರೂ ಕ್ಷಮೆಕೇಳ ದಾಸಿಮಯ್ಯನಿಗೆ ಶರಣಾದರು ಶೈವರು ಮತ್ತು ವೈಷ್ಣವರಿಗೆ ಇದ್ದ ಸಂಘರ್ಷದ ಸ್ವರೂಪವನ್ನು ತಿಳಸುತ್ತಾ ಶಿವಭಕ್ತರ ಶಕ್ತಿಯು ವಿಷ್ಣುವಿನ ವಿಗ್ರಹದ ತಲೆಯನ್ನು ಒಡೆದು ಹಾಕುವಂತದ್ದೂ ಎಂಬ ಕವಿಯ ನಿಲುವು ತಿಳಸಿ ಶೈವರ ಮೇಲುಗೈಯನ್ನು ತೋರಿಸುತ್ತದೆ. ಮೈಲಾರನ ದೇವಾಲಯದೊಳಕ್ಕೆ ಒಮ್ಮೆ ಶಂಕರದಾಸಿಮಯ್ಯ

ಬಂದರೆ ಎಲ್ಲಿ ನನ್ನ ವಿಗ್ರಹವು ಒಡೆದು ಸೀಳುವುದೋ ಎಂದು ಗಾಬರಿಗೊಳ್ಳುತ್ತದೆ. ಮೈಳಾದೇವಿ ಪೂಜೆ ಸಾಮಾಗ್ರಿಗಳನ್ನು ತಂದು ಮೈಲಾರನಿಗೆ ಪೂಜೆ ಮಾಡಿಕೊಡಲು ಶಂಕರದಾಸಿಮಯ್ಯನಿಗೆ ನೀಡಿದರೆ ಅವನು ಗಂಧಾದಿದ್ರವ್ಯಗಳನ್ನೆಲ್ಲ ತಾನೇ ಲೇಪನ ಮಾಡಿಕೊಂಡು ಪೂಜಾಪರಿಕರಗಳನ್ನು ತಾನೇ ಉಪಯೋಗಿಸಿಕೊಂಡು ಪ್ರಸಾದ ಸೇವಿಸಿ ತಾಂಬೂಲವನ್ನು ತಿಂದನು. ಇದರಿಂದ ಕೋಪಗೊಂಡ ಮೈಳಾದೇವಿ ಮೈಲಾರನಿಗೆ ನೀಡಿದ ಪೂಜಾಸಾಮಾಗ್ರಿಗಳನ್ನು ನೀನೇ ಸೇವಿಸಿರುವೆಯಲ್ಲಾ ಇದೇನಿದು ಎಂದು ಗದರಿಸಿದಳು. ಆಗ ದಾಸಿಮಯ್ಯನು ಅವನ ಬಾಯ್ದಂಬುಲವನ್ನು ತೆಗೆದು ಮೈಲಾರನಿಗೆ ಸ್ವೀಕರಿಸಲು ಹೇಳಿದಾಗ ಅದನ್ನೇ ಸ್ವಲ್ಪ ಸ್ವೀಕರಿಸಿದ ವಿಷಯ ಎಲ್ಲೆಡೆ ರಾರಾಜಿಸಿ ಊರ ಜನರೆಲ್ಲಾ ಅವನನ್ನು ವಿರೋಧಿಸಿದರು. ಶಂಕರ ದಾಸಿಮಯ್ಯನು ಮೈಲಾರನಿಗೆ ತನ್ನ ಕೊಡೆ ಹಿಡಿದು ಬರಬೇಕೆಂದು ಆದೇಶಿಸಿದಾಗ ಅದರಂತೆ ನಡೆದು ಬಂದನು. ಅನಂತರ ಅದನ್ನು ವಕ್ರಪಾದನಿಗೆ ನೀಡಲು ಹೇಳಿ ಕೊಡೆ ಮೈಲಾರನೆಂದು ಹೆಸರಾದನು ಕೊನೆಗೆ ಎಲ್ಲರು ಸಂಭ್ರಮದಿಂದ ಅವನ ಪಾದಗಳಿಗೆರಗಿ ಬೀಳ್ಕೊಡಲು ನವಿಲೆಯೂರಿಗೆ ಬಂದು ಗಣಪರ್ವವನ್ನು ಮಾಡಿ ಅದಕ್ಕಾಗಿ ನೆಲ್ಲರಾಶಿಯನ್ನು ಕುಟ್ಟಿ ಮಾರಿ-ಮಸಣಿಗಳಿರುವ ಮಾಳಿಗೆಗೆ ಕಳುಹಿಸಿ, ಕುಟ್ಟಿದ ಭತ್ತದ ರಾಶಿಯನ್ನು ತಂದು ಪಂಚ ಪಕ್ವಾನ್ನಗಳನ್ನು ಮಾಡಿ ಶಿವನಿಗೆ ನೈವೇದ್ಯಮಾಡಿ ಸಂತೋಷದಿ ಶಿವನ ಸಂಭ್ರಮಾಚರಣೆಯಲ್ಲಿರಲು ಅವನಿಗೆ ಸದ್ಯೋಜಾತನೆಂಬ ಮಗ ಹುಟ್ಟಿದನು. ಅವನಿಗೆ ೭ ವರ್ಷತುಂಬಲು ಮಾಡುವ ಸಂದರ್ಭದಲ್ಲಿ ಬ್ರಾಹ್ಮಣತ್ವವನ್ನು ಕಳೆಸಿ ಶಿವ ಶರಣತ್ವವನ್ನು ಕಲಿಸಿ ಎಲ್ಲೆಡೆ ಭಕ್ತಿ ಪರಿಸರವನ್ನು ನಿರ್ಮಿಸಿದನು. ಶಿವನೊಂದಿಗಿನ ಇವನ ಪ್ರೀತಿಯ ಸ್ನೇಹತ್ವದ ಭಕ್ತಿ ಇಷ್ಟೆಲ್ಲಾ ಕಾರ್ಯಗಳನ್ನು ಸಾಧಿಸುವಂತೆ ಮಾಡಿತು. ಶಿವನು ದಾಸಿಮಯ್ಯನನ್ನು ನವಿಲೆಯೂರಿನಲ್ಲೇ ಉಳಿಯುವಂತೆ ಮಾಡಿ ಸದಾ ತನ್ನ ಬಳಿಯಲ್ಲೇ ಇರಲು ಆಜ್ಞೆಮಾಡಿದುದನ್ನು ಗಮನಿಸಿದಾಗ ಅವನ ಮೇಲಿಟ್ಟಿರುವ ಆತ್ಮೀಯ ಸ್ನೇಹದಿಂದ ಎಂಬುದು ವ್ಯಕ್ತವಾಗುತ್ತದೆ. ಬೇಡರ ಕಣ್ಣಪ್ಪನಿಂದ ಕಣ್ಣನ್ನು ಪಡೆದ ಶಿವನು ತನ್ನ ನೊಸಲಕಣ್ಣನ್ನು ಪ್ರೀತಿಯಿಂದ ಶಂಕರದಾಸಿಮಯ್ಯನಿಗೆ ನೀಡುವುದು, ಅವನಿಂದ ಅಪಾರ ಪವಾಡಗಳನ್ನು ಮಾಡಿಸುವುದು, ಸದಾ ಅವನೊಂದಿಗೆ ರಕ್ಷಕನಂತೆ ಇದ್ದು ಕಾಯುವುದು ಇವೆಲ್ಲವೂ ಶಿವನು ತನ್ನ ಭಕ್ತನ ಮೇಲಿಟ್ಟಿರುವ ಪ್ರೀತಿ ಮತ್ತು ಸ್ನೇಹದ ಸಂಕೇತವೇ ಹೊರತು ಬೇರೆಯಲ್ಲ. ಅಪಾರವಾದ ಸ್ನೇಹತ್ವದಿಂದಲೇ ಶಂಕರದಾಸಿಮಯ್ಯನು ಗಣಪರ್ವವನ್ನು ಮಾಡಿ ಬೇಧ-ಭಾವವೆಣಿಸದೆ ಶಿವಭಕ್ತರನ್ನೆಲ್ಲಾ ಒಂದುಗೂಡಿಸಿ ಎಲ್ಲರಿಗೂ ಶಿವಭಕ್ತಿ ಬೆಳೆಯುವಂತೆ ಮಾಡಿ ಶಿವನ ಆಶೀರ್ವಾದದ ಹಾರೈಕೆಯನ್ನು ಬೇಡಿ ಶಿವನ ಕರುಣೆ ಎಲ್ಲರ ಮೇಲೆ ಉಂಟಾಗುವಂತೆ

ಮಾಡುವುದು ಶಂಕರದಾಸಿಮಯ್ಯನ ಈ ಅಪಾರ ಶಿವಭಕ್ತಿಗೆ ಮೆಚ್ಚಿದ ಶಿವನು ಕೈಲಾಸದಲ್ಲಿ ಗಣಪದವಿಯನ್ನು ನೀಡಿ ಅವನ ಭಕ್ತಿ ಮಹಿಮೆಯನ್ನು ಎಲ್ಲರ ಬಳ ಹೊಗಳ ಹರಸಿದನು. ಇಲ್ಲಿ ಶಿವನು ಮತ್ತು ಶಂಕರ ದಾಸಿಮಯ್ಯನು ಒಂದು ನಾಣ್ಯದ ಎರಡು ಮುಖವೆಂಬಂತೆ ಒಬ್ಬರನ್ನೊಬ್ಬರು ಬಿಟ್ಟಿರದೆ ಅಂಟಿಕೊಂಡಿರುವುದು ತಿಳಯುತ್ತದೆ ಇವೆಲ್ಲಾ ಬಿಡಿಸಲಾರದ ಬಂಧ ರಾವಣನಿಗೆ ಆತ್ಮಲಿಂಗವನ್ನೇ ನೀಡಿದ ಶಿವನು ತನ್ನ ನೆಚ್ಚಿದ ಭಕ್ತರಿಗೆ ಇಲ್ಲಿ ನೊಸಲಕಣ್ಣನ್ನು ನೀಡಿರುವುದನ್ನು ಗಮನಿಸಿದಾಗ ಭಕ್ತರ ಮೇಲೆ ಶಿವನು ಇಟ್ಟಿರುವ ಪ್ರೀತಿ, ಸ್ನೇಹ, ಕರುಣೆ, ರಕ್ಷಣೆ ಮತ್ತು ಬಾಂಧವ್ಯ ಎಲ್ಲವೂ ವೇದ್ಯವಾಗುತ್ತದೆ.

೧೮. <u>ರೇವಣ ಸಿದ್ಧೇಶ್ವರನ ರಗಳೆ :-</u>

ಕೈಲಾಸದಲ್ಲಿ ಶಿವನು ತನ್ನ ಬಾಯ್ತುಂಬುಲವನ್ನು ರೇಣುಕನಿಗೆ ನೀಡುವ ಸಲುವಾಗಿ ಕರೆದಾಗ, ಆ ಪ್ರಸಾದವನ್ನು ಪಡೆಯುವ ಆತುರದಲ್ಲಿ ಧಾರುಕನನ್ನು ಧಾಟಿ ಬಂದ ಅವಿನಯದ ವರ್ತನೆಗೆ ಭೂಲೋಕದಲ್ಲಿ ಹುಟ್ಟಿ, ಬಾಳ ಅನಂತರ ಕೈಲಾಸವನ್ನು ಸೇರಬೇಕೆಂಬ ಶಿವನ ಆಜ್ಞೆ ಮೊಳಗಿತು. ಇದರಿಂದ ಬೇಸತ್ತ ರೇವಣನು ಜಡಜನ್ಮವನ್ನು ತಾಳುವುದು ತನಗಿಷ್ಟವಿಲ್ಲವೆಂದೂ ಎಷ್ಟೇ ಬೇಡಿದರೂ ಪ್ರಯೋಜನವಾಗದೆ, ಕೊನೆಗೆ ಸದಮಲಲಿಂಗದಲ್ಲಿ ಜನ್ಮ ತಾಳ ಸುಖ-ದುಃಖದಲ್ಲಿ ನಿನ್ನ ಸಾಮರ್ಥ್ಯದಿಂದ ಸುಖವೇ ಹೆಚ್ಚಾಗಿ ಹೊಂದಿ ಶಿವಪುರಗಳನ್ನು ದರ್ಶಿಸಿ ಭಕ್ತಿ ಸುಖದಲ್ಲಿ ಲೀನವಾಗಿ ಅಸಾಧಾರಣ ಪವಾಡಗಳನ್ನು ಮೆರೆದು ಕೈಲಾಸಕ್ಕೆ ಹಿಂದಿರುಗು ಎನ್ನುವ ಶಿವನ ವಚನವನ್ನು ಶಿರಾಸಾಃ ವಹಿಸಿ ಪಾಲಿಸಿದ ರೇವಣಸಿದ್ಧೇಶ್ವರನ ಕಥೆ ಗಮನಾರ್ಹವಾದುದು.

ಕೊಲ್ಲಿಪಾಕಿ ಎಂಬ ಶಿವಪುರದಲ್ಲಿ ಸೋಮನಾಥನ ದೇವಾಲಯದ ಶಿವಲಿಂಗದಲ್ಲಿ ವೈಶಿಷ್ಟ್ಯವಾಗಿ ಜನ್ಮತಳೆದ ಸಿದ್ಧರೇವಣ ಪಿಣ್ಣಾಕನೆಂಬ ಹೆಸರಿನಿಂದ ಎಲ್ಲರಿಗೂ ಪರಿಚಯವಾದನು. ಚೋಳರಾಜನು ಪ್ರತಿಷ್ಠಾಪಿಸಬೇಕೆಂದಿದ್ದ ವಿಷ್ಣುಪ್ರತಿಮೆಗಳನ್ನು ಯಾರು ಮಾತನಾಡಿಸುತ್ತಾರೆ. ಆ ಕಾರ್ಯವನ್ನು ಹೇಗೆ ಮಾಡಿಸುವುದು ಎಂದು ಪ್ರಲಾಪಿಸುತ್ತಿದ್ದಾಗ ಶಿವನು ಕನಸಿನಲ್ಲಿ ಬಂದು ಪಿಣ್ಣಾಕ ಎಂಬ ಹೆಸರಿನ ಸಿದ್ಧನಿಂದ ಈ ಕಾರ್ಯ ಸಾಧನೆ ಸಾಧ್ಯ ಎಂದು ಹೇಳದನು. ಅದರಂತೆ ಅವನನ್ನು ಕಾಡಿ ಬೇಡಿ ಕರೆಸಿದಾಗ ಪಿಣ್ಣಾಕನು ತನ್ನ ವೀರ್ಯವನ್ನು ತೆಗೆದುಕೊಂಡು ಆ ವಿಷ್ಣುವಿನ ತಲೆಯ ಮೇಲೆ ಒತ್ತಿದಾಗ ರಾಜನು ಈ ಕಾರ್ಯವನ್ನು ನೋಡಿ ಹೇಸಿದನಾದ್ದರಿಂದ ಆ ಪ್ರತಿಮೆ ನುಡಿಯದು ಶಿವನ ಆಳಾಗಿ ಹೀಗೆ ನಿಂತಿರು ಎಂದು ಹಾರೈಸಿ ಅರುಳಾಳ ಪೆರುಮಾಳ ಎಂಬ ಹೆಸರನಿಟ್ಟನು. ಇಲ್ಲಿ

ರೇವಣಸಿದ್ಧನ ಪವಾಡದ ಹೆಸರಲ್ಲಿ ಶಿವನನ್ನು ಪ್ರಧಾನವಾಗಿ ಕಂಡು ವಿಷ್ಣುವನ್ನು ಕಡಿಮೆ ದರದಲ್ಲಿ ಚಿತ್ರಿಸಿರುವ ಹರಿಹರನು ಶೈವ-ವೈಷ್ಣವ ಸಂಘರ್ಷವನ್ನು ಚಿತ್ರಿಸಿದ್ದಾನೆ. ಶಿವಭಕ್ತರ ಮುಂದೆ ವಿಷ್ಣುವು ನಿರರ್ಥಕ ಎಂದು ಕಾಣುವ ಹರಿಹರನ ದೃಷ್ಟಿಕೋನ ಸಂಕುಚಿತವಾದುದು. ಉತ್ತರ ಭಾಗದಲ್ಲಿ ಮಾಸನೂರಿಗೆ ಹೋಗಿ ಅಲ್ಲಿ ಶಾಪಗ್ರಸ್ಥವಾಗಿದ್ದ ರಾಕ್ಷಸ ಮಿಥುನಗಳನ್ನು ಸುಟ್ಟು ಭಸ್ಮಮಾಡಿ ಉಕ್ಕಿನ ಗುಂಡುಗಳಾಗಿ ಮಾಡಿ ಅದರಿಂದ ಖಡ್ಗವನ್ನು ಮಾಡಿಸಿ ಒಂದನ್ನು ಜಗತ್ತನ್ನೇ ನಾಶ ಮಾಡುವುದೆಂದು ಬಗೆದು ಮಾಸನೂರಿನ ನದಿಯಲ್ಲಿ ಎಲ್ಲರಿಗೂ ಕಾಣುವಂತೆ ನೆಟ್ಟು ಮತ್ತೊಂದನ್ನು ಚಕ್ರವರ್ತಿ ವಿಕ್ರಮಾದಿತ್ಯನಿಗೆ ನೀಡಿ ಹರಸಿದನು. ರೇವಣಸಿದ್ಧನು ಸಮಾಜದ ಜನರ ರಕ್ಷಕನಂತೆ ಗೋಚರಿಸಿದ್ದಾನೆ ನಂತರ ಕಲ್ಯಾಣಪಟ್ಟಣದ ಗಾಣಿಗ ಕಲ್ಲಿಸೆಟ್ಟಿಯ ಮನೆಗೆ ಹೋಗಿ ಗಾಣದೆತ್ತನ್ನು ಹೊಡೆಯುವ ಕಾರ್ಯವನ್ನು ನಿರ್ವಹಿಸಿಕೊಂಡು ಕಣ್ಣಿಲ್ಲದ ಬಡವರಾಗಿದ್ದ ಅವರಿಗೆ ಕಣ್ಣು ಬರಿಸಿ ಉದ್ಧರಿಸಿ ಕೊನೆಗೆ ಈತನ ಪವಾಡಗಳಿಂದ ಅವನಾರು ಎಂದು ಅರಿತ ಮೇಲೆ ಅಲ್ಲಿರದೆ ಅವರನ್ನು ಹರಿಸಿ ಕಲ್ಯಾಣದ ಮಾಯಿದೇವಿಯ ವೇಶ್ಯೆಯ ಬಳ ಹೋಗಿ ಉಳಿದುಕೊಂಡನು. ಯಾರೋ ನಿರ್ಗತಿಕ ಹುಚ್ಚನಿರಬೇಕು ಎಂದು ತಿಳಿದು ಅನ್ನ-ನೀರಿನ ವ್ಯವಸ್ಥೆ ಮಾಡಿ ತನ್ನ ಮನೆಯಲ್ಲಿ ಅವನಿಗೆ ಒಂದು ಕೆಲಸವನ್ನು ನೀಡಿದಳು. ಅವನ ಕೃಪೆಯಿಂದ ಅವಳ ಐಶ್ವರ್ಯವೃದ್ಧಿಸಿತು. ಇವನು ಅಲ್ಲಿ ರಾವಣನ ತಮ್ಮ ವಿಭೀಷಣನನ್ನು ಹುಡುಕುತ್ತಿದ್ದ ಏಕೆಂದರೆ ರಾಮನ ಬಾಣದಿಂದ ರಾವಣನು ಹತನಾದಾಗ, ಜೀವಹಿಡಿದು ಕೊಂಡು ಕೊನೆಯ ಘಳಿಗೆಯಲ್ಲಿ ಲಂಕೆಯಲ್ಲಿ ೭ ಕೋಟಿ ಲಿಂಗಗಳು ಈಗಾಗಲೇ ಪ್ರತಿಷ್ಠಾಪನೆ ಮಾಡಿದ್ದೇನೆ, ಇನ್ನುಳಿದ ೩ ಕೋಟಿ ಲಿಂಗಗಳನ್ನು ಪ್ರತಿಷ್ಠಾಪಿಸು ಎಂಬ ತನ್ನ ನಿಲುವನ್ನು ಹೇಳಿದಾಗ ನಾರಾಯಣನ ಭಕ್ತನಾದ ವಿಭೀಷಣನು ವಿಷ್ಣುವಿನ ಮೂರ್ತಿ ಪ್ರತಿಷ್ಠಾಪನ ಕಾರ್ಯವನ್ನು ಕುರಿತು ಹೇಳಿದಾಗ ವಿಷ್ಣುವಿನ ದಶಾವತಾರದ ದೋಷವನ್ನು ನೀಗಿಸಿಕೊಳ್ಳಲಿಕ್ಕೆ ಮತ್ಸ್ಯಕೇಶ್ವರ ಲಿಂಗ ಮತ್ತು ಸೀತಾನ್ವೇಷಣೆಯ ಸಂದರ್ಭದಲ್ಲಿ ಶ್ರೀರಾಮನಿಂದ ಶ್ರೀರಾಮೇಶ್ವರಲಿಂಗ ಮತ್ತು ಲಂಕೆಯಿಂದ ಗಂಧ ಮಾಧವ ಪರ್ವತದ ತನಕ ಲಿಂಗ ಪ್ರತಿಷ್ಠಾಪನ ಕಾರ್ಯವೆಸಗಿರುತ್ತಾನೆ. ಶಿವನೇ ವಿಷ್ಣುವಿನ ಆರಾಧಕ ಹೀಗಿರುವಾಗ ಲಿಂಗ ಪ್ರತಿಷ್ಠಾಪನ ಕಾರ್ಯದ ವ್ರತ ಪೂರ್ಣಗೊಳಿಸು ಎಂದು ರಾವಣನು ಆಜ್ಞಿಸಿರುತ್ತಾನೆ. ಅದರಂತೆ ೩ ಕೋಟಿ ಲಿಂಗ ಪ್ರತಿಷ್ಠಾಪನಾಕಾರ್ಯದ ವ್ಯವಸ್ಥೆಪೂರ್ಣಗೊಳಿಸಿ ಅದರ ಪ್ರತಿಷ್ಠಾಪನಾ ಆಚಾರ್ಯ ರೇವಣಸಿದ್ಧನನ್ನು ಹುಡುಕುತ್ತಿದ್ದನು. ಕೊನೆಗೊಮ್ಮೆ ಅವನ ಸುಳಿವು ಸಿಕ್ಕಿ ವೇಷಾಧಾರಿಯಾಗಿ ಮಾಯಿದೇವಿಯ ಮನೆಯಲ್ಲಿ ಉಳಿದುಕೊಂಡನು. ದೇವತೆಗಳ ಕೈಯಲ್ಲಿ ತನ್ನ ಕಾಲನ್ನು ಒತ್ತಿಸಿಕೊಳ್ಳುತ್ತಿರುವ ಅವನ ಇರುವನ್ನು ಕಂಡು ನಮಿಸಿ ಶಿವಲಿಂಗ ಪ್ರತಿಷ್ಠಾಪನಾ ಕಾರ್ಯದ ಸಮಾಚಾರವನ್ನು

ಮಾತನಾಡುತ್ತಿರಲು ಮಾಯಿದೇವಿ ಇವರನ್ನು ನೋಡಿ ನಮಿಸಿ ನಿಮ್ಮ ಬಳಿ ನನ್ನ ಮನೆಯ ಕೆಲಸ ಮಾಡಿಸಿಕೊಂಡ ಪಾಪಿ ಎಂದು ಪಶ್ಚಾತ್ತಾಪಗೈದಳು. ಕೊನೆಗೆ ಅವಳಿಗೆ ವರವನ್ನಿತ್ತು ಲಂಕೆಗೆ ಹೋಗಿ ಸುಮುಹೂರ್ತದಲ್ಲಿ ಲಿಂಗ ಪ್ರತಿಷ್ಠಾಪನಾ ಕಾರ್ಯವನ್ನು ನೆರವೇರಿಸಿದನು. ಅಭಿಷೇಕ ಪೂಜೆ ಪುನಸ್ಕಾರಾದಿಗಳು ನಿತ್ಯನಿರಂತರ ನಡೆಯುತ್ತಿರಬೇಕೆಂಬ ಆದೇಶವಿತ್ತನು. ಅನಂತರ ಮಂಗಳವಾಡಕ್ಕೆ ಬಂದು ಬಿಜ್ಜಳನ ಸಭೆಯಲ್ಲಿ ರೇವಣಸಿದ್ಧನನ್ನು ಪರೀಕ್ಷಿಸಲು ಹೋಗಿ ತಕ್ಕ ಶಾಸ್ತಿಯನ್ನು ಅನುಭವಿಸಿದನು. ಶಿವಭಕ್ತ ರೇವಣಸಿದ್ಧನು ಪವಾಡ ಸದೃಶವಾಗಿ ವ್ಯವಸ್ಥೆ ಮಾಡಿ ಗಣಪರ್ವವನ್ನು ಮಾಡಿದನು. ಗೋರಕ್ಷನ ನಿವಾಸಕ್ಕೆ ರೇವಣಸಿದ್ಧನು ಬಂದಾಗ ಅವನ ಹೆಂಡತಿಯು ಸಿದ್ಧನ ಭಿಕ್ಷಾ ಪಾತ್ರೆಗೆ ಕಠಾರಿಯನ್ನು ಹಾಕಿ ಅದರಿಂದ ಅವಳ ಗಂಡನು ಸಾವು-ಬದುಕಿನ ಮಧ್ಯೆ ಹೊರಳಾಡುವಂತೆ ಮಾಡಿದ. ರೇವಣಸಿದ್ಧನ ಬಳಿ ಗೋರಖನ ಪ್ರಾರ್ಥನೆಯಂತೆ ಕೊಲ್ಲಾಪುರ ಶ್ರೀ ಲಕ್ಷ್ಮಿದೇವಿಯೇ ಬಂದು ಅವರ ತಪ್ಪನ್ನು ಮನ್ನಿಸಿ ಎಂದು ಬೇಡಿದಳು. ಅದರಂತೆ ಅವನ ಗರ್ವವಿಳಿಸಿ ರಕ್ಷಿಸಿ ಹರಸಿದನು. ಬಿಜ್ಜಳನು ಮಾಸನೂರಿನ ನದಿಗೆ ನಾಟಿರುವ ಕತ್ತಿಯನ್ನು ತರಲಿಕ್ಕೆ ಮಂತ್ರವಾದಿಯ ಸಲಹೆಯಂತೆ ಹನ್ನೆರಡು ಸಾವಿರ ಕನ್ಯೆಯರನ್ನು ಬಲಿಕೊಡಲು ತೀರ್ಮಾನಿಸಿ ಮಾಯಿದೇವಿಯ ಮಗಳನ್ನು ಬಲವಂತವಾಗಿ ಎಳೆದುಕೊಂಡುಬಂದರು. ಮಾಯಿದೇವಿಯ ಪ್ರಾರ್ಥನೆಯಂತೆ ಅಲ್ಲಿಗೆ ಆಗಮಿಸಿದ ರೇವಣನು ಬಿಜ್ಜಳನಿಗೆ ಬುದ್ಧಿವಾದಹೇಳಿ ಅದನ್ನು ಸ್ಥಾಪಿಸಿದವನು ನಾನೇ, ನನ್ನನ್ನು ಬಿಟ್ಟರೆ ಇನ್ನಾರಿಗೂ ತೆಗೆಯಲು ಸಾಧ್ಯವಿಲ್ಲ ಅದಕ್ಕಾಗಿ ಇಷ್ಟೊಂದು ಮುಗ್ಧೆಯರ ಬಲಿ ನಿರರ್ಥಕ ಎಂದು ಅವರೆಲ್ಲರನ್ನು ಬಿಡಿಸಿ, ಮಾಸನೂರಿಗೆ ಕರೆದೊಯ್ದು ಆ ಕತ್ತಿಯ ವಿವಿಧ ಭಂಗಿ ಮತ್ತು ಸಾಮರ್ಥ್ಯವ್ಯಾಪ್ತಿಯನ್ನು ತೋರಿಸಿ ಬಿಜ್ಜಳನನ್ನು ಕರೆದುಕೊಂಡು ಬಂದನು. ಇವನ ಸಾಮರ್ಥ್ಯಕ್ಕೆ ಮೆಚ್ಚಿ ತನ್ನ ಮಗಳನ್ನು ವಿವಾಹ ಮಾಡಿಕೊಟ್ಟು ಅವರಿಂದ ಆಶೀರ್ವಾದ ಪಡೆದನು. ಹೀಗೆ ಊರೂರು ಅನೇಕ ಶಿವಪುರಗಳನ್ನು ಸುತ್ತಾಡಿ ಅಲ್ಲೆಲ್ಲಾ ಶಿವನ ಸೇವಾಕಾರ್ಯ ನಿರ್ವಹಿಸಿ ಅನೇಕ ರಾಣಿಯರನ್ನು ವಿವಾಹವಾಗಿ ಪುತ್ರೋತ್ಸಾಹವನ್ನು ಅನುಭವಿಸಿದನು. ಹಾವಿನಹಾಳದಲ್ಲಿ ಕಲ್ಲಯ್ಯನೆಂಬ ಶಿವಶರಣ ಶಿವಭಕ್ತನಿಗೆ ದೀಕ್ಷೆನೀಡಿ, ಸೊನ್ನಲಿಗೆಗೆ ಬಂದು ಚಾಮಲದೇವಿಗೆ ಪ್ರತಿಯೊಬ್ಬರೂ ಶಿವಭಕ್ತಿಸುಖವನ್ನು ತಾಳುವಂತೆ ಉಪದೇಶಿಸಿ ಶಿವನ ಸನಿಹಕ್ಕೆ ಬಂದು ಕೈಲಾಸದಲ್ಲಿ ಗಣಪದವಿಯನ್ನು ಪಡೆದನು. ಅವನ ಮಹಿಮೆಗಳನ್ನು ಶಿವನು ಎಲ್ಲರ ಬಳಿ ಹೊಗಳಿ ಮೆಚ್ಚಿದನು. ರೇವಣಸಿದ್ಧನು ಶಿವಭಕ್ತನಾಗಿ ಕೈಲಾಸದಿಂದ ಶಿವನಿಚ್ಛೆಯಂತೆ ಭೂಲೋಕಕ್ಕೆ ಆಗಮಿಸಿ ನಾನಾ ಮಹಿಮೆ-ಪವಾಡಗಳನ್ನು ಮೆರೆದು ಪವಾಡ ಪುರುಷನೆನಿಸಿದ್ದಾನೆ. ಶಿವನಿಗೆ ಹೇಗೆ ಶಕ್ತಿ ಇರುವುದೋ ಹಾಗೇ ಶಿವಭಕ್ತರಿಗೂ ಶಿವಶಕ್ತಿಯ ಲಕ್ಷಣ ಇರುತ್ತದೆ. ಅದರಿಂದ ಕೊಬ್ಬಿದವರ

ಗರ್ವವನ್ನು ಮುರಿಯುವ ಸಜ್ಜನರನ್ನು ರಕ್ಷಿಸುವ ಎಲ್ಲಾ ರೀತಿಯ ಕಾರ್ಯವನ್ನು ಮಹಿಮೆಯ ಪರಿಯಲ್ಲಿ ಮೆರೆಯುವ ಶಕ್ತಿಯನ್ನು ತೋರುತ್ತಾರೆ ಎಂಬುದು ಈ ಕಥೆಯಿಂದ ವೇದ್ಯವಾಗುತ್ತದೆ. ಶಿವನ ರೂಪವೇ ಎಂಬಂತೆ ರೇವಣಸಿದ್ಧೇಶ್ವರನು ಸದಮಲ ಲಿಂಗದಲ್ಲಿ ಹುಟ್ಟುವುದು. ಅನಂತರ ಸಮಾಜೋಧಾರ್ಮಿಕ ಕಲ್ಯಾಣದಂತಹ ಕಾರ್ಯಗಳನ್ನು ಮಾಡಿ ತೇಜಸ್ಸಿನ ವ್ಯಕ್ತಿಗಳಂತೆ ಪ್ರಭೆಯುತರಂತಾಗುವ ಎಲ್ಲಾ ಸಾಮರ್ಥ್ಯವನ್ನು ಶಿವನು ತನ್ನ ಶಿವಭಕ್ತರಿಗೆ ನೀಡಿರುತ್ತಾನೆ ಎಂಬುದಕ್ಕೆ ಸಾಕ್ಷಿಯಂತೆ ಈ ಕಥೆಯಲ್ಲಿ ರೇವಣನ ಪವಾಡ ಒಂದಕ್ಕಿಂತ ಒಂದು ಮಿಗಿಲು. ಶಿವನೊಂದಿಗೆ ಈತನಿಗಿರುವ ಆತ್ಮೀಯ ಸಂಬಂಧ ಬಲಯುತವಾದುದು, ಅಷ್ಟೇ ಒಲವಿನಿಂದ ಕೂಡಿದುದು. ಭಕ್ತಿಯ ಮಹಾನ್ ಸಾಧಕನೆಂಬಂತೆ ಚಿತ್ರಿತನಾಗಿರುವ ದೈವತ್ವದ ನೆಲೆಹೊಂದಿರುವ ರೇವಣಸಿದ್ಧನು ಪ್ರಸ್ತುತ ಸಮಾಜದಲ್ಲಿ ಸ್ತುತ್ಯಾರ್ಹನಾಗಿರುವುದು ವಿಶೇಷ ಸಂಗತಿ.

### ೧೯. ತಿರುನೀಲನಕ್ಕರರ ರಗಳೆ :-

ಶ್ರೀ ಕಾವೇರಿ ನದಿಯಿಂದ ಸಂಪತ್ತಿನಿಂದ ಕೂಡಿರುವ ಚೋಳರಾಜ್ಯದಲ್ಲಿ ಓರ್ವ ಬ್ರಾಹ್ಮಣ ಕುಲದ ಶ್ರೇಷ್ಠ ನೀಲನಕ್ಕರನೆಂಬ ಶಿವಭಕ್ತನಿಗೆ ಪತಿ ಮೆಚ್ಚಿದ ಸತಿಯಾಗಿ ಶಿವಭಕ್ತೆ ಎನಿಸಿಕೊಂಡಿದ್ದಳು. ಈ ದಂಪತಿಗಳು ಶಿವಪೂಜೆ, ಶಿವಧ್ಯಾನದಂತಹ ಕಾರ್ಯಗಳಲ್ಲಿ ತೊಡಗಿ ಶಿವಾಲಯದಲ್ಲಿ ನಾನಾ ಬಗೆಯ ಅರ್ಚನೆ ಪೂಜೆಗಳಲ್ಲಿ ತೊಡಗಿ ಶರಣಸತಿ-ಲಿಂಗಪತಿ ಎಂಬುದನ್ನೇ ಅನುಸರಿಸುತ್ತಿದ್ದ ಮಹಾನ್ ಶಿವಭಕ್ತರಾಗಿದ್ದರು. ಒಮ್ಮೆ ಶಿವಲಿಂಗಪೂಜೆಯಲ್ಲಿ ನಿರತನಾಗಿದ್ದ ತಿರುನೀಲನಕ್ಕರನ ಬೆವರ ಹನಿ ಲಿಂಗದ ಮೇಲೆ ಬಿದ್ದಿತು. ಅದನ್ನು ಬಾಯಲ್ಲಿ ಊದಿ ತೆಗೆದದ್ದೇ ಮಹಾಪರಾಧವೆಂದೆನಿಸಿ ಅವಳನ್ನು ಪಾಪಿ ತೊಲಗಾಚೆ ಎಂದು ತೊರೆದನು. ಶಿವಾಲಯದಲ್ಲಿ ಶಿವಭಕ್ತಿಯಲ್ಲಿ ಆ ರಾತ್ರಿ ಕಳೆದ ಅವಳ ಭಕ್ತಿಗೆ ಮೆಚ್ಚಿದ ಶಿವನು ನೀಲನಕ್ಕರನ ಕನಸಿನಲ್ಲಿ ಬಂದು ನಿನ್ನ ಸತಿ ಮಹಾನ್ ಪುಣ್ಯವಂತೆ, ಅವಳ ಗಾಳ ಸೋಕದಿರುವ ನನ್ನ ದೇಹದ ಭಾಗಗಳಲ್ಲಿ ಬೊಬ್ಬೆಯುಂಟಾಗಿದೆಂದು ತೋರಿಸಿ, ಅವಳ ಶಕ್ತಿಯ ಪುಣ್ಯಕಾರ್ಯವನ್ನು ಮೆಚ್ಚಿರುವುದಾಗಿ ತಿಳಿಸಿದನು. ಇದರಿಂದ ಅರಿವುಂಟಾಗಿ ನೀಲನಕ್ಕರನು ಶಿವಾಲಯಕ್ಕೆ ಬಂದು ಅವಳನ್ನು ಮನೆಗೆ ಕರೆದೊಯ್ದು ಜ್ಞಾನಾಚಾರ್ಯರ ದರ್ಶನ ಫಲದಿಂದ, ಅಗಣ್ಯ ಸಂಪತ್ತುಗಳಿಸಿ ಭಕ್ತಿ ಸುಖದಲ್ಲಿ ಬಾಳ್ವೆ ನಡೆಸಿದರು ಮತ್ತು ತಮ್ಮ ತನು ಮನ ಧನವನ್ನೆಲ್ಲಾ ಶಿವನ ಪೂಜೆ ಮತ್ತು ಭಕ್ತರ ಸೇವೆಗಾಗಿ ವಿನಿಯೋಗಿಸಿ ಸಾರ್ಥಕ ಭಕ್ತರೆನಿಸಿಕೊಂಡ. ಅವರ ಭಕ್ತಿಗೆ ಮೆಚ್ಚಿದ ಶಿವನು ಕೈಲಾಸದ ಗಣಪದವಿ ನೀಡಿ ಹರಸಿದನು. ಇಲ್ಲಿ ತಿರುನೀಲನಕ್ಕರನ ಹೆಂಡತಿ ಶಿವಲಿಂಗಕ್ಕೆ ತಾಗಿದ ಬೆವರ ಹನಿಯು ಶಿವನ

ಶ್ರೇಷ್ಠತೆಗೆ ಕುಂದು ಎಂದು ಭಾವಿಸಿ ಅದನ್ನು ಊದಿ ತೆಗೆಯುವ ಅವಳ ಮತ್ತು ಶಿವನ ನಡುವಿನ ಸ್ನೇಹಪರತೆ ಗಮನಾರ್ಹ. ಇದನ್ನು ಅರ್ಥಮಾಡಿಕೊಳ್ಳದ ಪತಿಗೆ, ಶಿವನಿಗೆ ಪ್ರಮಾದ ಉಂಟುಮಾಡಿದ್ದಾಳೆ ಎಂದು ಭಾವಿಸುವ ತಿರುನೀಲನಕ್ಕರ ಭಯ-ಭಕ್ತಿ ನಿರತ ಶಿವಭಕ್ತನಿಗೆ ಶಿವನ ಸರಳತೆ ಮತ್ತು ಭಕ್ತರ ಮೇಲೆ ಆತ ಇಟ್ಟಿರುವ ಪ್ರೀತಿ ವಿಶ್ವಾಸದ ಅರಿವನ್ನು ಉಂಟುಮಾಡಿಸಿ ಅವರನ್ನು ಸುಖದಿಂದಿರಲು ಆಜ್ಞೆಮಾಡುವ ಶಿವನ ಪರಿ, ಭಕ್ತರ ಮೇಲಿಟ್ಟಿರುವ ಮಮತೆ, ವಾತ್ಸಲ್ಯ ಮತ್ತು ಆತ್ಮೀಯತೆಯನ್ನು ವ್ಯಕ್ತಪಡಿಸುತ್ತದೆ.

## ೨೦. ನಿಂಬಿಯಕ್ಕನ ರಗಳೆ :-

ಕೈಲಾಸದಲ್ಲಿ ಮಧುರಮುಖಿ ಎಂಬ ಶಿವಭಕ್ತೆ ಕಸಗುಡಿಸುತ್ತಿರುವಾಗ ಕಲ್ಪಕುಜೆ ಎಂಬುವವಳ ಮೇಲೆ ಧೂಳು ಬಿದ್ದು, ತೊತ್ತೆ ನೋಡಿ ಗುಡಿಸು ಎಂದು ಗದರಿಸಿದಳು. ಇದರಿಂದ ಕುಪಿತಗೊಂಡ ಪಾವರ್ತತಿದೇವಿ ಕಲ್ಪಕುಜೆಗೆ "ಭೂಮಿಯಲ್ಲಿ ಹುಟ್ಟಿ ತೊತ್ತಾಗಿ ಬಾಳ, ಅಲ್ಲಿ ಅತ್ಯಂತ ನೀಚತನದ ಬದುಕನ್ನು ಅನುಭವಿಸಿ ನಿಂಬಿಯೆಂಬ ಹೆಸರಲ್ಲಿ ಬದುಕು ಸವೆಸಿ ಬಾ" ಎಂದು ಶಾಪವಿತ್ತಳು. ಅದರಂತೆ ಶ್ರೀಮಂತರ ತೊತ್ತಾಗಿ ಬಾಳ್ವೆ ನಡೆಸುತ್ತಿರಲು ಒಮ್ಮೆ ಭಕ್ತ ದಂಪತಿಗಳಿಗೆ ಮಗಳಾಗಿ, ಭವಿಗಳಿಗೆ ತೊತ್ತಾಗಿ, ಶಿವಭಕ್ತರಿಗೆ ನನ್ನಿಂದ ಯಾವ ಅನುಕೂಲವನ್ನು ಮಾಡಿಕೊಡಲಾಗಲಿಲ್ಲವೇ? ಎಂದು ವ್ಯಥೆಗೊಳಗಾದಳು. ಅದಕ್ಕಾಗಿ ಅವಳ ಯೌವ್ವನ ತುಂಬಿದ ಈ ಸುಶರೀರವನ್ನು ಜಂಗಮಕ್ಕೆ ಅರ್ಪಿಸುತ್ತೇನೆ ಎಂಬ ನೇಮ ಕೈಗೊಂಡು ಅದರಂತೆ ಜಂಗಮರಿಗೆ ಸುಖ ನೀಡುವ ಮೂಲಕ ಅದನ್ನು ತನ್ನ ಕಾಯಸೇವೆಯನ್ನಾಗಿ ಹಲವು ವರ್ಷಗಳ ಕಾಲ ಪೂರೈಸಿದಳು. ಈಶ್ವರನ ಗುಡಿಯಲ್ಲಿ ಜಂಗಮರಿಗೆ ತನ್ನ ಕಾಯಸೇವೆಯ ಮೂಲಕ ಸುಖ ನೀಡುತ್ತಿರಲು ಕೈಲಾಸದಿಂದ ಶಿವನು "ಏನೇ ನಿಂಬಿ, ಈ ತರದ ಕಾರ್ಯಕ್ಕೆ ಈ ಶಿವಗುಡಿಯೇ ನಿನಗೆ ಸ್ಥಳವಾಗಬೇಕಾಯಿತೆ? ಎಂದಾಗ ಆಗ ನಿಂಬಿಯು ದೇವನೇ ನೀನಿಲ್ಲದ ಎಡೆಯುಂಟೆ? ನಾನಲ್ಲದೆ ಶಿವಗುಡಿಯಲ್ಲಿ ಇನ್ನಾರಿಗೆ ಇಂಥ ಕಾರ್ಯಮಾಡಲು ಸಾಧ್ಯ ಹೇಳು ಎಂದಾಗ ಶಿವನು ಅವಳ ಶಿವಭಕ್ತಿಗೆ ಮೆಚ್ಚಿ ಮೂಕನಾದನು. ಕೊನೆಗೆ ನಿಂಬಿಗೆ ವರವಾಗಿ ಏನನ್ನಾದರೂ ಬೇಡು ಎಂದು ಶಿವನು ಹೇಳಿದಾಗ ಏಳು ದಿನಗಳ ಮಟ್ಟಿಗೆ ಈ ಕೈಲಾಸವನ್ನು ವರವನ್ನಾಗಿ ಬೇಡಿಪಡೆದಳು. ಅವಳು ಪುರದಲ್ಲಿದ್ದ ಎಲ್ಲ ಶಿವಭಕ್ತರನ್ನು ಡಂಗುರ ಹೊಡೆಸಿ ಕರೆದು ತನ್ನ ಶಿವಭಕ್ತಿಯನ್ನು ಪ್ರಕಟಿಸಿ ಕೈಲಾಸವನ್ನೇರಿದಳು. ಈ ರಗಳೆಯಲ್ಲಿ ಕಾಮದಿಂದ ನಿಷ್ಕಾಮಿಯಾದ ಅವಳ ಸ್ವರೂಪದ ಜೊತೆಗೆ ಲಜ್ಜೆ-ನಾಚಿಕೆಯನ್ನು

ತೊರೆದು ತನ್ನ ಶರೀರವನ್ನು ಜಂಗಮ ಸೇವೆಗೆ ಮುಡಿಪಾಗಿಸಿ ಪಾರ್ವತಿಯ ಶಾಪವನ್ನು ಯಶಸ್ವಿಯಾಗಿ ನೀಗಿಸಿಕೊಂಡ ಈ ಕಥೆ ಮೂಲಕ ಈ ಕೆಳಗಿನ ವಿಚಾರಗಳು ಅಭಿವ್ಯಕ್ತವಾಗುತ್ತದೆ.

(i) ಸ್ತ್ರೀಯರನ್ನು ಸರ್ವಮಂಗಳೆ, ಮುತ್ತೈದೆ, ಪತಿವ್ರತೆಯೆಂಬ ಪಾವಿತ್ರ್ಯ ಅಂಶಗಳಿಗೆ ಒಳಪಡಿಸಿ ನೋಡುವ ವಾಡಿಕೆ ನಮ್ಮಲ್ಲಿದೆ. ಕಾಮಸುಖವು ಒಂದು ಗೋಪ್ಯ ವಿಚಾರಕ್ಕೆ ಸಂಬಂಧಪಟ್ಟುದುದಾಗಿದೆ. ಅದರಲ್ಲೂ ಸ್ತ್ರೀಯರು ಅನ್ಯಪುರುಷರೊಂದಿಗೆ ಇಂಥ ಕಾರ್ಯಗಳಲ್ಲಿ ತೊಡಗಿದ್ದರೆ ಅವಳನ್ನು ವೇಶ್ಯೆ ಎಂದು ಕರೆದು ಸಮಾಜದ ಜನರೆಲ್ಲಾ ಅವಳನ್ನು ತುಚ್ಛವಾಗಿ ಕಾಣುವುದಿದೆ. ಹೀಗಿರುವಲ್ಲಿ ಇಂತಹ ಕಾಯಸೇವೆಯನ್ನು ಶಿವಭಕ್ತಿ ನೇಮವಾಗಿ ನಿಂಬಿಯು ಪರಿವರ್ತಿತ ಮಾಡಿಕೊಂಡು ಶಿವಭಕ್ತರ ತೃಪ್ತಿಗಾಗಿ ಮಾಡುವ ವ್ರತವಿದು ಎಂದು ತಿಳಿದುಕೊಂಡಳು. ಕಾಯಸೇವೆಯಂತಹ ಕಾರ್ಯವನ್ನು ಶಿವಗುಡಿಯಲ್ಲಿ ಜಂಗಮಸೇವೆಗಾಗಿ ಮಾಡುವಂತಹ ಪವಿತ್ರಕಾರ್ಯ ಎಂದು ಶಿವನಿಗೆ ಅರ್ಥಮಾಡಿಸಿದಳು.

(ii) ಕಾಯಸೇವೆಯಂತಹ ಕಾರ್ಯವನ್ನು ನನ್ನ ಬಿಟ್ಟು ಬೇರೆಯಾರಿಗೆ ಮಾಡಲು ಸಾಧ್ಯ ಎಂದು ದಿಟ್ಟ ಉತ್ತರಕೊಡುವ ಅವಳ ಮಾತಿನಲ್ಲಿ ಶಿವನಲ್ಲಿ ಅವಳು ಹೊಂದಿರುವ ಆತ್ಮೀಯ ಸಂಬಂಧ ಎದ್ದು ಕಾಣುತ್ತದೆ. ಮತ್ತೆ ಅವಳನ್ನು ಕರೆದುಕೊಂಡು ರುದ್ರಕನ್ನಿಕೆ ಪಟ್ಟ ನೀಡುವಾಗ ಅವಳ ಸುಕಾರ್ಯದ ಅರ್ಥವನ್ನು ಶಿವನು ಎಲ್ಲರಿಗೂ ಅರ್ಥಮಾಡಿಸಿದನು. ಹೀಗೆ ನಿಂಬಿಯಕ್ಕನ ಶಿವಭಕ್ತಿ ಮತ್ತು ಸೇವಾ ಮನೋಭಾವಕ್ಕೆ ಶಿವನು ಒಲಿದು ಕೈಲಾಸಕ್ಕೆ ಕರೆದೊಯ್ಯುವ ಕಥಾಹಂದರವು ಇತರ ಕಥೆಗಳಿಗಿಂತ ಭಿನ್ನ ಸ್ವರೂಪವನ್ನು ಪಡೆದಿದೆ.

## ೨೧. ವೈಜಕವ್ವೆ ರಗಳೆ:-

ಉತ್ತರ ದಿಶಾ ಭಾಗದ ಶಿವಪುರದಲ್ಲಿ ಶಿವಭಕ್ತಿ ದಂಪತಿಗಳ ಮಗಳಾದ, ಶಿವಭಕ್ತಳಾದ ವೈಜಕವ್ವೆ. ಜೈನನಾದ ನೇಮಿಸೆಟ್ಟಿಯೊಂದಿಗೆ ಮನೆಯವರ ನಿರ್ಧಾರದಂತೆ ಮದುವೆ ಆಯಿತು. 'ಶಿವನು ಇವಳನ್ನು ನಿನ್ನ ಬಳಿ ಇದ್ದು ಕಾಯುತ್ತೇನೆ ಎಂದು ಭರವಸೆಯನ್ನು ಕನಸಿನಲ್ಲಿ ನೀಡಿದನು. ಸದಾ ಈ ಭವಿಯ ಜೊತೆಯಲ್ಲಿ ಜೀವನ ಸಾಗಿಸುತ್ತಿರುವುದಕ್ಕೆ ವ್ಯಾಕುಲ ಚಿತ್ತಳಾಗಿ, ಗುಪ್ತ ಭಕ್ತೆಯಾಗಿ ಶಿವನನ್ನು ಮನದೊಳಗೆ ಧ್ಯಾನಿಸುತ್ತಿದ್ದಳು. ಜೈನಋಷಿಗಳಿಗೆ ಬಡಿಸಬೇಕಾಗಿದ್ದ

ಭೋಜನವನ್ನು ಶಿವಶರಣನೊಬ್ಬನಿಗೆ ಭಿಕ್ಷೆ ಹಾಕಿದಮೇಲೆ, ಉಳಿದ ಆ ಎಂಜಲನ್ನವನ್ನು ನಾವು ಸ್ವೀಕರಿಸುವುದಿಲ್ಲ ಎಂದು ಜರಿದು ನಡೆದರು. ಕುಪಿತಗೊಂಡ ನೇಮಿಸೆಟ್ಟಿ ಹೆಂಡತಿಗೆ ಬಡಿದು ಘಾಸಿಗೊಳಿಸಿದನು. ಅವಳು ಗಂಡನಿಂದ ಹೊಡೆತ ತಿನ್ನುವಾಗ ತನ್ನ ಅಂತರಂಗದ ತುಂಬಾ ಶಿವನನ್ನೇ ಧ್ಯಾನಿಸುತ್ತಿರಲು ರಾತ್ರಿ ಕನಸಿನಲ್ಲಿ ಬಂದು ಅಭಯ ನೀಡುತ್ತಾನೆ. ಮಾರನೆಯ ದಿನ ಜಿನಾಲಯಗಳ ಬಾಗಿಲು ಎಷ್ಟೇ ಪ್ರಯತ್ನಿಸಿದರೂ ತೆರೆಯದಂತಾಗಲು ಜೈನರೆಲ್ಲಾ ನಿನ್ನೆಯ ದಿನ ನೇಮಿಸೆಟ್ಟಿ ತನ್ನ ಹೆಂಡತಿ ವೈಜಕವ್ವೆಯನ್ನು ಬಡಿದಿದ್ದರಿಂದ ಜೀವ ಹಿಂಸೆಯ ಈ ಕಾರಣದಿಂದ ನಮ್ಮ ಸ್ಥಿತಿ ಹೀಗಾಗಿದೆ ಎಂದು ಮರಕಪಟ್ಟರು. ಜೈನಋಷಿಗಳೆಲ್ಲಾ ವೈಜಕವ್ವೆಯ ಬಳಿ ಬಂದು ತಿಳಿಸಿದಾಗ ಅವಳ ಶಿವಭಕ್ತಿಯ ಬಲದಿಂದ ಬೀಗಗಳೆಲ್ಲಾ ಮುರಿದ್ದು ಬಿದ್ದು ಜೈನರಿಗೆಲ್ಲಾ ಅವಮಾನವಾಯಿತು. ಜಿನನ ಬೆತ್ತಲೆ ಮೂರ್ತಿಗಳೆಲ್ಲಾ ಒಡೆದು ಶಿವಲಿಂಗಗಳಾದಾಗ ಜಿನನ ಮಹಿಮೆ ಏನೂ ಇಲ್ಲವಾಯಿತಲ್ಲಾ ಎಂದು ಜೈನರೆಲ್ಲಾ ತೆಪ್ಪಗಾದರು. ನೇಮಿಸೆಟ್ಟಿಯು ತನ್ನ ಹೆಂಡತಿಯ ಪಾದಗಳಿಗೆ ಬಿದ್ದು ಕ್ಷಮೆ ಕೇಳಿದಾಗ ಶಿವಭಕ್ತಿಯ ಸಂಗದಿಂದ ನಿನಗೆ ಎಂದಿಗೂ ಪಾಪಬರುವುದಿಲ್ಲ ಎಂದು ಹೇಳಿ ಶಿವಭಕ್ತಿಯ ಮಹಿಮೆಯನ್ನು ಕೊಂಡಾಡಿದಳು. ಇಷ್ಟರಲ್ಲಿ ಕೈಲಾಸದಿಂದ ಶಿವನು ಪುಷ್ಪಕವಿಮಾನವನ್ನೇರಿ ಬಂದು ಪ್ರಿಯ ಶಿವಭಕ್ತೆ ವೈಜಕವ್ವೆಯನ್ನು ಕೈಲಾಸಕ್ಕೆ ಕರೆದೊಯ್ದು ಅಲ್ಲಿ ನಂದೀಶ ಮತ್ತು ಪಾರ್ವತಿಗೆ ವೈಜಕವ್ವೆಯ ಭಕ್ತಿಯ ನಿಷ್ಠೆಯನ್ನು ಹೊಗಳುತ್ತಾ, ಜೈನಧರ್ಮೀಯರ ಮನೆಯಲ್ಲಿದ್ದು ಶಿವಭಕ್ತಿಯನ್ನು ಗೋಪ್ಯವಾಗಿ ಮೆರೆದು ಜೈನಋಷಿಗಳಿಗೆ ಮಾಡಿದ ಭೋಜನವನ್ನು ಶಿವನಿಗೆ ಉಣಿಸಿದ ಇವಳ ಶಿವಭಕ್ತಿಯ ಪರಿ ಎಷ್ಟು ಆತ್ಮೀಯವಾದುದು. ಜೈನರೆಲ್ಲರಿಗೂ ಬುದ್ಧಿಕಲಿಸಿದ ಇವಳ ಕೀರ್ತಿ ಅಪೂರ್ವವಾದುದು ಎಂದು ಅವಳ ತಲೆಯ ಮೇಲೆ ಕೈಯಿಟ್ಟು ಹರಸಿ ರುದ್ರಕನ್ನಿಕೆಯ ಸ್ಥಾನ ನೀಡಿದನು. ಈ ಕಥೆಯಲ್ಲಿ ವೈಜಕವ್ವೆಯ ಶಿವಭಕ್ತಿಯ ಮಹಿಮೆ ವ್ಯಕ್ತವಾಗುವ ಜೊತೆಗೆ ಹೆಣ್ಣನ್ನು ಸಮಾಜದಲ್ಲಿ ನಿಕೃಷ್ಟವಾಗಿ ನೋಡುವವರಿಗೆ ವೈಜಕವ್ವೆಯ ಪತಿ ಹಾಗು ಜೈನರೆಲ್ಲಾ ಅವಳ ಪಾದಗಳಿಗೆರುಗುವಂತೆ ಮಾಡಿ ಕೀರ್ತಿಯನ್ನು ಹೆಚ್ಚಿಸಿದಂತಾಯಿತು. ಸ್ತ್ರೀಯೊಬ್ಬಳ ವ್ಯಕ್ತಿತ್ವದ ಗಟ್ಟಿತನ ಅನಾವರಣವಾಗಿದೆ,

ವೈಜಕವ್ವೆ ಶಿವಭಕ್ತೆಯಾಗಿದ್ದುದರಿಂದ, ಜೈನ ನೇಮಿಸೆಟ್ಟಿಯನ್ನು ವಿವಾಹವಾಗಲು ಒಲ್ಲೆ ಎಂದು ಶಿವನಲ್ಲಿ ನಿವೇದಿಸಿದಾಗ ಅವಳಿಗೆ ನಿನ್ನ ಜೊತೆಯಲ್ಲಿ ಸದಾ ನಾನು ಇದ್ದು, ರಕ್ಷಿಸುತ್ತೇನೆ ಎಂದು ಅಭಯ ನೀಡುವ ಶಿವನು ವೈಜಕವ್ವೆಯ ಆತ್ಮೀಯ ಸಖನೇ ಹೌದು. ಗಂಡನಿಂದ ಹೊಡೆತ ತಿನ್ನುವಾಗ ಅವಳ ಅಂತರಂಗ ಶಿವನಾಮ ಸ್ಮರಣೆಯಾಡುತ್ತಿದ್ದಾಗ ಶಿವನಿಗೆ ಆ ಪೆಟ್ಟು ತಾಗಿ,

ಅವನನ್ನೇ ನೋಯಿಸುತ್ತಿತ್ತು. ಅನಂತರ ರಾತ್ರಿ ಸ್ವಪ್ನದಲ್ಲಿ ಅವಳಿಗೆ ಅಭಯವನ್ನು ನೀಡುವ ಶಿವನು ಭಕ್ತರನ್ನು ಕಾಯುವ ಮತ್ತು ಮನಸ್ಸಂತೋಷ ಪಡಿಸುವುದಕ್ಕಾಗಿ ಮಾಡುವ ಎಲ್ಲಾ ಪವಾಡಗಳು ಸೋಜಿಗವೆನಿಸಿದರೂ ಧರ್ಮದ ನೆಲೆಯಲ್ಲಿ ಇದೆಲ್ಲಾ ಸಾಧ್ಯವೆಂಬಂತೆ ಚಿತ್ರಿಸಿರುವ ಹರಿಹರನು ಶಿವಭಕ್ತಿಯ ಮಹತ್ವವನ್ನು ಸಾರಿದ್ದಾನೆ. ಹಸಿದವರಿಗೆ ಅನ್ನವನ್ನಿಕ್ಕುವ ಅವಳ ಸ್ತ್ರೀತ್ವದ ಮಾನವೀಯತೆಯ ಮುಂದೆ ಮೇಲು-ಕೀಳು, ಆಚಾರ-ವಿಚಾರ ಎಲ್ಲವೂ ಗೌಣವೆನಿಸಿಕೊಳ್ಳುತ್ತದೆ.

ಮನೆಯ ನಾಲ್ಕು ಗೋಡೆಗಳ ಮಧ್ಯೆಯಲ್ಲಿ, ಸ್ವಾತಂತ್ರ್ಯ ರಹಿತ ಬದುಕನ್ನು ಬಾಳುತ್ತಿದ್ದ, ಈ ಹೆಣ್ಣಿನ ಜೀವನದಲ್ಲಿ ಶಿವಭಕ್ತಿಯ ಪ್ರಾಬಲ್ಯದಿಂದ ಪರಮ ಪಾವಿತ್ರ್ಯವೆನ್ನುವಂತಹ ಮೋಕ್ಷವನ್ನು ಪಡೆಯಲು ಈ ಶೈವಧರ್ಮದಲ್ಲಿ ಮಾತ್ರ ಸಾಧ್ಯ ಎಂದು ಹರಿಹರನು ರಗಳೆಗಳ ಮೂಲಕ ಸಾರಿದ್ದಾನೆ. ಶಿವನನ್ನು ನೇಹದಿಂದ ಕಾಣುವ ಶಿವಶರಣೆಯರ ಬದುಕು ಸಮಾಜದಲ್ಲಿ ಸಾರ್ಥಕತೆಯನ್ನು ಗಳಿಸುವ ಇಂತಹ ಶಿವಭಕ್ತಿ ಕಥೆಗಳು ಹೆಂಗಳೆಯರ ಪರವಾಗಿರುವ ಶಿವನ ಒಲವನ್ನು ವ್ಯಕ್ತಪಡಿಸುತ್ತದೆ.

**೨೨. ಪೂಶಲಾರ ರಗಳೆ :-**

ತುಂಡೀರ ಮಂಡಳವೆಂಬ ನಾಡಿನಲ್ಲಿ ಸ್ಥಿರಗ್ರಾಮವೆಂಬ ಊರಿರುವುದು ಇಲ್ಲಿ ಕರಕುಶಲವಿದ್ಯೆ, ದಾನಧರ್ಮಾದಿ ವಿದ್ಯೆಗಳಿಂದ ಕೂಡಿದ್ದ ಹಲವು ಬ್ರಾಹ್ಮಣ ಕುಟುಂಬಗಳಿದ್ದವು. ಅಂಥ ಶ್ರೇಷ್ಠ ಕುಲವಂತರ ನಡುವೆ ಪೂಶಲಾರ ಎಂಬ ಹೆಸರಿನ ಬ್ರಾಹ್ಮಣ ಶಿವಭಕ್ತನಿದ್ದನು. ವೇದಮಂತ್ರಾದಿ, ಪುರಾಣಗಳನ್ನು ಬಲ್ಲದನಾಗಿದ್ದ ಇವನು ಶಿವಪೂಜೆ, ಶಿವಭಕ್ತರ ಸೇವೆ, ಸತ್ಕಾರ, ಪಾಠಪ್ರವಚನ, ಬೋಧೆ ಮುಂತಾದವುಗಳನ್ನು ಉದಾರ ಮನಸ್ಸಿನಿಂದ ಮಾಡುತ್ತಿದ್ದನು. ಇಂತಹುದರಲ್ಲಿ ಶಿವಮಂದಿರವನ್ನು ನಿರ್ಮಾಣಮಾಡಬೇಕೆಂಬ ಮನದಾಸೆಯಿಂದ ದಾನದತ್ತಿಗಳನ್ನು ಎಲ್ಲೆಡೆಯಿಂದ ಸಂಗ್ರಹಿಸ ಹೋಗಲು ಎಲ್ಲೂ ಕಾರ್ಯಕೈಗೂಡದೆ ತನ್ನ ಮನದಲ್ಲಿ ಭಾವಗಳಿಂದಲೇ ಶಿವನ ಮಂದಿರವನ್ನು ಕಟ್ಟಲು ಪ್ರಾರಂಭ ಮಾಡಿದನು. ವಾಸ್ತುಶಾಸ್ತ್ರ ಬದ್ಧವಾಗಿ ಶಿವಲಿಂಗವನ್ನು ಕೆತ್ತಿಸಿ ಮರುದಿನ ಆ ದೇವಸ್ಥಾನದಲ್ಲಿ ಲಿಂಗಪ್ರತಿಷ್ಠಾಪನಾ ಕಾರ್ಯಮಾತ್ರ ಉಳಿದಿತ್ತು. ಹೀಗಿರುವಾಗ ತುಂಡೀರ ಮಂಡಲದ ರಾಜನು ಕಾಂಚಿ ಪಟ್ಟಣದ ತಾರವೇಶ್ವರನಿಗಾಗಿ ಒಂದು ಈಶ್ವರನ ಮಂದಿರವನ್ನು ಕಟ್ಟಿಸಿಕೊಟ್ಟಿದ್ದನು. ಅದರ ಲಿಂಗ ಪ್ರತಿಷ್ಠಾಪನಕಾರ್ಯವು ಮತ್ತು ಪೂಶಲಾರನ ಭಾವನಾತೀತ ಲಿಂಗ ಪ್ರತಿಷ್ಠಾಪನ ಕಾರ್ಯದ ಮುಹೂರ್ತಾವಳಿಗಳು ಒಂದೇ ದಿನವಿದ್ದಿದ್ದರಿಂದ

ರಾಜನ ಕನಸ್ಸಿನಲ್ಲಿ ಬಂದು ಶಿವನು ಈ ವಿಷಯವನ್ನು ತಿಳಿಸಿ ನಾನು ಪೂಶಲಾರನ ಲಿಂಗ ಪ್ರತಿಷ್ಠಾಪನಾ ಕಾರ್ಯಕ್ಕೆ ಹೋಗಬೇಕಾಗಿರುವುದರಿಂದ ನೀನು ನಿರ್ಮಿಸಿರುವ ದೇವಾಲಯಕ್ಕೆ ಬರಲು ಸಾಧ್ಯವಿಲ್ಲ ಎಂದನು. ಇದರಿಂದ ಆಶ್ಚರ್ಯಚಕಿತನಾದ ರಾಜನು ಆ ಊರಿನಲ್ಲಿ ಬಂದು ಪೂಶಲಾರನನ್ನು ಹುಡುಕಾಡಿ, ಅವನು ನಿರ್ಮಿಸಿರುವ ಶಿವಾಲಯ ಯಾವುದು ಎಂದು ಕೇಳಿದಾಗ ಎಲ್ಲರೂ ದೇವಾಲಯದ ನಿರ್ಮಾಣಕಾರ್ಯ ನಮ್ಮಲ್ಲಿ ನಡೆಯುತ್ತಿಲ್ಲವೆಂದು ಖಚಿತಪಡಿಸಿದರು. ಆಗ ರಾಜನು ಪೂಶಲಾರನನ್ನು ಕಂಡು, ಆತ ನಿರ್ಮಾಣ ಮಾಡಿರುವ ದೇವಾಲಯ ತೋರಬೇಕೆಂದು ವಿನಂತಿಸಿದಾಗ ಅವನು ತನ್ನ ಎದೆಬಗಿದು ತೋರಿಸಿದನು. ಆತ್ಮಬಲ ಶಕ್ತಿಯಿಂದ ನಿರ್ಮಿತವಾದ ದೇವಾಲಯ ಮತ್ತು ಅದರೊಳಗಿರುವ ಶಿವನ ಮೂರ್ತಿ ಗೋಚರಿಸಿದಾಗ ಎಲ್ಲರೂ ಈ ಅದ್ಭುತ ದೃಶ್ಯವನ್ನು ನೋಡಿ ಹರ್ಷಪುಳಕಿತರಾದರು. ಶಿವನು ಅವನ ಶಿವಭಕ್ತಿಗೆ ಮೆಚ್ಚಿ ಅಪ್ಪಿ, ಕೈಲಾಸಕ್ಕೆ ಕರೆದೊಯ್ದು ಗಣಪದವಿಯನ್ನು ನೀಡಿದನು. ಈ ಕಥೆಯಲ್ಲಿ ಬಸವಣ್ಣನವರ "ಉಳ್ಳವರು ಶಿವಾಲಯ ಮಾಡುವರು, ಬಡವನಯ್ಯ ನಾನೇನ ಮಾಡಲಿ? ಎನ್ನ ಕಾಲೇಕಂಬ, ದೇಹವೇ ದೇಗುಲ, ಶಿರವೇ ಹೊನ್ನ ಕಳಸವಯ್ಯ" ಎಂಬ ವಚನಕ್ಕಿಂತ ಸ್ವಲ್ಪ ಭಿನ್ನತೆಯನ್ನು ಪಡೆದುಕೊಂಡು ಭೌತಿಕ ಸ್ವರೂಪದಿಂದಾಚೆಗೆ ಬಂದು ರಸಭಕ್ತಿಯಿಂದ ಅಂತರಾತ್ಮದ ಶಕ್ತಿಯ ಸ್ವರೂಪದ ಭಾವಗಳಿಂದ ಶಿವಾಲಯ ಮತ್ತು ಶಿವನ ಮೂರ್ತಿ ಪ್ರಕಟವಾಗಿದೆ. ಶಿವನು ಭಕ್ತರ ಹೃದಯದಲ್ಲೇ ವಾಸಮಾಡುತ್ತಾನೆ ಎಂಬುದಕ್ಕೆ ಸಾಕ್ಷಿ ಎಂಬಂತೆ ಈ ಕಥೆ ನಿರ್ಮಿತವಾಗಿದೆ. ಶಿವನು ಏನಿದ್ದರೂ ನಿಜಭಕ್ತಿ ಮತ್ತು ನಿಷ್ಠೆಗೆ ಮಾತ್ರ ಒಲಿಯುತ್ತಾನೆಯೇ ವಿನ: ಭೌತಿಕ ಆಡಂಬರಕ್ಕಲ್ಲ. ಶಿವನನ್ನು ಭಕ್ತರು ತನ್ನ ಒಡೆಯನೆಂದು ನಂಬಿ ಶಿವಭಕ್ತಿ, ಧ್ಯಾನ, ಪೂಜಾದಿಗಳನ್ನು ಮಾಡಿದರೂ, ಪರಮಾತ್ಮನು ಭಕ್ತರನ್ನು ತನ್ನ ದಾಸನೆಂದು ಕರೆಯದೆ ಅವರೊಡನೆಯ ಬಾಂಧವ್ಯವು ಪ್ರೀತಿ, ಅಕ್ಕರೆ ಮತ್ತು ಸ್ನೇಹ–ವಾತ್ಸಲ್ಯವನ್ನೇ ಹೊಂದಿದ್ದು ಅವರಲ್ಲೇ ಇರುತ್ತಾನೆ. ಅವರ ಹೃದಯವೇ ಶಿವನಿಗೆ ಆವಾಸಸ್ಥಾನವೆಂಬಂತೆ ಇರುತ್ತದೆ.

೨೩. <u>ನೇಶನ್ನೈನಾರರ ರಗಳೆ :–</u>

ಕಾಂಚೀಲಿ ಎಂಬ ಪುರದಲ್ಲಿ ಶಿವಧರ್ಮನಿರತರಾದ ಸನ್ಮಾರ್ಗಗಳಲ್ಲಿಯೇ ನಡೆಯುವ ಶುದ್ಧ ಮನಸ್ಸಿನ ಹಲವು ಶಿವಭಕ್ತರ ಮಧ್ಯೆ ಜೇಡಕುಲಕ್ಕೆ ಸೇರಿದ ನೇಶಾರನೆಂಬ ಶಿವಭಕ್ತನು ತನ್ನ ಕುಲವೃತ್ತಿಯಾದ ಬಟ್ಟೆಯನ್ನು ನೇಯ್ದು ಶಿವಭಕ್ತರಿಗೆ, ಜಂಗಮರಿಗೆ, ದಾನವನ್ನು ಮಾಡುವವನಾಗಿದ್ದ ಇವನು ಒಮ್ಮೆಯಾದರೂ ತಾನುಡುವ ಒಂದು ಬಟ್ಟೆಯನ್ನು ಬಿಟ್ಟು ಅನ್ಯದನ್ನು

ಸಂಗ್ರಹಿಸುವ ಗುಣವಿಟ್ಟುಕೊಳ್ಳದ ನಿಸ್ವಾರ್ಥ ಮನೋಭಾವದವನಾಗಿದ್ದನು. ನೇಕಾರನ ಶಿವಭಕ್ತಿಯನ್ನು ಪರೀಕ್ಷಿಸಲು ಹರನು ಪಾರ್ವತಿಯೊಂದಿಗೆ ಆಗಮಿಸಿ ನಾನೂ ನನ್ನ ಸತಿಯೂ ಚಳಿಯಿಂದ ನಡುಗುತ್ತಿದ್ದೇವೆ ಒಂದು ವಸ್ತ್ರವನ್ನು ಹೊದೆಯಲು ನೀಡುವೆಯಾ ಎಂದು ಬೇಡಿದನು. ಅದರಂತೆ ಸಂತೋಷದಿಂದ ಒಪ್ಪಿದ ಶಿವಭಕ್ತನು ಬಟ್ಟೆಯನ್ನು ನೇಯ್ದುಕೊಡುತ್ತೇನೆ. ಸ್ವಲ್ಪ ಸಮಯ ತಾಳಿರಿ ಎಂದಾಗ ಅದಕ್ಕೆ ವೇಷದಾರಿ ಶಿವನು ಚಳಿಯಿಂದ ನಡುಗುತ್ತಿದ್ದೇನೆ, ತಡೆಯಲಾಗದು ನೀನು ಧರಿಸುವ ವಸ್ತ್ರವಾದರೂ ಸರಿ, ತೆಗೆದುಕೊಟ್ಟರೆ ಕಾಡುತ್ತಿರುವ ಚಳಿಯಿಂದ ರಕ್ಷಣೆ ಪಡೆಯುತ್ತೇನೆ ಎಂದು ನುಡಿದನು. ಶಿವಭಕ್ತನಾದ ನೇಕಾರನು ಯಾವ ಹಂಗೂ ಇಲ್ಲದೆ ತನ್ನ ವಸ್ತ್ರವನ್ನು ಬಿಚ್ಚಿಕೊಟ್ಟು ಬಯಲಾಗಿ ನಿಂತನು. ಅವನ ಸತ್ಯಭಾವ, ನಿಶ್ಚಲ ಶಿವಭಕ್ತಿ, ನಿಸ್ವಾರ್ಥ ಮತ್ತು ಸೇವಾಮನೋಭಾವಕ್ಕೆ ಒಲಿದ ಶಿವನು ಕೈಲಾಸದಲ್ಲಿ ಅವನಿಗೆ ಗಣಪದವಿಯನ್ನು ನೀಡಿ ಹರಸಿದನು. ತನ್ನ ಭಕ್ತರನ್ನು ಮೆಚ್ಚಿದ ಶಿವನ ಪರೀಕ್ಷೆಯ ನೆಪದಲ್ಲಿ ಅವರ ಬಟ್ಟೆಯನ್ನು ಧರಿಸುವಷ್ಟು ಪ್ರೀತಿಯನ್ನು ಹೊಂದಿದ್ದಾನೆ. ಈ ಬಗೆಯ ಒಡನಾಟ ಶಿವಭಕ್ತರ ಸಂಬಂಧವನ್ನು ಗಟ್ಟಿಗೊಳಿಸುತ್ತದೆ. ಶಿವಭಕ್ತಿಯ ಮುಂದೆ ನಿಲ್ಲುವುದು ಏನಿದ್ದರೂ ನಿಶ್ಚಲ ಮನಸ್ಸಿನ ಭಕ್ತಿ ಮಾತ್ರವೇ ಹೊರತು ಯಾವ ಬಿಗುಮಾನ, ನಾಚಿಕೆ, ಅಹಂಕಾರಕ್ಕೆ ಅಲ್ಲಿ ಸ್ಥಾನವಿರುವುದಿಲ್ಲ.

## ೨೪. <u>ಕಳಚೆಂಗಚೋಳನ ರಗಳೆ :-</u>

ಚೋಳ ದೇಶಕ್ಕೆ ಭೂಷಣಪ್ರಾಯವೆನಿಸಿದ ಕಾವೇರಿ ನದಿಯ ತೀರದಲ್ಲಿ ಚಂದ್ರ ಪುಷ್ಕರಣಿ ಎಂಬ ತೀರ್ಥ ಕ್ಷೇತ್ರದ ಸಮೀಪದಲ್ಲಿ ಸುಂದರವಾದ ಒಂದು ಉದ್ಯಾನವನವಿತ್ತು. ಅಲ್ಲಿ ಒಂದು ಮಹಾಶಿವಲಿಂಗವೊಂದಿತ್ತು ಅದಕ್ಕೆ ದಿನನಿತ್ಯವೂ ಬಿಳಿಯಾದ ಆನೆಯೊಂದು ತನ್ನ ಸೊಂಡಿಲಿನಿಂದ ತಿಳಿಯಾದ ಜಲವನ್ನು ಅಭಿಷೇಕ ಮಾಡಿ ನಾನಾವಿಧ ಫಲಪುಷ್ಪಾದಿಗಳಿಂದ ನೈವೇದ್ಯ ಮಾಡಿ ಅರ್ಥಪೂರ್ಣವಾದ ಭಕ್ತಿಯಿಂದ, ಪೂಜೆ ಪುನಸ್ಕಾರಾದಿಗಳನ್ನು ಮಾಡಿ ದೀರ್ಘದಂಡ ನಮಸ್ಕಾರವನ್ನು ಹಾಕಿ ನಮಿಸುತ್ತಿತ್ತು. ಆದ್ದರಿಂದ ಆ ಭಕ್ತಿಗೆ ಹೆಸರಾಗಿ ವನ ಗಜಾರಣ್ಯವೆಂದೇ ಖ್ಯಾತಿ ಪಡೆಯಿತು. ಅದೇ ವನದಲ್ಲಿ ಕೀಟಕವೊಂದಿತ್ತು ಅದು ತನ್ನ ಭಕ್ತಿಯನ್ನು ಶಿವನಿಗೆ ಮೇಲಿನ ಹೊದಿಕೆಯನ್ನು ತನ್ನ ಜೊಲ್ಲಿನ ಮೂಲಕ ನಿರ್ಮಾಣ ಮಾಡುವ ತರಗಲೆಗಳಿಂದ ರಕ್ಷಣೆ ಮಾಡುವ ಮೂಲಕ ತೋರಿಸುತ್ತಿತ್ತು. ಹೀಗಿರುವಾಗ ತನ್ನ ಮೇಲಿನ ಹೊದಿಕೆಯನ್ನು ಈ ಆನೆಯು ಜಲಾಭಿಷೇಕ ಮಾಡುವ ಮೂಲಕ ನಾಶಪಡಿಸುತ್ತದೆ ಎಂದು ಕೋಪಗೊಂಡು ಇದಕ್ಕೆ ಸಾವಾದರೂ ಬರಬಾರದೆ ಎಂದು ಶಪಿಸುತ್ತಿರುತ್ತದೆ. ಒಮ್ಮೆ ಆನೆಯು ಸೊಂಡಲಿನಿಂದ ಶಿವನಿಗೆ ಅಭಿಷೇಕ

ಮಾಡುತ್ತಿರುವಾಗ ಕೀಟವು ಅದರ ಸೊಂಡಿಲೊಳಗೆ ಹೋಗಿ ವಿಷವೇರುವಂತೆ ಕಚ್ಚಿ ಹೊರ ಬಂದು ಸತ್ತು ಬಿದ್ದಿತು. ಆನೆಯ ಶಿವಭಕ್ತಿಗೆ ಮೆಚ್ಚಿ ಶಿವನು ಪ್ರತ್ಯಕ್ಷನಾಗಿ ಹಾರೈಸಿ ಸತ್ತಿದ್ದ ಕೀಟಕ್ಕೆ ಜೀವಭರಿಸಿ ನಿನ್ನ ಈ ಕರ್ಮ ಜೀವವನ್ನು ಬಿಟ್ಟು ಚೋಳವಂಶದಲ್ಲಿ ಹುಟ್ಟಿ ಶಿವಭಕ್ತಿಯನ್ನು ಮೆರೆದು ಗಣಪದವಿಯನ್ನು ಪಡೆಯೆಂದು ಹರಸಿದನು.

ಧರಾಪತಿ – ಕಮಲಾವತಿ ಎಂಬ ಚೋಳ ಅರಸ ದಂಪತಿಗಳ ಮಗನಾಗಿ ಹುಟ್ಟಿ ಕಳಚೆಂಗ ಚೋಳನೆಂದು ಸಂತಸದಿಂದ ಕಾಲಕಳೆಯುತ್ತಿದ್ದನು. ಒಮ್ಮೆ ತನ್ನ ಪೂರ್ವ ಜನ್ಮದ ಕಥೆ ನೆನಪಾಯಿತು. ಅದರಂತೆ ಶಿವಪೂಜೆಗೈಯ್ಯುತ್ತಾ, ಧರ್ಮಕಾರ್ಯಾರ್ಥ ಶಿವದೇಗುಲಗಳನ್ನು ಚೋಳ ನಗರದ ತುಂಬಾ ನಿರ್ಮಾಣ ಮಾಡಿಸಿ, ಅಲ್ಲೆಲ್ಲಾ ಸದಾ ಪೂಜೆ, ಧ್ಯಾನಗಳು ನಡೆಯುವಂತೆ ವ್ಯವಸ್ಥೆಗೊಳಿಸಿ, ಶಿವಭಕ್ತರಿಗೆ ದಾನಧರ್ಮವನ್ನು ಮಾಡಿ ತನ್ನ ನಿಜಭಕ್ತಿಯನ್ನು ಮೆರೆದನು. ಇವನ ಭಕ್ತಿಸುಕಾರ್ಯಕ್ಕೆ ಒಲಿದ ಶಿವನು ಗಣಪದವಿಯನ್ನು ನೀಡಿ ಹರಸಿದನು. ನಮ್ಮ ಪಾಪಕರ್ಮಗಳನ್ನು ತೊಳೆದು ಶುದ್ಧಜೀವನದೊಂದಿಗೆ ಶ್ರದ್ಧಾ, ಭಕ್ತಿಯನ್ನು ಬೆಳೆಸಿಕೊಳ್ಳುವುದಕ್ಕೆ ಜಗದೊಡೆಯನ ಅನುಗ್ರಹ, ಅನುಕಂಪದ ಅವಶ್ಯಕತೆಯಿದೆ. ಶಿವಭಕ್ತರ ಬೆನ್ನ ಹಿಂದೆ ಇದ್ದು ಅವರನ್ನು ಉದ್ಧರಿಸುವ ಕಾರ್ಯವನ್ನು ಶಿವನು ಮಾಡುತ್ತಾನೆ ಎಂಬ ತಿಳಿರಹಸ್ಯ ಇಲ್ಲಿ ವೇದ್ಯವಾಗುತ್ತದೆ. ಶಿವಪೂಜೆಯ ಸುಖವೆನ್ನುವುದು ನಿಶ್ಚಲವೂ ಹೌದು, ಶಾಶ್ವತವಾದುದೂ ಹೌದು. ಆದ್ದರಿಂದ ಮನುಷ್ಯ ಸಮಾಜದ ಏಳಿಗೆಗೆ ಶಿವಭಕ್ತಿಯ ಆಚರಣೆ ಮತ್ತು ಧರ್ಮಾಚರಣೆಯು ಒಂದು ಪ್ರೇರಕ ಶಕ್ತಿಯಾಗಿ ತನ್ನ ಕಾರ್ಯವೆಸಗುತ್ತದೆ ಎಂಬುದನ್ನು ಹರಿಹರ ರಗಳೆಗಳಲ್ಲಿ ಹಲವು ಕಥೆಗಳ ಮೂಲಕ ನಿವೇದನೆ ಮಾಡಿಕೊಂಡಿದ್ದಾನೆ. ಶಿವನು ತನ್ನ ಭಕ್ತರನ್ನು ಎಂದೂ ಬಿಟ್ಟುಕೊಡುವುದಿಲ್ಲ ಹಾಗೂ ಭಕ್ತರು ಶಿವನನ್ನು ಎಂದಿಗೂ ಬಿಡುವುದಿಲ್ಲ. ಶಿವನು ಅವರೊಂದಿಗೆ ಮಧುರ, ಆತ್ಮೀಯ ಬಾಂಧವ್ಯವನ್ನು ಮತ್ತು ಅಭಿಮಾನ ಗೌರವವಾದ ಸಂಬಂಧವನ್ನು ಹೊಂದಿರುತ್ತಾನೆ. ಶಿವಭಕ್ತರಲ್ಲಿ ಸಮಾಜದ ಹಿತಕ್ಕಾಗಿ ಅವಶ್ಯವೆನಿಸಿದ ಧರ್ಮಾಸಕ್ತಿಗಳು ಬೆಳೆಸಿಕೊಂಡಿರುತ್ತಾರೆ ಎಂಬ ಅಂಶವು ಈ ರಗಳೆಯಿಂದ ನಮಗೆ ವೇದ್ಯವಾಗುತ್ತದೆ.

### ೨೫. ನಮಃ ಶಿವಾಯ ಮುರುಘರ ರಗಳೆ:-

ಚೋಳದೇಶದಲ್ಲಿ ನಮಃ ಶಿವಾಯ ಎಂಬ ಪುರದಲ್ಲಿ ನಮಃ ಶಿವಾಯ ಮುರುಘ ಎಂಬ ಹೆಸರಿನ ಶಿವಭಕ್ತನಿದ್ದನು. ಅವನು ಶಿವನ ಪೂಜೆಗೆಂದು ವೈವಿಧ್ಯಮಯ ಹೂಗಳು, ಧೂಪ

ದೀಪಾದಿಗಳನ್ನು ತಂದು ಪ್ರೀತಿ, ಆತ್ಮೀಯತೆಯಿಂದ ಸ್ತುತಿಸಿದನು. ತನ್ನ ಬಾಳಿನಲ್ಲಿ ಶಿವನನ್ನು ಬಿಟ್ಟರೆ ಅನ್ಯಯೋಚನೆಗಳೇ ಇಲ್ಲದ ಇವನು ಬಾಯಿಯಿಂದ ಸ್ಪಷ್ಟವಾಗಿ ದಿನನಿತ್ಯ ಹೇಳುತ್ತಿದ್ದ ಒಂದೇ ಒಂದು ಸೂತ್ರವೆಂದರೆ ನಮ: ಶಿವಾಯವೆಂದು. ಒಮ್ಮೆ ಶಿವನು ಕನಸಿನಲ್ಲಿ ಬಂದು ನೀನು ಮನೆಗೆ ಬರಬೇಕು ಎಂದು ಸೂಚಿಸಿದನು. ಅದರಂತೆ ಸಂಭ್ರಮ ಸಂತೋಷದಿಂದ ಹೊರಟು ಜಲಾಭಿಕ್ಷೇಕವನ್ನು ಲಿಂಗಕ್ಕೆ ಮಾಡಿಸಿ, ತನ್ನ ತಂದೆ, ತಾಯಿ, ಸ್ನೇಹಿತ, ಬಂಧುಕುಲವೆ, ನನ್ನ ಒಲವೇ ಛಲವೇ ಎಂದು ಕುಣಿ ಕುಣಿದು ಕುಪ್ಪಳಿಸಿ ಶಿವನನ್ನು ಅಪ್ಪಿದನು. ಅವನು ಮನಸ್ಸಿನ ಚಿತ್ರದ ತನುವಿನ ಅಪ್ಪುಗೆ ಲಿಂಗದೊಳಗೆ ಲಿಂಗವಾಗಿ ಸೇರಿತು. ಹೀಗೆ ಶಿವಲಿಂಗದಲ್ಲಿ ನಮ: ಶಿವಾಯ ಮುರುಘರು ಕರಗಿಹೋದರು. ಶಿವನ ಕರುಣೆಗೆ ಪಾತ್ರನಾದ ಇವನನ್ನು ಕೈಲಾಸಕ್ಕೆ ಕರೆದೊಯ್ದು ಗಣಪದವಿಯನ್ನು ನೀಡಿ, ಅಲ್ಲಿದ್ದ ಗಣ ಸಮೂಹಕ್ಕೆಲ್ಲಾ ಪರಿಚಯಿಸಿದನು. ಪ್ರೇಮ, ಸ್ನೇಹರಸವನ್ನು ನನ್ನ ಮೇಲೆ ಹೊಂದಿರುವ ಈ ಶಿವಭಕ್ತನು ನನ್ನ ಆತ್ಮೀಯ ಸಖನೆಂದು ಶಿವನು ಸಾರಿದನು. ನಮಃ ಶಿವಾಯ ಮುರುಘರ ಭಕ್ತಿ ಉತ್ತಮವಾದದ್ದು, ನಿತ್ಯವೂ ಸತ್ವಮನಸ್ಸಿನಿಂದ ಶಿವನೊಡನೆ ಪ್ರೀತಿ ಮತ್ತು ಸ್ನೇಹ ಸಂಬಂಧವನ್ನು ಹೊಂದಿದ್ದನು. ಶಿವ ಮತ್ತು ಭಕ್ತರ ನಡುವಿನ ಈ ಬಗೆಯ ನಲ್ಮೆಯತೆಯು ಇವರ ಬಾಂಧವ್ಯವನ್ನು ಮತ್ತಷ್ಟೂ ಹೆಚ್ಚಿಸುತ್ತದೆ.

**೨೩. ತಿರುನಾಳ್ಪೋವರ ರಗಳೆ :-**

ಚೋಳನ ದೇಶದಲ್ಲಿ ಈಶಭಕ್ತ ತಿರುನಾಳ್ಪೋವರ ಎಂಬ ಶಿವಭಕ್ತನಿದ್ದನು. ಕೀಳುಕುಲದಲ್ಲಿ ಹುಟ್ಟಿದನಾದರೂ ಇವನ ಮನಸ್ಸು ಹಿರಿದಾದುದು. ಅವನಿಗೆ ಪೊನ್ನಾಂಬಲದ ಶಿವದೇವಾಲಯಕ್ಕೆ ಹೋಗಿ ಬರಬೇಕೆಂಬ ಮಹಾದಾಸೆ ಇತ್ತು. ಆದರೆ ನಾಳೆ ಎಂಬುದು ಎಷ್ಟು ಬಂದರೂ ಅವನಿಗೆ ಹಲವು ಕೆಲಸಗಳು, ಒತ್ತಡಗಳು ಸರಿಯಾದ ಸಮಯಕ್ಕೆ ಬಂದು ದೇವಾಲಯಕ್ಕೆ ಹೋಗುವ ಆಸೆ ಕನಸಾಗಿಯೇ ಉಳಿಯೇ ಉಳಿಯಿತೇ ವಿನಃ ಹನ್ನೆರಡು ವರ್ಷಗಳು ಸಂದರೂ ಅವನ ಪಾಲಿಗೆ ಅಸಾಧ್ಯವಾದ ಕೆಲಸವಾಗಿ ಹೋಯಿತು. ಹೀಗಿರುವಾಗ ಪೊನ್ನಾಂಬಲದ ತಿರುನಾಳ ಹಬ್ಬಕ್ಕಾಗಿ ನೆಲ್ಲು ಆರಿಸುವ ಕಾಯಕದ ಸಲುವಾಗಿ ತಿರುನಾಳ್ಪೋವರನಿಗೆ ಕರೆ ಬಂದಾಗ ಅತಿಹೆಚ್ಚು ಸಂತೋಷದಿಂದ ಒಪ್ಪಿಕೊಂಡು ತಿರುನಾಳನ ಪೊನ್ನಾಂಬಲಕ್ಕೆ ಹೊರಟನು. ಅಲ್ಲಿ ಸಾವಿರಾರು ಸಂಖ್ಯೆಯಲ್ಲಿ ಜನರು ಭಯ-ಭಕ್ತಿ ಅಬ್ಬರದಿಂದ ಸೇರಿ ಪೂಜೆ, ಶಿವಸ್ತುತಿ, ಧ್ಯಾನ, ಗೀತೆ ಗಾಯನ, ಜಯಕಾರಗಳಿಂದ ದೇವಾಲಯ ಕಂಗೊಳಿಸುತ್ತಿತ್ತು. ಭಕ್ತ ಸಮೂಹದ ಮಧ್ಯೆ ಕುಣಿಯುತ್ತಾ, ನಲಿನಲಿದಾಡುತ್ತಾ ಶಿವನ ಸ್ತುತಿಯನ್ನು ಹಾಡುತ್ತಾ ಮೈಮರೆತು ಭಕ್ತಿಯಲ್ಲಿ ತಲ್ಲೀನನಾಗಿ ಬರುತ್ತಿದ್ದ

ತಿರುನಾಳ್ಪೋವರನನ್ನು ಪಾರ್ವತಿಗೆ ತೋರಿಸಿ ತನ್ನ ಭಕ್ತನ ನಿಜಭಕ್ತಿ ಸುಖವನ್ನು ನೋಡು ಎಂದು ಹೆಮ್ಮೆಯಿಂದ ಗುಣಗಾನ ಮಾಡುವನು. ಪುರೋಹಿತನೋರ್ವನನ್ನು ಆ ಭಕ್ತನಲ್ಲಿಗೆ ಕಳುಹಿಸಿ ಕೊಟ್ಟನು. ಆದರೆ ಅವನು ಕೀಳು ಕುಲದವನೆಂದು ತಿರಸ್ಕರಿಸಿದನು. ತಕ್ಷಣ ನಂದೀಶನನ್ನು ಕಳುಹಿಸಿ ತನ್ನ ಭಕ್ತ ತಿರುನಾಳ್ಪೋವರನಲ್ಲಿಗೆ ಕಳುಹಿಸಿದನು. ಆಗ ನಂದೀಶನು ಅವನನ್ನು ಕೊಂಡದೊಳಗೆ ಮುಳುಗೇಳಿಸಿದಾಗ ತಿರುನಾಳ್ಪೋವರನ ನಿಜರೂಪ ಬದಲಾಗಿ ಶಿವನಂತೆ ಸಕಲ ರೂಪವನ್ನು ಹೊತ್ತಿ ಭೂಷಣಪ್ರಾಯನಂತೆ ಕಂಗೊಳಿಸಿ ಶಿವನೊಳಗೆ ಲೀನನಾದನು. ಅವನು ಲಿಂಗಸಂಗಿಯಾದನು, ಅವನ ಭಕ್ತಿ ಶ್ರೇಷ್ಠತೆಗೆ ಒಲಿದ ಶಿವನು ಅವನನ್ನು ಮೆಚ್ಚಿ ಗಣಪದವಿಯನ್ನು ನೀಡಿ ಹರಿಸಿದನು.

ತಿರುನಾಳ್ಪೋವರನು ಶಿವನನನ್ನು ಅನನ್ಯ ಭಕ್ತಿಭಾವದಿಂದ ಪೂಜಿಸುತ್ತಾ, ತಾನು ಎಂದು ಪೊನ್ನಾಂಬಲ ಶಿವಾಲಯವನ್ನು ನೋಡುವುದು ಎಂಬ ಕಾತುರದಿಂದಲೇ ತನ್ನ ಮನಸ್ಸಿನಲ್ಲಿ ಶಿವನನ್ನೇ ಏಕನಿಷ್ಠತಾ ಮನೋಭಾವದಿಂದ ಧ್ಯಾನ ಚಿಂತಾಪರನಾಗಿರುತ್ತಾನೆ. ಇವನ ಭಕ್ತಿಯನ್ನು ಮೆಚ್ಚಿದ ಶಿವನು ಅವನನ್ನು ತನ್ನದೇ ರೂಪದಲ್ಲಿ ನೋಡಲು ಇಚ್ಚಿಸಿ ನಂದೀಶನಿಂದ ಆ ಭಕ್ತನನ್ನು ರೂಪಾಂತರಗೊಳಸಿದ ಮೇಲೆ ಲಿಂಗದಲ್ಲಿ ಲೀನನಾಗುವ ತಾದಾತ್ಮ್ಯ ಸ್ನೇಹಪರತೆ ಮತ್ತು ಮಧುರ ಭಾವಗಳು ಅಭಿವ್ಯಕ್ತವಾಗುತ್ತದೆ. ಶಿವನು ತನ್ನ ಭಕ್ತರ ಮೇಲೆ ಕರುಣೆ ಮತ್ತು ಅಭಿಮಾನದೊಂದಿಗೆ ವಿಶ್ವಾಸವನ್ನು ಹೊಂದಿರುತ್ತಾನೆ ಎಂಬುದು ಈ ಕಥೆಯಿಂದ ವೇದ್ಯವಾಗುತ್ತದೆ.

### ೨೭. <u>ಒಲಘಾಂಡ ಮೂರ್ತಿಗಳ ರಗಳೆ :-</u>

ಭೂಮಂಡಲದ ಪಾಂಡ್ಯದೇಶದಲ್ಲಿ ಮಧುರಾಪುರವೆಂಬ ಶಿವಪುರವುಂಟು. ಅಲ್ಲಿನ ಒಲಘಾಂಡಾ ಮೂರ್ತಿ ಎಂಬ ಓರ್ವ ಶಿವಭಕ್ತನಿದ್ದನು. ಇವನು ಶಿವಪೂಜೆ, ಧ್ಯಾನ, ಭಕ್ತಿಯೊಂದಿಗೆ ಶಿವಶರಣರಿಗೆ ಸೇವೆ ಮಾಡುವ ಗುಣವುಳ್ಳವನಾಗಿದ್ದನು. ಶಿವಲಿಂಗಕ್ಕೆ ಅಭಿಷೇಕ ಮಾಡಿ, ಚಂದನವನ್ನು ಲೇಪಿಸುವ ಕಾರ್ಯವನ್ನು ನೇಮವಾಗಿ ಸ್ವೀಕರಿಸಿದ್ದನು. ಅದಕ್ಕಾಗಿ ದಿನಾಲು ಶಿವಾಲಯಕ್ಕೆ ಬಂದು ಉಪವಾಸದಿಂದಲೇ ಪೂಜೆ ಮಾಡಿ ತೃಪ್ತಿಯಾಗುವಷ್ಟರ ಮಟ್ಟಿಗೆ ತಾನೇ ಕೂತು ಚಂದನವನ್ನು ಅರಿದು ಶಿವನಿಗೆ ಪೂಜಿಸಿ ಮನೆಗೆ ತೆರಳ ಸುಕಾರ್ಯಗಳಲ್ಲಿ ತೊಡಗುತ್ತಿದ್ದನು. ಹೀಗೆ ಅನೇಕ ವರ್ಷಗಳು ಜರುಗಿರಲು ಶಿವನು ಈ ಭಕ್ತನ ಪರೀಕ್ಷೆಗೆಂದು ಇವನ ಬಳ ಇದ್ದ ಸಂಪತ್ತೆಲ್ಲಾ ಕರಗಿಹೋದರೂ ನೇಮವನ್ನು ಮಾತ್ರ ತೀರಿಸದೆ ನಿಷ್ಠೆಯಿಂದ ಕೈಗೊಂಡಿದ್ದನು.

ಹೆಂಡತಿಯ ತಾಳಿಯನ್ನು ಮಾರಿ ತನ್ನ ನೇಮವನ್ನು ಸುಸೂತ್ರವಾಗಿ ಆಚರಿಸಿದನು. ನಾಳಿನ ದಿನದಿಂದ ನೇಮಕ್ಕಾಗಿ ಏನೂ ಇಲ್ಲವಾದಗಲೂ ಶಿವನು ಕನಸ್ಸಿನಲ್ಲಿ ಬಂದು ನಿನ್ನ ಮೊಳಗೈಯಲ್ಲಿ ಚಂದನವನ್ನು ತೇಯಬಹುದು ಎಂದು ಹೇಳಿದನು. ಅದರಂತೆ ಮರುದಿನ ಶಿವಾಲಯಕ್ಕೆ ಬಂದು ಅಭಿಷೇಕಾದಿಗಳೊಂದಿಗೆ ಶಿವನನ್ನು ಭಕ್ತಿ ಭಾವಗಳಿಂದ ವಿಶೇಷವಾಗಿ ಅರ್ಚಿಸಿ, ಕನಸಿನಲ್ಲಿ ಶಿವನು ಹೇಳಿದಂತೆ ಚಂದನವನ್ನು ತೆಗೆಯಲು ಮೊಳಗೈಯನ್ನು ಸಾಣೇಕಲ್ಲಿಗೆ ಒಂದೇ ಸಮನೇ ಉಜ್ಜುತ್ತಾ ಬಂದನು. ನೂರಾರು ತರದ ಪರಿಮಳವನ್ನು ಮೀರಿದ ಆ ಸುಗಂಧ ದ್ರವ್ಯವು ಸೃಷ್ಟಿಯಾಯಿತು. ಇದನ್ನು ಕಂಡ ಒಲಘಾಂಡ ಮೂರ್ತಿ ಸಂತೋಷದಿಂದ ಕುಣಿದಾಡಿ ನನ್ನ ಶಿವನ ಪೂಜೆಗೆ ಹೊರಗಡೆ ಸಿಗುವ ಗಂಧ ಇನ್ನು ಬೇಕಿಲ್ಲ. ಈ ನನ್ನ ದೇಹವನ್ನು ಚಂದನದ ಉತ್ಪಾದನೆಗಾಗಿ ಬಳಸುವೆನು ಎಂದು ಶಿವನನ್ನು ಸುಗಾಂಧಾದಿ ದ್ರವ್ಯಗಳನ್ನು ಬಳಸಿ ಒಲುಮೆಯಿಂದ ಪೂಜಿಸಿದನು. ಶಿವಭಕ್ತನ ಭಕ್ತಿಗೆ ಮೆಚ್ಚಿದ ಶಿವನು ಬಿಗಿದಪ್ಪಿಕೊಂಡು ಕೈಲಾಸಕ್ಕೆ ಕರೆದೊಯ್ದು ಅಲ್ಲಿ ಎಲ್ಲರಿಗೂ ಶರೀರವನ್ನು ಸವೆಸಿ ಚಂದನವನ್ನು ಅರ್ಪಿಸಿದ ಈತನಿಗೆ ಏಕನಿಷ್ಠವ್ರತಸ್ಥ ಭಕ್ತಶ್ರೇಷ್ಠ ಎಂದು ಹೊಗಳಿ ಗಣಪದವಿಯನ್ನು ನೀಡಿ ಹರಸಿದನು. ಶಿವಭಕ್ತರು ಭಕ್ತಿನಿಷ್ಠರಾಗಿದ್ದು, ತಮ್ಮ ನೇಮ ಸಾಧನೆಗಾಗಿ ಶರೀರವನ್ನು ಅರ್ಪಿಸಲು ಯಾವತ್ತಿಗೂ ಮುಂದು, ಅವರಿಗೆ ಬೇಕಾಗಿರುವುದು ಏನಿದ್ದರೂ ಶಿವನ ಅನುಗ್ರಹ, ಹಾರೈಕೆ ಮಾತ್ರ ಎಂಬುದು ಈ ರಗಳೆಯಿಂದ ವೇದ್ಯವಾಗುತ್ತದೆ. ಶಿವಭಕ್ತನ ಮತ್ತು ಶಿವನ ನಡುವೆ ಇರುವ ಆತ್ಮೀಯತೆ ಬಾಂಧವ್ಯವನ್ನು ಅಭಿವೃದ್ಧಿಪಡಿಸುತ್ತದೆ.

### ೨೮. <u>ಮೆರೆಮಿಂಡದೇವರ ರಗಳೆ :-</u>

ಚೋಳದೇಶದ ತಿರುವಾರೂರು ಎಂಬ ನಗರದಲ್ಲಿ ಅತಿಶ್ರೇಷ್ಠ ಶಿವಭಕ್ತನಾದ ಮೆರೆಮಿಂಡದೇವನು ಶಿವನ ಧ್ಯಾನಾಸಕ್ತ ಅಭಿಮಾನಿ ಮತ್ತು ಆರಾಧಕನಾಗಿದ್ದನು. ತನ್ನ ವ್ಯಕ್ತಿತ್ವದಲ್ಲಿ ನಿಷ್ಠೆಯುಳ್ಳವನಾಗಿದ್ದ ಅವನು ಸತ್ಯವಂತನಾಗಿದ್ದನು. ಶಿವನ ಪೂಜೆ, ಅಭಿಷೇಕ ಅರ್ಚನೆಗಳನ್ನು ಆನಂದದಿಂದ ಮಾಡಿ ಶಿವಶರಣರೆಲ್ಲಾ ಒಡಗೂಡಿಗೊಂಡು ಹಲವು ವಾದ್ಯ ತಾಳಮೇಳಗಳೊಂದಿಗೆ ಶಿವನಾಮ ಸ್ಮರಣೆಯನ್ನು ರಾಗಬದ್ಧವಾಗಿ ಹಾಡಿಕೊಂಡು ಶಿವದೇವಾಲಯದ ಪ್ರಾಂಗಣದಲ್ಲಿ ಎಲ್ಲರೂ ಕುಳಿತಿರುವಾಗ ಶಿವಭಕ್ತನಾದ ನಂಬಿಯಣ್ಣನು ಕುದುರೆಯಲ್ಲಿ ಬಂದು ಯಾರಿಗೂ ಓಗೊಡದೆ ಹೋಗಿ ನಮಸ್ಕಾರವನ್ನು ಮಾಡಿ, ಯಾರನ್ನೂ ಲೆಕ್ಕಿಸದೆ ಕುದುರೆ ಏರಿ ಆ ಶಿವಭಕ್ತರ ಮೇಲೆಯೇ ಓಡಿಸಿಕೊಂಡು ಹೋದನು. ಇದರಿಂದ ಕೋಪಗೊಂಡ ಮೆರೆಮಿಂಡನು ಶಿವಶರಣರೆಲ್ಲರನ್ನು ಒಂದುಗೂಡಿಸಿ ನಂಬಿಯಣ್ಣನ ವಿರುದ್ಧ ಧಿಕ್ಕಾರ

ಕೂಗುವಂತೆ ಮಾಡಿ ಆವೇಶದಿಂದ ಎಲ್ಲರೂ ಮುನ್ನುಗ್ಗಿದರು. ಇದರಿಂದ ಗಾಬರಿಗೊಂಡ ನಂಬಿಯಣ್ಣನು, ಮಹಾದೇವನೇ ನನ್ನೊಬ್ಬನನ್ನೇ ಕೋಪಿಷ್ಟ ಶಿವಭಕ್ತರೆದುರಿಗೆ ಬಿಟ್ಟು ಹೋಗುವುದು ಸರಿಯಲ್ಲ ಎಂದು ಓಡೋಡಿ ದೇವಾಲಯಕ್ಕೆ ಬರುತ್ತಾನೆ. ಇವನು ದೇವಾಲಯದೊಳಗೆ ಬಂದೊಡನೆ ಆಲಯದ ಎಲ್ಲಾ ಬಾಗಿಲುಗಳು ತಂತಾನೆ ಹಾಕಿಕೊಂಡವು. ಭಕ್ತರೆಲ್ಲಾ ಪರಶಿವನನ್ನು ಇನ್ನು ನೋಡುವುದೆಂದು, ಪೂಜಿಸುವುದು ಹೇಗೆ ಸಾಧ್ಯ ಎಂದು ವ್ಯಥೆಪಟ್ಟರು. ಶಿವಭಕ್ತರನ್ನು ನೋಡದೆ ಹೋದ ಸೊಕ್ಕು ಶಿವನಿಗೂ ನಂಬಿಯಿಂದ ತಾಗಿತಾ? ಎಂದು ಕೋಪಗೊಂಡ ಮೆರೆಮಿಂಡನು ಶಿವನ ವಿರುದ್ಧ ಡಂಗುರ ಸಾರಿಸಿ, ಇಂಥ ಶಿವನು ನಮಗೆ ಬೇಕಿಲ್ಲ ಎಂದು ಹೇಳಿದನು. ಪ್ರೀತಿಯಿಂದ, ಸ್ನೇಹದಿಂದ ಒಲಿದ ಶಿವಭಕ್ತರನ್ನು ತಿರಸ್ಕರಿಸಿದ ಶಿವನು ದೇವಾಲಯದ ಒಳಗಿರಬೇಕಿಲ್ಲ, ಹೊರಗೆ ಬರಲಿ ಎಂದು ಪಟ್ಟು ಹಿಡಿದರು. ಭಕ್ತನ ನಡೆ ನುಡಿ ಎಂದಿಗೂ ತಪ್ಪುವುದಿಲ್ಲ. ಶಿವಭಕ್ತರನ್ನು ಎದುರು ಹಾಕಿಕೊಂಡರೆ ನನಗೂ ಪೂಜೆ ಪುನಸ್ಕಾರಗಳು ಇಲ್ಲವಾಗುತ್ತೆ, ಅವರಿಲ್ಲದೆ ತಾನೂ ಇಲ್ಲ ಎಂದು ಭಕ್ತರ ವಿರೋಧವನ್ನು ಕಟ್ಟಿಕೊಳ್ಳಲು ಸಾಧ್ಯವಾದಿತೇ? ಎಂದು ಶಿವನು ಭಕ್ತರನ್ನು ನೋಡಲು ಹೊರಗೆ ಬಂದನು. ಶಿವನ ವಿರುದ್ಧವೇ ಧಿಕ್ಕಾರ ಕೂಗಿದ ನಾನು ಇನ್ನೂ ಬದುಕಿರಬೇಕೇ ಎಂದು ಕತ್ತಿಯನ್ನು ತೆಗೆದು ಕುತ್ತಿಗೆಯನ್ನು ಕೊಯ್ದುಕೊಳ್ಳಹೋದಾಗ ಅದನ್ನು ತೆಗೆದು ಪ್ರೀತಿಯ ಅಪ್ಪುಗೆ ನೀಡಿ ಕೊಂಡಾಡಿದನು. ಕೈಲಾಸದಲ್ಲಿ ಗಣಪದವಿ ನೀಡಿ ಹರಸಿದನು. ಶಿವನನ್ನು ಸೋಲಿಸಿದ ಈ ಭಕ್ತರು ನನ್ನ ಸಖರು ಎಂದು, ನನ್ನ ಎಲ್ಲಾ ಒಡನಾಟ ಇವರೊಂದಿಗೆ ಎಂಬ ಆ ಶಿವನ ಮಾತು ಎಲ್ಲಿ ಸ್ನೇಹವಿರುತ್ತದೆಯೋ ಅಲ್ಲಿ ಪ್ರೀತಿ, ಜಗಳ, ಕೋಪ, ಶರಣಾಗುವುದು, ಸೋಲು, ಗೆಲುವು ಎಲ್ಲವೂ ಇರುತ್ತದೆ ಎಂಬ ಸತ್ಯ ಈ ರಗಳೆಯ ಮೂಲಕ ವ್ಯಕ್ತವಾಗುತ್ತದೆ. ಭಕ್ತನ ಮುಂದೆ ಎಂದಿಗೂ ಶಿವನೇ ಸೋಲುವುದು ಎಂಬ ಮಾತಿನಲ್ಲಿ ಶಿವಭಕ್ತರ ನಿಷ್ಠೆ, ಸತ್ಯ, ನೇಮ ಎಷ್ಟು ಪ್ರಖರವಾದುದು ಆ ಸ್ನೇಹಸಂಬಂಧವನ್ನು ಯಾರೂ ಬಿಡಿಸಲು ಸಾಧ್ಯವಿಲ್ಲ ಎಂಬುದು ವ್ಯಕ್ತವಾಗುತ್ತದೆ. ಸ್ನೇಹವಿದ್ದಲ್ಲಿ ಒಲುವು ಗೆಲುವು ಎರಡು ಇರುತ್ತದೆ ಆ ಸಂಬಂಧ ಶಾಶ್ವತವಾಗಿ ಉಳಿಯುತ್ತದೆ ಎಂಬ ಅಂಶ ಶಿವ ಮತ್ತು ಭಕ್ತರಿಗೆ ಅನ್ವಯಿಸುತ್ತದೆ.

**೨೯. ಸಾಮವೇದಿಗಳ ರಗಳೆ :-**

ಛತ್ತೀಸಪುರದಲ್ಲಿ ಸಾಮವೇದವೇ ರೂಪವಾಗಿ ನೆಲಸಿದ್ದ ಸಾಮವೇದಿಗಳ ಪಾಂಡಿತ್ಯ ಮತ್ತು ಪ್ರಭಾವವು ಅತ್ಯುನ್ನತವಾದುದು. ಭೂಮಿಯಲ್ಲಿರುವ ಎಲ್ಲಾ ಶಾಸ್ತ್ರಗಳು ಅವನ ನಾಲಗೆಯೊಳಗಿದ್ದು

ರಾಜರುಗಳೇ ನಮಿಸಿ ಉಡುಗೊರೆಯನ್ನು ನೀಡುತ್ತಿದ್ದರು. ತನ್ನ ಮೂರು ಸಾವಿರದ ಐದುನೂರ ಜನ ಶಿಷ್ಯರಿಗೆ ಅರಣ್ಯಕದ ಅಧ್ಯಯನ ಮಾಡಿಸಿ, ಅರಣ್ಯದಲ್ಲಿ ಆಕಾಶಮಾರ್ಗದಲ್ಲಿ ನಡೆದು ಬಂದ ಸಾಮಾವೇದಿಗಳ ಬಲಗೈಯಲ್ಲಿ ಅಗ್ನಿಯನ್ನು ಹೊಂದಿದ್ದು, ಎಡಗೈಯಿಂದ ಅಕ್ಷತೆಯನ್ನು ನೀಡುವಂತಹ ಖ್ಯಾತಿಯನ್ನು ಪಡೆದಿದ್ದನು. ಈ ಕಡೆ ಛತ್ತೀಸಾಪುರದಿಂದ ಶ್ರೇಷ್ಠ ಶಿವಭಕ್ತರಾದ ಶ್ವಪಚದೇವರು ಬಂದು ಶಿವಭಕ್ತರಲ್ಲದವರು ಕಾಣಬಾರದೆಂದು ಅಡವಿಯಲ್ಲಿ ಶಿವನನ್ನು ಪೂಜಿಸಲೆಂದು ಸಂತೋಷದ ಮನಃಸ್ಥಿತಿಯಲ್ಲಿ ನಯವಾದ, ಮೃದುವಾದ ಸಿಂಹಾಸನವನ್ನು ರಚಿಸಿ ಭಯಭಕ್ತಿಗಳಿಂದ, ಸ್ನೇಹರಸದಿಂದ ಕೂಡಿ ಸಂಪಿಗೆ, ಮಲ್ಲಿಗೆಯ ಮೊಗ್ಗುಗಳ ಸುವಾಸನೆ ಸೊಗಸಿನಿಂದ ಕೂಡಿದ ಹೊಸ ಹೂಗಳನ್ನು ತಂದು ಎನ್ನ ಅರಸ, ಎನ್ನ ತಂದೆ ಬಾ ಎಂದು ಅರ್ಧಚಂದ್ರ ಹೊಂದಿದ್ದವನನ್ನು, ಸರ್ಪವನ್ನು ಕುಂಡಲದಂತೆ ಧರಿಸಿರುವವನೇ ಎಂದು ಕರೆಯುತ್ತ ಪೀಠದ ಮೇಲಿದ್ದ ಶಿವಲಿಂಗವನ್ನು ಮುದ್ದಾಡಿ ಒಳ್ಳೆಯ ಸ್ನೇಹವನ್ನು ಮನಸ್ಸಿನಲ್ಲಿ ಹೊಂದಿ ಚಿಗುರಿನ ಸಿಂಹಾಸನದ ಮೇಲೆ ಅವನನ್ನು ಕರೆತಂದು ಒಂದೇ ಸಮನೇ ಸುರಿಯುವ ಕಣ್ಣೀರಿನಲ್ಲಿ ಸಂತೈಸಿ, ಮುದ್ದಾಡಿ ಕಣ್ಣುಗಳೊಳಗೆ ಶಿವನನ್ನು ತುಂಬಿಕೊಂಡು ಹೊಗಳಿ, ತನ್ನ ಎದೆಯಲ್ಲಿ ಪ್ರತಿಷ್ಠಾಪಿಸಿ ಮತ್ತೆ ಮತ್ತೆ ಕರೆಸಿ, ನೋಡಿ ತೂಗಾಡಿ ಪ್ರೀತಿಯಿಂದ ಕೈಚಪ್ಪಾಳೆ ಮಾಡುತ್ತ, ಅಳುತ್ತಾ, ನಗುತ್ತ ವಿಲಕ್ಷಣವಾದ ಸಂತೋಷದಿಂದ ತುಂಬು ತೂಗಾಡುತ್ತಾ ಕೈಗೆ ಬಂದಂತೆ ಶಿವನನ್ನು ಅಲಂಕರಿಸುತ್ತ ಮೈಗೆ ಬಂದಂತೆ ಹೊರಳುತ್ತ, ನಮಸ್ಕರಿಸಿ ನಾಲಗೆಗೆ ಬಂದಂತೆ ಹಾಡುತ್ತ, ಹೊಗಳುತ್ತ, ಪೂಜೆ ಎಂಬ ಆಟಕ್ಕೆ ಕಾಲು ಬಂದಂತೆ ಮಧ್ಯಾಹ್ನದವರೆಗೂ ಪೂಜಿಸಿ ನಂತರ ಸಂತೋಷದಿಂದ ಶುಚಿಯಾದ ಸ್ಥಳದಲ್ಲಿ ಮೂರು ಕಲ್ಲನ್ನು ಹೂಡಿ ಮೇಲೊಂದು ಪಾತ್ರೆಯನ್ನು ಕ್ಷೇಮದಿಂದ ತಂದಿರಿಸಿ ಲೀಲೆಯಿಂದ ಕೆಳಗೆ ಬೆಂಕಿಯನ್ನು ಉರಿಸಿ ಯಾವುದೇ ಕಪಟವಿಲ್ಲದೆ ತನ್ನ ಜಾತಿ ಧರ್ಮದ ನಾಯಿಮಾಂಸ ಬೇಯಿಸಿ ತಿನ್ನುವ ಆಹಾರವನ್ನು ತನಗೆ ಅನುಕೂಲವಾಗುವಂತೆ ಆ ತಲೆಬುರುಡೆ ನಡುವೆ ಇರಿಸಿ ಯಾವುದೇ ಲೌಕಿಕ ಸ್ಪರ್ಶವಿಲ್ಲದೆ ತುಂಬಿದ ಮನಸ್ಸಿನಲ್ಲಿ ವಿಭೂತಿಯಿಂದ ಎಲ್ಲವನ್ನು ಶುದ್ಧಮಾಡುತ್ತಾ ಶಿವನ ಧ್ಯಾನವನ್ನು ಮನಸ್ಸಿನಲ್ಲಿ ಮಾಡುತ್ತಾ, ಅರಿಕೆಯನ್ನು ಮಾಡುತ್ತಾ ಶ್ವಪಚಯ್ಯ ಇರಲು ಆಕಸ್ಮಿಕವಾಗಿ ಸಾಮವೇದಿಗಳು ಬರಲು ಈ ರಭಸವು ಎಲ್ಲಿಂದ ಎಂದು ತಿರುಗಿ ನೋಡಿದಾಗ ಶಿವಭಕ್ತನು ಸಾಮವೇದಿಗಳನ್ನು ಕಂಡು ಹರಹರ ನಮಃಶಿವಾಯ ಎಂದು ಹೇಳಿ ಶಿವಭಕ್ತನಲ್ಲದವನಾದ ಈ ಭವಿಗೆ ಕಾಣಿಸದಂತೆ ಅಡುಗೆಯನ್ನು ಪಾದರಕ್ಷೆಯ ಹಿಂದೆ ಮುಚ್ಚಿದನು. ಅದನ್ನು ಕಂಡು ಸಾಮವೇದಿಗಳು ಆಶ್ಚರ್ಯದಿಂದ ಇದು ಎಂತಹ ಕಾರ್ಯ? ಇದಕ್ಕಿಂಥ ಆಶ್ಚರ್ಯವುಂಟೆ ಎಂದು ಯೋಚಿಸಿ ಹೀಗೇಕೆ ಮಾಡಿದಿರಿ ಎಂದು

ಪ್ರಶ್ನಿಸಿದಾಗ ಶ್ವಪಚಯ್ಯ ಉತ್ತರಕೊಡದೆ ಸಾಮವೇದಿಯು ಅವಮಾನಕ್ಕೊಳಗಾದನು. ಶಿವನು ಕನಸಿನಲ್ಲಿ ಕಾಣಿಸಿಕೊಂಡು ನಾನು ಎಂದರೆ ಬೇರೆಯಲ್ಲ, ಶ್ವಪಚ ಎಂದರೆ ಬೇರೆಯಲ್ಲ, ನಾವಿಬ್ಬರೂ ಒಂದೇ. ಕುಲದ ಅಹಂಕಾರವನ್ನು ಬಿಟ್ಟು ಶ್ವಪಚದೇವರ ಬಳ ಹೋಗಿ ಶರಣಾಗು ಎಂದು ತಿಳಿಯ ಹೇಳಿದರು.

ಶಿವನ ಅಪ್ಪಣೆಯಂತೆ ಶ್ವಪಚದೇವರ ಬಳಿ ಬಂದು ತನ್ನೊಂದಿಗೆ ಏಕೆ ಮಾತನಾಡುವುದಿಲ್ಲ ಎಂದು ಕೇಳಿದಾಗ ಆತನಿಗೆ ವಿಭೂತಿಯನ್ನು ಧರಿಸಿಕೊಳ್ಳಲು ಹೇಳಿ ಲಿಂಗಾರ್ಚನೆಯಲ್ಲಿ ಇರುವಾಗ ಭವಿಗಳ ಜೊತೆ ಮಾತನಾಡುವುದಿಲ್ಲ ಎಂದು ಶ್ವಪಚ ದೇವರು ಹೇಳಿದರು. ಆಗ ಸಾಮವೇದಿಗಳು ಸುತ್ತಲಿರುವ ಗಿಡಮರ – ಪ್ರಾಣಿಗಳು ಅದರ ಹಿಂದೆ ಬರುತ್ತಿರುವ ಬೇಡರು ಸುತ್ತ ಇರುವ ಚಾಂಡಲರು ಇವರನ್ನೆ ನೋಡುವುದಾದರೆ ನನ್ನದು ಏನು ತಪ್ಪು? ಈ ರೀತಿ ಯಾವ ಶಾಸ್ತ್ರದಲ್ಲಿ ಉಂಟು ಎಂದಾಗ? ಶ್ವಪಚದೇವರು ಈ ಗಿಡಮರದ ಹೂವು ಎಲೆಗಳು ಶಿವನಿಗೆ ಅರ್ಪಿತವಾಗುವುದು. ಮರಗಳಿಗೆ ಕಾಮವಿದೆಯೆ? ಬಳ್ಳಿಗಳಿಗೆ ಕೋಪವಿದೆಯೇ? ಕಾಮವೇ ಮೊದಲಾದ ಆರು ವರ್ಗಗಳು ನಿನ್ನಲ್ಲಿವೆ. ಎಳೆಹುಲ್ಲು ತಿಂದು ತಿಳಿಯಾದ ನೀರನ್ನು ಕುಡಿದು ಬೆಳೆದ ಮೃಗವು ಯಾರನ್ನೂ ಹೆಚ್ಚಾಗಿ ಬಾಧಿಸದು. ಆಕಾಶದಲ್ಲಿ ನಡೆಯುವುದು ಒಂದು ಹೆಮ್ಮೆಯೇ? ಹಕ್ಕಿ ಎಲೆಗಳು ಹಾರುವುದಿಲ್ಲವೇ? ವಿಭೂತಿ, ರುದ್ರಾಕ್ಷಿ, ಪಂಚಾಕ್ಷರಿ ಮಂತ್ರವನ್ನು ತಿಳಿಯದ ಹೀನ ನೀನು, ಕತ್ತೆ ಕರ್ಪೂರದ ಹೊರೆಯನ್ನು ಹೊತ್ತಂತೆ ವೇದಗಳ ಅರ್ಥವನ್ನು ತಿಳಿಯದೆ ನಿಂತಿರುವವನು ನೀನು ಎಂದು ಅವನಿಗೆ ಗದರಿಸಿ ಪ್ರೀತಿಯಿಂದ ಸತ್ಯಬೋಧೆಯನ್ನು ಮಾಡಿದನು.

ಶ್ವಪಚದೇವರು ಶಿವನ ಆಜ್ಞಾನುಸಾರವಾಗಿ, ಭವಿಯಾದ ಸಾಮವೇದಿಗಳನ್ನು ಪ್ರೀತಿಯಿಂದ ಗದರಿಸಿ, ಆತನ ಅಜ್ಞಾನ ನಾಶವಾಗಿ ಒಳ್ಳೆಯ ಮನಸ್ಸುಳ್ಳವನಾದ ಆತನ ಹೃದಯದಲ್ಲಿ ಅರಿವು ಮೂಡುವ ಹಾಗೆ ಮಾಡಿದರು. ಸಾಮವೇದಿಗಳು ಶ್ವಪಚ ದೇವರಿಗೆ ಸಾಷ್ಟಾಂಗ ನಮಸ್ಕಾರ ಮಾಡಿ, ಶಿವನೇ ನನ್ನ ಬಗ್ಗೆ ಕರುಣೆ ತೋರೆಂದು ಬೇಡಿದಾಗ ಅವರು ಈತ ಶಿವನಿಗೆ ಅರ್ಪಿತನೆಂದು ತಿಳಿದು ಹತ್ತಿರ ಪದ್ಮಾಸನದಲ್ಲಿ ಕೂಡಿಸಿಕೊಂಡು ಶಿವನ ರೂಪವನ್ನು ಮನಸ್ಸಿನಲ್ಲಿ ಇರಿಸಿಕೊಂಡು ಪ್ರೀತಿಯಿಂದ ಪಂಚಾಕ್ಷರಿ ಮಂತ್ರವನ್ನು ಉಪದೇಶಿಸಲು ಆತನ ಕುಲದ ಕಲ್ಮಶ ನಾಶವಾಯಿತು. ಭವಿತನ ತೊಲಗಿ ಜ್ಞಾನೋದಯ ಉಂಟಾಗಿ ಜ್ಯೋತಿಯಿಂದ ಜ್ಯೋತಿಯನ್ನು ಹೊತ್ತಿಸಿದ ರೀತಿಯಾಯಿತು.

ಸಾಮವೇದಿಗಳ ತಂದೆಯ ಶ್ರಾದ್ಧದ ದಿವಸ ಮುಖ್ಯ ಸ್ಥಾನದಲ್ಲಿ ಕುಳಿತುಕೊಳ್ಳಬೇಕಾದ ವಿಶ್ವೇದೇವರ ಸ್ಥಾನವನ್ನು ಅಲಂಕರಿಸಲು ಶ್ವಪಚ ದೇವರನ್ನು ಸಾಮವೇದಿಗಳು ಬೇಡಿಕೊಂಡಾಗ, ಸಾಕ್ಷಾತ್ ಶಿವನೇ ಬರುವನೆಂದು ಅವರು ಹೇಳಿ ಕಳುಹಿಸುತ್ತಾರೆ. ಆದರೆ ವಿಪ್ರನ ವೇಷದಲ್ಲಿಲ್ಲದ ಅಸ್ಪೃಶ್ಯನ ರೂಪದಲ್ಲಿ ಶಿವನ ಬರುತ್ತಾನೆ. ಶಿವನ ಬರುವಿಕೆಗಾಗಿ, ಶುಚಿರ್ಭೂತನಾಗಿ ಕಾಯುತ್ತಿದ್ದ ಸಾಮವೇದಿಗಳು, ಹೆಗಲ ಮೇಲೆ ಕರುವನ್ನು ಹೊತ್ತು ಕೈಯಲ್ಲಿ ಸಂಬಳಗೋಲನ್ನು ಹಿಡಿದು ಶಿವನು ವಿಶ್ವೇದೇವರಾಗಿ ಬರುತ್ತಾನೆ. ಆತನನ್ನು ಪ್ರೀತಿಯಿಂದ ಸ್ವಾಗತಿಸಿ ತನ್ನ ತಂದೆ ಎಂದು ಕಾಲಿಗೆ ಬಿದ್ದಾಗ, ಉಳಿದ ಬ್ರಾಹ್ಮಣರು ಓಡಿಹೋದರು. ಪೂಜಾ ಮಂಡಲದಲ್ಲಿ ಶಿವನು ಬಂದು ನಿಂತಾಗ ಅವನ ಸೇವೆ ಮಾಡಲು ಸಾಮವೇದಿಗಳು ತೊಡಗಿದಾಗ ಹೆಗಲ ಮೇಲಿನ ಕರು ವಿಷ್ಣುವಿನ ಸೈನಿಕವಾಯಿತು. ಆತನ ಮುಖ ಪಂಚಮುಖಿಯಾಗಿ, ಕಿವಿಯಲ್ಲಿನ ಹತ್ತಿಯು ಕರ್ಣಾಭರಣಗಳಾಗಿ ಬದಲಾಗಿ ವಿಶ್ವೇದೇವರಾಗಿ ಬಂದವನು ಶಿವನಾದನೆಂದು ಹರಿಹರನು ಬಹಳ ಸೊಗಸಾಗಿ ವರ್ಣಿಸಿದ್ದಾನೆ. ಸಂತೋಷದಿಂದ ಶಿವನು ನನ್ನೊಡನೆ ಕೈಲಾಸಕ್ಕೆ ಬಾರಾ ಎಂದು ಕರೆಯಲು ಗುರುವಿಲ್ಲದೆ ನಾನು ಬರುವುದಿಲ್ಲವೆಂದು ಹೇಳಿ ಶ್ವಪಚದೇವರನ್ನು ಕರೆಯಿಸಿ ತನ್ನ ಗಣಗಳಿಗೆ ಈ ಪುರವನ್ನೇ ಎತ್ತು ಎನ್ನಲು ಆ ಛತ್ತೀಸಪುರದ ಜೊತೆ ಗುರುವನ್ನು ಕೂಡಿಕೊಂಡು ಆಕಾಶಕ್ಕೆ ವೇಗವಾಗಿ ನೆಗೆದರು ಇಬ್ಬರಿಗೂ ಗಣಪದವಿಯನ್ನು ನೀಡಿ ಹರಸಿದರು.

ಈ ಕಥೆಯಲ್ಲಿ ಬ್ರಾಹ್ಮಣತ್ವದ ಅಹಂಕಾರದಿಂದ ಮೆರೆಯುತ್ತಿರುವ ಬ್ರಾಹ್ಮಣರ ದರ್ಪ ಅಡಗುವಂತೆ ಶ್ವಪಚದೇವರು (ಶೂದ್ರ ಶಿವಭಕ್ತ) ಬುದ್ಧಿ ಕಲಿಸಿದ್ದಾರೆ. ಶ್ವಪಚ ದೇವರು ಇವನನ್ನು ಪೂಜಿಸುವ ಪರಿಯನ್ನು ಗಮನಿಸಿದರೆ ಬಹಳ ಆತ್ಮೀಯನೆಲೆಯಲ್ಲಿ ತನ್ನ ಸಂಪ್ರದಾಯದ ಚೌಕಟ್ಟಿನಲ್ಲಿ ಆರಾಧಿಸುವ ಸ್ವರೂಪವನ್ನು ಕಾಣುತ್ತೇವೆ. ಸಾಮವೇದಿಗಳು ಶಿವನನ್ನು ತನ್ನ ಒಡೆಯನೆಂದು ಭಾವಿಸಿ, ಸತ್ತಿದ ಕರುವನ್ನು ಹೆಗಲಮೇಲೆ ಹಾಕಿಕೊಂಡು ಬರುವ ಅಸ್ಪೃಶ್ಯನ ಪಾದಸೇವೆ ಮಾಡುವಾಗ ತನ್ನ ತಂದೆಯೆಂದು ಕರೆದು ಅವನ ಪ್ರೀತಿಯ ಅಪ್ಪುಗೆಗೆ ಭಾವಪರವಶನಾಗುತ್ತಾನೆ. ಈ ಬಗೆಯ ನಂಟು ಶಿವಭಕ್ತರನ್ನು ಆತ್ಮೀಯನೆಲೆಯಲ್ಲಿ ಒಂದುಗೂಡಿಸುತ್ತದೆ.

## ೩೦. ಕಲಿಕಾಮದೇವರ ರಗಳೆ :-

ಚೋಳನಾಡಿನಲ್ಲಿ ಶ್ರೀಕುಡಿ ಎಂಬ ಪುರದಲ್ಲಿ ಶಿವಭಕ್ತಕಲಿಕಾಮದೇವನೆಂಬ ಶಿವಸ್ನೇಹಿ ಇದ್ದನು. ಪತಿಭಕ್ತೆ ಎಂಬ ಶಿವಭಕ್ತೆ ಸದಾಚಾರಿಣಿ ಅವನ ಕೈಹಿಡಿದ ಹೆಂಡತಿಯಾಗಿದ್ದಳು. ಶಿವಪೂಜೆ ಮತ್ತು ಶಿವಭಕ್ತರ ಸೇವೆಯೇ ಆತನ ದಿನಚರಿಯಾಗಿತ್ತು. ಸದಾಚಾರ, ಸದ್ಭಕ್ತಿ, ಸನ್ನಡತೆಯಿಂದ ಕೂಡಿದ್ದ ಕಲಿಕಾಮದೇವನು ಸಂಪದ್ಭರಿತನಾಗಿದ್ದು, ಅನ್ಯ ದೇಶಾದಿಗಳಿಂದ ಸಂಪಾದಿಸಿದ ಸಂಪತ್ತನ್ನೆಲ್ಲಾ ಶಿವ ಭಕ್ತರ ಸತ್ಕಾರಕ್ಕೆ ಬಳಸಿಕೊಂಡು ಅವರಲ್ಲೇ ಶಿವನನ್ನು ಕಾಣುತ್ತಿದ್ದ ಶಿವನೆಂದರೆ ಅವನಿಗೆ ಬಲು ಪ್ರಾಣ, ಅವನಿಗೆ ಲೋಪವೆಸಗಿದವರನ್ನು ಎಳ್ಳಷ್ಟೂ ಸಹಿಸುತ್ತಿರಲಿಲ್ಲ. ಹೀಗಿರುವಾಗ ಒಮ್ಮೆ ಅವನ ಊರಿಗೆ ಬಂದ ಗಣಸಮಿತಿ ಶಿವಭಕ್ತಿಯಿಂದ ಹಲವು ಗೋಷ್ಠಿಗಳನ್ನು ನಡೆಸಿ, ಅಲ್ಲಿಗೆ ಬಂದಿದ್ದ ಓರ್ವ ಮಹಾನ್ ಶಿವಶರಣ ತಿರುವಾರೂರಿನ ಶಿವಭಕ್ತ ನಂಬಿ ಮತ್ತು ಶಿವನ ನಂಟು ಅಪಾರವಾದದ್ದು, ನಂಬಿಗೋಸ್ಕರವಾಗಿ ಶಿವನು ಏನನ್ನೂ ಮಾಡಲು ಸಿದ್ಧನಾಗಿದ್ದು ಅವನಿಗಾಗಿ ಶಿವನು ಕುಂಟಣಿಯಾಗಿ ಸೇವೆಸಲ್ಲಿಸಿದ್ದಾನೆ. ಎಂಬ ವಿಷಯವನ್ನು ಭಕ್ತಿಯಿಂದ ಹೊಗಳುತ್ತಾ ಹೇಳಿದ್ದನು. ಇದನ್ನು ಸಹಿಸದ ಕಲಿಕಾಮನು ನಂಬಿಯ ಕಾರ್ಯವನ್ನು ತೆಗಳಿ ಅವನನ್ನು ಮನಸ್ಸಾರೆ ದ್ವೇಷಿಸತೊಡಗಿದನು. ಅಲ್ಲದೇ ಆ ಊರಿನಿಂದ ಯಾವುದೇ ಶಿವ ಭಕ್ತರು ಬಂದರೂ ಅವರನ್ನು ಹಿಡಿದು ಕೊಲ್ಲದೆ ಬಿಡುತ್ತಿರಲಿಲ್ಲ. ಈ ವಿಷಯವನ್ನು ತಿಳಿದ ನಂಬಿ ಶಿವನ ಬಳಿ ಪ್ರಸ್ತಾಪ ಮಾಡಿದಾಗ ಶಿವನು ತನ್ನ ಭಕ್ತರ ಪರಿಯೇ ಹೀಗೆ ವಿಚಿತ್ರವಾದದು, ಅವನು ಕಡುಗೋಪಿ, ನನ್ನಿಂದ ಏನು ಮಾಡಲು ಸಾಧ್ಯವಿಲ್ಲವೆಂದು ಉತ್ತರಿಸಿದಾಗ ನಂಬಿಯೇ ತನ್ನ ಸೈನ್ಯದೊಂದಿಗೆ ದಂಡೆತ್ತಿ ಬಂದು ಸೋತು ಪ್ರಾಣಭಯದಿಂದ ತಿರೂವಾರೂರಿಗೆ ಓಡಿ ಹೋಗಿ ತನ್ನ ಜೀವ ಉಳಿಸಿಕೊಂಡ ಸೋಜಿಗವನ್ನು ಶಿವನಲ್ಲಿ ಹೇಳಿಕೊಂಡು ತನ್ನ ತೊತ್ತಿನ ಪತ್ರವನ್ನು ನೀಡಬೇಕೆಂದು ಶಿವನನ್ನು ಗದರಿಸಿದನು. ಕೊನೆಗೆ ಶಿವನೇ ಭಕ್ತನ ವೇಷದಲ್ಲಿ ಆಗಮಿಸಿ ಕಲಿಕಾಮದೇವನಿಗೆ ನಂಬಿಯ ಕುರಿತು ಸಿಟ್ಟಿನ ಪ್ರಮಾಣವೆಷ್ಟಿದೆ ಎಂದು ನಂಬಿಯ ಹೆಸರನ್ನು ಹಲವು ವಾಕ್ಯಗಳಲ್ಲಿ ಸೇರಿಸಿ ಹೇಳುತ್ತಾ ಕಲಿಕಾಮನ ಕೋಪವನ್ನು ನೆತ್ತಿಗೇರಿಸಿದನು. ಆಗ ವೇಷಧಾರಿ ಶಿವನನ್ನು ಅಟ್ಟಿಕೊಂಡು ಅಡ್ಡಾದಿಡ್ಡಿ ಓಡಿಸಿಕೊಂಡು ಬಂದ ಕಲಿಕಾಮನಿಗೆ ಭಯಗೊಂಡು ಹೆದರಿ ಓಡಿ ಮಾಯವಾಗಿ ತಿರುವಾರೂರಿನ ಶಿವಾಲಯಕ್ಕೆ ಹೋಗಿ ಸೇರಿಕೊಂಡನು. ನಂತರ ಕಲಿಕಾಮನ ಕೋಪ, ಶೌರ್ಯ ಮತ್ತು ವೀರಭಕ್ತಿಯ ಮುಂದೆ ನಾವು ಗೆಲ್ಲಲು ಸಾಧ್ಯವಿಲ್ಲವೆಂದು ಅವನಿಗೆ ಶೂಲೆಯೊಂದು ತಗಲುಕೊಳ್ಳುವಂತೆ ಮಾಡಿದ ಶಿವನು ನಂಬಿಯೊಂದಿಗೆ ಸೈನ್ಯ ಸಮೇತ ಕಹಳೆಯನ್ನು ಮೊಳಗಿ ಯುದ್ಧಸಾರಿದನು. ಆದರೆ ಕಲಿಕಾಮನ ಆರೋಗ್ಯ ಸರಿಯಿಲ್ಲದಿರುವ ಸಂದರ್ಭದಲ್ಲಿ ನಂಬಿಯ

ಸೈನ್ಯ ಬಂದಿರುವ ವಿಚಾರ ತಿಳಿಯಬಾರದೆಂದು ಪತಿಭಕ್ತೆ ಅರಮನೆಯ ಕೋಣೆಯೊಂದರಲ್ಲಿ ತನ್ನ ಪತಿಯನ್ನು ಗೋಪ್ಯವಾಗಿಸಿದಳು. ನಂತರ ಶಿವನು ನಂಬಿಯ ಜೊತೆಗೆ ಅರಮನೆಗೆ ಬಂದು ಕಲಿಕಾಮನ ನೋಡಿ ಇವರಿಬ್ಬರಿಗೆ ರಾಜಿ ಮಾಡಿ ಸ್ನೇಹ ಮಾಡುವ ಅಪೇಕ್ಷೆ ವ್ಯಕ್ತಪಡಿಸಿದನು. ಆದರೆ ಅವನ ಕೋಣೆಗೆ ಹೋಗಿ ನೋಡಿದಾಗ ಅವನ ದೇಹದಲ್ಲಿ ಜೀವವಿರಲಿಲ್ಲ. ಶಿವಕೃಪೆಯಿಂದ ಮತ್ತೆ ಅವನು ಜೀವಂತವಾದಾಗ ನಂಬಿಯ ವಿರುದ್ಧ ಆಕ್ರೋಶವನ್ನು ತೋರಿ ಅವನನ್ನು ಕೊಲ್ಲಲು ಮುಂದಾದಾಗ ಶಿವನು ಹಿಂದಿನ ಜನ್ಮದಲ್ಲಿ ನಿನಗೆ ಇವನು ಬೆರೆಯಲಿಲ್ಲ ಆದರೆ ಈ ಜನ್ಮದಲ್ಲಿ ನಂಬಿಯೊಂದಿಗೆ ಸ್ನೇಹವಿಟ್ಟುಕೊ ಎಂದು ಸಮಾಧಾನ ಪಡಿಸಿದನು. ಅದರಿಂದ ಕಲಿಕಾಮನಲ್ಲಿ ಶಿವಜ್ಞಾನವುದಿಸಿ ಅವರಿಬ್ಬರೂ ಮಿತ್ರರಾಗಿ ಹರನ ಆಶೀರ್ವಾದ ಪಡೆದು ಕೈಲಾಸದಲ್ಲಿ ಗಣಪದವಿ ಪಡೆದು ಹರುಷದಿಂದಿರುತ್ತಿದ್ದರು.

ಇಲ್ಲಿ ಶಿವನು ತನ್ನ ಭಕ್ತರ ನೇಮ ನಿಷ್ಠೆಗೆ ಸೋತುಹೋಗುತ್ತಾನೆ. ತನ್ನ ಮಗನಂತಿರುವ ನಂಬಿಯಣ್ಣನಿಗಾಗಿ ಕುಂಟಣಿ ಮಾಡಿದನೆಂದು, ಅವನ ಮನದಿಚ್ಛೆಯಿಂದ ನಡೆಸಿಕೊಂಡಿದ್ದಾನೆಂಬ ಕಾರಣಕ್ಕೆ ಅವನು ಮತ್ತು ಅವನಿದ್ದ ತಿರುವಾರೂರನ್ನೇ ದ್ವೇಷಿಸಿದ ಕಲಿಕಾಮನ ಛಲ ಮತ್ತು ಆಕ್ರೋಶ ಸ್ವರೂಪದ ನಿಷ್ಠೆ ಗಮನಾರ್ಹವಾದುದು. ಕಲಿಕಾಮನು ಪರಿಶುದ್ಧ ಮನಸ್ಸಿನಿಂದ ಮಾಡಿದ ನೇಮಕ್ಕೆ ಶಿವನೇ ನಿಬ್ಬೆರಗಾಗಿದ್ದಾನೆ. ನಂಬಿಯ ಹೆಸರನ್ನು ಪದೇಪದೇ ಆಡಿದ್ದರಿಂದ ಕುಪಿತಗೊಂಡ ಕಲಿಕಾಮನು ಶಿವನನ್ನು ಬಡಿಯಲು ಅಟ್ಟಿಸಿಕೊಂಡು ಓಡಿಹೋಗುವ ಪ್ರಸಂಗ ಸೋಜಿಗವೆನಿಸಿದರೂ ಶಿವನ ಭಕ್ತರು ಶುದ್ಧ ಮನಸ್ಸಿನಿಂದ ಒಡೆದು ಬಡಿದರೂ ಅದನ್ನು ಶಿವನು ಭಕ್ತಿಯೆಂದೇ ಸ್ವೀಕರಿಸುವಷ್ಟು ಉದಾರವಾದಿಯಂತೆ ಹರಿಹರ ಚಿತ್ರಿಸಿದ್ದಾನೆ. ಕೊನೆಗೆ ನಂಬಿ – ಕಲಿಕಾಮರನ್ನು ಸ್ನೇಹಿತರನ್ನಾಗಿಸುವ ಶಿವನು ಅವರಲ್ಲಿಟ್ಟಿರುವ ಆತ್ಮೀಯತೆ, ವಾತ್ಸಲ್ಯ ಮತ್ತು ಪ್ರೀತಿ ಎದ್ದು ತೋರಿಸುತ್ತದೆ. ಇಲ್ಲಿನ ಶಿವನು ಎಲ್ಲೋ ರಜತಗಿರಿಯಲ್ಲಿ ಕುಳಿತಿರುವ ದೇವನಲ್ಲ, ಬದಲಿಗೆ ಶಿವಭಕ್ತರ ಒಡನಾಟದಲ್ಲಿ ಲೀನವಾಗಿರುವ ಚೇತನ ಶಕ್ತಿಯಂತೆ ಎಂಬುದು ಸತ್ಯ. ಶಿವ ಮತ್ತು ಭಕ್ತರು ಎಂದಿಗೂ ಬೇರೆ ಅಲ್ಲ ಅವರಿಬ್ಬರೂ ಒಂದೇ ಜೀವ ಎರಡು ದೇಹವೆಂಬಂತೆ ಅನ್ಯೋನ್ಯವಾಗಿರುವ ಮಿತ್ರರಂತೆ ಎಂಬ ಸಂದೇಶ ಈ ರಗಳೆಯಲ್ಲಿದೆ.

## ೩೧. ತೆಲುಗು ಜೊಮ್ಮಯ್ಯನ ರಗಳೆ :-

ಕಲ್ಯಾಣ ಪಟ್ಟಣದಲ್ಲಿ ಶಿವಭಕ್ತ ತೆಲುಗು ಜೊಮ್ಮಯ್ಯನೆಂಬುವನು ಭೀಮನಾಥ ಶಿವನನ್ನು ನಿತ್ಯವೂ ಪೂಜಿಸಿ, ಅರ್ಚಿಸಿ ಮತ್ತು ಶಿವನು ತನಗೆ ನಿಯೋಜಿಸಿದ ಕಾರ್ಯವನ್ನು ಮಾಡಲುದ್ಯುಕ್ತನಾದವನು. ಇವನಿಗೆ ಶಿವನಿಂದಕರೆಂದರೆ ಆಗದು. ಅವರನ್ನು ಶಿವದ್ರೋಹಿಗಳೆಂದೇ ಭಾವಿಸಿ ಅಂತಹವರನ್ನು ಕೊಂದು ಹರಭಕ್ತಿಯನ್ನು ತೋರಿಸುವ ಕಠಿಣವ್ರತನಿಷ್ಠನು. ಪರಮೇಶ್ವರನು ಅವನ ಕನಸ್ಸಿನಲ್ಲಿ ಕಾಣಿಸಿಕೊಂಡು ಅರಣ್ಯದಲ್ಲಿರುವ ಭಕ್ತನಿಷ್ಠ ಋಷಿಗಳು ಕಾರಣಿಕ ಮೃಗಗಳಾಗಿ ಅಲೆಯುತ್ತಿವೆ ಅವುಗಳ ಭೇಟಿಯಾಡಿ ಆ ಮೂಲಕ ಕಾರಣಿಕ ಋಷಿಗಳ ಮಾಯೆಯನ್ನು ಕಳೆದು ಕೈಲಾಸಕ್ಕೆ ಕಳಿಸುವ ಕರ್ತವ್ಯ ನಿನಗಿರಲಿ ಎಂದು ಒಂದು ಕಾರ್ಯವನ್ನು ನಿಯೋಜಿಸಿರುತ್ತಾನೆ. ಅದರಂತೆ ಆ ಕರಣಿಕ ಮೃಗಗಳನ್ನು ನಿಷ್ಠೆಯಿಂದ ಭೇಟಿಯಾಡಿ ಕೈಲಾಸಕ್ಕೆ ಕಳಿಸುವ ಕರ್ತವ್ಯವನ್ನು ಯಥಾವತ್ತಾಗಿ ಮಾಡುತ್ತಾ ಬಂದನು. ಇಲ್ಲಿ ಶಿವನೂ ತನ್ನ ಭಕ್ತರಿಂದ ತನಗೆ ಅವಶ್ಯವೆನಿಸುವ ಕಾರ್ಯಗಳನ್ನು ನಿರ್ವಹಿಸಿಕೊಳ್ಳಲು ಕೇಳ ಪಡೆಯುವಷ್ಟು ಪ್ರೇಮ ಮತ್ತು ಸ್ನೇಹವನ್ನು ಹೊಂದಿರುತ್ತಾನೆ.

ಒಮ್ಮೆ ಆ ಊರಿನ ಪೆರ್ಮಾಡಿರಾಜನ ಆಸ್ಥಾನದ ಪುರಾಣಭಟ್ಟನು ವಿಷ್ಣು ಪುರಾಣವನ್ನು ಓದುತ್ತಿದ್ದಾಗ ಗಂಗೆ ವಿಷ್ಣು ಪದಿಯಾದಳು ಎಂದು ಅರ್ಥ ಬರುವ ಸಾಲನ್ನು ಹೇಳಿದ್ದನ್ನು ಕೇಳಿ ಅವನನ್ನು ಶಿವದ್ರೋಹಿ ಎಂದು ಪರಿಗಣಿಸಿ ಏಕಾಏಕಿ ದಾಳಿ ಮಾಡಿ ಕೊಂದುಬಿಟ್ಟನು ಮತ್ತು ಈ ಭಕ್ತನು ಶಿವನಿಂದೆಯನ್ನು ಕೇಳಿದ ತನ್ನ ಪಾಪವನ್ನು ನೀಗಿಸಿಕೊಳ್ಳಲು ಭಕ್ತರ ಸಮೂಹವನ್ನೆಲ್ಲಾ ಕರೆದು ಗಣಪರ್ವ ಮಾಡಿ ಶಿವನಿಂದೆಯ ಕೇಳಿದುದರ ಪಾಪ ಪರಿಹಾರ ಮಾಡಿಕೊಂಡನು.

ಆದರೆ ಈ ವಿಷಯ ತಿಳಿದ ಪೆರ್ಮಾಡಿ ಅರಸನು ಕೋಪದಿಂದ ಬೊಮ್ಮಯ್ಯನನ್ನು ಕರೆಸಿ ವಿಚಾರಿಸಿದಾಗ ಎಂತಹ ಅವಘಡ ಸಂಭವಿಸುವುದೋ ಎಂದು ಭಾವಿಸಿ ಹೆದರಿದ ಅರಸಿ ಶಿವಭಕ್ತೆ ಲಕುಮಾದೇವಿ ತನ್ನ ಕರಡಿಗೆಯಲ್ಲಿ ಶಿವಲಿಂಗವನ್ನು ಧರಿಸಿ ಅರಸನ ಹಿಂಬದಿ ನಿಂತರೆ ಜೊಮ್ಮಣ್ಣ ಶಿವಭಕ್ತಿಯಿಂದ ನಮಸ್ಕರಿಸಿದರೆ ಅದು ರಾಜನಿಗೆ ತಿಳಿಯದೆ ತನಗೆ ನಮಸ್ಕರಿಸಿದನು ಎಂದು ತಿಳಿದಂತಾಗುತ್ತದೆ ಎಂದು ಚಿಂತಿಸಿ ಹಾಗೇ ಮಾಡಿದಳು. ಆದರೆ ಜೊಮ್ಮಯ್ಯನು ಭವಿಗಳ ಹಿಂದೆಯಲ್ಲಿ ನಿಲ್ಲುವುದೇ? ಎಂದು ಶಿವಲಿಂಗವನ್ನು ಗದರಿಸಿ ತಾನು ಹೇಳಿದ ಸ್ಥಳಕ್ಕೆ ಬಂದಾಗ ಹೃದಯಪೂರ್ವಕ ನಮಸ್ಕಾರ ಸಲ್ಲಿಸಿದನು ಮತ್ತೆ ಮೊದಲಿನ ಸ್ಥಳಕ್ಕೆ ಹೋಗಲು ಸೂಚಿಸಿದಂತೆ ಅದೇ ಸ್ಥಳಕ್ಕೆ ಹೋಗಿ ಸೇರಿತು.

ಇವನ ಏಕನಿಷ್ಠೆಯನ್ನು ನೋಡಿದ ರಾಜನು ಬೆರಗಾದನು. ಪುರಾಣಭಟ್ಟನ ಕೊಲೆಗೆ ಕಾರಣವನ್ನು ವಿಚಾರಿಸಿ ಅವನಿಗೆ ಶಿಕ್ಷೆ ನೀಡುವುದಾಗಿ ಹೆದರಿಸಿದಾಗ ಅವರ ಶಿವನಿಂದನೆಗೆ ತಕ್ಕ ಶಾಸ್ತಿಯಾಗಿದೆ, ಬೇಕಾದರೆ ಪರೀಕ್ಷಿಸಿಕೊಳ್ಳ ಆ ಶಿವದ್ರೋಹಿ ಹೆಣವೆಲ್ಲಾ ಹುಳು ಹತ್ತಿದೆ ಇಲ್ಲದಿದ್ದಲ್ಲಿ ನೀವು ನನಗೆ ಯಾವ ಕಠಿಣ ಶಿಕ್ಷೆಯನ್ನಾದರೂ ನೀಡಬಹುದೆಂದು ಸವಾಲೆಸೆದನು. ಶಿವಭಕ್ತರೆಂದೂ ಅಸತ್ಯರಾಗಲು ಸಾಧ್ಯವಿಲ್ಲವೆಂದು ಕಠಿಣವಾಗಿ ನುಡಿದನು. ಪರೀಕ್ಷಿಸಿ ನೋಡಿದಾಗ ಆ ಶಿವನಿಂದಕನ ಹೆಣವು ಪಾಪಕರ್ಮ ರಾಶಿಯ, ದುರ್ವಾಸನೆಯ ಕೆಟ್ಟ ಹುಳಗಳಾಗಿರುವುದನ್ನು ಗಮನಿಸಿದ ರಾಜನು ಜೊಮ್ಮಯ್ಯ ಶಿವಭಕ್ತಿಯ ನಿಷ್ಠೆಗೆ ಮೆಚ್ಚಿ ಅವನನ್ನು ಆದರದಿಂದ ಸತ್ಕರಿಸಿದನು.

ಅತ್ತ ಶಿವನು ನಿರ್ವಹಿಸಿರುವ ಕರ್ತವ್ಯವನ್ನು ಮಾಡುತ್ತಾ ಮೃಗಶರೀರವನ್ನು ತನ್ನ ಭಕ್ತಿಬಾಣದಿಂದ ತಾಗಿಸಿ ಅವರಿಗೆ ಮೋಕ್ಷವೆಂಬ ಪದವಿಯನ್ನು ನೀಡುತ್ತಾ ಬಂದನು. ಇತ್ತ ಕೇಶಿರಾಜನು ತೆಲುಗು ಜೊಮ್ಮಯ್ಯನ ಶಿವಭಕ್ತಿಗೆ ಮೆಚ್ಚಿ ಅವನನ್ನು ನೋಡಲು ಬಂದಾಗ ಅವನ ಮನೆಯಲ್ಲಿ ಮಾಂಸವಿರುವುದನ್ನು ನೋಡಿ ಹೇಸಿ ಹೊರಟು ಅರಣ್ಯದ ಒಂದು ಭಾಗದಲ್ಲಿ ಸೋಮನಾಥಲಿಂಗ ಪ್ರತಿಷ್ಠಾಪಿಸಿ ಪೂಜಿಸತೊಡಗಿದನು. ಅಲ್ಲಿಗೆ ಬಂದು ಕರೆದ ಜೊಮ್ಮಯ್ಯನ ಬಗ್ಗೆ ಹೇಸಿಗೆಯಿಂದ ಬರಲೊಲ್ಲೆ ಸೋಮನಾಥ ಲಿಂಗನ ಇರುವು ಇಲ್ಲೇ ಇದೆ ಎಂಬ ಕಾರಣಕೊಟ್ಟ ಕೇಶಿರಾಜನ ಮಾತಿಗೆ ಪ್ರತಿಯಾಗಿ ಹಾಗೇ ಇಲ್ಲೇ ಇರಲಿ ಎಂದು ನುಡಿದನು. ಮತ್ತೆ ಅಲ್ಲಿ ನಡೆದ ಆಶ್ಚರ್ಯ ಪವಾಡಗಳಿಗೆ ಬೆರಗಾದನು. ಜೊಮ್ಮಯ್ಯ ಬಂದು ಕೇಶಿರಾಜನನ್ನು ತನ್ನ ಮನೆಗೆ ಕರೆಯಲು ಬಂದಾಗ ಸೋಮನಾಥ ಲಿಂಗ ತಟಸ್ಥವಾಗಿರುವುದಕ್ಕೆ ಪ್ರತಿಯಾಗಿ ಕೇಶಿರಾಜ ಎಷ್ಟೇ ಕರೆದರೂ ಶಿವಲಿಂಗ ಬರಲೊಲ್ಲದು. ಆಗ ತೆಲುಗು ಜೊಮ್ಮಯ್ಯನು ಗದರಿಸಿ ಶಿವಲಿಂಗವನ್ನು ಎತ್ತುವುದಕ್ಕೆ ಮುಂದಾದಾಗ ಸೋಮನಾಥಲಿಂಗ ಅವರೊಡನೆ ಬಂದನು. ಕೇಶಿರಾಜನಿಗೆ ಜೊಮ್ಮಯ್ಯನ ಮನೆಯಲ್ಲಿ ಮುಜುಗರ ಹೇಸಿಗೆವುಂಟಾಯಿತು. ಜೊಮ್ಮಯ್ಯನ ಶಿವಭಕ್ತಿಯಿಂದ ಆ ಮಾಂಸಾಹಾರಗಳೆಲ್ಲಾ ಸಾತ್ವಿಕ ಆಹಾರಗಳಾಗಿ ಕೇಶಿರಾಜನನ್ನು ಸಂತೃಪ್ತಿಪಡಿಸಿದವು. ಕೇಶಿರಾಜನು ಜೀವಹಿಂಸೆ ಈ ಬೇಟೆಕಾರ್ಯ ಕರ್ಮಯುತದುದು ಅದು ಶಿವಭಕ್ತರಿಗೆ ಸಲ್ಲದೆಂದು ಬುದ್ಧಿವಾದವನ್ನು ಜೊಮ್ಮಯ್ಯನಿಗೆ ಹೇಳ ತಡೆದನು. ಆದರೆ ಮೃಗಗಳು ತಮ್ಮ ಪಾಪವನ್ನು ಪರಿಹರಿಸುವ ಮಹಾಶಿವಭಕ್ತನನ್ನು ಹುಡುಕಾಡಿ ಕೈಲಾಸಕ್ಕೆ ಕಳಸುವ ಬೇಡಿಕೆಯನ್ನು ಮುಂದಿಟ್ಟು ಗೋಗರೆದವು. ಆಗ ಜೊಮ್ಮಯ್ಯನು ಶಿವಭಕ್ತಿಯೆಂಬ ಬಾಣಪ್ರಯೋಗವನ್ನು, ಮೃಗಗಳ ಬೇಟೆಯಾಡಿ ಅವುಗಳಿಗೆ

ಕೈಲಾಸಪ್ರಾಪ್ತಿಯನ್ನು ಮಾಡಿದನು. ಜೊಮ್ಮಯ್ಯನ ಶಿವಭಕ್ತಿಗೆ ಕೇಶಿರಾಜನು ಬೆರಗಾದರೆ ಶಿವನು ಮೆಚ್ಚಿ ಬಿಗಿದಪ್ಪಿ ಆಶೀರ್ವದಿಸಿ ಗಣಪದವಿ ನೀಡಿ ಹರಸಿದನು.

ಈ ಕಥೆಯಲ್ಲಿ ತೆಲುಗು ಜೊಮ್ಮಯ್ಯನು ಶಿವನನ್ನು ಭಕ್ತಿ ಮತ್ತು ಪ್ರೇಮದಿಂದ ಕಾಣುವಂತಹವನಾಗಿದ್ದಾನೆ. ಇವನ ಭಕ್ತಿಗೆ ಒಲಿದ ಶಿವನೂ ಸಹ ಅಷ್ಟೇ ಆತ್ಮೀಯತೆಯಿಂದ ಭಕ್ತರ ಮೇಲೆ ಒಲವು ಮತ್ತು ಮಮಕಾರವನ್ನು ತೋರುವವನಾಗಿದ್ದಾನೆ. ಶಿವನಾಜ್ಞೆಯಂತೆ ಋಷಿಮುನಿಗಳ ಕಾರಣಿಕ ಮಾಯೆಯನ್ನು ಭಕ್ತಿಯೆಂಬ ಬಾಣವನ್ನು ಪ್ರಯೋಗಿಸಿ ಕೈಲಾಸವಾಸ ಮತ್ತು ಶಿವಸಾಕ್ಷಾತ್ಕಾರ ಉಂಟಾಗುವಂತೆ ಜೊಮ್ಮಯ್ಯನು ಶಿವದ್ರೋಹಿಗಳನ್ನು ಸದೆಬಡಿದು, ಶಿವಭಕ್ತರನ್ನು ಆದರದಿಂದ ಸತ್ಕರಿಸುವವನಾಗಿರುವ ಜೊಮ್ಮಣ್ಣನ ಶಿವಭಕ್ತಿಗೆ ಮೆಚ್ಚಿದ. ಅಪ್ಪಿಕೊಂಡಾಗ ಮುದ್ದಿಸುವಷ್ಟು ಆತ್ಮೀಯ ನಂಟನ್ನು ಇಲ್ಲಿ ಗುರುತಿಸಬಹುದು.

### ೩.೨) ಕೌಟುಂಬಿಕ ವಾತ್ಸಲ್ಯ ಸಂಬಂಧ :-

ಕುಟುಂಬ ಎಂದರೆ ಒಂದು ತಲೆಮಾರಿನ ಜನರು ಒಂದೆಡೆ ಪ್ರೀತಿ-ವಾತ್ಸಲ್ಯದಿಂದ ಕೂಡಿ ನಲಿದು ಸಂತೋಷದಿಂದ ಇರುವವರು. ಇವರ ನಡುವೆ ರಕ್ತ ಸಂಬಂಧದ ನಂಟು ಬೆಸೆದಿರುತ್ತದೆ. ತಂದೆ-ತಾಯಿ-ಮಕ್ಕಳು, ಸೋದರ-ಸೋದರಿಯರು ಹೀಗೆ ಸಂಬಂಧಗಳು ಯಾವುದೇ ರೀತಿಯದಾಗಿರಬಹುದು. ಈ ಸಂಬಂಧಗಳಲ್ಲಿ ಒಲವು, ಆತ್ಮೀಯತೆ, ವಾತ್ಸಲ್ಯ ಎಲ್ಲವೂ ಇರುತ್ತದೆ. ಒಬ್ಬರಿಗೊಬ್ಬರು ಸಹಕರಿಸುತ್ತಾ ಹಿರಿಯರೊಂದಿಗೆ ಭಯ ಭಕ್ತಿಯ ಜೊತೆಗೆ ಪ್ರೀತಿಯೂ ಅಪಾರವಾಗಿರುತ್ತದೆ. ಅಷ್ಟೇ ಅಲ್ಲದೆ ತಂದೆ-ತಾಯಿಗಳು ತಮ್ಮ ಮಕ್ಕಳ ಸಾಧನೆಯನ್ನು ಅಪಾರವಾಗಿ ಮೆಚ್ಚಿ ಅವರಿಗೆ ಬೆನ್ನುಲುಬು ಮತ್ತು ಪ್ರೋತ್ಸಾಹದಾಯಕರಾಗಿರುತ್ತಾರೆ. ಹಾಗೇ ತಮ್ಮ ಮಕ್ಕಳು ಏನೇ ತಪ್ಪು ಮಾಡಿದರೂ ಅದನ್ನು ತಿದ್ದಿ ಬುದ್ಧಿ ಹೇಳಿ ಸರಿಪಡಿಸುವುದರ ಜೊತೆಗೆ ಸದಾ ಅವರನ್ನು ಕ್ಷಮಾಪಿಸುವ ಗುಣವನ್ನು ಹೊಂದಿರುತ್ತಾರೆ ತಮ್ಮ ಮಕ್ಕಳಿಗೆ ರಕ್ಷಣೆ, ಪ್ರೇರಣೆ, ನೀಡಿ ಏಳಿಗೆಯನ್ನೇ ಬಯಸುವ ಈ ಪೋಷಕರ ಮೇಲೆ ಅಷ್ಟೇ ಪ್ರೀತಿ-ವಾತ್ಸಲ್ಯವನ್ನು ಮಕ್ಕಳು ಹೊಂದಿರುತ್ತಾರೆ. ಮಕ್ಕಳ ಪಾಲಿಗೆ ದೇವರೆ ತಂದೆ-ತಾಯಿಗಳಂತಿರುತ್ತಾರೆ. ಹರಿಹರನ ರಗಳೆಗಳಲ್ಲಿ ಬರುವ ಹಲವು ಶಿವಕಥೆಗಳಲ್ಲಿ ಶಿವನನ್ನು ತನ್ನ ತಂದೆ ಎಂದು ಭಾವಿಸಿ ಆರಾಧಿಸುವ ಶಿವ ಭಕ್ತರು ಈ ಕಥೆಗಳಲ್ಲಿ ವ್ಯಕ್ತವಾಗಿರುತ್ತಾರೆ. ಶಿವ ಮತ್ತು ಭಕ್ತರ ನಡುವೆ ತಂದೆ ತಾಯಿಯ ವಾತ್ಸಲ್ಯವನ್ನು ಹುಡುಕುವ ಪರಿ ಇಲ್ಲಿದೆ. ಶಿವನನ್ನು ಭಕ್ತನು ಈ ವಾತ್ಸಲ್ಯದಡಿಯಲ್ಲಿ ನೋಡಿದಾಗ ಅಷ್ಟೇ ಮಮತೆ ಪ್ರೀತಿ-

ವಿಶ್ವಾಸವನ್ನು ಶಿವನೂ ಭಕ್ತನ ಮೇಲೆ ಹೊಂದಿರುತ್ತಾನೆ. ಈ ಪ್ರೀತಿಯ ನಂಟಿನ ಬೆಸುಗೆಯಲ್ಲಿ ಶಿವಭಕ್ತರು ಒಂದಾಗುತ್ತಾರೆ.

## ಕೌಟುಂಬಿಕ ವಾತ್ಸಲ್ಯ ಸಂಬಂಧಗಳಡಿಯಲ್ಲಿ ಬರುವ ರಗಳೆಗಳ ವಿಶ್ಲೇಷಣೆ:-

### ೧. ಕಾರಿಕಾಲಮ್ಮೆಯ ರಗಳೆ :-

ಕಾರಿಕಾಲು ಎಂಬ ಊರಿನಲ್ಲಿದ್ದ ಮಾಣಿಕ ಸೆಟ್ಟಿಗೆ, ಕಾರಿಕಾಲಮ್ಮೆ ಹೆಂಡತಿಯಾಗಿ ಬಂದು ತುಂಬು ಸಂಸಾರವನ್ನು ನಿರ್ವಹಿಸಿಕೊಂಡು ಹೋಗುತ್ತಿದ್ದಳು. ಮಹಾಸಾಧ್ವಿಯಾದ ಇವಳು ಗುಪ್ತ ಶಿವಭಕ್ತೆಯಾಗಿದ್ದಳು. ಒಮ್ಮೆ ಗಂಡನಿಗೆ ಕಾಣಿಕೆ ರೂಪದಲ್ಲಿ ದೊರೆತ್ತಿದ್ದ ಎರಡು ಅನುರೂಪವಾದ ಹಣ್ಣುಗಳನ್ನು ಇವಳ ಕೈಯಲ್ಲಿ ನೀಡಿ ಜೋಪಾನವಾಗಿರಿಸುತ್ತಾನೆ. ಅವುಗಳ ಪೈಕಿ ಒಂದು ಹಣ್ಣನ್ನು ಮನೆಗೆ ಭಿಕ್ಷೆಗೆಂದು ಬಂದ ಸಾಧುವೇಷದ ಸನ್ಯಾಸಿಗೆ ನೀಡುತ್ತಿರುವುದನ್ನು ಗಮನಿಸಿದ ಮಾಣಿಕ ಸೆಟ್ಟಿಯ ಊಟಕ್ಕೆ ಕುಳಿತಾಗ ಆ ಹಣ್ಣನ್ನು ತರಲು ಹೇಳಿದನು. ಪೀಕಲಾಟಕ್ಕೆ ಒಳಗಾದ ಆಕೆಗೆ ಶಿವನ ಲೀಲೆಯಿಂದ ಮತ್ತೊಂದು ಹಣ್ಣು ದೊರೆತಾಗ ತನ್ನ ಗಂಡನ ಬಳಿಗೆ ಧಾವಿಸಿ ಎರಡೂ ಹಣ್ಣುಗಳನ್ನು ತಂದು ನೀಡುತ್ತಾಳೆ. ಆದರೆ ಅದರಲ್ಲಿ ಒಂದು ಹಣ್ಣು ಬಹಳ ವಿಶೇಷವಾಗಿದ್ದು ಅದು ಈ ಭೂಮಿಯ ಹಣ್ಣೇ ಅಲ್ಲ ಎಂದು ತೀರ್ಮಾನಿಸಿ ಗಂಡನು ನಡೆದುದ್ದನ್ನೆಲ್ಲಾ ಸಂಪೂರ್ಣವಾಗಿ ತಿಳಿದುಕೊಂಡು ಆಕೆ, ತನ್ನ ಪಾಲಿನ ಗುರುವೆಂದು ತಾಯಿಯಂತೆ ತಿಳಿದು ಕಾಲಿಗೆರಗುತ್ತಾನೆ. ತನ್ನ ಗುಪ್ತಭಕ್ತಿ ಪ್ರಕಟವಾಯಿತಲ್ಲ ಎಂದು ಬೇಸತ್ತ ಅವಳು ಕಾಡಿಗೆ ಧಾವಿಸಿ ಶಿವಭಕ್ತಿಯನ್ನು ಮೆರೆಯಲು ಅವಳ ರೂಪಿಗೆ ಮೆಚ್ಚಿ ಕಾಮುಕರ ದೃಷ್ಟಿಗೆ ಒಳಗಾದಳು. ಆಗ ಯಾರಿಗೂ ದಕ್ಕದೆ ಕಠಿಣ ಹಠ ಸಾಧನೆಯಿಂದ ಬಡಕಲಾಗಿ ಸೊರಗಿದಾಗ ಎಲ್ಲರೂ ಇವಳಿಂದ ದೂರವಾಗುತ್ತಾಳೆ. ನಾನು ಶಿವನ ನರ್ತನವನ್ನು ನೋಡಲೇಬೇಕೆಂದು ಮನದ ಇಂಗಿತವನ್ನು ವ್ಯಕ್ತಪಡಿಸಿದಾಗ ಶಿವನು ಬಂದು ನರ್ತನಗೈದು ಅವಳ ಭಕ್ತಿಗೊಲಿದು ಕೈಲಾಸಕ್ಕೆ ಆಹ್ವಾನ ನೀಡುತ್ತಾನೆ. ಆದರೆ ಕಾರಿಕಾಲಮ್ಮೆ ಶರಣರು ತುಳಿದ ಸ್ಥಳವನ್ನು ತುಳಿಯಲು ಹೆದರಿ ಭಕ್ತಿಯಿಂದ ತಲೆಕೆಳಗಾಗಿ ನಡೆದು ಕೈಲಾಸದಲ್ಲಿ ಗಣಪದವಿಗೆ ಸೇರ್ಪಡೆಯಾಗುತ್ತಾಳೆ ಮತ್ತು ತನ್ನ ಸತಿಯಾದ ಪಾರ್ವತಿದೇವಿಯೇ ಅವಳಿಗೆ ನಮಸ್ಕರಿಸುವಂತೆ ಮಾಡುತ್ತಾನೆ.

ಹರಿಹರನ ಈ ರಗಳೆಯನ್ನು ಗಮನಿಸಿದಾಗ, ಸಾಮಾನ್ಯವಾದ ಕಥೆಯೆನಿಸಿದರೂ ಅದರ ಒಳಹೊಕ್ಕಿ ಸೂಕ್ಷ್ಮವಾಗಿ ಚಿಂತಿಸಿದಾಗ, ಮನು ತನ್ನ ಧರ್ಮಶಾಸ್ತ್ರದಲ್ಲಿ "ಹೆಣ್ಣು ಬಾಲ್ಯದಲ್ಲಿ ತನ್ನ ತಂದೆಯ ಜೊತೆ, ಯೌವನದಲ್ಲಿ ಗಂಡನ ಜೊತೆ ಮುಪ್ಪಿನಲ್ಲಿ ಮಕ್ಕಳ ಜೊತೆ ವಾಸಮಾಡತಕ್ಕದ್ದು

ಎಂದು ಹೇಳಿದ್ದಾನೆ. ನಮ್ಮಲ್ಲಿ ಆದಿಕಾಲದಿಂದಲೂ ಈ ಆಚರಣೆಯೇ ಸಂಪ್ರದಾಯವಾಗಿ ಮೂಡಿಬಂದಿದೆ. ಆದರೆ ಇಲ್ಲಿ ಹೆಣ್ಣೊಬ್ಬಳು ತನ್ನ ಭಕ್ತಿಗೆ ಅಡ್ಡವಾಗಿ ಗಂಡನನ್ನು ತ್ಯಜಿಸಿ ಕಾಡಿಗೆ ಹೋಗಿ ಸ್ವತಂತ್ರಳು ಎಂದು ತೋರ್ಪಡಿಸಿಕೊಂಡು ಶಿವನನ್ನು ಒಲಿಸಿಕೊಳ್ಳುವಲ್ಲಿ ಸಬಲಳು ಎಂದು ಸಾಬೀತು ಮಾಡಿರುವುದು ಗಮನಾರ್ಹ.

ಕಾಡಿನಲ್ಲಿ ತನಗೆದುರಾಗುವ ಪುರುಷರ ಆಕ್ರಮಣದಿಂದ ಬಿಡಿಸಿಕೊಳ್ಳುವಲ್ಲಿ ಸಫಲಳಾಗಿ ಕಠಿಣಯೋಗ ಸಾಧನೆಯಿಂದ ತಲೆಕೆಳಗಾಗಿ ಕೈಲಾಸ ಸೇರಿ ಗಣಪದವಿಯನ್ನು ಗಿಟ್ಟಿಸಿಕೊಳ್ಳುವಲ್ಲಿ ಸ್ತ್ರೀಕುಲಕ್ಕೆ ಭೂಷಣಪ್ರಾಯಳಾಗಿ ಮೆರೆದು ದಿಟ್ಟನಡೆ, ಏಕಾಂಗಿ ಹೋರಾಟ, ಶಿವಭಕ್ತಿ, ಜೀವನೋತ್ಸಾಹ ಉತ್ತುಂಗಕ್ಕೆ ಏರಿಸಿಕೊಳ್ಳುವ ಮೂಲಕ ಸಮಾಜದ ಸ್ತ್ರೀಯರ ಪ್ರತೀಕವಾಗಿ ನಿಲ್ಲುತ್ತಾಳೆ. ಸ್ತ್ರೀಯರಿಗೆ ಮೋಕ್ಷಸಾಧನೆ ಇಲ್ಲ ಎಂದು ಕಡೆಗಣಿಸಿದ್ದ ಪುರುಷ ಸಮಾಜದ ವಿರುದ್ಧ ಸಾಧನೆಗೈದಿದ್ದಾಳೆ. ಆದರೆ ಹರಿಹರನು ಭಕ್ತಿ ಭಾವಾತಿರೇಕಕ್ಕೆ ಒಳಗಾಗಿ ಕೆಲವು ಅತಿಶಯೋಕ್ತಿ ಪ್ರಸಂಗಗಳನ್ನು ಸೇರಿಸಿದ್ದರೂ ಹೆಂಗಳೆಯರ ಪರವಾಗಿ ನಿಲ್ಲುವ ಅವನ ಕಾಳಜಿ ಸ್ತ್ರೀ ವರ್ಗವನ್ನು ಭಕ್ತಿ ಪ್ರಪಂಚದೆಡೆಗೆ ಸ್ತ್ರೀ ಮಾನತೆ ರಗಳೆ ಇದಾಗಿದೆ.

"ರುದ್ರನೇ ತಂದೆ-ತಾಯೆಂದು, ಕೈಲಾಸವನ್ನೇ ತವರು ಮನೆಯೆಂದು ಭಾವಿಸಿದ ಕಾರಿಕಾಲಮ್ಮೆ ದೇಹದ ಹಂಗು ತೊರೆದು ಶಿವಭಕ್ತಿ ಮೆರೆದ ಉಗ್ರನಿಷ್ಠಳು. ದೈವೀಕೃಪೆಗಾಗಿ ಅಂತಹ ನಿಷ್ಠುರತೆ ಅನಿವಾರ್ಯವೆಂದೂ ಬೀಕರ ಕಷ್ಟಗಳನ್ನು ಸಹಿಸುವಲ್ಲಿ ಪರಮಾತ್ಮನ ಕರುಣೆ ಕೈ ಗೂಡುವುದೆಂದು ಹರಿಹರ ಇಲ್ಲಿ ಸ್ಪಷ್ಟಪಡಿಸುತ್ತಾನೆ. ತಲೆಯೂರಿ ಮೈಯೆಲ್ಲಾ ಎಲುಬಾಗಿ ಬರುತ್ತಿರುವವಳನ್ನು ಪಾರ್ವತಿಕಂಡು, 'ಇದೇನು ಮರಳು ಬಂದಿದೆ' ಎಂದು ಕೇಳಿದರೆ ಶಿವನು, "ಅಲ್ಲಲ್ಲ ಗಿರಿಜೆ ಕಾರಿಕಾಲಮ್ಮೆಯರು ನಮ್ಮಮ್ಮೆ, ನಿಮ್ಮತ್ತೆ" ಎಂದು ಹೇಳುತ್ತಾನೆ. ಮಾನವನ ಚಿತ್ತದ ವಿರಕ್ತಿ ಪರಮಾತ್ಮನನ್ನು ಹೇಗೆ ವಶಪಡಿಸಿಕೊಳ್ಳಬಲ್ಲುದೆಂಬ ಚಿತ್ರಣವು ಇಲ್ಲಿದೆ. ಜನರ ಹಂಗು ತೊರೆದು ಭಕ್ತಿ ನಿರ್ಭರತೆ ತೋರಬೇಕೆನ್ನುವುದು ಇಲ್ಲಿಯ ಹರಿಹರನ ದೃಷ್ಟಿ."೧೪ ಭಕ್ತಿಯು ವ್ಯಕ್ತಿಯ ಆತ್ಮ ಹಾಗು ಪರಮಾತ್ಮರಿಗೆ ಸಂಬಂಧಿಸಿದುದು. ಕಾರಿಕಾಲಮ್ಮೆಯ ಕಷ್ಟಸಹಿಷ್ಣುತೆ ಬೆರಗುಗೊಳಿಸುವಂತಹ ಆಶ್ಚರ್ಯಕರವಾದ ಭಕ್ತಿ-ಭಾವ ಇಲ್ಲಿ ಮೂಡಿದೆ.

---

ಅಡಿಟಿಪ್ಪಣಿಗಳು – ೧೪. ಹರಿಹರನ ರಗಳೆಗಳಲ್ಲಿ ಜೀವನ ದರ್ಶನ – ಸ.ಸ.ಮಾಳವಾಡ, ಪು.ಸಂ ೩೫

## ೨. ಕೋಳೂರ ಕೊಡಗೂಸು ರಗಳೆ :-

ಉತ್ತರ ದಿಕ್ಕಿನಲ್ಲಿ ಶಿವಪುರ ಎಂಬ ಊರೊಂದು ಇದೆ. ಅದು ಕೋಳೂರು ಎಂಬ ಹೆಮ್ಮೆಯ ಪಟ್ಟಣವೆನಿಸಿಕೊಂಡಿದೆ. ಅಲ್ಲಿರುವ ಶಿವಭಕ್ತೆಯೊಬ್ಬಳಿಗೆ ಪುಟ್ಟ ಮಗಳೊಬ್ಬಳಿದ್ದಾಳೆ. ಅವಳು ಕೋಳೂರಿನ ಪುಟ್ಟ ಹೆಣ್ಣುಮಗುವಾಗಿರುವುದರಿಂದ ಕೋಳೂರು ಕೊಡಗೂಸು ಎಂದೇ ಕರೆಯಲಾಗಿದೆ. ತಾಯಿ ಶಿವನನ್ನು ಆರಾಧಿಸುವವಳಾದ್ದರಿಂದ ಪ್ರತಿ ಸೋಮವಾರದ ದಿನ ಶಿವನ ಪೂಜೆ ಮಾಡುವ ಆಚಾರವಿಟ್ಟುಕೊಂಡಳು. ಹೀಗಿರುವಾಗ ಒಂದು ಸೋಮವಾರ ಹಾಲನ್ನು ತೆಗೆದುಕೊಂಡು ಶಿವನಿಗೆ ಸಂತೋಷದಿಂದ ಅಭಿಷೇಕ ಮಾಡಿ ಬರುವಾಗ ಅದನ್ನು ಕಂಡ ಮಗಳು ಹಾಲನ್ನು ಎಲ್ಲಿಗೆ ತೆಗೆದುಕೊಂಡು ಹೋಗಿದ್ದೆ? ಎಂದು ಪ್ರಶ್ನಿಸಿದಾಗ ಮಗಳ ಮುದ್ದು ಮಾತನ್ನು ಕೇಳಿ ಶಿವನಿಗೆ ಹಾಲನ್ನು ಎರೆದು ಬಂದೆ ಎಂದು ಉತ್ತರಿಸಿದಳು. ಕೊಡಗೂಸೆಂಬ ಆ ಹತ್ತು ವರ್ಷದ ಮಗು ಆಶ್ಚರ್ಯಪಟ್ಟು ದೇವನೆಂದರೆ ಯಾರು ? ಅವನು ಹೇಗಿರುತ್ತಾನೆ ? ಎಂದು ಕೇಳಿದ ಮಾತಿಗೆ ತಾಯಿ, ಮಗು ದೇವರನ್ನು ಕುರಿತು ಸಂದೇಹದ ಮಾತನ್ನಾಡಬಾರದು ಆ ದೇವನು ಐದು ಮುಖ ಹತ್ತು ಭುಜಗಳನ್ನು ಹೊಂದಿರುವ ಗಜಚರ್ಮವನ್ನು ಹೊಂದಿರುವ, ಹುಲಿಯ ಚರ್ಮದ ಮೇಲೆ ಕುಳಿತಿರುವ ಅವನಿಗೆ ಡಮರುಗ, ತ್ರಿಶೂಲ ಭೂಷಣಪ್ರಾಯವಾಗಿದೆ. ಅವನ ಆದಿ ಅಂತ್ಯವನ್ನು ಬ್ರಹ್ಮವಿಷ್ಣುವಿಗೂ ತಿಳಿಯಲಾಗದ ಜ್ಞಾನಜ್ಯೋತಿಯ ಸ್ವರೂಪದವನು ಶರಣಾದವರಿಗೆ ರಕ್ಷಕನಂತಿರುವವನು. ಉಪಮನ್ಯು ಬೇಡಿದಾಗ ಹಾಲಿನ ಸಮುದ್ರವನ್ನೇ ನೀಡಿದವನು. ಕೋಟಿಸೂರ್ಯ ಕಾಂತಿಯುಳ್ಳ ನಮ್ಮೆಲ್ಲರ ಬಯಕೆಗಳನ್ನು ನೆರವೇರಿಸುವ ಸಾಕ್ಷಾತ್ ಪರಮೇಶ್ವರನು ಎಂದು ತಿಳಿಸಿದಳು.

ತಾಯಿಯ ಮಾತಿನಂತೆ ಶಿವಭಕ್ತಿಯ ಪ್ರೀತಿಯನ್ನು ಬೆಳಸಿಕೊಂಡು ಆ ಮಗು ತಾನು ಎಂದು ಶಿವನಿಗೆ ಹಾಲನ್ನೆರೆದು ಬರುವುದೋ ಎಂಬ ತುಡಿತದಲ್ಲಿಯೇ ಸದಾ ಶಿವನಾಮ ಸ್ಮರಣೆಯನ್ನು ಮಾಡುತ್ತಿದ್ದಳು. ಒಮ್ಮೆ ತಾಯಿ ರಜಸ್ವಲೆಯಾದ ನಿಮಿತ್ತ ಶಿವನಿಗೆ ಹಾಲನ್ನೆರೆದು ಬರುವ ಕಾರ್ಯವನ್ನು ಮಗಳಿಗೆ ಒಪ್ಪಿಸಿದಳು. ಅತ್ಯಂತ ಸಂತಸದಿಂದ ಮಗು ಅಲಂಕೃತಳಾಗಿ ಓರಗೆಯ ಮಕ್ಕಳೊಂದಿಗೆ ಸಂಭ್ರಮ ಹಂಚಿಕೊಂಡು ಬಂದು ಶಿವಾಲಯಕ್ಕೆ ತೆರಳಲು ಹಾಲನ್ನಿಡಿದು ಸಿದ್ಧವಾದಳು.

ಶಿವನಿರುವ ಕೈಲಾಸವನ್ನು ತಲುಪಲು ಇದೇ ಪ್ರತಿಯಾದ ಸ್ಥಾನವೆನ್ನುವ ಹಾಗೆ ಆ ಕೊಡಗೂಸು ಶಿವನ ದೇವಸ್ಥಾನವನ್ನು ತಲುಪುತ್ತಾಳೆ. ಶಿವನ ರೂಪವನ್ನೇ ತನ್ನ ಮೈ ಮನಗಳಲ್ಲಿ ತುಂಬಿಕೊಂಡ ಆ ಕೊಡಗೂಸು ಶಿವನನ್ನು ಸಮೀಪಿಸಿ ತಾನು ತಂದಿರುವ ನೈವೇದ್ಯದ ಹಾಲನ್ನು ಕುಡಿಯಬೇಕೆಂದು ವಿಧವಿಧವಾಗಿ ಬೇಡಿಕೊಂಡಳು. ಹಾಲನ್ನು ಸವಿಯಲು ಶಿವನು ಬರದಿದ್ದಾಗ ತನ್ನಿಂದ ಯಾವುದೋ ಪ್ರಮಾದ ಉಂಟಾಗಿದೆ ಎಂದು ಭಾವಿಸಿ ಆತಂಕಕ್ಕೊಳಗಾಗುವಳು. ಕಣ್ಣೀರು ಸುರಿಸಿ ಭಯದಿಂದ ನೀನು ಹಾಲು ಕುಡಿಯದೆ ಹೋದರೆ ತಾಯಿ ನನ್ನನ್ನು ಬಡಿಯುವಳು ಆದ್ದರಿಂದ ಮನೆಗೆ ಹಿಂದಿರುಗಲು ಭಯವಾಗುತ್ತದೆ. ಎಂದು ದುಃಖದಿಂದ ತೊದಲು ನುಡಿಯನ್ನಾಡುತ್ತಾ ಹಾಲು ಕುಡಿಯಬೇಕೆಂದು ಪರಿ-ಪರಿಯಾಗಿ ಬೇಡುತ್ತಾಳೆ. ಆಗ ಶಿವನು ಆ ಕೊಡಗೂಸಿನ ಕೈಯಲ್ಲಿರುವ ಬಟ್ಟಲನ್ನು ತೆಗೆದುಕೊಂಡು ಭಕ್ತಿಯಿಂದ ಕೂಡಿದ ಅಮೃತದಂತಿರುವ ಹಾಲನ್ನು ಸೇವಿಸಿದನು ತಾಯಿಯು ತನ್ನ ಮಗುವಿಗೆ ಹಾಲುಣಿಸಿದಂತೆ ಕೊಡಗೂಸೆಂಬ ಆ ಮುಗ್ಧ ಮಗುವನ್ನು ಕೈಲಾಸಕ್ಕೆ ಕರೆದೊಯ್ದು ರುದ್ರಕನ್ನಿಕೆಯ ಸ್ಥಾನವನ್ನು ನೀಡಿ ಹರಿಸಿದನು.

ಈ ರಗಳೆಯ ಕಥೆಯನ್ನು ಸೂಕ್ಷ್ಮವಾಗಿ ಗಮನಿಸಿದಾಗ ಹಲವಾರು ವರ್ಷಗಳಿಂದ ಹಾಲೆರದು ಬರುತ್ತಿರುವ ಕೊಡಗೂಸಿನ ತಾಯಿಯ ಭಕ್ತಿಗೆ ಮೆಚ್ಚದ ಶಿವನು ಕೊಡಗೂಸಿನ ಭಕ್ತಿಗೆ ಒಲಿದನು. ಇಲ್ಲಿ ಮಗುವಿನ ಮುಗ್ಧತೆ, ನಿಷ್ಕಲ್ಮಷ ಮನಸ್ಸು ಮತ್ತು ಶಿವನಿಗೆ ಹಾಲು ಎರೆಯುವ ಅವಕಾಶಕ್ಕಾಗಿ ಕಾದು, ಅದು ಸಿಕ್ಕಾಗ ಸದುಪಯೋಗ ಪಡಿಸಿಕೊಂಡ ಮುಗ್ಧ ಬಾಲೆಯ ಭಕ್ತಿ ಶಿವನಿಗೆ ಅಚ್ಚುಮೆಚ್ಚಾದುದು ಗಮನಾರ್ಹ. ಸಮಾಜದಲ್ಲಿ ಕೊಡಗೂಸಿನ ಸಮವಯಸ್ಕ ಮಕ್ಕಳ ಮೇಲೆ ಈ ಕಥೆ ಪರಿಣಾಮ ಬೀರುತ್ತದೆ. ಕೊಡಗೂಸನ್ನು ತನ್ನ ಮಾರ್ಗದರ್ಶಿಯಾಗಿ ನೋಡುವ, ಅಂತಹ ಎಳೆಯ ಮನಸ್ಸುಗಳನ್ನು ಸೆಳೆಯುವಂತಹ ಕಥೆ ಇದಾಗಿದೆ.

ಶಿವನ ಕೈಲಾಸದಲ್ಲಿ ಭಕ್ತಿವೆತ್ತ ಮಕ್ಕಳಿಗೂ ಸ್ಥಾನವಿದೆ ಎಂಬ ಈ ಕಥೆ ಮಕ್ಕಳನ್ನು ಭಕ್ತಿಯೆಡೆಗೆ ಪ್ರೋತ್ಸಾಹಿಸುತ್ತದೆ. ಸಣ್ಣಮಗುವೇ ತನ್ನ ಭಕ್ತಿನಿಷ್ಠೆಯಿಂದ ಶಿವನನ್ನು ಮೆಚ್ಚಿಸಿ ಗಣಪದವಿಯನ್ನು ಸಂಪಾದಿಸಿದೆ ಎಂದ ಮೇಲೆ ಹಿರಿಯರಾದ ನಾವು ಏಕೆ ಭಕ್ತಿರೂಢರಾಗಬಾರದು ಎಂಬ ಮನೋಭಾವ ಹಿರಿಯರಲ್ಲಿ ಬೆಳೆಯುತ್ತದೆ ಮಕ್ಕಳಿಗೆ ಚಿಕ್ಕಂದಿನಿಂದಲೇ ಸದ್ಭಕ್ತಿ, ಸದ್ಭಾವನೆ, ಸಚ್ಚಾರಿತ್ರ್ಯಗಳನ್ನು ಬೆಳಸಿಕೊಳ್ಳಲು ಪೋಷಕರು ನೆರವಾಗಬೇಕು ಎಂಬ ಸತ್ಯವೂ ಇಲ್ಲಿ

ಗೋಚರಿಸುತ್ತದೆ. ಸ್ತ್ರೀ ಸ್ವಾತಂತ್ರ್ಯಕ್ಕೆ ಹಿಡಿದ ಕನ್ನಡಿಯಾಗಿದೆ. ಕೊಡಗೂಸು ಶಿವನಿಗೆ ತಾಯಿಯಂತೆ ಹಾಲನ್ನು ಕುಡಿಸಿದ ಬಗೆಯನ್ನು ಹರಿಹರ ಬಹಳ ಸೊಗಸಾಗಿ ಚಿತ್ರಿಸಿದ್ದಾನೆ.

### ೩. ಹೆರೂರು ಹೆಣ್ಣಿನ ರಗಳೆ :-

ಶಿವಭಕ್ತರ ಮನೆಯಲ್ಲಿ ಜನಿಸಿದ ಹೆರೂರು ಹೆಣ್ಣು ಶಿವಭಕ್ತಳು ಜೈನರನ್ನ ವಿವಾಹವಾಗಿದ್ದ ಇವಳ ಸೋದರತ್ತೆ ತನ್ನ ಮಗನಿಗೆ ಒತ್ತಾಯಪೂರ್ವಕವಾಗಿ ಹೆರೂರುಹೆಣ್ಣಿನೊಂದಿಗೆ ಮನೆಮಂದಿಯೆಲ್ಲಾ ಸೇರಿ ವಿವಾಹಮಾಡುತ್ತಾರೆ. ಶಿವಭಕ್ತನಲ್ಲದವನ ಜೊತೆಗೆ ಮದುವೆಯಾಗಬೇಕಾಯಿತೇ ಎಂದು ಕೊರಗುತ್ತಾಳೆ. ಮದುವೆಗೆ ಬಂದವರೆಲ್ಲರಿಗೂ ಅದು ದಿಟವಾದ ಮದುವೆಯಂತೆ ಅನಿಸುತ್ತದೆ. ಮದುವೆಯ ದಿನದಂದೇ ಶಿವಭಕ್ತನಲ್ಲದ ಭವಿ ಜೊತೆಗಿನ ಈ ವಿವಾಹಕ್ಕೆ ಶಿವನೇ ನೀನು ಪರಿಹಾರ ನೀಡದೆ ಹೋದರೆ ನಿನ್ನ ಪಾದ ಸೇರುವುದಾಗಿ ಆಣೆ ಮಾಡುತ್ತಾಳೆ. ಮದುವೆಯಾದ ನಾಲ್ಕನೆಯ ದಿನಕ್ಕೆ ಅವಳನ್ನು ಗಂಡನ ಮನೆಗೆ ಬೀಳ್ಕೊಟ್ಟರು. ಹೆಣ್ಣನ್ನು ಗಂಡಿನ ಕಡೆಯವರು ಸಂಭ್ರಮದಿಂದ ಕರೆದೊಯ್ಯುತ್ತಿರಬೇಕಾದರೆ ಅರಣ್ಯದಲ್ಲಿ ಹಸಿವಿನಿಂದ ಎಲ್ಲರೂ ಊಟಕ್ಕೆ ಸಿಧ್ಧರಾದರು. ಆದರೆ ಹೆರೂರು ಹೆಣ್ಣು ಶಿವಪೂಜೆ ಇಲ್ಲದೆ ಊಟ ಮಾಡುವುದಿಲ್ಲ ಎಂದು ಹಠ ಹಿಡಿದಾಗ ಕೆಲಮಂದಿ ಅವಳನ್ನು ಅಲ್ಲೇ ದೂರದಲ್ಲಿದ್ದ ಶಿವಾಲಯಕ್ಕೆ ಕರೆದೊಯ್ಯುವರು. ಅಲ್ಲಿ ಶಿವಲಿಂಗವನ್ನು ಗಟ್ಟಿಯಾಗಿ ಹಿಡಿದಪ್ಪಿ ನಾನು ಭವಿಗಳ ಹಿಂದೆ ಹೋಗಲಾರೆ ನಿನ್ನೊಂದಿಗೆ ನನ್ನನ್ನು ಸೇರಿಸಿಕೋ ಎಂದು ಭಕ್ತಿಯಿಂದ ಬೇಡುತ್ತಾಳೆ. ತಕ್ಷಣವೇ ಅವಳು ಗಂಡಾಗಿ ಬಿಡುತ್ತಾಳೆ. ಅವರ ಕಡೆಯವರೆಲ್ಲರೂ ಎಷ್ಟೇ ಹುಡುಕಾಡಿದರೂ ಸಿಗದೆ ಮತ್ತೆ ಅಲ್ಲಿ ಶಿವಪೂಜೆಯಲ್ಲಿ ನಿರತನಾಗಿದ್ದ ಒಬ್ಬ ಸುಂದರ ತರುಣನೇ ಹೆರೂರು ಹೆಣ್ಣು ಎಂದು ತಿಳಿದು ಅವಳ ಭಕ್ತಿಯ ಭಲ, ವೈರಾಗ್ಯ ಮನೋಭಾವದ ಮುಂದೆ ಸಂಬಂಧಿಗಳಾದ ಜೈನರೆಲ್ಲಾ ಸೋತು ಹೊರಡುತ್ತಾರೆ. ಮನೆಯವರು, ಸಮಾಜ ಎಲ್ಲರೂ ಸೇರಿ ಇವಳ ಮದುವೆ ಮಾಡಿದರೂ ಭವಿಯ ಜೊತೆಗಿನ ಬಂಧ ಬೇಡವೆಂದರು ಮೌನದಿಂದಲೇ ಅಸಹಾಯಕಳಾಗಿ ಪ್ರತಿಭಟಿಸುತ್ತಾಳೆ. ತಾನು ಹೆಣ್ಣಾಗಿರುವುದರಿಂದ ಇವರುಗಳ ಇಚ್ಛೆಯಂತೆ ನನ್ನ ಮದುವೆ ನೆರವೇರಿತು. ಆದರೆ ಗಂಡಸಾಗಿದ್ದರೆ ನೆರವೇರುತ್ತಿರಲಿಲ್ಲ ಎಂದು ಚಿಂತಿಸಿ ತನ್ನನ್ನು ಗಂಡಾಗಿ ಪರಿವರ್ತಿಸು ಎಂದು ಬೇಡಿದ ಅವಳ ಮನೋಭಿಲಾಷೆ ಶಿವನೆದರು ಈಡೇರಿತು. ಪುರುಷ ಸಮಾಜದ ದಬ್ಬಾಳಿಕೆಯ ಎದುರು ಪ್ರಬಲವಾಗಿ ನಿಂತು ಹೆಣ್ಣು ಸಬಲೆ ಎನಿಸಿಕೊಂಡುದುದು ಗಮನಾರ್ಹ. ಹೆಣ್ಣು-ಗಂಡು ತಾರತಮ್ಯ ಸಲ್ಲದು ಸ್ತ್ರೀ ಸ್ವಾತಂತ್ರ್ಯದ ಹೋರಾಟದಲ್ಲಿ ಹೆರೂರು ಹೆಣ್ಣಿಗೆ ಜಯ ಲಭಿಸಿದೆ ಸಮಾನತೆಯ ತತ್ವವನ್ನು ಸಾರುವ

ಈ ರಗಳೆ ಮದುವೆಯ ಬಂಧನದಿಂದ ಪಾರಾಗಿ, ವೈರಾಗ್ಯತಾಳ ಹೆರೂರು ಹೆಣ್ಣು ಶಿವಸಾಯುಜ್ಯವನ್ನು ಸಾಧಿಸಿದ ರೀತಿ ಆಶ್ಚರ್ಯವಾಗಿದ್ದರೂ ಅವಳ ಸಮಾನತೆಯ ತುಡಿತ ಮೆಚ್ಚತಕ್ಕಂತದ್ದು.

"ಹೆಣ್ಣು, ಗಂಡು ಬೇಧ ಭಾವವನ್ನು ಜೈವಿಕ ಪರಿಧಿಯಾಚೆಗೆ ಹೋಗಿ ಅಸಮಾನತೆಯನ್ನು ಕಿತ್ತುಹಾಕುವ ಆಶಯಹೊಂದಿದ ರಗಳೆ ಇದು. ಹೆಣ್ಣುಗಂಡುಗಳ ನಡುವಿನ ತೆಳುವಾದ ಒಂದು ಚಿಕ್ಕದಾದ ಅತ್ಯಂತ ಸೂಕ್ಷ್ಮ ಗೆರೆ ಎಂದರೆ ದೈಹಿಕ ಭಿನ್ನತೆ ಮಾತ್ರ. ಮೊಲೆ ಮುಡಿ ಬಂದರೆ ಹೆಣ್ಣೆಂಬರು, ಇದರಾಚೆ ಎರಡೂ ಒಂದೇ ಅಲ್ಲವೆ? ಹಾಗಾಗಿ ಹೆಣ್ಣಿಗೆ ಮಾತ್ರ ಹಿಂಸೆ, ವಂಚನೆ, ಮೋಸ, ಶೋಷಣೆಯಾಕೆ? ಹೆರೂರುಹೆಣ್ಣು ಭಾವದಲ್ಲಿ ಗಂಡಾಗಿ, ರೂಪದಲ್ಲಿ ಹೆಣ್ಣಾಗಿದ್ದಳು. ಆಕೆಯ ಎಲ್ಲಾ ಬಗೆಯ ಆಯ್ಕೆ ಸ್ವಾತಂತ್ರ್ಯಗಳು ಕೌಟುಂಬಿಕವಾಗಿ, ಸಾಮಾಜಿಕವಾಗಿ ಹತ್ತಿಕ್ಕಲ್ಪಟ್ಟಾಗ ಅಭಿಪ್ರಾಯ ಸ್ವಾತಂತ್ರ್ಯಕ್ಕೆ ಆಸ್ಪದವೇ ಇಲ್ಲವಾದಾಗ ತುಳಿಯಲ್ಪಟ್ಟ ಹೆಣ್ಣು, ಗಂಡಾಗುತ್ತಾಳೆ. ಶರಣರ ತಾತ್ವಿಕತೆಯ ಮೇರೆಗೆ ಲಿಂಗವನ್ನು ಒಪ್ಪಿದವರಿಗೆ ಲಿಂಗವನ್ನು ಅಪ್ಪಿದವರಿಗೆ ಗಂಡು ಹೆಣ್ಣೆಂಬ ರೂಪದ ಭೇದ-ಭಾವವಿಲ್ಲ ಗಂಡಿರಲಿ, ಹೆಣ್ಣಿರಲಿ ಎಲ್ಲಾ ಭಕ್ತರೂ ಲಿಂಗಸತಿಯರೇ ಆಗುತ್ತಾರೆ ಅವರಿಗೆ ಲಿಂಗವೇ ಪತಿಯಲ್ಲವೆ.......?" ೧೫ ಆಕೆಯ ಅಭಿಪ್ರಾಯಕ್ಕೆ ಕುಟುಂಬದವರು ಆಸ್ಪದ ನೀಡದಿದ್ದಾಗ ಶಿವನ ಧ್ಯಾನ ಮತ್ತು ಭಕ್ತಿಗೆ ಒಳಗಾಗಿ ಕಡೆಗಣಿಸಲ್ಪಟ್ಟ ಹೆಣ್ಣು ಗಂಡಾಗಿ ಪರಿವರ್ತಿತಳಾಗಿ ತನ್ನ ನಿಷ್ಠೆಯ ಛಲ ಎಂಥದ್ದು ಎಂದು ಸಾಬೀತು ಮಾಡುತ್ತಾಳೆ.

ಕುಟುಂಬದ ಒತ್ತಡಗಳಿಗೆ ಮಣಿದು ಇಂದಿಗೂ ಎಷ್ಟೋ ಹೆಣ್ಣು ಮಕ್ಕಳು ತಮಗಿಷ್ಟವಿಲ್ಲದ ಮದುವೆಯ ಬಂಧನಕ್ಕೆ ಒಳಗಾಗಿ, ವರಕಕ್ಷಿಣೆ ಕಿರುಕುಳ ಸಾವು-ನೋವು, ಅತ್ಯಾಚಾರ, ಆಸ್ಯಿಡ್ ಧಾಳಿ, ಕಷ್ಟ-ನಷ್ಟ, ಅನುಭವಿಸುವ ಹೆಣ್ಣಿನ ಕಥೆಗಳು ನಿತ್ಯಸತ್ಯವಾಗಿದೆ. ಅಂತಹುದರಲ್ಲಿ ಹೆರೂರು ಹೆಣ್ಣು ಯಾರ ಸಹಾಯವಿಲ್ಲದೆ ತನ್ನ ನಿಶ್ಚಲಭಕ್ತಿಯಿಂದ ಹಿಡಿದ ಹಠ ಸಾಧಿಸಿ ಹೆಣ್ಣು ಕುಲಕ್ಕೆ ಮಾದರಿಯಾಗಿ ನಿಲ್ಲಬಲ್ಲಳು. ಇವಳ ಕಷ್ಟಕ್ಕೆ ಸ್ಪಂದಿಸಿದ ಶಿವನೇ ಇವಳಿಗೆ ತಂದೆಯ ಸ್ವರೂಪನಂತಹವನು. ಇಲ್ಲಿ ಹೆರೂರು ಹೆಣ್ಣು ಹೇಗೆ ಗಂಡಾದಳು ಎಂಬುದಕ್ಕಿಂತ ಮುಖ್ಯವಾಗಿ ಭವಿಯ ಬಂಧನದಿಂದ ವಿಮುಕ್ತಳಾಗುವಲ್ಲಿ ಅವಳ ಛಲ, ನಿಷ್ಠೆಯ ಭಕ್ತಿ ಮನೋಭಾವ ಸ್ತ್ರೀಕುಲಕ್ಕೆ

---

ಅಡಿಟಿಪ್ಪಣಿಗಳು : ೧೫. ಹರಿಹರನ ಲಿಂಗಭೇದ ನಿರಸನ ರಗಳೆಗಳು – ಪ್ರಸ್ತಾವನೆ ಸಂ ಗುರುಪಾದ ಮರಿಗುದ್ದಿ, ಪು.ಸ. ೨೯

ಆದರ್ಶವಾಗಬೇಕು. ಜೈನಧರ್ಮ ಮತಾವಲಂಬಿಗಳ ಎದುರು ಶೈವಧರ್ಮೀಯರ ಗೆಲುವನ್ನು ಸಾಧಿಸಿರುವ ಹರಿಹರ ಶೈವಧರ್ಮವೇ ಶ್ರೇಷ್ಠ ಎಂದು ಸಾರಿರುವ ಅಂಶವೂ ಗಮನಾರ್ಹ.

## ೮. ಆನಾಯನಾರರ ರಗಳೆ :-

ಚೋಳನಾಡಿನ ಮಂಗಳವೆನಿಸ ಪಟ್ಟಣದಲ್ಲಿ ಆನಾಯನಾರನೆಂಬ ಶಿವಭಕ್ತನಿದ್ದನು. ದಿನನಿತ್ಯ ಪಂಚಾಕ್ಷರಿಯನ್ನು ತನು-ಮನದಲ್ಲಿ ಧ್ಯಾನ ಮಾಡುತ್ತಾ ಶಿವಭಕ್ತಿಯನ್ನು ಮೆರೆದ ಇವನು ಪಟ್ಟಣದ ಗೋವುಗಳನ್ನು ಕಾಡಿನಲ್ಲಿ ಮೇಯಿಸಿಕೊಂಡು ಬರುವ ವೃತ್ತಿಯಲ್ಲಿ ನಿರತನಾಗಿದ್ದನು. ಇತ್ತ ಗೋರೂಪ ತಳೆದ ಋಷಿಗಳು ಊರಗೋವುಗಳಾಗಿ ಮೇಯಲು ಆನಾಯನಾರನೊಂದಿಗೆ ಹೋಗುತ್ತಿದ್ದವು. ಈ ಕಡೆ ಗೋವುಗಳು ಮೇಯುತ್ತಿರಲು ತನ್ನ ಬಳಿಯಿದ್ದ ಕೊಳಲಿನಿಂದ ಪಂಚಾಕ್ಷರಿ ಮಂತ್ರವನ್ನು ಉನ್ಮಾದದಿಂದ ಊದುತ್ತಿದ್ದರೆ ಸಕಲ ಪ್ರಾಣಿ ವರ್ಗಗಳು ಕಿವಿಯಾರೆ ಕೇಳುತ್ತಿದ್ದವು. ಅಷ್ಟೇ ಅಲ್ಲದೆ ಆ ನಾದವೂ ಕೈಲಾಸದ ಶಿವನನ್ನು ಸೋಲಿಸುತ್ತಿತ್ತು. ಹಲವು ವರ್ಷಗಳ ಬಳಿಕ ಹೂವನ್ನು ಬಿಟ್ಟಿದ್ದ ಸುಂದರವಾದ ಗಿಡದಲ್ಲಿ ಬಂದು ಶಿವನು ಲೀನವಾದನು.

ಎಂದಿನಂತೆ ಶಿವಾರ್ಚನೆಗೈದು ಗೋವುಗಳನ್ನು ಮೇಯಿಸಲು ಬಂದ ಶಿವಭಕ್ತನು ಗಿಡವನ್ನು ಕಂಡು ಸಂತೋಷಿಸಿ ಶಿವನ ರೂಪವೇ ಮೂಡಿನಿಂತಂತಿದೆ ಎಂದು ತನ್ಮಯಭಾವದಿಂದ ಪಂಚಾಕ್ಷರಿ ನಾದವನ್ನು ಮನಬಲಿದಂತೆ ಊದುತ್ತ ನಿಂತನು. ಅವನ ಭಾವದಲ್ಲಿ ಶಿವರೂಪ ಸ್ಥಿರಗೊಂಡಂತೆ ಆಯಿತು. ಕ್ಷಣಮಾತ್ರದಲ್ಲಿ ಕಣ್ಣು ಬಿಟ್ಟು ನೋಡಿದಾಗ ಶಿವನು ಕಣ್ಮುಂದೆ ಬಂದು ಒಬ್ಬ ತಂದೆಯು ಮಗನನ್ನು ಕರೆಯುವಂತೆ "ಬಾ ಮಗನೆ, ಬಾ ಮಗನೆ" ನಿನ್ನ ನಾದ ನನ್ನನ್ನು ಕೈಲಾಸ ಬಿಟ್ಟು ಬರುವಂತೆ ಮಾಡಿತು ಎಂದು ಬಿಗಿದಪ್ಪಿದನು. ಈ ಶಿವಭಕ್ತನ ಸಂಗದಿಂದ ಗೋಜನ್ಮ ಕಳೆದು ಮತ್ತೆ ಋಷಿಗಳಾದ ಅವರ ಜನ್ಮ ಸಾರ್ಥಕವಾಯಿತು ಎಂದು ಹರ್ಷಗೊಂಡು ಅವನಿಗೆ ಅಭಯವನ್ನಿತ್ತ ಶಿವನು ಆನಾಯನಾರನನ್ನು ಕೈಲಾಸಕ್ಕೆ ಕರೆದೊಯ್ದು ಅವನ ಭಕ್ತಿಯೊಲುಮೆಯನ್ನು ಸಾರಿ ಗಣಪದವಿಯನ್ನು ನೀಡಿದನು.

ತಂದೆ ಮಗನನ್ನು ಪ್ರೀತಿಸುವಂತೆ ಶಿವನು ಈ ಶಿವಭಕ್ತನನ್ನು ಬಹಳ ಒಲುಮೆಯಿಂದ ಕಂಡನು. ತನ್ನ ಕಲೆಯಲ್ಲಿಯೇ ಶಿವನನ್ನು ಒಲಿಸಿಕೊಂಡ ಈ ಸದ್ಭಕ್ತನು ಶಿವನಿಗೆ ಪ್ರಿಯವಾಗುವವನು. ಸಜ್ಜನರ ಸಹವಾಸ ಹೆಜ್ಜೇನು ಸವಿದಂತೆ ಎಂಬ ಸರ್ವಜ್ಞನ ನುಡಿಯಂತೆ

ಇಲ್ಲಿಯ ಋಷಿಗಳು ಗೋರೂಪ ಪಡೆದು ಆನಾಯನಾರರ ಜೊತೆಗಿನ ವಾಸದಿಂದ ತಮ್ಮ ಜೀವನವೂ ಸಾರ್ಥಕವಾಯಿತೆಂದು ಭಾವಿಸಿದರು. ಸದ್ಭಕ್ತಿ, ಸದ್ಭಾವ, ಸಜ್ಜನಿಕೆಯ ಸಹವಾಸದಿಂದ ಎಲ್ಲೆಡೆ ನಿರ್ಮಲ ಪರಿಸರ ಉಂಟಾಗುವುದು ಎಂಬುದಕ್ಕೆ ಈ ಭಕ್ತನ ಕಥೆಯೇ ಸಾಕ್ಷಿ, ನಮ್ಮ ಕಲೆಯಲ್ಲೂ ಭಗವಂತನ ಇರುವಿಕೆಯಿದೆ ಅದನ್ನು ನೆಚ್ಚಿ ಬದುಕಿದರೆ ಬದುಕು ಸಾರ್ಥಕವಾಗುತ್ತದೆ. ಅಂತೆಯೇ ಇಲ್ಲಿ ಶಿವ ಮತ್ತು ಆನಾಯನಾರರ ನಡುವೆ ತಂದೆ ಮತ್ತು ಮಗನ ಸಂಬಂಧದ ಬಾಂಧವ್ಯನೆಲೆಯು ಭಕ್ತಿಯು ವಿಶೇಷವೆನಿಸಿದೆ.

೫. <u>ಅಮ್ಮವ್ವೆಯ ರಗಳೆ :-</u>

ಬಿಜಾವರದ ಶಂಕರ ಬಾಗೀರಥಿ ದಂಪತಿಗಳು ಶಿವನಲ್ಲಿ ವರಕೇಳಪಡೆದ ಅಮ್ಮವ್ವೆ, ಶಿವಪೂಜೆಯಲ್ಲಿ ಗಾಢವಾದ ಆಸಕ್ತಿ ಬೆಳಸಿಕೊಂಡು ಬೆಳೆದ ಕನ್ಯೆ. ಮದುವೆಯಾದ ಕೆಲದಿನಗಳಲ್ಲಿ ಗಂಡನನ್ನು ಕಳೆದುಕೊಂಡು ವಿಧವೆಯಾಗಿರುತ್ತಾಳೆ. ಒಂದು ದಿನ ಮನೆಗೆ ಬಂದ ಜಂಗಮನ ಬಳಿ ಶಿವ ಎಂದರೆ ಯಾರು ? ಅವನು ಎಲ್ಲಿರುವನು ? ಅವನ ಸ್ವರೂಪವನ್ನು ಕುರಿತಾದ ಮುಗ್ಧ ಪ್ರಶ್ನೆಗಳನ್ನು ಕೇಳದಳು. ಹೆತ್ತವರಿಲ್ಲದೆ, ಮನೆಮಠವಿಲ್ಲದೆ ಸ್ಮಶಾನ ಕಾಯುವ ರುದ್ರ ಅವನು ಎಂದು ತಿಳಿಸಿದ ಜಂಗಮನ ಉತ್ತರ ಅವಳನ್ನು ತಬ್ಬಿಬ್ಬುಗೊಳಿಸಿತು. ಶಿವನು ದಿಕ್ಕಿಲ್ಲದ ಪರದೇಶಿಯೇ ಎಂದು ತೀವ್ರ ದುಃಖಿಸುತ್ತಾಳೆ. ಆದ್ದರಿಂದ ಶಿವನನ್ನು ಮಗುವಾಗಿ ಪಡೆಯಬೇಕೆಂಬ ಹಂಬಲ ವ್ಯಕ್ತಪಡಿಸಿ, ಮಗುವನ್ನು ಪೋಷಿಸಿ ಆರೈಕೆ ಮಾಡಬೇಕೆಂದು ಮನದಲ್ಲೇ ಶಿವನನ್ನು ಧ್ಯಾನಿಸುತ್ತಾಳೆ. ಇವಳ ಪ್ರಾರ್ಥನೆಗೆ ಓಗೊಟ್ಟ ಶಿವನು ಅನಾಥ ಮಗುವಾಗಿ ಕಾಡಿನಲ್ಲಿ ಅಮ್ಮವ್ವೆಗೆ ದೊರೆಯುತ್ತದೆ. ಅಂದಿನ ಅದರ ಆಟ-ಪಾಠಗಳನ್ನು ಸಂತಸ ಸಡಗರದಿಂದ ನೋಡಿ ಅದರ ಪಾಲನೆಯಲ್ಲೇ ದಿನಕಳೆಯುವ ಅಮ್ಮವ್ವೆಗೆ ಶಿವನು ಒಮ್ಮೆ ಭಕ್ತಿ ಪರೀಕ್ಷೆ ಮಾಡುವ ಸಲುವಾಗಿ ತೊಟ್ಟಿಲಲ್ಲಿ ಮಲಗಿದ ಮಗುವಿನ ಕೈಕಾಲು ನಡುಗಿ, ಕಣ್ಣುಗಳು ಬಿಳುಪೇರಿ, ಮೈಬೆವೆತು ಒದ್ದಾಡುತ್ತದೆ. ಮಗುವಿನ ಸ್ಥಿತಿಗೆ ಹೆದರಿ ಅದರ ಸಾವಿಗೆ ಮುನ್ನವೇ ತಾನೇ ಪ್ರಾಣಬಿಡುವ ನಿರ್ಧಾರಕ್ಕೆ ಬಂದು ಕುತ್ತಿಗೆಯನ್ನು ಕೊಯ್ದುಕೊಳ್ಳಲು ಮುಂದಾಗುವಳು. ಅವಳ ಮಾತೃಪ್ರೇಮ ಶಿವಭಕ್ತಿಗೆ ಮೆಚ್ಚಿ ತೊಟ್ಟಿಲೊಳಗಿಂದ ಶಿವನು ಎದ್ದು ಅವಳನ್ನು ತಡೆದು ವರಕೇಳೆಂದಾಗ "ಮಗುವಾಗಿ ನೀನು ಸುಖವಾಗಿರು" ಎಂದು ಅವಳ ಹಿತಭಕ್ತಿಗೆ ಅಚ್ಚರಿಪಟ್ಟು ಗಣಪದವಿ ನೀಡಿ ಅವಳನ್ನು ತನ್ನ ತಾಯಿಯೆಂದೇ ಭಾವಿಸುತ್ತಾನೆ.

ನಮ್ಮ ಸಮಾಜದಲ್ಲಿ ಆದಿಕಾಲದಿಂದಲೂ ಹೆಣ್ಣನ್ನು ಅತ್ಯಂತ ಕೀಳಾಗಿ ನೋಡುವ ಪ್ರಸ್ತಾಪವಿದೆ. ಮಧ್ಯಕಾಲೀನ ಸಂದರ್ಭದಲ್ಲಿ ಗಂಡನನ್ನು ಕಳೆದುಕೊಂಡ ಹೆಣ್ಣು ಸಹದಮನ ಪದ್ಧತಿಯಡಿಯಲ್ಲಿ ಜೀವಂತ ಶವವಾಗುತ್ತಿದ್ದಳು. ಇಲ್ಲವೆ ಸಾಂಪ್ರದಾಯಿಕ ಪದ್ಧತಿಯಂತೆ ತಲೆಬೋಳಿಸಿ ವಿಕಾರರೂಪಗೊಳಿಸಿ ಅವಳನ್ನು ಸೌಭಾಗ್ಯ ಹೀನಗೊಳಿಸಿ ಶುಭಕಾರ್ಯಗಳಿಂದ ದೂರ ಉಳಿಯುವಂತೆ ಮಾಡುವ ಅಂತಹ ಸಮಾಜದಲ್ಲಿ ಹರಿಹರನು ತನ್ನ ಕೃತಿಯಲ್ಲಿ

(೧) ವಿಧವೆಯೊಬ್ಬಳ ಶಿವಭಕ್ತಿಗೆ ಮೆಚ್ಚಿ ಗಣಪದವಿಯನ್ನು ಪಡೆದ ಕಥೆಯನ್ನು ಹೇಳುವುದರ ಮೂಲಕ ಸಮಾಜದಲ್ಲಿ ಕಡೆಗಣಿಸಲ್ಪಟ್ಟಿದ್ದ ವಿಧವೆಯರ ಪಾಲಿಗೆ ಅಂತಃಕರಣ ಬೀರುವಂತಹ ಕಥೆಯಾಗಿದೆ.

(೨) ವಿಧವೆಯೊಬ್ಬಳು ಕಥಾನಾಯಕಿಯಾಗುವಂತಹ ಅವಕಾಶ ಅಲ್ಲಿಯವರೆಗೂ ಯಾವ ಕೃತಿಗೂ ಸಾಧ್ಯವಾಗಿರಲಿಲ್ಲ. ಅದನ್ನು ಸಾಧ್ಯಗೊಳಿಸಿರುವ ಹರಿಹರ ಕವಿಯು ಇಂಥವರ ಪಾಲಿಗೆ ಕರುಣಾನಿಧಿಯೇ ಆಗಿದ್ದಾನೆ.

(೩) ಸಮಾಜದಿಂದ ತಿರಸ್ಕರಿಸಲ್ಪಟ್ಟ ವಿಧವೆಹೆಣ್ಣಿನ ಭಕ್ತಿ ಶಿವನಿಂದ ಪುರಸ್ಕರಿಸಲ್ಪಟ್ಟ ಈ ಕಥೆ ವಿಧವೆಯರಿಗೂ ವರದಾನವಾಗಿದೆ. ಹಾಗಾಗಿ ಗಂಡ ಸತ್ತಬಳಿಕ ವಿಧವೆಯರು ಸಾಯುವ ಬದಲು ಕೈಲಾಸ ಸೇರಿಕೊಳ್ಳುವ ಇಂಥ ಕಥೆಗಳನ್ನು ಮೆಚ್ಚಿ ವಿಧವೆಯರ ಸ್ಥಾನಮಾನ ಹೆಚ್ಚಿಸುವ ಜೊತೆಗೆ ಅವರು ಕಳಂಕಹೀನರಲ್ಲ ಎಂದು ಸಾಬೀತು ಪಡಿಸುತ್ತದೆ. ಬಂಜೆ ಮತ್ತು ವಿಧವೆಯಾದ ಅಮ್ಮವ್ವೆಯು ಶಿವನನ್ನು ಮಗುವಂತೆ ಉಪಚರಿಸಿ ಮಾತೃವಾತ್ಸಲ್ಯವನ್ನು ತೋರುವ ಶಿವಭಕ್ತಿಯ ಭರ ಶ್ರೇಷ್ಠವಾದುದು.

(೪) ವಿಧವೆಯರೂ ಶಿವಭಕ್ತರಾಗುವ ಅವಕಾಶವಿದೆ ಹಾಗು ಶಿವನೇ ಅಂತಹವಳ ಮಗನಾಗಿ ಬಂದಿದ್ದಾನೆ ಎಂದ ಮೇಲೆ ಇತರರು ಅಂತಹವರನ್ನು ಗೌರವಿಸಲೇಬೇಕು ಎಂಬ ಸಾರ್ವಕಾಲಿಕ ಸತ್ಯ ಎದ್ದು ಕಾಣುತ್ತದೆ.

(೫) ಇಂದಿಗೂ ನಮ್ಮ ಸಮಾಜದಲ್ಲಿ ಮೂದಲಿಕೆಗೆ ಒಳಗಾಗುವ ಬಂಜೆಯರು ಬೇಸತ್ತು ದಿಕ್ಕುಕಾಣದೆ ಎಷ್ಟೋ ಮಂದಿ ಬದುಕನ್ನು ನಿರಾಕರಿಸಿ ಆತ್ಮಹತ್ಯೆಗೆ ಶರಣಾಗುವುದು ವರದಿಯಾಗುತ್ತಿರುತ್ತದೆ. ಅಂತಹುದರಲ್ಲಿ ಕಾಡಿನಲ್ಲಿ ಅನಾಥವಾಗಿ ದೊರೆತ ಮಗುವನ್ನು ಶಿವನೆಂದೇ ಭಾವಿಸಿ ಪ್ರೀತಿವಾತ್ಸಲ್ಯದಿಂದ ಸಾಕುವ ಮಾತೃಹೃದಯ ಶ್ರೀಮಂತಿಕೆಯನ್ನು ಮೆರೆಯುವ ಅಮ್ಮವ್ವೆ, ಬದುಕನ್ನು ಸ್ವೀಕರಿಸುವ ಮತ್ತು

ಜಗತ್ತನ್ನು ಎದುರಿಸುವ ಛಲಗಾರಿಕೆ ಧೃಡವಾದ ಛಲಗಾರಿಕೆ ಸರ್ವಕಾಲಕ್ಕೂ ಸಲ್ಲುವಂತಹುದು.

(೬) ಇಲ್ಲಿ ಶಿವಭಕ್ತೆಯಾದ ಅಮ್ಮವ್ವೆ ಮತ್ತು ಶಿವನ ನಡುವೆ ತಾಯಿ ಹಾಗು ಮಗನ ಸಂಬಂಧವಿದೆ. ಅವಳ ಮಾತೃಪ್ರೇಮ ಹಿತವಾದುದು. ಹರಿಹರನು ಭಕ್ತ ಮತ್ತು ಶಿವನ ಸಂಬಂಧದ ನೆಲೆಯನ್ನು ತಾಯಿ ಮತ್ತು ಮಗನ ಸಂಬಂಧದ ಬಾಂಧವ್ಯಕ್ಕೆ ಪೋಣಿಸುವ ಮೂಲಕ ಶಿವಭಕ್ತಿಯನ್ನು ಗಟ್ಟಿಗೊಳಿಸುವ ಪ್ರಯತ್ನವನ್ನು ಮಾಡಿದ್ದಾನೆ.

ಹೀಗೆ ಸಮಾಜದಲ್ಲಿ ನಿರಾಕರಣೆಗೆ ಒಳಗಾಗಿರುವ ಬಂಜೆಯರು. ವಿಧವೆಯರಿಗೆ ತನ್ನ ರಗಳೆಯಲ್ಲಿ ವಿಶೇಷ ಸ್ಥಾನ ನೀಡಿರುವ ಹರಿಹರ ಇಂತಹ ವರ್ಗವನ್ನು ಶಿವಭಕ್ತಿಯ ಕಡೆಗೆ ಸೆಳೆಯುವ ಹಾಗು ಬದುಕಿನಲ್ಲಿ ಆತ್ಮಸ್ಥೈರ್ಯ ತುಂಬುವ ಕೆಲಸ ಮಾಡಿರುವುದು ಗಮನಾರ್ಹ.

## ೬. ಹಾವಿನಹಾಳ ಕಲ್ಲಯ್ಯನ ರಗಳೆ :-

ಹಾವಿನಾಳ ಎಂಬ ಶಿವಪುರದಲ್ಲಿ ಶಿವನೋಜ ಸೋಮವ್ವೆ ಎಂಬ ದಂಪತಿಗಳು ಕಲ್ಲಿನಾಥನ ವರಪ್ರಸಾದದಿಂದ ಹುಟ್ಟಿದ ಮಗನಿಗೆ ಕಲ್ಲಿನಾಥ ಎಂದು ಹೆಸರಿಟ್ಟರು. ಈ ಮಗುವಿಗೆ ಕಲ್ಲಿನಾಥನೇ ಸರ್ವಸ್ವವೆನಿಸಿ ದಿನನಿತ್ಯ ಶಿವಭಕ್ತಿಯಲ್ಲಿ ತೊಡಗಿದನು. ಕಾಯಕವಿಲ್ಲದೆ ಶಿವಮೆಚ್ಚುವುದಿಲ್ಲ. ಮಾಡುವ ಕಾರ್ಯಬಿಟ್ಟು ಸದಾ ಶಿವನ ಧ್ಯಾನದಲ್ಲಿರುವೆಯಲ್ಲಾ ಎಂದು ಕಲ್ಲಯ್ಯನಿಗೆ ಬೈದು, ಬಡಿದನು. ಇದರಿಂದ ಕೋಪಗೊಂಡ ಕಲ್ಲಯ್ಯ, ಕಲ್ಲಿನಾಥನಾದ ಭವದ ತಂದೆ ನೀನಿರಲು ಅವರೇಕೆ ನನ್ನನ್ನು ಬಡಿಯುವರು ಕಠಾರಿಯಿಂದ ತನ್ನ ಹೊಟ್ಟೆ ಕೊಯ್ದುಕೊಂಡು ಕರುಳುಗಳನ್ನು ತೆಗೆದುಕೊಂಡು ಶಿವಲಿಂಗಕ್ಕೆ ಸುತ್ತಿ ಭಕ್ತಿ ಮೆರೆದನು. ಅವನು ಮೂರ್ಛೆಸ್ಥಿತಿಯಲ್ಲಿ ಬಿದ್ದಿರುವುದನ್ನು ಕಂಡು ಊರವರು ಉಪಚರಿಸಿದರು. ಅಂದಿನಿಂದ ಶಿವನ ಆಜ್ಞೆಯಲ್ಲಿ ಸೊನ್ನಲಿಗೆ ಸಿದ್ಧರಾಮನ ಬಳಿ ಸ್ನೇಹ ಸಂಪಾದಿಸಿ, ಶಿವಪೂಜೆಯಲ್ಲಿ ತನ್ಮಯರಾದರು. ಶಿವಗೀತೆಯನ್ನು ರಾಗದಿಂದ ಹಾಡುವ ಶಿವಭಕ್ತೆಯೋರ್ವಳನ್ನು ಮದುವೆಮಾಡಿಕೊಂಡು ಕಲ್ಲವ್ವೆ ಎಂಬ ಮಗಳನ್ನು ಪಡೆದನು. ಸಿದ್ಧರಾಮನು ಗುಹಾಪ್ರವೇಶ ಮಾಡಬೇಕೆಂದು ನಿರ್ಧರಿಸಿ, ಅದಕ್ಕೆ ಕಲ್ಲಯ್ಯನ ಸ್ನೇಹ ಅಡ್ಡಿ ಬರುವುದೆಂದು ಕಳೆದುಹೋದ ಕುದುರೆಯನ್ನು ಹುಡುಕಿ ತರಬೇಕೆಂದು ಕೆಲಸವಹಿಸಿ ಗುಹೆಯನ್ನು ಪ್ರವೇಶಿಸಿದರು. ಇತ್ತ ಶಿವಪೂಜೆಗೆ ನೀರು ತರಲು ಹೋಗಿದ್ದ ಕಲ್ಲವ್ವೆಯನ್ನು ಬ್ರಾಹ್ಮಣನೊಬ್ಬ ಮುಟ್ಟಿದನೆಂದು, ಮೈಲಿಗೆಯಾಯಿತೆಂದು ಕೊಡ ಒಡೆದು ಮನೆಗೆ ಬರಿಗೈಯಲ್ಲಿ

ವಾಪಸ್ಸಾದಳು. ಇದನ್ನು ಬಂದು ಪ್ರಶ್ನಿಸಿದ ಬ್ರಾಹ್ಮಣನ ಅಹಂಕಾರ ಮುರಿಯಲೆಂದು ಕಲ್ಲಯ್ಯ ಶಪಥ ತೊಟ್ಟು ಶಿವಭಕ್ತನ ಮನೆಯ ನಾಯಿಯ ಬಾಯಿಂದ ವೇದಮಂತ್ರ ಪಠಣ ಮಾಡಿಸಿದನು. ಶಿವಭಕ್ತರ ಮನೆಯ ನಾಯಿಯೂ ವಿಪ್ರರನ್ನು ಮುಟ್ಟಿಸಿಕೊಳ್ಳುವುದಿಲ್ಲ ಎಂದು ಅವರ ಸೊಕ್ಕನ್ನಡಗಿಸುವಂತೆ ಮಾಡಿದನು. ಇದನ್ನೆಲ್ಲಾ ಆಶ್ಚರ್ಯದಿಂದ ಗಮನಿಸಿದ ವಿಪ್ರರು ಕಲ್ಲಯ್ಯನ ಶಿವಭಕ್ತಿಯ ಎದುರು ಸೋತು ನಿಂತರು. ಕಲ್ಲಯ್ಯನ ಶಿವಭಕ್ತಿಗೆ ಮೆಚ್ಚಿದ ಶಿವನು ಕೈಲಾಸಕ್ಕೆ ಕರೆತಂದು ಗಣಪದವಿ ನೀಡಿ ಹರಿಸಿದನು.

ಜಗದೊಡೆಯ ಶಿವನನ್ನು ತನ್ನ ತಂದೆ-ತಾಯಿಯೆಂದು ಪರಿಭಾವಿಸುವ ಕಲ್ಲಯ್ಯನಿಗೆ ಭಕ್ತಿಯಲ್ಲಿ ನಿಷ್ಠೆ ಮತ್ತು ಛಲ ಇತ್ತು ವೇದೋಪನಿಷತ್ತುಗಳು ತಮಗೇ ಮಾತ್ರ ಗೊತ್ತಿರುವುದು ಎಂಬ ಅಹಂನಿಂದ ಮೆರೆಯುತ್ತಿದ್ದ ಬ್ರಾಹ್ಮಣರ ಸೊಕ್ಕನ್ನು ಮುರಿದಿದ್ದಾನೆ. ಮಂತ್ರಗಳು ಶಿವಭಕ್ತರ ಮನೆಯ ನಾಯಿಯ ಬಾಯಿಯಿಂದ ಹೇಳಿಸುವ ಮೂಲಕ ಅವರನ್ನು ಕುನ್ನಿಗಳನ್ನಾಗಿ ಕಾಣುವ ಪ್ರಯತ್ನ ಇಲ್ಲಿದೆ. ಸಮಾಜದ ಎಲ್ಲರನ್ನು ತಾತ್ಸರದಿಂದ ಕಾಣುವ ಆ ವಿಪ್ರರರ ಸ್ಪರ್ಶವೇ ಮೈಲಿಗೆ ಎಂದು ಭಾವಿಸಿ ಅವರನ್ನು ಮೂಲೆಗುಂಪು ಮಾಡುವ ಶಕ್ತಿ ಏನಿದ್ದರೂ ಶಿವಭಕ್ತರಿಗೆ ಮಾತ್ರವಿದೆ ಎಂದು ಈ ರಗಳೆ ಅರ್ಥೈಸುತ್ತದೆ. ಬ್ರಾಹ್ಮಣರ ಅಟ್ಟಹಾಸ ಮುರಿಯಲು ವೀರಶೈವ ಧರ್ಮಕ್ಕೆ ಸೇರಲು ಧಾರ್ಮಿಕ ಪ್ರಚೋದನೆಯನ್ನು ಇಲ್ಲಿ ನೀಡಲಾಗಿದೆ. ಜಾತಿಪದ್ಧತಿಯ ವಿರುದ್ಧ ಹೋರಾಟವನ್ನು ಮಾಡಿರುವ ಕಲ್ಲಯ್ಯನು ಶೋಷಕರಿಗೆ ತಿರುಗೇಟು ನೀಡಿದ್ದಾನೆ. ಒಟ್ಟಾರೆ ಈ ಕಥೆಯಲ್ಲಿ

(i) ಶಿವಭಕ್ತಿಯ ಮುಂದೆ ಸಂಪತ್ತು, ಅಧಿಕಾರ, ಶ್ರೇಷ್ಠತೆ ಎಂಬುದೆಲ್ಲಾ ಶೂನ್ಯ ಎಂದು ಭಾವಿಸಿ ವ್ಯವಸ್ಥೆಯನ್ನು ಧಿಕ್ಕರಿಸುವ ನೇರನಡೆ ಗಮನಾರ್ಹ.

(ii) ಶಿವಭಕ್ತಿಯಿಲ್ಲದ ಯಾರೇ ಆಗಲಿ, ತಂದೆಯಾದರೂ ಸರಿ, ಭವಿ ಎಂದು ತೀರ್ಮಾನಿಸಿ ಆತನ ಮಾತನ್ನು ಧಿಕ್ಕರಿಸುವ ಕಲ್ಲಯ್ಯನಿಗೆ ಜಗದೊಡೆಯ ಶಿವನೇ ತನ್ನ ತಂದೆಯೆಂದು ಭಾವಿಸುತ್ತಾನೆ. ಅಂತೆಯೇ ಶಿವನು ಕಲ್ಲಯ್ಯನನ್ನು ತನ್ನ ಮಗನಂತೆ ತಿಳಿದು ಪ್ರೀತಿಯಿಂದ ಕಂಡು ಅವನಿಗೆ ಶಿವಸಾಕ್ಷಾತ್ಕಾರ ನೀಡುತ್ತಾನೆ ಶಿವಭಕ್ತಿಯಲ್ಲಿ ಈ ರೀತಿಯ ಕೌಟುಂಬಿಕ ವಾತ್ಸಲ್ಯಭಾವ ಶಿವ-ಭಕ್ತರ ಸಂಬಂಧವನ್ನು ಮತ್ತಷ್ಟೂ ಗಟ್ಟಿಗೊಳಿಸುತ್ತದೆ.

## ೭. ಧಕ್ಷಾಧ್ವರ ರಗಳೆ :-

ರಜತಗಿರಿಯಲ್ಲಿ ಶಿವನು ಒಡ್ಡೋಲಗದಲ್ಲಿ ದಾಕ್ಷಾಯಿಣಿದೇವಿ ಹಾಗೂ ಸಕಲ ಗಣಾಧರರೊಂದಿಗೆ ಕುಳಿತು ವೈಭೋವೊಪೇತ ಗಾನ, ನಾಟ್ಯ ಸುಧೆಯನ್ನು ಅನುಭವಿಸುತ್ತಿದ್ದನು. ಆ ಸಂದರ್ಭದಲ್ಲಿ ಅಲ್ಲಿಗೆ ಹಠಾತ್ತಾಗಿ ಆಗಮಿಸಿದ ದಕ್ಷರಾಜನು ಯಾರೂ ತನ್ನ ಕಡೆಗೆ ಲಕ್ಷ್ಯವೀಯಲಿಲ್ಲ, ನನ್ನನ್ನು ಸ್ವಾಗತಿಸದೆ, ನಮಸ್ಕರಿಸದೆ ಅವಮಾನ ಪಡಿಸಿದರು ಎಂದು ಮುನಿದು ತನ್ನ ಮನೆಗೆ ತೆರಳಿದನು. ಪ್ರತಿಕಾರ ತೀರಿಸಿಕೊಳ್ಳಬೇಕೆಂದು ದಕ್ಷಯಾಗವನ್ನು ಮಾಡಿ ಸರ್ವರನ್ನೂ ಆಹ್ವಾನಿಸಿ ಶಿವನನ್ನು ಮಾತ್ರ ಕರೆಸಿರಲಿಲ್ಲ. ಆದರೆ ದಕ್ಷರಾಜನ ಮಗಳಾದ ತನಗೆ ಆಹ್ವಾನದ ಅವಶ್ಯಕತೆ ಇಲ್ಲ ಎಂದು ವಾದಿಸಿ ನಂದೀಶನೊಂದಿಗೆ ಯಾಗ ಸ್ಥಳಕ್ಕೆ ಹೋಗಿ ಬರುವುದಾಗಿ ಶಿವನಲ್ಲಿ ನಿವೇದಿಸಿ ದಾಕ್ಷಾಯಿಣಿದೇವಿ ಹೊರಡುತ್ತಾಳೆ. ಯಾಗ ಸ್ಥಳದಲ್ಲಿ ಪತಿನಿಂದನೆಯನ್ನು ಮಾಡಿದ ತನ್ನ ತಂದೆಯ ಮಾತುಗಳಿಂದ ತನ್ನ ಪಾತಿವ್ರತ್ಯಕ್ಕೆ ಧಕ್ಕೆ ಒದಗಿತು. ಇವನ್ನೆಲ್ಲಾ ಕೇಳಿ ಇನ್ನು ಇರಲಾರೆ, ಮತ್ತೊಂದು ಜನ್ಮದಲ್ಲಿ ಹುಟ್ಟಿ ಶಿವನನ್ನೇ ಕೈಹಿಡಿಯುವುದಾಗಿ ಪ್ರತಿಜ್ಞೆಮಾಡಿ ದಕ್ಷಯಜ್ಞದಲ್ಲಿಯೇ ಹಾರುತ್ತಾಳೆ. ಈ ಎಲ್ಲಾ ಸನ್ನಿವೇಶವನ್ನು ನಂದೀಶನು ಶಿವನಿಗೆ ತಿಳಿಸಿದೊಡನೆಯೇ ಕೋಪಾವೇಶದಿಂದ ರುದ್ರನರ್ತನ ಮಾಡಿದ ಶಿವನ ಹಣೆಗಣ್ಣಿನ ಮುಖಾಂತರ ವೀರಭದ್ರಸ್ವಾಮಿ ಜನನವಾಯಿತು. ಜಗತ್ತೇ ನಡುಗುವ ಹಾಗೆ ದಕ್ಷಯಾಗ ಸ್ಥಳಕ್ಕೆ ಧಾವಿಸಿ ಎಲ್ಲವನ್ನೂ ನಾಶಮಾಡಿ ದಕ್ಷರಾಜನ ಶಿರಕಡಿದು ಹಾಕಿದನು. ಆದರೆ ಅವನ ಹೆಂಡತಿಯು ಶಿವನಲ್ಲಿ ಕ್ಷಮೆಯಾಚಿಸಿದ್ದರಿಂದ ಅವನ ದೇಹಕ್ಕೆ ಕುರಿತಲೆಯನ್ನು ಇಟ್ಟು ಜೀವಬರಿಸಿದನು. ಕ್ಷಮೆ ಕೋರಿದ ದಕ್ಷನನ್ನು ಮನ್ನಿಸಿ, ವೀರಭದ್ರಸ್ವಾಮಿಯ ಸಾಹಸಕಾರ್ಯವನ್ನು ಕೊಂಡಾಡಿ ಶಿವನು ಅಪ್ಪಿ ಮುದ್ದಾಡಿದನು.

ಇಲ್ಲಿ ವೀರಭದ್ರಸ್ವಾಮಿ ಶಿವನ ಮಗನಂತೆ, ಶಿವನು ನಿಯೋಜಿಸಿದ ಕಾರ್ಯವನ್ನು ಕ್ಷಣಮಾತ್ರದಲ್ಲಿ ಪೂರೈಸಿ ಬಂದು ಅವನ ಮೆಚ್ಚುಗೆಯನ್ನು ಸಂಪಾದಿಸಿದ ಈ ಕಥೆಯು ಜನಜನಿತವಾಗಿದೆ. ಆದ್ದರಿಂದ ವೀರಭದ್ರ ಸ್ವಾಮಿಯು ಇಂದಿಗೂ ಪೂಜಾರ್ಹನಾಗಿರುತ್ತಾನೆ. ಸತ್ಯ, ನಿಷ್ಠೆ ನ್ಯಾಯದಲ್ಲಿ ನಡೆಯುವವರಿಗೆ ವೀರಭದ್ರಸ್ವಾಮಿಯೂ ರಕ್ಷಕನಾಗಿಯೂ ಅನ್ಯಾಯ, ಮೋಸ ಮಾಡುವವರಿಗೆ ಶಿಕ್ಷಕನಂತೆಯೂ ಪ್ರಸ್ತುತ ಸಮಾಜದಲ್ಲಿ ಈತನ ಪವಾಡ ಮೆರೆದಿದೆ. ಎಷ್ಟೋ

ಊರು ಮತ್ತು ಕುಲಗಳ ಆರಾಧ್ಯದೈವನಾಗಿದ್ದಾನೆ. ಇಂಥ ಧಾರ್ಮಿಕ ಪವಾಡದ ಕಥೆಗಳು ಜನಮನದಲ್ಲಿ ಭಯ ಭಕ್ತಿಯನ್ನು ಮೂಡಿಸುವುದು ನಿಸ್ಸಂಶಯವಾಗಿದೆ.

### ೮. ಮಹಾದೇವಿಯಕ್ಕನ ರಗಳೆ :-

ಉಡುತಡಿಯಲ್ಲಿ ಶ್ರೇಷ್ಠ ಶಿವಭಕ್ತರಾದ ಶಿವಭಕ್ತ-ಶಿವಭಕ್ತೆಯೆಂಬ ದಂಪತಿಗಳಿಗೆ ಮಕ್ಕಳಿಲ್ಲದ ಕೊರಗಿನಿಂದ ಪಾರ್ವತಿಯ ಸನ್ನಿಧಾನದಲ್ಲಿ ನಿಂತು ಓರ್ವ ಸುಪುತ್ರಿಯನ್ನು ಕರುಣಿಸಬೇಕೆಂದು ಮೊರೆಹೋದರು. ಅದಾಗಲೇ ಕೈಲಾಸದಲ್ಲಿ ಗುಪ್ತಗಣನಾದ ಶಿವ ಭಕ್ತನೊಬ್ಬನನ್ನು ಭವಿಯೆಂದು ನಿಂದಿಸಿದ ರುದ್ರಕನ್ನಿಕೆಗೆ ಪಾರ್ವತಿಯು ಶಾಪವಾಗಿ ಭೂಲೋಕದಲ್ಲಿ ಶಿವಭಕ್ತರಿಗೆ ಮಗಳಾಗಿ ಹುಟ್ಟಿ, ಅಪಾರ ಜ್ಞಾನ, ಯೋಗ ಸಂಪತ್ತಿನಿಂದ ಕೂಡಿದ ಶಿವಭಕ್ತೆಯುಕ್ತಳಾದಳು. ಹೀಗಿರುವಲ್ಲಿ ಒಮ್ಮೆ ಆ ಊರಿನ ಮಹಾರಾಜರಾದ ಕೌಶಿಕನು ಇವಳ ಸೌಂದರ್ಯಕ್ಕೆ ಮಾರುಹೋಗಿ ತನ್ನ ವಿರಹವೇದನೆಯನ್ನು ಮಂತ್ರಿಗಳಲ್ಲಿ ನಿವೇದಿಸಿ, ಅವಳನ್ನು ಅರಮನೆಯ ರಾಣಿಯಾಗಿ ತರುವ ತನ್ನ ಆಕಾಂಕ್ಷೆಯನ್ನು ವ್ಯಕ್ತಪಡಿಸಿ ಕಳುಹಿಸಿದನು. ಆದರೆ ಮಹಾದೇವಿ ಭವಿಗೆ ಸತಿಯಾಗಲಾರೆ ಎಂಬ ತನ್ನ ಮನಸಿಚ್ಛೆಯನ್ನು ತಿಳಿಸಿಕಳಿಸಿದಳು. ಅಲ್ಲಿ ಈ ವಿಷಯವನ್ನು ಕೇಳಿದ ಕೌಶಿಕನು ಮೂರ್ಛೆಹೊಂದಿ ಆ ಮಹಾದೇವಿ ತನಗೆ ಬೇಕೇ ಬೇಕು, ಇಲ್ಲದಿದ್ದರೆ ನಾನು ಉಳಿಯಲಾರೆ, ತನ್ನ ಮನಸ್ಸಿನ ಇಂಗಿತವನ್ನು ತಿಳಿಸಿ ಅವರು ಒಪ್ಪದಿದ್ದರೆ ಕಠಿಣಕ್ರಮಗಳನ್ನು ಕೈಗೊಳ್ಳುವ ಆಜ್ಞೆಯನ್ನು ಹೊರಡಿಸಿ ಕಳಿಸಿದನು. ಅದರಂತೆ ಮಂತ್ರಿವರ್ಯರು ರಾಜನ ಕ್ರೂರವಿಧಿನಿಯಮಗಳನ್ನು ಹೇಳಿ ಬೆದರಿಸಿದರು. ಆತಂಕಕ್ಕೊಳಗಾದ ತಂದೆ ತಾಯಿಗಳನ್ನು ಸಮಾಧಾನ ಪಡಿಸಿದ ಮಹಾದೇವಿ ನಾನು ಸದಾ ಗುರು-ಲಿಂಗ-ಜಂಗಮ ಸೇವೆಯಲ್ಲಿ ನಿರತಳಾಗಿರುವಂತೆ ನನಗೆ ಒಪ್ಪಿಗೆ ನೀಡಬೇಕು. ಅವರು ಮಾಡುವ ೩ ತಪ್ಪುಗಳನ್ನು ನಾನು ಕ್ಷಮಿಸುತ್ತೇನೆ ನಂತರ ನಾನು ಕ್ಷಮಿಸುವುದಿಲ್ಲ ಎಂಬ ಷರತ್ತುನ್ನು ವಿಧಿಸಿ, ಅದನ್ನು ಒಪ್ಪುವುದಾದರೆ ಮದುವೆಗೆ ಸಿದ್ಧಳು ಎಂದು ಹೇಳಿಕಳಿಸಿದಳು. ಅದಕ್ಕೆಲ್ಲಾ ಸಮ್ಮತಿಸಿದ ಕೌಶಿಕನು ಅದ್ದೂರಿ ಮಹೋತ್ಸವದಲ್ಲಿ ಅವಳ ಕೈಹಿಡಿದನು. ಈ ಮದುವೆಯಿಂದ ಅವನಿಗೆ ಮಿಗಿಲಾದ ಸಂತೋಷವಾಗಿದ್ದರೆ, ಮಹಾದೇವಿಗೆ ಇಷ್ಟವಿಲ್ಲದ ಬಂಧನವಾಗಿತ್ತು. ಹೀಗೆ ಒಂದಷ್ಟು ದಿನಗಳ ಪೂಜೆಪುನಸ್ಕಾರ, ಅರಮನೆಯ ವಾಸದಲ್ಲಿದ್ದುಕೊಂಡು ನೆರವೇರಿಸಿದಳು. ಆದರೆ ದಿನಕಳೆದಂತೆ ಕಾಮ ಭೋಗಗಳಲ್ಲೇ ತೃಪ್ತನಾಗುತ್ತಿದ್ದ ಕೌಶಿಕನು ಅವಳ ಮನಸ್ಸಿನ ಭಕ್ತಿಯನ್ನು ಅರಿಯದೆ ಹೋದನು. ಗುರು-ಲಿಂಗ-ಜಂಗಮ ಸೇವೆಯಲ್ಲಿ ನಿರತವಾಗಿರುವಾಗ ಅಡ್ಡಿ ಪಡಿಸಿದ ಅವನ ಮೂರು ತಪ್ಪುಗಳು ಘಟಿಸಿದ ಮೇಲೆ ಎಲ್ಲವನ್ನು ಬಿಟ್ಟು

ಬಯಲಾಗಿ ಹೊರಟು, ಶ್ರೀಶೈಲಕ್ಕೆ ನಡೆದಳು. ಮಹಾದೇವಿಯನ್ನು ಮತ್ತೆ ಪಡೆಯುವ ಸಲುವಾಗಿ ಶಿವಶರಣರ ಜೊತೆಗೆ ಹೋಗಿ ತಾನೂ ಶಿವಭಕ್ತನಾಗಿ ಮಾರ್ಪಟ್ಟಿರುವುದಾಗಿ ಹುಸಿಯನ್ನಾಡಿದನು. ನಂತರ ಅವನ ನಿಜರೂಪ ಅರಿತ ಮಹಾದೇವಿ ಲೌಕಿಕ ಗಂಡನ ಬಗ್ಗೆ ಹೇಸಿಗೆ ಮೂಡಿ ನಾನು ಪಾರಲೌಕಿಕ ಗಂಡನಾದ ಆ ಚೆನ್ನಮಲ್ಲಿಕಾರ್ಜುನನಿಗೆ ಮಾತ್ರ ಒಲಿದಿರುವುದಾಗಿ ಅವನು ನನಗೆ ಮಿತ್ರನೂ ಹೌದು, ನಾನವನ ದಾಸಿಯೂ ಹೌದು ಎಂದು ತನ್ನ ನಿಶ್ಚಲತೆಯ ಮನಸ್ಸನ್ನು ಬಿಚ್ಚಿಟ್ಟಳು. ಶಿವಧ್ಯಾನ, ಚಿಂತನೆ ಮೆರೆದ ಅವಳು ಶಿವಗೋಷ್ಠಿಯಲ್ಲೇ ಇದ್ದು ಶಿವಭಕ್ತಕುಲದ ನಡುವೆಯೇ ನಿಷ್ಠೆಯಿಂದ ಮೆರೆದ ಅವಳ ಭಕ್ತಿಯನ್ನು ಮೆಚ್ಚಿದ ಶಿವನು ಅವಳನ್ನು ಹರಸಿ ಕೈಲಾಸಕ್ಕೆ ಕರೆದೊಯ್ದು ರುದ್ರಕನ್ನಿಕೆ ಪದವಿಯನ್ನು ನೀಡಿ ಅವಳ ಕೀರ್ತಿಯನ್ನು ಸಾರಿ, ಎಲ್ಲರನ್ನೂ ಸಂತೋಷಗೊಳಿಸಿದನು.

ಹರಿಹರನು ಮಹಾದೇವಿಯಕ್ಕನ ರಗಳೆಯನ್ನು ಬಹಳ ವಿಸ್ತೃತವಾಗಿ ಮತ್ತು ವರ್ಣನಾತ್ಮಕವಾಗಿ ರಚಿಸಿದ್ದಾನೆ. ಇಲ್ಲಿ ಮಹಾದೇವಿ ಪಾರ್ವತಿದೇವಿಯಿಂದ ಶಾಪ ಪಡೆದ ಅಂಶ, ಬಾಲ್ಯ, ಯೌವನದ ವಿಷಯಗಳನ್ನು ತಿಳಿಸಿ ನಂತರ ಶಿವಭಕ್ತಿ, ವೈರಾಗ್ಯ, ಸ್ವಯಂ ಹೋರಾಟ, ತನ್ನ ಆದರ್ಶಗಳನ್ನು ಪರಿಪಾಲಿಸುವಲ್ಲಿ ಅದಕ್ಕೆ ಧಕ್ಕೆ ಒದಗಿದಾಗ ಅಸಹಾಯಕಳಾಗಿ ಕೂರದೆ ಸಬಲಳಾಗಿ ತನ್ನ ವ್ಯಕ್ತಿತ್ವವನ್ನು ಕಟ್ಟಿಕೊಳ್ಳುವ ಬಗೆ ಗಮನಾರ್ಹವಾದುದು. "ಮಹಾದೇವಿ ತನ್ನ ಕಾರಣ ಕುಟುಂಬಕ್ಕೆ ಬಂದ ಆಪತ್ತು ನಿವಾರಿಸುವ ಧೈರ್ಯ ತೋರಿ, ಸಮಸ್ಯೆಯನ್ನು ತಾನೇ ಎದುರಿಸಲು ಮುಂದಾಗುತ್ತಾಳೆ. ಅರಮನೆ, ಸಂಪದ, ಅಧಿಕಾರಗಳ ಆಸೆ–ಆಮಿಷಗಳನ್ನು ಮೀರಿ ತನ್ನದೇ ನಿಬಂಧನೆಗಳಿಂದ, ಕರಾರುಗಳಿಂದ ಶುಚಿಯಾಗಿ ಬದುಕುತ್ತಾಳೆ. ಆ ಸ್ವಾತಂತ್ರ್ಯ ಹರಣವಾದಾಗ ಎಲ್ಲವನ್ನು ಕಾಲಿನಿಂದ ಒದ್ದು, ಲೋಕ ಸಂಚಾರಿಯಾಗಿ ನಡೆಯುತ್ತಾಳೆ. ಕೌಶಿಕನ ಅಧಿಕಾರ, ಹಣ ಮದಗಳಿಗೆ, ಗುರುಮಠಗಳ ತೋರಿಕೆಯ ಧಾರ್ಮಿಕ ಪ್ರತಿಷ್ಠೆ ದರ್ಪಗಳಿಗೆ ಮಣಿಯದೆ ತನ್ನದೇ ನಿಲುವನ್ನು ಎತ್ತಿಹಿಡಿಯುತ್ತಾಳೆ. ಹೆಣ್ಣು ಅಸಹಾಯಕ, ಕೋಮಲೆ, ಮುಗ್ಧೆ, ಲೋಕದಲ್ಲಿ ಒಂಟಿಯಾಗಿ ಏನೂ ಸಾಧಿಸಲಾರಳು ಎಂಬ ಪರಂಪರಾಗತ ವಿಚಾರಗಳಿಗೆ ಏಟು ನೀಡುವ ಹಾಗೆ ಆಕೆ ಪ್ರಭುತ್ವವನ್ನು ಧಿಕ್ಕರಿಸುತ್ತಾಳೆ, ಧರ್ಮಗುರುಗಳನ್ನು ಎದುರಿಸುತ್ತಾಳೆ. ಕಾಮ ಮೋಹಗಳನ್ನು ವೈರಾಗ್ಯದಿಂದ, ಜಂಭ ದರ್ಪಗಳನ್ನು ನಿಷ್ಠೆಯಿಂದ ಗೆಲ್ಲುತ್ತಾಳೆ. ಮಹಾದೇವಿ ನಮ್ಮ ಚರಿತ್ರೆಯಲ್ಲಿ ವಚನಕಾರ್ತಿ, ಕವಿ, ಅನುಭಾವಿಯಾಗಿ ಮಾತ್ರವಲ್ಲ; ಸ್ತ್ರೀ ಶಕ್ತಿಯ ಅಂತಃಸತ್ವದ ತತ್ವವಾಗಿ ಗಣ್ಯಳಾಗಿ ನಿಲ್ಲುತ್ತಾಳೆ. ಪುರುಷರು ಪದವಿ, ಹಣ, ಅಧಿಕಾರಿಗಳಿಂದ ನಡೆಸುವ

ಸ್ತ್ರೀ ಶೋಷಣೆಯನ್ನು ಮೆಟ್ಟಿ ನಿಲ್ಲುವ ಅಪ್ರತಿಮ ವ್ಯಕ್ತಿಯಾಗಿ, ಶಕ್ತಿಯಾಗಿ ಆಕೆ ಗಮನಾರ್ಹವಾಗುತ್ತಾಳೆ.

ಹೆಣ್ಣಿನ ಬಯಕೆ, ಆಸೆ, ಅಭಿಮಾನ, ಸ್ವಾತಂತ್ರ್ಯ, ಗೌರವಗಳೆಲ್ಲವನ್ನೂ ಅವಳು ಕಾಪಾಡಿಕೊಂಡು ಸಾಧನೆಯ ದಾರಿಯೊಂದನ್ನು ಕೊರೆದು ತೋರುತ್ತಾಳೆ".೧೭ ಹೀಗೆ ಈ ಶಿವಭಕ್ತೆ ಮಹಾದೇವಿಯಕ್ಕನಿಗೆ ಶಿವನಲ್ಲಿ ಒಲವೂ ಇದೆ, ಸ್ನೇಹವೂ ಇದೆ. ಅವನನ್ನೇ ತನ್ನ ಗಂಡನೆಂದೂ ಕರೆದಿರುವ ಅವಳ ಪರಿ ವಿಶೇಷವಾದುದು. ಶಿವನೊಂದಿಗಿನ ಈ ನಂಟು ಚಿರಕಾಲ ಉಳಿಯುವಂತಹುದು ಎಂದು ತನ್ನ ವಚನಗಳಲ್ಲಿ ಹಾಡಿ ನಂಬಿದ್ದಾಳೆ. ಅಂತಹ ಹಲವು ವಿಶಿಷ್ಟ ವಚನಗಳು ಕನ್ನಡ ಸಾಹಿತ್ಯದಲ್ಲಿ ಮೈಲಿಗಲ್ಲಾಗಿವೆ. ಮಹಾದೇವಿಯು ಒಂದು ಅರೆಗಳಿಗೆಯೂ ಶಿವನನ್ನು ತೊರೆದು ಇರಲು ತನ್ನಿಂದಾಗದು ಎಂಬಂತೆ ಶಿವಲಿಂಗವನ್ನು ಪೀಠದಲ್ಲಿಟ್ಟು, ಅವನ ಪಾದದಲ್ಲಿ ತನ್ನ ಪ್ರಾಣವನ್ನಿಟ್ಟು ಲೋಕದ ಅರಿವೆಯಿಲ್ಲದಂತೆ ಧ್ಯಾನಾಸಕ್ತಳಾಗುವ ರಾಗವಿರಹಿತೆಯನ್ನು ಮೆಚ್ಚಿತ ಶಿವನು ರುದ್ರಕನ್ನಿಕೆಯ ಪದವಿಯನ್ನಿಟ್ಟು ಆನಂದಿಸಿದನು. ಮಹಿಳಾ ಸ್ವಾತಂತ್ರ್ಯ ಸಮಾನತೆಗಾಗಿ ಹೋರಾಟ ಮಾಡಿದ ದಿಟ್ಟ ವ್ಯಕ್ತಿತ್ವ ಇವಳದು, ಇವಳ ಅನನ್ಯ ಶಿವಭಕ್ತಿ ಮೆಚ್ಚುವಂತಹದ್ದು.

## ೮. <u>ತಂಡೇಶ ಪಿಳ್ಳೆಯ ರಗಳೆ :-</u>

ಚೋಳ ದೇಶದ ನಲ್ಲೂರಿನಲ್ಲಿ ಅಚ್ಯುತ ಭಟ್ಟ ಮತ್ತು ಸಾವಿತ್ರಿ ಎಂಬ ದಂಪತಿಗಳಿಗೆ ಮಕ್ಕಳಿಲ್ಲದೆ ಗಣೇಶನ ಹರಕೆ ಹೊತ್ತು ಗಂಡುಮಗುವನ್ನು ಪಡೆದು ತಂಡೇಶಪಿಳ್ಳೆ ಎಂದು ಹೆಸರಿಟ್ಟರು. ಒಂದೆಡೆ ಅವನು ಹುಟ್ಟಿದಂದಿನಿಂದ ಬಡತನ ಅವರನ್ನು ಆವರಿಸುತ್ತಾ ಬಂದಿತು. ಕಡೆಗೆ ದಾರಿದ್ರ್ಯ ನಿವಾರಣೆಗೆ ಆ ಊರಿನ ಹಸುಗಳನ್ನು ಮೇಯಿಸುವ ಜವಾಬ್ದಾರಿ ಹೊತ್ತ ತಂಡೇಶಪಿಳ್ಳೆ ಹಲವು ದಿನ ಚೆನ್ನಾಗಿಯೇ ಮೇಯಿಸುತ್ತ ಬರುತ್ತಿದ್ದನು, ಅದು ಅಧಿಕ ಹಾಲು ನೀಡುತ್ತಿದ್ದುದು ಆಯಾ ಮನೆಯವರಿಗೆಲ್ಲಾ ಸಂತೋಷದ ವಿಷಯವಾಗಿತ್ತು. ಇದರಿಂದ ತಂಡೇಶನಿಗೆ ತಮ್ಮ ಮೆಚ್ಚುಗೆ ತಿಳಿಸಿ, ಊಡುಗೊರೆ ನೀಡಿದರು. ಹೀಗಿರುವಾಗ ಒಮ್ಮೆ ಶಿವನು ಬಂದು ಪಂಚಾಕ್ಷರಿಮಂತ್ರವನ್ನು ಉಪದೇಶಿಸಿ, ಈ ವಿಷಯವನ್ನು ಯಾರಿಗೂ ಹೇಳದಂತೆ ಶಿವನನ್ನು ನಿತ್ಯ ಪೂಜಿಸು ಎಂದು ತಿಳಿಸಿ ಹೋದನು. ಆ ಘಳಿಗೆಯಿಂದ ಮಹೇಶನು ಬಂದು

---

ಅಡಿಟಿಪ್ಪಣಿಗಳು : ೧೭ ಹರಿಹರನ ಭೇದ ನಿರಸನ ರಗಳೆಗಳು-ಡಾ|| ಗುರುಪಾದ ಮರಿಗುದ್ದಿ, ಪ್ರಸ್ತಾವನೆ, ಪು.ಸಂ.೩೨

ನಿಂತು ಹೋದ ಸ್ಥಳದಲ್ಲಿ ಮರಳಿನಲ್ಲಿ ಲಿಂಗವನ್ನು ಮಾಡಿ ಹೂಗಳಿಂದ ಅಲಂಕರಿಸುತ್ತಾ, ಧ್ಯಾನಮಗ್ನನಾಗುತ್ತಾ ನಿತ್ಯ ಪೂಜಿಸುತ್ತಿದ್ದನು. ಆಗ ಮೇಯುತ್ತಿದ್ದ ಹಸುಗಳೆಲ್ಲಾ ಆ ಲಿಂಗದ ಮೇಲೆ ಹಾಲನ್ನೆರದು ತಮ್ಮ ಭಕ್ತಿಯನ್ನು ಮೆರೆಯುತ್ತಿದ್ದವು. ಮತ್ತೆ ಮನೆಗೆ ತೆರಳಿದ ಮೇಲೆ ಹಾಲನ್ನು ಕೊಡದೆ ಮನೆಯವರಿಗೆಲ್ಲಾ ಚಿಂತೆಗೆ ಕಾರಣವಾಯಿತು. ಇದರಿಂದ ಎಲ್ಲರೂ ಬಂದು ತಂಡೇಶನ ಮೇಲೆ ಬಂದು ಅಚ್ಯುತಭಟ್ಟನಲ್ಲಿ ದೂರಿತ್ತರು. ಒಮ್ಮೆ ಮಗನಿಗೆ ಕಾಣದಂತೆ ಅವನು ಮೇಯಿಸುತ್ತಿದ್ದ ಸ್ಥಳದಲ್ಲಿ ಮರವೇರಿ ಕುಳಿತು ಪೂಜಿಸುತ್ತಿದ್ದ ಮರಳಲಿಂಗ ಮತ್ತು ಗೋವುಗಳು ಲಿಂಗಕ್ಕೆ ಹಾಲನ್ನು ಎರೆಯುತ್ತಿರುವುದನ್ನು ಗಮನಿಸಿ ಮಗನನ್ನು ಕಠಿಣವಾಗಿ ಹಳಿದನು. ಮರಳಿನ ಲಿಂಗವನ್ನು ಅಳಸಿಹಾಕುವುದಕ್ಕೆ ಮುಂದಾದಾಗ ತಂದೆಯನ್ನು ಬಡಿದು ಕೊಂದು ಹಾಕಿದನು. ಶಿವದ್ರೋಹಿ, ಶಿವನಿಂದಕನು ಯಾರೇ ಆದರೂ ಅವರನ್ನು ಕೊಲ್ಲುವುದೇ ಧರ್ಮವೆಂಬಂತೆ ತನ್ನ ತಂದೆಯೆಂದೂ ಪರಿಗಣಿಸದೆ ಅವನನ್ನು ಬಡಿದು ಕೊಂದ ಆ ಶಿವಭಕ್ತ ತಂಡೇಶನ ಭಕ್ತಿಗೆ ಮೆಚ್ಚಿದ ಶಿವನು ಪ್ರತ್ಯಕ್ಷನಾಗಿ ಕೈಲಾಸದಲ್ಲಿ ಗಣಪದವಿಯನ್ನು ನೀಡಿ ಹರಸಿದನು. ಶಿವಭಕ್ತ ತಂಡೇಶನಿಗೆ ಇಲ್ಲಿ ಶಿವಭಕ್ತಿಯ ಮುಂದೆ ಪಿತೃವಾತ್ಸಲ್ಯವೆನ್ನುವುದು ತೀರನಗಣ್ಯವಾದುದು. ಶಿವನನ್ನೇ ತನ್ನ ತಂದೆಯೆಂದು ಭಾವಿಸುವ ಶಿವಭಕ್ತರಿಗೆ ತನ್ನ ಕುಟುಂಬವಲಯದ ಕಾಳಜಿ, ಪ್ರೀತಿ ಎನ್ನುವುದು ಇರುವುದಿಲ್ಲವೆಂದು ತಿಳಿಯುತ್ತದೆ. ಶಿವಭಕ್ತರ ಸಂಬಂಧ ಬಿಡಿಸಲಾರದ ಬಂಧ, ಅದನ್ನು ಬಿಡಿಸುವ ಪ್ರಯತ್ನ ಯಾರೇ ಮಾಡಿದರೂ ಅವರು ಕೊನೆಗೀಡಾಗುತ್ತಾರೆ ಎಂಬುದು ಈ ಕಥೆಯಿಂದ ತಿಳಿದುಬರುತ್ತದೆ.

### ೧೦. <u>ನಂಬಿಯಣ್ಣನ ರಗಳೆ :-</u>

ಶಿವನು ಸಮುದ್ರ ಮಂಥನದಲ್ಲಿ ಬಂದ ವಿಷಯವನ್ನು ಅಂಗೈಯಲ್ಲಿ ಹಿಡಿದಾಗ ಕಾಣಿಸಿದ ಪ್ರತಿಚ್ಛಾಯೆಯನ್ನು ಶಿವ ಹೊರಗೆ ಬಂದವನಿಗೆ ತನ್ನ ಕೆಂಜೆಡೆಗೆ ಸದಾ ಹೂವನ್ನು ತಂದುಕೊಡುವವನಾಗೆಂದು ಹರಸಿ ಪುಷ್ಪದತ್ತನೆಂದು ನಾಮಾಂಕಿತಗೊಳಿಸಿದನು. ಆಗ ಪ್ರತಿನಿತ್ಯ ಕೈಲಾಸದಲ್ಲಿ ಹೂವನ್ನು ಅರಸಿ ಕೊಯ್ಯುವ ಕಾರ್ಯನಿರತನಾಗಿದ್ದ ಪುಷ್ಪದತ್ತನು ಒಮ್ಮೆ ವಿಳಾಸಿನಿಯರಿಗೆ ಮೋಹಗೊಂಡು ಸೋತನು. ಆಗ ಪರಶಿವನು ಇಬ್ಬರಿಗೂ ಭೂಲೋಕದಲ್ಲಿ ಸಕಲ ಸುಖ-ಭೋಗಗಳನ್ನುಂಡು, ತೃಪ್ತಿ ಆನಂದದಿಂದಿದ್ದು ನಂತರ ಕೈಲಾಸಕ್ಕೆ ಬರುವುದಕ್ಕೆ ಅಪ್ಪಣೆಯಿಟ್ಟು ಪ್ರೀತಿಯಿಂದ ಕಳುಹಿಸಿಕೊಟ್ಟನು. ಪರಮೇಶ್ವರನಿಂದ ಅಭಯವನ್ನು ಪಡೆದು ಹೊರಟ ಪುಷ್ಪದತ್ತನು ಚೋಳದೇಶದ ತಿರುನಾವಲೂರಿನ ಜಡೆಯ ನಾಯನಾರ್,

ಯಸ್ಯಜ್ಞಾನದೇವಿಯರ ಮಗ ನಂಬಿಯಾಗಿ ಹುಟ್ಟಿದ ಮಗುವು ಶಿವನ ಆಶೀರ್ವಾದದಿಂದಲೋ ಏನೋ ಓರ್ವ ಕಾರಣಿಕ ಪುರುಷನಂತೆ ಕಾಣುತ್ತಿದ್ದನು. ಒಮ್ಮೆ ಮದಗಜವೊಂದು ಇಡೀ ಊರಿನ ಜನರನ್ನು ನಡುಗಿಸುತ್ತಿರಲು ಎಲ್ಲರೂ ಗಾಬರಿಗೊಂಡು ಚೆಲ್ಲಾಪಿಲ್ಲಿಯಾದರು. ಆದರೆ ಅದು ಈ ನಂಬಿಯ ಬಳಿ ಬಂದು ಭಕ್ತಿಯಿಂದ ನಮಸ್ಕರಿಸಿ ಹೋದಾಗ ಎಲ್ಲರಿಗೂ ಬಹಳ ಆಶ್ಚರ್ಯವುಂಟಾಗಿ ಈ ವಿಷಯವನ್ನು ಅರಸನಲ್ಲಿಗೆ ಮುಟ್ಟಿಸಿದರು. ರಾಜನು ಆ ಮಹಾಪುರಷನನ್ನು ನೋಡಲು ಬಂದು ಅವರ ತಂದೆ ತಾಯಿಗಳ ಒಪ್ಪಿಗೆ ಪಡೆದು ಅವನನ್ನು ದತ್ತು ಪಡೆದು ತಮ್ಮ ಮಗನಂತೆ ಅವನನ್ನು ಕಾಣುತ್ತಾ ಸೌಂದರ ಪೆರುಮಾಳೆ ಎಂದು ಹೆಸರಿಸಿಟ್ಟು ಸಕಲ ವಿದ್ಯೆ-ಶಾಸ್ತ್ರಗಳನ್ನು ಕಲಿಸಿದನು.

ಸೌಂದರ ಪೆರುಮಾಳೆಯ ಮದುವೆಯ ದಿನ ವೇಷಧಾರಿ ಶಿವನು ಬಂದು, ಇವನು ರಾಜನ ಮಗನಲ್ಲ, ನನ್ನ ತೊತ್ತಿನ ಮಗ. ಅದಕ್ಕೆ ಸಾಕ್ಷಿ ಮತ್ತು ಪತ್ರ ಎಲ್ಲವೂ ಉಂಟು ಎಂದು ಗಲಾಟೆಯನ್ನು ಪ್ರಾರಂಭಿಸಿದನು. ಪ್ರತಿಯಾಗಿ ನಂಬಿಯು ಆ ಮುದುಕನನ್ನು ಒಳಗೊಳಗೆ ಶಪಿಸುತ್ತಾ ನೊಂದುಕೊಂಡನು. ಆದರೆ ಶಿವನು ಮಾತ್ರ ತನ್ನ ಪಟ್ಟು ಬಿಡದೆ ಆ ಊರಿನ ನಾಲ್ಕಾರು ಜನರನ್ನು ಮಾತನಾಡಿಸಿ ಇವರೆಲ್ಲ ನನಗೆ ಪರಿಚಿತರು ಅವರೆಲ್ಲರೂ ಸಾಕ್ಷಿಯಿದ್ದಾರೆ. ಜೊತೆಗೆ ನಂಬಿಯು ನನ್ನ ತೊತ್ತಿನ ಮಗ ಎಂಬುದಕ್ಕೆ ಈ ಪತ್ರವೂ ಸಾಕ್ಷಿ ಇದೆ ಎಂದು ತೋರಿಸಿ ಅದನ್ನು ಓದಿದರೆ ಅದರ ಪ್ರಕಾರ ನಂಬಿಯು ಮುದುಕನ ತೊತ್ತಿನ ಮಗ ಎಂಬುದನ್ನು ಧೃಡೀಕರಿಸುತ್ತಿತ್ತು. ಕೊನೆಗೆ ಆ ಪತ್ರವನ್ನು ನಂಬಿಯು ತೆಗೆದುಕೊಂಡು ಹರಿದುಹಾಕಿ ನೀನು ಇನ್ನು ಏನೂ ಮಾಡಲು ಸಾಧ್ಯವಿಲ್ಲ ಎಂದು ಹೇಳಿದನು. ಅಯ್ಯೋ ಇದು ಹೀಗೆ ಆಗುವುದು ಎಂದು ನನ್ನ ಹೆಂಡತಿ ಮೊದಲೇ ನನ್ನನ್ನು ಎಚ್ಚರಿಸಿದ್ದರಿಂದ ನಾನು ಮೂಲಪತ್ರವನ್ನು ನನ್ನಲ್ಲೇ ಇಟ್ಟುಕೊಂಡಿದ್ದೇನೆ, ಇದು ಪಡಿಪತ್ರ ಎಂದು ನಗಲಾರಂಭಿಸಿದನು. ಮೂಲಪತ್ರ ಈ ದೇವಾಲಯದೊಳಗಿದೆ ಎಂದು ತನ್ನ ಕರೆದ ಸಮೇತ ಆ ಮುದುಕನು ಅದರ ಒಳಹೊಕ್ಕಾಗ, ನಂಬಿಯು ನನ್ನ ಶಿವಾಲಯಕ್ಕೆ ಇವನು ಅಪಮಾನ ಮಾಡಿದನೆಂದು ಅವನನ್ನು ಹಿಡಿದು ಹೊಡೆಯಲು ಹೋದಾಗ ಶಿವನು ತನ್ನ ನಿಜರೂಪವನ್ನು ಪ್ರಕಟಿಸಿ ನಂಬಿಗೆ ಪೂರ್ವದ ವಾಸನೆ ತಲೆದೋರಿಬರುವಂತಾಗಿ ತನ್ನ ಶಿವನ ಹಾಡಿ, ಸ್ತುತಿಸಿ ಕೊಂಡಾಡಿ ಶಿವನಿಂದ ವರವನ್ನು ಪಡೆದನು. ಈ ಭಾಗದಲ್ಲಿ ಶಿವನು ನಂಬಿಯ ಮೇಲೆ ಅತಿಯಾದ ಪ್ರೀತಿಯನ್ನು ತೋರಿದ್ದಾನೆ, ಆದರೆ ಕೆಲವೊಮ್ಮೆ ತಂದೆಯು ವಾತ್ಸಲ್ಯದಿಂದ ಮಗನ್ನು ಪೀಡಿಸುವಂತೆ ಇಲ್ಲಿ ನಂಬಿಯನ್ನು ಕಾಡಿಸಿದ್ದಾನೆ. ಅದಕ್ಕೆ ನಂಬಿಯು ಆ ಮುದುಕನನ್ನು

'ಪಿಚ್ಚನೆ' ಎಂದು ಬೈಯ್ದು ಗೊಣಗಿದರೆ ಅದನ್ನು ಒಲವಿನಿಂದಲೇ ಸ್ವೀಕರಿಸಿರುವ ಶಿವನಿಗೆ ನಂಬಿಯು ಮಗನಂತೆ ಆಗಿದ್ದಾನೆ. ಪೂರ್ವದ ವಾಸನೆಯ ಅರಿವಿಲ್ಲದೆ ಹೋದ ನಂಬಿಯನ್ನು ಶಿವನು ಕಾಡಿಸಿ – ಪೀಡಿಸಿ ಆತನ ಅರಿವನ್ನು ಮೂಡಿಸಿರುವ ಶಿವನಿಗೆ ನಂಬಿಯ ಬಗ್ಗೆ ಪುತ್ರ ವಾತ್ಸಲ್ಯವಿದೆ ಎಂಬುದು ವ್ಯಕ್ತವಾಗುತ್ತದೆ. ಈ ವಿಷಯವೆಲ್ಲ ಅರಸನಿಗೆ ಮುಟ್ಟಿದಾಗ ನಂಬಿಯ ದೈವದೊಲುಮೆಯನ್ನು ಹೊಗಳಿ ಅವನನ್ನು ಹೆತ್ತ ತಂದೆ ತಾಯಿಗಳು ಶ್ರೇಷ್ಠರು ಎಂದು ಸಂತೋಷಿಸಿದನು. ನಂತರ ನಂಬಿಯು ಹರನ ತೊತ್ತು ನಾನು, ಇನ್ನು ಮುಂದೆ ಶಿವಾಲಯವೇ ನನ್ನ ಅರಮನೆ ಎಂದು ತಿರುನಾವಲೂರಿಗೆ ಬಂದು ಊರಿನ ಜನರೆಲ್ಲಾ ಜೀವನ ಅನುಗ್ರಹದಿಂದ ಒಂದಾಗಿ ಭಕ್ತಿಯಿಂದ ಶಿವನನ್ನು ಆರಾಧಿಸಿದರು.

ರುದ್ರಕನ್ನಿಕ ಕುಲದ ಪರಿವೆನಾಚಿಯು ನಂಬಿಯನ್ನು ಬಯಸಿ ಕೊನೆಗೆ ಅವನನ್ನು ವರಿಸಿ ಸುಖದಿಂದಿದ್ದರು. ತಿರುನಾಳಿನ ಹಬ್ಬ ಬಂದಾಗ ಮಾಹೇಶ್ವರನನ್ನು ಉಪಚರಿಸಲು ಮನೆಯಲ್ಲಿ ಏನೂ ಇಲ್ಲ ಎಂದು ಹೇಳಿದ್ದನ್ನು ಕೇಳಿಸಿಕೊಂಡು ತುಂಬುರನೊಂದಿಗೆ ಹಣತರಲು ಪುರಕ್ಕೆ ಹೋದನು, ಆದರೆ ತಿರುನಾಳತಿಗೆ ಬಂದು ಅಲ್ಲಿ ಕಳೆಕೀಳುತ್ತಿದ್ದ ಶಿವನನ್ನು ಕಂಡು ಗುರುತಿಸಿ ಅವನಲ್ಲಿ ಹಣ ಕೇಳಿದಾಗ ನನ್ನನ್ನು ಕುರಿತು ಹಾಡಿದರೆ ಹೊನ್ನು ನೀಡುವನೆಂದು, ಹೇಳಿದನು. ಶಿವನನ್ನು ಕುರಿತು ಹಾಡಿ, ಹೊಗಳಿ, ಸ್ತುತಿಸಿ ಹಣ ಪಡೆದು ಶಿವನನ್ನು ಕುಣಿಸುತ್ತಾ ದೇವಾಲಯಕ್ಕೆ ಬೀಳ್ಕೊಟ್ಟು ನಂಬಿಯು ಬಂದನು. ತಂದೆ ಮತ್ತು ಮಗನ ನಡುವಿನ ಆತ್ಮೀಯ ಒಡನಾಟದ ಪರಿಯನ್ನು ನಾವು ಈ ಭಾಗದಲ್ಲಿ ಗುರುತಿಸಬಹುದು.

ನಂಬಿಯು ಎರಡನೆಯ ಹಬ್ಬ ವೈಘಾಸಿ ತಿರುನಾಳ್‌ನ ಆಚರಣೆಗೆ ಉತ್ತರದ ಶಿವಪುರದಲ್ಲಿ ಹಣಗಳಿಸಲು ತುಂಬುರನ ಮಾತಿನಂತೆ ಬಂದನು, ಆದರೆ ಅಲ್ಲಿ ಶಿವಾಲಯದಲ್ಲಿ ಸಂಕಿಲೆನಾಚಿಯನ್ನು ಅವಳು ತನಗೆ ಬೇಕೆಂದು ಶಿವನಲ್ಲಿ ಹಠ ಹಿಡಿದು ಕಾಡಿ ಬೇಡಿದನು, ಅವಳಿಗೆ ಈಗಾಗಲೇ ಮದುವೆಯಾಗಿ ಗಂಡ ಸತ್ತಿದ್ದಾನೆ, ಆ ಸತ್ತ ಗಂಡನ ನೆನೆದು ಬಾಳುತ್ತಿದ್ದಾಳೆ ಎಂದು ತಿಳಿಸಿದರೂ ನಂಬಿ ಕೇಳದಿದ್ದಾಗ, ಶಿವನು ಈಶಾನ ಶೆಟ್ಟಿ ಮತ್ತು ಶಿವದೇವಿಯರ ಮನೆಗೆ ಹೋಗಿ ನಂಬಿಗೆ ತಂದುಕೊಳ್ಳುವ ವಿಷಯ ಒಪ್ಪಿಸಿ ವಿವಾಹಮಾಡಿಸಿದನು. "ಭಕ್ತ ಪರಾಧೀನನಾದ ಶಿವ ತನ್ನ ಭಕ್ತರಿಗೆ ತಲೆಹಿಡಿಯುವ ಕೆಲಸವನ್ನು ಮಾಡಿ ಸೇವೆ ಮಾಡುತ್ತಾನೆ ಎಂದು ಹೇಳುವುದು ಇಲ್ಲಿನ ಉದ್ದೇಶ". ೧೭ ಹೀಗೆ ಸಂಕಿಲೆಯಿಂದ ಸುಖದಿಂದ ಇದ್ದು, ಪರಿವೆಯನ್ನು ನೋಡಿದಾಗ ಅವನ

---

**ಅಡಿಟಿಪ್ಪಣಿ : ೧೭ ಕನ್ನಡ ಸಾಹಿತ್ಯ ಚಾರಿತ್ರಿಕ ಬೆಳವಣಿಗೆ – ಡಾ|| ಸಿ. ವೀರಣ್ಣ (ಪು.ಸಂ. ೨೮೫) ನವಕರ್ನಾಟಕದ ಪಬ್ಲಿಕೇಶನ್ಸ್**

ಕಣ್ಣುಗಳೇ ಹೋದವು. ಕೊನೆಗೆ ಶಿವನ ಉರುಗೋಲನ್ನೇ ಶಿವನಿಂದ ಪಡೆದ ನಂಬಿಯು ಶಿವನ ಆಪ್ತನೇ ಸರಿ. ನಂಬಿಯು ಇವೆಲ್ಲಾ ಶಿವನ ಆಟವೆಂದು ಭಾವಿಸಿ ಅವನನ್ನು ಬೈದು ತನ್ನ ಪತ್ರಕೊಡು ಎಂದು ರೇಗಿದ ನಂತರ ಅವನ ಗೊಣಗಾಟಕ್ಕೆ ಮೆಚ್ಚಿದ ಪರಿವೆಯನ್ನು ನಾನೇ ಬೇಡಿ ತರುತ್ತೇನೆ ಎಂದು ಹೊರಟು, ಅವಳನ್ನು ತಂದು ಕೊಡಿಸಿದನು. ನಂಬಿ ಮಾಡುವ ಯಜ್ಞಕಾರ್ಯದಲ್ಲಿ ಹಲವು ಪವಾಡ ಮೆರೆದನು. ಅಲ್ಲಿ ಯಜ್ಞಕ್ಕೆ ಬಂದಿದ್ದ ಚೇರಮನು ನಂಬಿಯ ಶಿವಭಕ್ತಿಯ ಮುಂದೆ ಸೋತು ಶರಣಾದನು. ಪರಿವೆಯ ಸಾವಿನ ನಂತರ ಶರಣರ ಸಂಘ ಸಾಕೆನಗೆ, ಇನ್ನು ಶಿವನ ಸ್ನೇಹ ಬಾಂಧವ್ಯವು ಬೇಕೆಂದು ಕೈಲಾಸಕ್ಕೆ ತೆರಳಿದನು. ಅಲ್ಲಿ ಶಿವ ನಂಬಿ ನನ್ನ ಮಗ ಅವನನ್ನು ಸ್ವಾಗತಿಸಿ ಎಂದು ನಂದಿಗೆ ತಿಳಿಸಿ ಚೇರಮನಿಗೆ ನಂದಿಯ ಮೂಲಕ ಗುರುವಿನ ಉಪದೇಶ ಮಾಡಿಸಿ ಒಳಗೆ ಕರಿಸಿಕೊಂಡರು. ಈ ನಂಬಿಯಣ್ಣನ ರಗಳೆಯಲ್ಲಿ ನಂಬಿಯನ್ನು ತನ್ನ ಮಗನೆಂದು ಭಾವಿಸಿ ಆ ಪುತ್ರವಾತ್ಸಲ್ಯದಿಂದ ಅವನನ್ನು ಬೆಂಬಿಡದೇ ಕಾಯ್ದು, ಕೈಲಾಸಕ್ಕೆ ಮತ್ತೆ ಕರೆಸಿಕೊಂಡು ಆನಂದಿಸಿದನು. ಶಿವನನ್ನು ತನ್ನ ಭಕ್ತರಿಗೋಸ್ಕರ ಎಂಥ ಕೆಲಸವನ್ನೂ ಮಾಡಿ ಅವರನ್ನು ಸಂತೋಷದಿಂದ ಇರುವಂತೆ ಮಾಡುವುದರ ಜೊತೆಗೆ ಅವರ ರಕ್ಷಕನೂ ಆಗಿರುತ್ತಾನೆ ಎಂಬುದು ಈ ಕಥೆಯಿಂದ ನಮಗೆ ವೇದ್ಯವಾಗುತ್ತದೆ. ಭಕ್ತರೇ ಶಿವನ ಸರ್ವಸ್ವ, ಅವರೇ ಅವನ ಬಂಧು-ಬಳಗ, ಅವನ ಕುಟುಂಬ ಎಲ್ಲವೂ ಇದ್ದಂತೆ ಎಂಬಂಶ ತಿಳಿದುಬರುತ್ತದೆ.

## ೧೧. ಜಡೆಯ ನಾಯನಾರ್ ಯಸ್ಯಜ್ಞಾನದೇವಿಯರ ರಗಳೆ :-

ಜಂಬೂಪುರವೆಂಬ ಖ್ಯಾತಿವೆತ್ತ ಆ ಊರಿನಲ್ಲಿ ಜಡೆಯ ನಾಯನಾರ್ ಮತ್ತು ಯಸ್ಯಜ್ಞಾನದೇವಿ ಎಂಬ ಅನುರೂಪ ದಂಪತಿಗಳಿಗೆ ಅನನ್ಯವಾದ ಶಿವಭಕ್ತಿಯನ್ನು ಮೈಗೂಡಿಸಿಕೊಂಡು ಪೂಜೆ, ಧ್ಯಾನ, ಸದ್ಭಾವನೆಗಳಿಂದ ಸುಖದಿಂದ ಬಾಳುತ್ತಿದ್ದರು. ಈಶ್ವರನ ಕರುಣೆ ತಲೆದೋರಿತೆಂಬಂತೆ ಇವರಿಗೆ ನಂಬಿಯಣ್ಣ ಮಗನಾಗಿ ಹುಟ್ಟಿ ರಾಜ ನರಸಿಂಗ ಮೊನೆಯಾರರ ಸಾಕುಮಗನಾಗಿ ಬೆಳೆದನು. ಅವನ ಮದುವೆ ಕಾರ್ಯ ನಡೆಯುತ್ತಿದ್ದ ದಿನದಂದು ಶಿವನು ಇವನು ತನ್ನ ತೊತ್ತಿನ ಮಗ ಎಂದು ಹೇಳಿ ಅದಕ್ಕೆ ಸಾಕ್ಷಿ ಉಂಟೆಂದು ಕಾಗದ ಪತ್ರವೊಂದನ್ನು ತೋರಿಸಿ ದಬಾಯಿಸಿದನು. ಊರವರಲ್ಲಿ ಕೆಲವರನ್ನು ಕುರಿತು ಮಾತನಾಡಿಸುತ್ತಾ ತನ್ನ ಗುರುತನ್ನು ಹೇಳಿಕೊಂಡನು. ಕೊನೆಗೆ ಶಿವ ದೇವಾಲಯದೊಳಕ್ಕೆ ತನ್ನ ಕೆರ ಸಮೇತ ಪ್ರವೇಶವಾದಾಗ ಹೊರಟ ಆ ವೃದ್ಧನಿಗೆ ಥಳಿಸಬೇಕು ಎನ್ನುವಷ್ಟರಲ್ಲಿ ಎನ್ನ ಪೂರ್ವ ಜನ್ಮದ ನೆನಪಾಗಿ ಶಿವನನ್ನು ಹಾಡಿಹೊಗಳಿ ಅಪ್ಪಿಕೊಂಡನು. ನಂಬಿಯ ಕುರಿತಾದ ನಡೆದ ಈ ಎಲ್ಲಾ

ವಿಚಾರವನ್ನು ತಿಳಿದುಕೊಂಡ ಶಿವಭಕ್ತ ದಂಪತಿಗಳು ಶಿವನೆಡೆಗೆ ಬಂದು, ನಿಮ್ಮ ಪತ್ರದಲ್ಲಿ ನೀವು ಹೇಳಿರುವಂತೆ ನಂಬಿಯ ತಂದೆ, ತಾತ ಮುತ್ತಾತರೆಲ್ಲರೂ ನಮಗೆ ತೊತ್ತು ಎಂಬ ಮಾತಿನ ಅನುಸಾರ ನಾವು ನಿಮ್ಮ ತೊತ್ತಲ್ಲವೇ? ನಿಮ್ಮ ಮಾತು ನಿಮಗೆ ಇಲ್ಲವೆ? ಎಂದು ಹಲವು ಮಾತುಗಳಿಂದ ನಿವೇದಿಸಿಕೊಂಡರು. ಅವರ ಒಲವಿನ ಮಾತಿಗೆ ಸಂತೋಷದಿಂದ ಶಿವನು ತನ್ನ ದರ್ಶನವನ್ನು ನೀಡಿ ಅವರಿಗೆ ಗಣಪದವಿಯನ್ನು ನೀಡಿ ಹರಸಿದನು. ಸತಿಪತಿಯ ಈ ಒಲವಿನ ಭಕ್ತಿಗೆ ಮಗನ ಸ್ನೇಹ ಮತ್ತು ವಾತ್ಸಲ್ಯಯುತ ಭಕ್ತಿಗೆ ಒಲಿದ ಶಿವನು ಅವರನ್ನು ಎಡೆಬಿಡದೆ ರಕ್ಷಕನಂತೆ ಕಾಯ್ದು ತನ್ನ ಸ್ಥಾನಕ್ಕೆ ಕರೆಸಿಕೊಂಡಿದ್ದಾನೆ.

### ೩.೩) ದಾಸ್ಯ ಸಂಬಂಧ :-

ದಾಸ್ಯ ಎಂದರೆ ದಾಸ, ಶರಣಾಗುವುದು, ಸೇವಕ ಎಂಬ ಅರ್ಥಗಳಿವೆ, ಇಲ್ಲಿ ಯಜಮಾನನಿಗೆ ಸೇವಕತನದಲ್ಲಿದ್ದು ಅವನ ಒಲುಮೆಗೆ ಪಾತ್ರನಾಗುವುದು. ಹರಿಹರನ ರಗಳೆಗಳಲ್ಲಿ ಶಿವ ಮತ್ತು ಭಕ್ತರ ನಡುವೆ ಎದ್ದುಕಾಣುವ ಮತ್ತೊಂದು ಪ್ರಧಾನ ಸಂಬಂಧವೆಂದರೆ ಅದು "ದಾಸ್ಯಸಂಬಂಧ." ಶಿವಶರಣರು ಸದಾಶಿವನ ದಾಸನಾಗಿರುತ್ತಾರೆ ಅವನ ಪಾದಸೇವೆ, ಗುರು-ಲಿಂಗ-ಜಂಗಮನನ್ನು ಭಕ್ತಿಯಿಂದ ಒಲಿಸಿಕೊಳ್ಳಲು ಹಲವು ಬಗೆಯ ನೇಮ-ವ್ರತಗಳನ್ನು ಮಾಡುತ್ತಾರೆ. ಶಿವಭಕ್ತರಿಗೆ ಶಿವನೊಂದಿಗೆ ಪ್ರೀತಿ-ಆತ್ಮೀಯತೆಗಿಂತ ಹೆಚ್ಚಾಗಿ ಭಯ-ಭಕ್ತಿಯ ಜೊತೆಗೆ ಶಿವನ ಚರಣದಾಸರು, ನಮ್ಮ ಮೋಕ್ಷದಾಯಕನು ಶಿವನೊಬ್ಬನೆ ಎಂದು ಎಡೆಬಿಡದೆ ಅವನ ಸೇವೆಯಲ್ಲೇ ತಲ್ಲೀನರಾಗಿರುವ ಶಿವಭಕ್ತರು ಸೌಜನ್ಯಯುತವಾಗಿ ನಡೆದುಕೊಳ್ಳುವ ಪ್ರವೃತ್ತರಾಗಿರುತ್ತಾರೆ. ಶಿವನನ್ನು ತನ್ನ ಒಡೆಯನೆಂದೇ ಭಾವಿಸಿ ಅವನ ಭಕ್ತಿಯಲ್ಲಿ ಮುಳುಗಿರುವ ಶಿವಭಕ್ತರು ಕೆಲವೊಮ್ಮೆ ಪವಾಡಗಳ ಮಧ್ಯೆ ವಾಸ್ತವವನ್ನು ಮರೆಮಾಡಿ ಭಕ್ತಿಯ ಪ್ರಪಂಚವನ್ನು ಎತ್ತಿತೋರಿಸುತ್ತವೆ. ಇಲ್ಲಿ ಶಿವಭಕ್ತನು ಭಕ್ತಿಯ ತನ್ಮಯತೆಯಲ್ಲಿ ಆವೇಶಕ್ಕೆ ಒಳಗಾಗಿ ಶಿವನಿಗಾಗಿ ತನ್ನನ್ನೇ ತಾನು ಅರ್ಪಿಸಿಕೊಳ್ಳುತ್ತಾನೆ. ಹೀಗೆ ಭಕ್ತನ ಜೀವನ ಚರಿತ್ರೆಯ ಅತ್ಯಂತ ಪ್ರಧಾನವಾದ ಭಾಗವೊಂದನ್ನು ಪತ್ತೆಮಾಡಿ ಶಿವನು ಅವರನ್ನು ನಾನಾ ಹಂತಗಳಲ್ಲಿ ಪರೀಕ್ಷಿಸಿ, ಅವನು ವಿಜಯಶೀಲನಾದ ಮೇಲೆ ಅವನನ್ನು ಕೊಂಡಾಡಿ ತನ್ನ ಕೈಲಾಸದಲ್ಲಿ ಗಣಪದವಿಯನ್ನು ನೀಡುವ ಶಿವನಿಗೆ ಶರಣಾಗಿರುತ್ತಾರೆ. ಅದಷ್ಟೇ ಅಲ್ಲದೆ ಅವರ ಇಡೀ ಕುಟುಂಬವೇ ಅಪ್ರತಿಮ ಭಕ್ತರಾಗಿದ್ದು, ಶಿವನ ದಾಸರಾಗಿರುವ ಭಕ್ತ ಪರಂಪರೆಯನ್ನು ಹರಿಹರ ಬಹಳ ಸೊಗಸಾಗಿ ತನ್ನ ರಗಳೆಗಳಲ್ಲಿ ಚಿತ್ರಿಸಿದ್ದಾನೆ.

ಸಮಾಜದಲ್ಲಿ ತನ್ನ ಅಸ್ತಿತ್ವವನ್ನು ಕಳೆದುಕೊಂಡು ಬದುಕುತ್ತಿದ್ದ ಎಷ್ಟೋ ಮಂದಿ ವ್ಯವಸಾಯಸ್ಥರು, ವ್ಯಾಪಾರಿಗಳು, ದೀನದಲಿತರು, ಹೆಣ್ಣುಮಕ್ಕಳು, ವಿಧವೆಯರು ಮೊದಲಾದವರನ್ನು ಮೊದಲಬಾರಿಗೆ ಶೈವ ಪರಂಪರೆಯನ್ನು ಮೈಗೂಡಿಸಿಕೊಂಡು, ಶಿವನ ಸನ್ನಿಧಾನಕ್ಕೆ ಸೇರುವ ಮುಕ್ತಜೀವಿಗಳಿಗೆ ಸ್ವತಂತ್ರ ವ್ಯಕ್ತಿತ್ವವನ್ನು ರೂಪಿಕೊಂಡು ಶಿವನ ದಾಸರಾಗಿದ್ದು, ಹರಭಕ್ತಿ ರಸದಲ್ಲೇ ತಣಿದಿರುತ್ತಾರೆ. ಅವರಿಗೆ ಹರನಾಮವೊಂದೇ ಸರ್ವಸ್ವವೆಂಬಂತೆ ಜೀವಿಸುವ ಶಿವಭಕ್ತರು.

ಇಲ್ಲಿ 'ದಾಸ' ಎಂಬ ಪದ ಅತ್ಯಂತವಾಗಿ ನಿಂದಿತ ಪದ ಆಗಿ ಹೋಗಿದೆ ಎಂದು ಭಾವಿಸುವ ಅವಶ್ಯಕತೆ ಇಲ್ಲ. ಇದು ದಾಸಭಕ್ತಿ, ಅಂದರೆ ಶಿವನಿಗೆ ದಾಸರ ತರಹ ಆಗಿರುವಂತದ್ದು. ಆದರೆ ಶಿವನು ತನ್ನ ಭಕ್ತರ ದಾಸತೆಯನ್ನು ಅಳಿಸಿಹಾಕಿದ್ದಾನೆ. ಭಕ್ತ ಶಿವನ ಮೇಲಿನ ಪ್ರೇಮಕ್ಕಾಗಿ ತನ್ನ ಸಂಪೂರ್ಣ ಮಾಲೀಕತ್ವವನ್ನು ತಾನಾಗಿಯೇ ನೀಡುತ್ತಾನೆಯೇ ಹೊರತು ಅದನ್ನು ಶಿವನು ಕಸಿದುಕೊಳ್ಳುವುದಿಲ್ಲ. ಇದು ಸಮರ್ಪಣ ಮನೋಭಾವವೆನಿಸುತ್ತದೆ. ಭಕ್ತರು ಶಿವನ ಚರಣದಾಸರಾಗುತ್ತಾರೆ, ಎಷ್ಟರ ಮಟ್ಟಿಗೆ ಎಂದರೆ ತನ್ನ ಒಡೆಯ ಶಿವನಿಗೋಸ್ಕರ ಮೀನಮೇಷವೆಣಿಸದೆ ತನ್ನ ಜೀವನ, ಜೀವವನ್ನು ಬಿಡಲು ಸಿದ್ಧವಾಗಿರುತ್ತಾರೆ. ಭಕ್ತರು ತನ್ನ ಒಡೆಯ ಶಿವನಿಗೆ ದಾಸ ಭಕ್ತಿ ಮಾಡಿ ತನ್ನೊಂದಿಗಿನ ತಾದಾತ್ಮ್ಯತೆಯನ್ನು ಬಿಟ್ಟು ಮಾಲೀಕನೊಂದಿಗೆ ಕೂಡಿಕೊಳ್ಳುತ್ತಾರೆ. ಇಲ್ಲಿ ಭಕ್ತನು ತನ್ನನ್ನು ತಾನು ಸಂಪೂರ್ಣವಾಗಿ ಕಳೆದುಕೊಳ್ಳುತ್ತಾನೆ. ಆದರೆ ಅವನಿಗೆ ಪರಕೀಯ ಎಂಬ ಭಾವನೆ ಉಳಿಯುವುದಿಲ್ಲ. ಶಿವನಲ್ಲಿ ಐಕ್ಯನಾಗುವುದು, ಒಂದಾಗುವುದೇ ಭಕ್ತನ ಅಂತಿಮ ಗುರಿ ಎಂದಾದರೆ, ಶಿವನು ಭಕ್ತನನ್ನು ಕಿಂಚಿತ್ತೂ ದೂರಬಿಡದೆ ತನ್ನ ಸಾನಿಧ್ಯದಲ್ಲೇ ಇರಿಸಿಕೊಂಡು ಅಭಯ ನೀಡುತ್ತಾನೆ. ಆದ್ದರಿಂದ ಈ ಶಿವಭಕ್ತರ ಸಂಬಂಧದ ನೆಲೆಯನ್ನು ಗಮನಿಸಿದಾಗ ಭಕ್ತಿ ಎಂಬುದು ಸಾಧನೆ ಅಲ್ಲ, ಉಪಾಸನೆ ಎಂದಾಗುತ್ತದೆ. ಅಂದರೆ ಭಕ್ತನು ನಿತ್ಯವೂ ಶಿವನ ಧ್ಯಾನ, ಸೇವೆ ಮತ್ತು ಅವನಲ್ಲೇ ಉಳಿಯುವ ನಿರೀಕ್ಷೆಯಲ್ಲಿರುತ್ತಾನೆ.

ದಾಸನಾದ ಭಕ್ತ ತನ್ನ ಹೃದಯವನ್ನು ತೆರೆದು ಕಾಯುತ್ತಾನೆಯೇ ಹೊರತು ಶಿವನ ಆಗಮನದ ಸಂಗತಿಯನ್ನು ಅವನಿಗೆ ಬಿಟ್ಟಿರುತ್ತಾನೆ. ಭಕ್ತನು ಭಕ್ತಿಯಿಂದ ಶಿವನನ್ನು ಒಲಿಸಿಕೊಳ್ಳುತ್ತಾನೆ ಹೊರತು ಪ್ರಯಾಸದಿಂದಲ್ಲ; ಎಲ್ಲವನ್ನು ಸಮರ್ಪಿಸುತ್ತಾನೆಯೇ ಹೊರತು

ಸಂಕಲ್ಪ ನಿರತನಾಗಿರುವುದಿಲ್ಲ. ಆದ್ದರಿಂದ ಈ ಭಕ್ತಿಗಿಂತ ಮಿಗಿಲಾದುದು ಇನ್ನಾವುದೂ ಇಲ್ಲ. ಮುಕ್ತಿಗಾಗಿ ಭಕ್ತ ಎಂದೂ ಬೇಡುವುದಿಲ್ಲ. ಆದರೆ ಶಿವನು ಮಾರುವೇಷದಲ್ಲಿ ಅವರ ಸಮೀಪಕ್ಕೆ ಬಂದು ನಾನಾ ರೀತಿಯಲ್ಲಿ ಪರೀಕ್ಷಿಸಿ, ಜಯಿಸಿದ ಭಕ್ತನನ್ನು ಪ್ರೇಮದ ಯಾತ್ರೆಯಲ್ಲಿ ಕರೆದುಕೊಂಡು ಹೋಗಿ ಮುಕ್ತನಾಗಿಸುತ್ತಾನೆ, ಗಣಪದವಿ ನೀಡುತ್ತಾನೆ. ಆದರೆ ಭಕ್ತ ಬೇಡದೆಯೇ ಈ ಬೇಡಿಕೆ ಘಟಿಸಿರುತ್ತದೆ. ಏಕೆಂದರೆ ಭಕ್ತನ ಬೇಕು-ಬೇಡಗಳನ್ನು ನೋಡುವ ಶಿವನೇ ಪರಮನು. ಅನನ್ಯ ಶ್ರದ್ಧೆಯನ್ನು ಹೊಂದಿರುವ ಭಕ್ತನನ್ನು ಯಾವುದೇ ಘಟನೆಯೂ ಶ್ರದ್ಧಾ-ಭಕ್ತಿಯನ್ನು ಏರುಪೇರು ಮಾಡುವುದಿಲ್ಲ, ಯಾವುದರಿಂದಲೂ ಯಾರೂ ಖಂಡಿಸಲು ಆಗುವುದಿಲ್ಲ. ಆಸ್ತಿಕತೆಯೇ ಅವನ ಪರಮ ಗುಣ.

## ದಾಸ್ಯ ಸಂಬಂಧಗಳಡಿಯಲ್ಲಿ ಬರುವ ರಗಳೆಗಳ ವಿಶ್ಲೇಷಣೆ :-

### ೧. ತಿರುನೀಲಕಂಠರ ರಗಳೆ :-

ಚೋಳದೇಶದ ಪೊನ್ನಾಂಬಲವೆಂಬ ಪ್ರಸಿದ್ಧ ನಗರದಲ್ಲಿ ತಿರುನೀಲಕಂಠ ಮತ್ತು ಆತನ ಪತ್ನಿ ಮುತ್ತೈದೆ ವಾಸವಿದ್ದ ಮಹಾಶಿವಭಕ್ತರು. ನಿತ್ಯ ಶಿವಪೂಜೆ, ಅತಿಥಿಸೇವೆ, ದಾಸೋಹ ಹೀಗೆ ಪವಿತ್ರಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡ ಎಳೆಯಪ್ರಾಯದವರು. ಪ್ರತಿನಿತ್ಯ ಶಿವಗುಡಿಗೆ ಹೋಗಿ ಪೂಜಿಸಿ, ಧ್ಯಾನಮಗ್ನನಾಗಿ ಬರುವುದು ತಿರುನೀಲಕಂಠರಿಗೆ ವಾಡಿಕೆಯಾಗಿತ್ತು. ಒಮ್ಮೆ ಪೂಜೆಪುನಸ್ಕಾರಗಳನ್ನು ಮುಗಿಸಿ ಮನೆಗೆ ಹಿಂದಿರುಗುತ್ತಿದ್ದ ತಿರುನೀಲಕಂಠರಿಗೆ ಉಪ್ಪರಿಗೆಯಲ್ಲಿ ವಾಸವಿದ್ದ ವೇಶ್ಯೆಯೊಬ್ಬಳು ತಟ್ಟೆಯಲ್ಲಿದ್ದ ಎಂಜಲು ನೀರನ್ನು ನೋಡದೆ ಎರಚಿದಳು. ಎಂಜಲು ನೀರು ಶಿವಭಕ್ತರಾದ ತಿರುನೀಲಕಂಠರ ಮೇಲೆ ಬಿದ್ದಿದೆ ಎಂದು ಗಾಬರಿಗೊಂಡು ಕೆಳಗೆ ಬಂದು ಅವರನ್ನು ಸಂತೈಸಿ, ತನ್ನ ಅಪರಾಧವನ್ನು ಕ್ಷಮಿಸಬೇಕೆಂದು ನಾನಾ ಪರಿಯಲ್ಲಿ ಬೇಡಿ, ಮಲ್ಲಿಗೆ ಪರಿಮಳಯುಕ್ತ ನೀರಿನಿಂದ ಸ್ನಾನಾದಿಗಳನ್ನು ಮಾಡಿಸಿ ಸುಗಂಧಾದಿ ದ್ರವ್ಯಗಳನ್ನು ಲೇಪನ ಮಾಡಿ, ರೇಷ್ಮೆಯ ಹೊಸ ವಸ್ತ್ರಗಳನ್ನು ನೀಡಿ ಉಪಚರಿಸಿದಳು. ತಡರಾತ್ರಿಯಲ್ಲಿ ಮನೆಗೆ ಬಂದ ಗಂಡನ ವರ್ತನೆಯಲ್ಲಿ ಉಂಟಾದ ಬದಲಾವಣೆಯಿಂದ ಅನುಮಾನಗೊಂಡು ಕೋಪದಿಂದಲೇ ಊಟಕ್ಕೆ ಬಡಿಸಿದಳು. ಮುತ್ತೈದೆಯ ಮುನಿಸಿಗೆ ಕಾರಣ ತಿಳಿಯದ ತಿರುನೀಲಕಂಠರು ಮಲಗುವ ವೇಳೆ ಅವಳ ಮೇಲೆ ಕೈ ಹಾಕಿ ಸರಸವಾಡಲು "ನನ್ನನ್ನು ಮುಟ್ಟಿದರೆ ಶಿವನಾಣೆ" ಎಂದು ಆಣೆಯಿಟ್ಟ ಆ ಪತ್ನಿಯ ಮಾತು ತಿರುನೀಲಕಂಠರಲ್ಲಿ ಶಾಶ್ವತವಾಗಿ ನೆಲೆಯೂರಿತು.

ಅಂದಿನಿಂದ ಪರಸ್ಪರ ಮುಟ್ಟದೆ ಒಂದೇ ಮನೆಯಲ್ಲಿ ಪೂಜೆಪುನಸ್ಕಾರಗಳನ್ನು ನಿತ್ಯ ಜೀವನವನ್ನು ನಡೆಸುತ್ತಾ ತೊಂಬತ್ತರ ಪ್ರಾಯದವರಾದರೂ ಆಣೆಯನ್ನು ಪಾಲಿಸುತ್ತಾ ಶರಣರ ಸೇವೆ, ಶಿವಭಕ್ತಿಯಲ್ಲಿಯೇ ದಿನಕಳೆದರು. ಒಮ್ಮೆ ದಂಪತಿಗಳನ್ನು ಪರೀಕ್ಷಿಸಿ, ಅವರ ಶಿವಭಕ್ತಿಯ ಗಟ್ಟಿತನವನ್ನು ಲೋಕಕ್ಕೆ ಸಾರುವ ಹಿನ್ನೆಲೆಯಿಂದ ಪರಶಿವನು ಬಡಜಂಗಮ ವಯೋವೃದ್ಧನ ವೇಷಧರಿಸಿ ಇವರ ಮನೆಗೆ ಬಂದನು. ಮನೆಗೆ ಬಂದ ಜಂಗಮನನ್ನು ಸತ್ಕರಿಸಿ ಹೊರಟ ದಂಪತಿಗಳಿಗೆ ನನಗೇನು ಬೇಡ; ನನ್ನ ಬಳಿ ಇರುವ ಈ ಅಕ್ಷಯ ಪಾತ್ರೆಯನ್ನು ಜೋಪಾನವಾಗಿ ಕಾಯ್ದಿಡಿ, ನಾಳೆ ನಾನಿದನ್ನು ತೆಗೆದುಕೊಂಡು ಹೋಗುತ್ತೇನೆ ಎಂದು ಹೇಳಿ ಪಾತ್ರೆಯನ್ನು ನೀಡಿ ಹೊರಟನು. ಮಾರನೆಯ ದಿನ ಗಾಬರಿಯಿಂದ ಓಡೋಡಿ ಬಂದು ನನ್ನ ಪಾತ್ರೆಯನ್ನು ತನಗೆ ನೀಡಬೇಕೆಂದು ಹಠಹಿಡಿದನು. ಪೆಟ್ಟಿಗೆಯನ್ನು ತೆಗೆದು ನೋಡಿದಾಗ ಪಾತ್ರೆಯು ಅಲ್ಲಿಲ್ಲದೆ ದಂಪತಿಗಳಿಗೆ ಗಾಬರಿಯಾಯಿತು. ವಿಷಯ ತಿಳಿದ ವೇಷಧಾರಿ ಜಂಗಮ ಮತ್ತಷ್ಟೂ ಕಿರುಚಾಡಿ, ಊರಮುಂದೆ ಪಂಚಾಯಿತಿಯನ್ನು ಕರೆದು ತನ್ನ ವಸ್ತುವನ್ನು ಕದ್ದವರು ಇವರು ಎಂದು ದಂಪತಿಗಳ ಕಳ್ಳತನದ ಆರೋಪ ಪಟ್ಟಿಯನ್ನು ಸಲ್ಲಿಸಿದನು. ಊರಜನರೆಲ್ಲರೂ ತಿರುನೀಲಕಂಠ ದಂಪತಿಗಳು ಮಹಾನ್ ಶಿವಭಕ್ತರು. ಅಚಾತುರ್ಯದಿಂದ ನಡೆದಿರುವ ಈ ಘಟನೆಗೆ ನಾವು ಎಲ್ಲರೂ ಸೇರಿ ಚಿನ್ನದ ಹರಿವಾಣವನ್ನು ನೀಡುತ್ತೇವೆ ಎಂದು ಬೇಡಿದರೂ ವೇಷಧಾರಿ ಜಂಗಮ ಒಪ್ಪದೆ ರೇಗಾಡಿದನು. ಕೊನೆಗೆ ಪರಿಹಾರವಾಗಿ ದಂಪತಿಗಳಿಬ್ಬರು ಕೈಹಿಡಿದು ಈ ಕೊಳದಲ್ಲಿ ಮುಳುಗೇಳಿ ನಾವು ಪಾತ್ರೆಯನ್ನು ಕದ್ದಿಲ್ಲ ಎಂದು ಹೇಳಿದರೆ ಸಾಕು ಎಂದಾಗ ಊರವರೆಲ್ಲರೂ ಸಂತೋಷದಿಂದ ಒಪ್ಪಿಕೊಂಡರೂ, ಆಣೆಯ ಸಲುವಾಗಿ ತಿರುನೀಲಕಂಠರು ಅದು ಮಾತ್ರ ಎಂದೆಂದಿಗೂ ಸಾಧ್ಯವಿಲ್ಲ ಎಂದು ತನ್ನ ಮನಸ್ಸಿನ ಇಂಗಿತವನ್ನು ಹೇಳಿದನು. ಊರವರೆಲ್ಲರೂ ಇದನ್ನು ಕೇಳಿ ಆಶ್ಚರ್ಯಚಕಿತರಾದರೂ ವೇಷಧಾರಿ ಜಂಗಮನು ಒಳಗೊಳಗೇ ಹಿಗ್ಗಿದನು. ತನ್ನ ಮೇಲಿನ ಶಿವಭಕ್ತಿ ಆಣೆಯ ವ್ರತ ಎಷ್ಟು ಗಟ್ಟಿಯಾದುದು ಎಂದು ಸಂತೋಷಪಟ್ಟನು. ನಂತರ ದಂಪತಿಗಳನ್ನು ಕರೆದು ಕೋಲತುದಿಗಳನ್ನು ಹಿಡಿದು ನದಿಯಲ್ಲಿ ಮುಳುಗೇಳಲು ಕೇಳಿದಾಗ ಸಂತೋಷದಿಂದ ಒಪ್ಪಿಕೊಂಡು ಅವರಿಬ್ಬರೂ ಮುಳುಗೇಳಿ ಮೇಲೆ ಬರುವಷ್ಟರಲ್ಲಿ ನವಪ್ರಾಯದ ಜೋಡಿಗಳಾಗಿ ಮೇಲೆ ಬರುತ್ತಾರೆ. ಪರಮೇಶ್ವರನು ಪ್ರತ್ಯಕ್ಷನಾಗಿ ಅವರ ಶಿವಭಕ್ತಿಯನ್ನು ಲೋಕಕ್ಕೆ ಸಾರಿ, ಶಿವಗಣ ಪದವಿಯನ್ನು ನೀಡುತ್ತಾನೆ.

ಹರಿಹರನು ಈ ರಗಳೆಯಲ್ಲಿ ಶಿವ ಮತ್ತು ಭಕ್ತರ ನಡುವೆ ಒಂದು ಭಕ್ತಿಯ ಸೇತುವೆಯನ್ನು ನಿರ್ಮಿಸಿದ್ದಾನೆ. ಲೌಕಿಕ ಜೀವನದಿಂದ ಪಾರಲೌಕಿಕ ಜೀವನದೆಡೆಗೆ ಹೋಗಬೇಕಾದರೆ ಸುಲಭದ ಯಾತ್ರೆ ಅಲ್ಲ, ಬದಲಿಗೆ ಅದು ಸಾಧನೆಯ ಜೀವನ. ಈ ಜೀವನದಲ್ಲಿ ಶಿವನನ್ನು ತನ್ನ ಒಡೆಯನಂತೆಯೂ, ಭಕ್ತನು ದಾಸನಂತೆಯೂ ಸರ್ವಸ್ವವನ್ನು ತ್ಯಾಗಮಾಡುವವನಾಗಿದ್ದಾನೆ. ನಡೆ-ನುಡಿ, ಮನಸ್ಸು ಶುದ್ಧವಾಗಿರಬೇಕು. ನಾವು ಮಾಡುವ ಕಾರ್ಯ ಸತ್ಯ, ನ್ಯಾಯ, ಧರ್ಮಸಹಿತವಾದ ಸುಕಾರ್ಯವಾಗಿರಬೇಕು. ಆಗ ಮಾತ್ರ ನಾವು ಶಿವನಿಗೆ ಪ್ರೀತ್ಯರ್ಥರಾಗುತ್ತೇವೆ. ಇಲ್ಲದಿದ್ದರೆ ಅದು ವ್ಯರ್ಥ ಜೀವನವೆನಿಸುತ್ತದೆ.

ಈ ತಿರುನೀಲಕಂಠರ ರಗಳೆಯಲ್ಲಿ ಶಿವನ ಆಣೆಯ ಮಹತ್ವವನ್ನು ತೋರಿಸುತ್ತಾ, ಶಿವಕಥೆಯಲ್ಲಿ ವ್ಯಕ್ತವಾಗುವ ಕೆಲವು ವಿಶೇಷ ಸಂಗತಿಗಳನ್ನು ಗಮನಿಸುವುದಾದರೆ.ಸಮುದ್ರದಲ್ಲಿ ಬಿದ್ದು ಜಯಿಸಿಬಂದವರುಂಟು ಆದರೆ ಸಂಸಾರ ಸಮುದ್ರದಲ್ಲಿ ಬಿದ್ದು ಜಯಸುವುದು ಕಷ್ಟ ಎಂಬ ನುಡಿ ಪೂರ್ವಕಾಲದಿಂದಲೂ ಕೇಳ ಬಂದಿದೆ. ಏಕೆಂದರೆ ಸಂಸಾರದಲ್ಲಿ ಗಂಡ-ಹೆಂಡತಿ-ಮಕ್ಕಳು ಈ ಬಂಧನ ಬಿಡಿಸಲಾರದ್ದು. ಇಲ್ಲಿ ಸುಖ-ದುಃಖ, ನೋವು-ನಲಿವು, ಬಡತನ-ಸಿರಿತನ, ಜಗಳ-ಮುನಿಸು ನಿರಂತರವಾಗಿರುವಂತದ್ದು. ಇಂತಹ ಸಂಸಾರವನ್ನು ತಿರುನೀಲಕಂಠ-ಮುತ್ತೈದೆಯವರು ಪ್ರಾರಂಭ ಮಾಡಿದ್ದರು. ಆದರೆ ನಾವು ಎಳೆಯ ಪ್ರಾಯದವರು, ಸುಂದರರೂಪವುಳ್ಳವರು ಎನ್ನುವ ಗರ್ವವಿಲ್ಲದೆ, ಕಾಮ-ಮೋಹವಿಲ್ಲದೆ ಶಿವಸ್ವರೂಪವನ್ನು ಮನದಾಳದಲ್ಲಿ ಇಟ್ಟು ನಿತ್ಯ ಪೂಜಿಸುವ ಇವರಿಗೆ ಆಕಸ್ಮಿಕವಾಗಿ ಮುತ್ತೈದೆ ಮಾಡಿದ ಆಣೆಯು ವ್ರತವೇ ಆಗಿಬಿಡುತ್ತದೆ. ಯಾವ ಮೋಹ ಬಂಧನವಿಲ್ಲದ ಇವರ ಸಂಸಾರದಲ್ಲಿ ಆಣೆಯೆಂಬುದೇ ಭಕ್ತ ಬಂಧನವಾಗಿ ಅದರ ಆಚರಣೆಯೇ ನಿತ್ಯ ಜೀವನವಾಗುತ್ತದೆ. ಕೊನೆಯಲ್ಲಿ ಪರಮೇಶ್ವರನು ಇವರಭಕ್ತಿಯನ್ನು, ಆಣೆವ್ರತವನ್ನು ಲೋಕಕ್ಕೆ ಸಾರಿ ಶಿವಗಣಪದವಿ ನೀಡಿದಾಗ ಊರವರಿಗೆಲ್ಲಾ ಆಶ್ಚರ್ಯವಾಗುತ್ತದೆ. ಏಕೆಂದರೆ ಶಿವನಾಣೆಯ ವ್ರತಾಚರಣೆಯು ಗುಪ್ತವಾಗಿರುತ್ತದೆ. ಚೋಳದೇಶದ ಊರಿನ ಸಾವಿರಾರು ಸಂಸಾರಗಳ ಪೈಕಿ ಇವರ ಸಂಸಾರ ವಿಚಿತ್ರವಾಗಿದ್ದರೂ ವಿಶಿಷ್ಟವೆನಿಸುತ್ತದೆ. ಊರಸಭೆಯಲ್ಲಿ ವೇಷಾಧಾರಿ ಶಿವನು ಭಕ್ತಿಯನ್ನು ಪ್ರಕಟಪಡಿಸುವ ಉದ್ದೇಶ ಪ್ರತಿ ಸಂಸಾರ, ಈ ಸಂಸಾರವನ್ನು ಮಾದರಿಯಾಗಿಟ್ಟುಕೊಂಡು ಶಿವಭಕ್ತಿಯನ್ನು ರೂಢಿಸಿಕೊಳ್ಳುವಂತಾಗಬೇಕು ಎಂಬ ಆಶಯ ಗಮನಾರ್ಹ. 'ಸಂಸಾರದ ಗುಟ್ಟು ವ್ಯಾಧಿರಟ್ಟು' ಎಂಬ ಗಾದೆ ಮಾತಿನಂತೆ ತಿರುನೀಲಕಂಠ ಮತ್ತು ಮುತ್ತೈದೆ ದಂಪತಿಗಳ ನಡುವೆ ಆಣೆಯ ಪ್ರಸ್ತಾಪದಿಂದ ವಿರಸದ ವಿಚಾರವನ್ನು ಗೋಪ್ಯವಾಗಿ ಕಾಪಾಡಿಕೊಂಡು ಬಂದು

ಭಕ್ತಿಯಿಂದ ಶಿವನೇ ಸರ್ವಸ್ವ ಎಂದು ನಂಬಿ ಸಂಯಮದಿಂದ ಬದುಕು ಸಾಗಿಸುತ್ತಿದ್ದ ಮುಗ್ಧ ಶಿವಭಕ್ತರ ಮುಗ್ಧ ಶಿವಭಕ್ತಿ ಸರ್ವಕಾಲಕ್ಕೂ ಸಲ್ಲುವಂತದ್ದು. ತಿರುನೀಲಕಂಠರು ತನ್ನನ್ನು ಶಿವನ ದಾಸನಂತೆಯೂ ಜಗದೊಡೆಯನಿಗಾಗಿ ಸಮರ್ಪಣಾ ಮನೋಭಾವದಿಂದ ಶಿವಭಕ್ತಿಯಲ್ಲಿ ಮುನ್ನಡೆಯುವುದು ಅವನ ಅತೀವ ಭಕ್ತಿಯನ್ನು ವ್ಯಕ್ತಪಡಿಸುತ್ತದೆ. ತಿರುನೀಲಕಂಠರಿಗೆ ಜೋಪಾನವಾಗಿ ಎತ್ತಿಡಲು ಕೊಟ್ಟ ಪಾತ್ರೆ ಕಣ್ಮರೆಯಾದದ್ದು ಸೋಜಿಗವೆನಿಸಿದರೂ, ಅವರ ಶಿವಭಕ್ತಿ ತಾಳ್ಮೆ, ಛಲ, ಆತ್ಮವಿಶ್ವಾಸ ಕೊನೆಗೂ ಅವರಿಗೆ ಶಿವಸಾಕ್ಷಾತ್ಕಾರವನ್ನುಂಟು ಮಾಡಿಸಿತು, ಇಂಥ ಮೌಲ್ಯಗಳನ್ನು ದೇವರೆಂದು ಭಾವಿಸಿ ಅಲ್ಲೇ ಶಿವನನ್ನು ಕಾಣಬಹುದು ಎಂಬ ಸಾರವನ್ನು ಈ ರಗಳೆಯಲ್ಲಿ ಹರಿಹರನು ಸಾರಿದ್ದಾನೆ.

## ೨. <u>ಇಳೆಯಾಂಡ ಗುಡಿಮಾರರ ರಗಳೆ :-</u>

ಇಳೆಯಾಂಡ ಗುಡಿ ಎಂಬುದು ಚೋಳದೇಶದ ಒಂದು ಪ್ರಸಿದ್ಧವಾದ ಊರು. ಅಲ್ಲಿ ಸರಳ, ಮುಗ್ಧ ಸ್ವಭಾವದವನಾದ ಇಳೆಯಾಂಡ ಗುಡಿಮಾರ ತನ್ನ ಮಡದಿ ಹಾಗು ಪುತ್ರನೊಂದಿಗೆ ವಾಸವಿರುತ್ತಾನೆ. ಆತನು ಮಹಾನ್ ಶಿವಭಕ್ತ. ಕಾಯಕ ಯೋಗಿಯಾದ ಆ ಶಿವಭಕ್ತನು ವ್ಯವಸಾಯವನ್ನು ತನ್ನ ವೃತ್ತಿಯನ್ನಾಗಿ ಸ್ವೀಕರಿಸಿಕೊಂಡು ಅದರಲ್ಲಿ ಬಂದ ಆದಾಯದ ಬಹುಪಾಲನ್ನು ತನ್ನ ದಾಸೋಹ ಪ್ರವೃತ್ತಿ, ದಾನ ಮಾಡುವುದಕ್ಕಾಗಿ ಬಳಸಿಕೊಂಡು ತನ್ನಲ್ಲಿದ್ದ ಮನೆ, ತೋಟ ಎಲ್ಲವನ್ನು ಅದಕ್ಕಾಗಿ ಸವೆಸುತ್ತಾ ಹರನ ಧ್ಯಾನದಲ್ಲೇ ಮುಳುಗಿರುತ್ತಿದ್ದ. ಕೊನೆಗೆ ಇವನ ಪಾಲಿಗೆ ಒಂದು ಗುಡಿಸಲು, ಹರಕಲು ಒಂದೊಂದು ಬಟ್ಟೆ ಮಾತ್ರವಿತ್ತು. ತನು-ಮನ-ಪ್ರಾಣವನ್ನೇ ಶರಣಸೇವೆಗೆ ಮುಡಿಪಾಗಿಡುವ ಇವನ ಪರೋಪಕಾರ ಬುದ್ಧಿ ಗಮನಾರ್ಹವಾದುದು. ಒಮ್ಮೆ ಪರಮೇಶ್ವರನು ಇವನ ಭಕ್ತಿ ಪರೀಕ್ಷೆಗೆಂದು ಸಕಾಲವನ್ನು ಒಡ್ಡಿ ವಯೋವೃದ್ಧನ ವೇಷಧರಿಸಿ ಇವನ ಗುಡಿಸಲ ಮುಂದೆ ತಡರಾತ್ರಿಯಲ್ಲಿ ಬಂದು ಹರನಾಮ ಸ್ಮರಣೆ ಮಾಡುತ್ತಾ ನಿಂತನು. ಆ ದಿನ ಎಲ್ಲಿಲ್ಲದ ಗುಡುಗು, ಸಿಡಿಲು-ಮಳೆ, ಭೂಮಿಯೇ ಕೊಚ್ಚಿಕೊಂಡು ಹೋಗುವಂತಹ ರಭಸದ ಮಳೆ. ಮನೆ ಬಾಗಿಲಲ್ಲಿ ನಿಂತು ಚಳಿಯಲ್ಲಿ ನಡುಗುತ್ತಿದ್ದ, ಸುಕ್ಕುಗಟ್ಟಿದ ಆ ವಯೋವೃದ್ಧನನ್ನು ವಿನಯದಿಂದ ಮನೆಗೆ ಬರಮಾಡಿಕೊಂಡು ಆತನ ಚಳಿಯನ್ನು ನೀಗಿಸಲು ಮನೆಯ ಜಂತೆಯನ್ನು ಕಿತ್ತು ಬೆಂಕಿಯ ಕಾವಿನಿಂದ ಉಪಚರಿಸಿದನು. ಮೂರು ದಿನಗಳಿಂದ ಎಲ್ಲರೂ ಉಪವಾಸವಿರುವ ಇವರ ಮನೆಯಲ್ಲಿ ತಿನ್ನುವುದಕ್ಕೆ ಕಾಳು ಕಡ್ಡಿಯೂ ಇರುವುದಿಲ್ಲ. ಇಂತಹ ಸಂದರ್ಭದಲ್ಲಿ ಹೊಟ್ಟೆ ಹಸಿವಿನ ಅವನ ತಾಪವನ್ನು ನೀಗಿಸಲು ಆ ತಡರಾತ್ರಿಯಲ್ಲಿ ಹೆಂಡತಿಯ ಮಾತಿನಂತೆ

ಮೂರುದಿನಗಳ ಹಿಂದೆ ಬೀಜಬಿತ್ತಿದ್ದ ಕಾಳುಗಳನ್ನು ಕಿತ್ತುತರಲು ಮಳೆಯಲ್ಲಿಯೇ ನಡೆದನು. ಈ ಮಧ್ಯೆ ಬಾಳೆಎಲೆಯನ್ನು ತರಲು ಹೋದ ಮಗನು ಹಾವು ಕಚ್ಚಿ ಸತ್ತಿದ್ದರಿಂದ ಕಡುನೊಂದು, ಸಾವಿನದುಃಖವನ್ನು ವಯೋವೃದ್ಧನಿಗೆ ತಿಳಿಸಿದರೆ ಊಟಮಾಡದೆ ಹೊರಡುತ್ತಾನೆ. ಹಸಿವಿನಿಂದ ಬಳಲುವ ಅವನ ಸ್ಥಿತಿಗೆ ಉಪಚರಿಸುವುದು ಪುತ್ರವಾತ್ಸಲ್ಯಕ್ಕಿಂತ ಮಿಗಿಲು ಎಂದು ಯೋಚಿಸಿ ತಾನೇ ಬಾಳೆಎಲೆಯನ್ನು ತಂದು ಊಟ ಬಡಿಸಲು ಹೋದಾಗ, ಪದ್ಧತಿಯಂತೆ ಮನೆಯಲ್ಲಿರುವ ಮಗನೊಂದಿಗೆ ಯಜಮಾನನೂ ಊಟಕ್ಕೆ ಕುಳಿತುಕೊಳ್ಳುವುದು ಲೇಸು ಎಂದನು. ನಮ್ಮಯ ಪಾಲಿಗೆ ಅತಿಥಿ ಸೇವೆಯೇ ಪರಮ ಭಾಗ್ಯ, ಮೊದಲಿಗೆ ತಮ್ಮ ಊಟ-ಉಪಚಾರ ನಡೆಯಲಿ ಎಂದು ಬೀಜದ ಕಾಳಿನ ಅನ್ನ, ಕೀರೆಸೊಪ್ಪಿನ ಭೋಜನವನ್ನು ಮುಂದೆ ತಂದಿಡಲು, ಮಗನನ್ನು ಊಟಕ್ಕೆ ಕರೆಯಿರಿ ಎಂದು ಒತ್ತಾಯಿಸುತ್ತಿದ್ದ ವಯೋವೃದ್ಧನಿಗೆ ಕೊನೆಗೆ, ಊಟವನ್ನು ಮಾಡದಿದ್ದರೆ ತನ್ನ ಪ್ರಾಣವನ್ನೇ ಸಮರ್ಪಿಸುವುದಾಗಿ ಮುಂದಾದ ಇಳೆಯಾಂಡ ಗುಡಿಮಾರನ ಭಕ್ತಿಯನ್ನು ಮೆಚ್ಚಿದನು. ಆಗ ಅವನ ಮಗನು ನಿದ್ರೆಯಿಂದ ಎಚ್ಚೆದ್ದವನಂತೆ ಓಡೋಡಿ ಬಂದು ತಾಯಿ-ತಂದೆಯ ಮಡಿಲ ಸೇರಿದನು. ನಂತರ ಪರಮೇಶ್ವರನು ತನ್ನ ನಿಜರೂಪವನ್ನು ದರ್ಶನ ಮಾಡಿಸಿ ಗಣಪದವಿಯನ್ನು ನೀಡಿ ಹರಿಸಿದನು.

ಈ ರಗಳೆಯಲ್ಲಿ ವ್ಯಕ್ತವಾಗುವ ಇಳೆಯಾಂಡಗುಡಿಮಾರನ ಕಥೆಯು ನಿಜಕ್ಕೂ ಮನಮುಟ್ಟುವಂತಿದೆ. ಇಲ್ಲಿ ಇಳೆಯಾಂಡ ಗುಡಿಮಾರನು ಬಡವನಿರಬಹುದು. ಆದರೆ ಅವನಲ್ಲಿ ಹೃದಯ ಶ್ರೀಮಂತಿಕೆ ಇದೆ. ಪರರನ್ನು ಧೈನ್ಯದಿಂದ ಕಾಣಬೇಕೆಂಬ ಮಾನವೀಯತೆ ಇದೆ. ಸತಿ-ಪತಿಗಳಿಬ್ಬರೂ ಒಂದೇ ರೀತಿಯ ಚಿಂತನೆಯುಳ್ಳ ಮನೋಹೃದಯಿಗಳು, ಅದರಂತೆ ಮಗನನ್ನೂ ಭಕ್ತಿಯ, ಧೈನ್ಯ ಮನೋಭಾವದ ನೆರಳಲ್ಲೇ ಬೆಳೆಸಿದ್ದಾರೆ. ತಾನು ಉಪವಾಸವಿದ್ದರೂ ದಾಸೋಹ ವೃತ್ತಿಯಡಿಯಲ್ಲಿ ಬಂದವರಿಗೆ ಉಪಚರಿಸುವ ಆ ಪರೋಪಕಾರ ಬುದ್ಧಿ ಮೆಚ್ಚುವಂತದ್ದು. ತನ್ನ ನೋವಿಗಿಂತ ಇತರರ ನೋವೇ ದೊಡ್ಡದು ಎಂದು ಭಾವಿಸಿ, ಮಗನ ಸಾವಿನ ದುಃಖವನ್ನು ತೋರಗೊಡದೆ ಅತಿಥಿಸೇವೆ ಮಾಡಲು ಮುಂದಾಗಿರುವ ಆ ಸತಿ-ಪತಿಗಳು ಸಮಾಜಕ್ಕೆ ನಿಜಕ್ಕೂ ಆದರ್ಶಪ್ರಾಯರು. ಮೋಸ, ವಂಚನೆಯನ್ನು ಅರಿಯದ ನಿಷ್ಕಲ್ಮಷ ಮನಸ್ಸಿನ ಅವರು, ದುಡಿದದ್ದನ್ನು ಪರೋಪಕಾರಕ್ಕಾಗಿ ಬಳಸುವ ತ್ಯಾಗ ಸ್ವರೂಪದವರು. ಅಲ್ಲದೆ ಶಿವನೇ ಇವರ ಪಾಲಿನ ಒಡೆಯ, ತಾವು ಅವರ ಸೇವಕರಷ್ಟೇ ಸರಿ ಎಂದು ಸದಾ ಶಿವಧ್ಯಾನದಲ್ಲೇ ಮುಳುಗೇಳುತ್ತಿದ್ದರು. ಶಿವನ ದಾಸರಾಗಿ ಅವನ ಭಕ್ತಿಯಲ್ಲಿ ದಾನ-ಧರ್ಮಾದಿಗಳನ್ನು ಮಾಡುತ್ತಿದ್ದ ಇವರ ಈ ಗುಣಕ್ಕೆ

ಪರಮೇಶ್ವರನು ತನ್ನ ದಿವ್ಯ ಸ್ವರೂಪ ಪ್ರಕಟಪಡಿಸಿ ಗಣಪದವಿಯನ್ನು ನೀಡಿದ್ದು ಯಥೋಚಿತವಾಗಿದೆ. ಇಳೆಯಾಂಡ ಗುಡಿಮಾರನು ಮೊದಲಿನಿಂದಲೂ ದುಡಿದಿದ್ದ ಹಣವನ್ನು ಕೂಡಿಟ್ಟಿದ್ದರೆ ಸಾವಿರ ಅಥವ ಲಕ್ಷಾಂತರ ಹೊನ್ನುಗಳನ್ನು ಸಂಗ್ರಹಿಸಿಡಬಹುದಿತ್ತು. ಆದರೆ ಅವನು ಸಂಪಾದಿಸಿದ ಹಣವನ್ನು ಕೂಡಿಡದೆ ದಾಸೋಹ ನೇಮವನ್ನು ರೂಢಿಸಿಕೊಂಡು ದಾನ-ಧರ್ಮ ಮಾಡಿದ ಅವನ ಸುಕಾರ್ಯಕ್ಕೆ ಕೋಟಿ-ಕೋಟಿ ತೆತ್ತರೂ ಲಭ್ಯವಾಗದ ಆ ಗಣಪದವಿ ಅವನ ವ್ಯಕ್ತಿತ್ವಕ್ಕೆ ಭೂಷಣಪ್ರಾಯವಾದುದೇ ಸರಿ! ಹಣವನ್ನು ಕೂಡಿಡುವ ಗೋಜಿಗೆ ಹೋಗದೆ ಜಂಗಮ ಸೇವೆ ಮತ್ತು ಅತಿಥಿ ಸತ್ಕಾರದಂತಹ ಮೌಲ್ಯಯುತ ಕಾರ್ಯಗಳಲ್ಲಿ ತೊಡಗಿಸಿಕೊಂಡು ಒಳ್ಳೆಯ ಗುಣ ಸಂಪಾದಿಸಿದ ಮಹಾನ್ ಶಿವಭಕ್ತ ಹಣಕ್ಕಿಂತ ಗುಣವೇ ಮೇಲು ಎಂಬ ಮೌಲ್ಯವನ್ನು ನಂಬಿ, ಅದನ್ನೇ ಬಾಳಿದ ಇವನ ಬದುಕು ಎಲ್ಲರಿಗೂ ಮಾದರಿಯಾಗಬಲ್ಲದು. ಬಡವ-ಶ್ರೀಮಂತ ಎಂಬ ಬೇಧ-ಭಾವವಿಲ್ಲದೆ ನಿಜ ಭಕ್ತ ಬಡವನ ಮನೆಯ ಪ್ರೀತಿವಿಶ್ವಾಸ ಭರಿತವಾದ ಗುಣಕ್ಕೆ ಒಲಿಯುವ ಶಿವನು ಯಾವಾಗಲು ಬಡವರ ಪಾಲಿಗೆ ಬಡವರ ಬಂಧು ಎನಿಸಿಕೊಳ್ಳುತ್ತಾನೆ. ಹರಿಹರನು ಸಮಾಜದ ಜನತೆಗೆ ಶಿವಶರಣ ಸಂಪನ್ನ ಶಿವಭಕ್ತ ಇಳೆಯಾಂಡ ಗುಡಿಮಾರನ ವ್ಯಕ್ತಿತ್ವವನ್ನು ಬಿಂಬಿಸುವಂತಹ ಆದರ್ಶತೆಯನ್ನು ಹೊಂದಿರಬೇಕು ಎಂಬ ಸಾರವನ್ನು ತಿಳಿಸಿದ್ದಾನೆ.

## ೩. ಅಮರನೀತಿಗಳ ರಗಳೆ:-

ಚೋಳ ದೇಶದ ತಿರುನಲ್ಲೂರು ಎಂಬ ಸಂಪದ್ಭರಿತ ಊರಿನಲ್ಲಿ ಅಮರ ನೀತಿ ಎಂಬ ಶಿವಭಕ್ತನಿದ್ದನು. ಆ ಊರಿನಲ್ಲಿ ಅಮರನೀತಿ ಬಟ್ಟೆಯ ವ್ಯಾಪಾರದಲ್ಲಿ ಹೇರಳ ಸಂಪತ್ತನ್ನು ಗಳಿಸಿದ್ದ. ದಿನನಿತ್ಯ ಭಕ್ತಿಸುಖದಲ್ಲಿ ಮುಳುಗಿದ್ದ ಇವನು ಶಿವನನ್ನು ಆದರದಿಂದ, ಒಲವಿನಿಂದ ಪೂಜಿಸಿ, ಶಿವಭಕ್ತರನ್ನು ಸತ್ಕರಿಸುತ್ತಿದ್ದನು. ಸದಾ ಶಿವಪೂಜೆಗೆ ಹಲವು ಶುಭ್ರ, ನವೀನ ವೈವಿಧ್ಯಮಯ ವಸ್ತ್ರಗಳು ಮತ್ತು ಬಗೆಬಗೆಯ ಪಂಚ ಪಕ್ವಾನ್ನಗಳನ್ನು ನೈವೇದ್ಯಮಾಡಿ ಶಿವಪೂಜೆಯನ್ನು ಮಾಡುತ್ತಿದ್ದನು. ಶಿವನಿಗೆ ನೈವೇದ್ಯವಿಟ್ಟ ವಸ್ತ್ರಗಳನ್ನು ದಾನ ನೀಡುವ ಉದಾರ ಗುಣವುಳ್ಳ ಈ ಶಿವಭಕ್ತನು ತನ್ನ ದಾನಗುಣದಿಂದ ಭೂಲೋಕದಲ್ಲಷ್ಟೇ ಅಲ್ಲದೆ, ಕೈಲಾಸದಲ್ಲಿ ಹೆಸರಾಗಿದ್ದನು. ಹೀಗೆ ಸತತ ಹಲವು ವರ್ಷಗಳಿಂದ ಶಿವಪೂಜೆ, ಭಕ್ತಿ ಮತ್ತು ಶಿವಭಕ್ತರಿಗೆ ವಸ್ತ್ರದಾನ ನೀಡುವ ಇವನ ಶಿವಭಕ್ತಿಯನ್ನು ಮೆಚ್ಚಿದ ಶಿವನು ಪರೀಕ್ಷೆ ಮಾಡುವ ಸಲುವಾಗಿ ವಯೋವೃದ್ಧನ ವೇಷದಲ್ಲಿ ಬಂದನು. ಹೀಗೆ ಆಗಮಿಸಿದ ನೂರು ವರ್ಷದ ವಯೋವೃದ್ಧನು ಸಂಭ್ರಮದಿಂದ ನಡೆಯುತ್ತಿದ್ದ ದಾನದ ಕಾರ್ಯವನ್ನು ಕಂಡು ಸಂತೋಷಿಸಿದನು. ಆದರೆ ಅದನ್ನು ತೋರಗೊಡದೆ ಶಿವಭಕ್ತರ

ಸಮೂಹದಲ್ಲಿ ಕುಳಿತ ವಯೋವೃದ್ಧನನ್ನು ಗಮನಿಸಿದ ಅಮರನೀತಿ ಇಷ್ಟವಸ್ತ್ರವನ್ನು ಆಯ್ಕೆ ಮಾಡಿಕೊಳ್ಳಲು ತಿಳಿಯ ಹೇಳಿದನು. ಆದರೆ ನಡೆಯುತ್ತಿದ್ದ ಆ ದಾನದ ಕಾರ್ಯವನ್ನು ವಿವಿಧ ಪರಿಯಲ್ಲಿ ಹಂಗಿಸಿದ ಶಿವನು ವ್ಯಂಗ್ಯನುಡಿಗಳಿಂದ ಗಹಗಹಿಸುತ್ತಾ ನಗಲಾರಂಭಿಸಿ ನನಗೆ ಇದರ ಅವಶ್ಯಕತೆ ಇಲ್ಲವೆಂದು ಸಾರಾಸಗಟಾಗಿ ತಳ್ಳಿಹಾಕಿದನು. ವಯೋವೃದ್ಧನ ಈ ತಿರಸ್ಕಾರದ ಮಾತುಗಳನ್ನು ಕೇಳಿ, ಬಿನ್ನಹದಿಂದಲೇ ಮತ್ತೆ ಉಪಚರಿಸುವ ಅಮರನೀತಿಗೆ ಕೊನೆಗೆ ಒಂದು ಭಕ್ತಿಭರಿತ ಕೌಪೀನವನ್ನು ಕೊಟ್ಟು ನಾಳೆ ನಾವು ಬರುವವರೆಗೂ ಇದನ್ನು ಜೋಪಾನವಾಗಿರಿಸಲು ತಿಳಿಯಹೇಳಿ ಹೊರಟರು. ಅದರಂತೆ ಅದರ ಗುರುತು ಹಚ್ಚಿ ಅರಮನೆಯಲ್ಲಿ ಜೋಪಾನವಾಗಿರಿಸಲಾಯಿತು. ಆದರೆ ಮರುದಿನ ವಯೋವೃದ್ಧನು ಆಗಮಿಸಿದಾಗ ಕೌಪೀನವು ಕಳೆದುಹೋದ ಸುದ್ಧಿ ಊರೇ ಹಬ್ಬಿ ವಿಷಯ ದೊಡ್ಡದಾಯಿತು. ಅಮರನೀತಿಗೆ ಒದಗಿದ ಈ ಕಷ್ಟಕ್ಕೆ ಊರಿಗೇ ಊರೇ ಹಲವು ರೀತಿಯಲ್ಲಿ ಪರಿಹಾರ ಸೂಚಿಸಿದರೆ ಅದನ್ನೊಪ್ಪದ ಶಿವನು ತನ್ನ ಬಳಿ ಅದೇ ರೀತಿ ಇರುವ ಮತ್ತೊಂದು ಕೋವಣಕ್ಕೆ ಸರಿದೂಗುವಷ್ಟು ವಸ್ತ್ರಗಳನ್ನು ನೀಡಿದರೆ ಸುಮ್ಮನೆ ಹೋಗುವುದಾಗಿ ಒಡಂಬಡಿಕೆಯಾಯಿತು. ಅದರಂತೆ ತಕ್ಕಡಿಯಲ್ಲಿ ಸಹಸ್ರ ಸಂಖ್ಯೆಯಲ್ಲಿ ಆ ಕೋವಣಕ್ಕೆ ಸಮನಾಗಿ ವಸ್ತ್ರದುಡುಗೊರೆಗಳನ್ನು ಸುರಿದರೂ ಅದಕ್ಕೆ ಸಮದೂಗದೆ ಅಮರನೀತಿಯನ್ನು ಚಿಂತೆಗೀಡುಮಾಡಿತು. ಕೊನೆಗೆ ಶಿವಭಕ್ತಿಯಿಂದ ವಿಭೂತಿ ರುದ್ರಾಕ್ಷಿಗಳನ್ನು ಧರಿಸಿ ತನ್ನ ಮಗ, ಮಡದಿ ಮತ್ತು ತಾನೂ ಆ ಕೋವಣಕ್ಕೆ ಪ್ರತಿಯಾಗಿ ತಕ್ಕಡಿಯಲ್ಲಿ ಕುಳಿತಾಗ ತಕ್ಕಡಿ ಸರಿದೂಗಿತು. ಎಲ್ಲವನ್ನೂ ಸಮಾಧಾನಗೊಳಿಸಿತು. ಹೀಗೆ ಇಲ್ಲಿ ಅಮರನೀತಿ ಶಿವನ ದಾಸ, ಶಿವನ ಕೌಪೀನಕ್ಕೆ ಅಮರ ನೀತಿಯ ಕುಟುಂಬವೇ ತುತ್ತಾದರು. ನಿಸ್ವಾರ್ಥ ಮನೋಭಾವದ ಅಮರನೀತಿಗೆ ಶಿವಭಕ್ತಿಯೊಂದೇ ಮುಕ್ತಿ. ಗುರುವಿನ ಆಜ್ಞೆಯಂತೆ ಸನ್ನಡತೆ, ವಿನಯವಂತಿಕೆ, ದಾನ, ತ್ಯಾಗ, ಧರ್ಮಬದ್ಧತೆಯಿಂದ ಶಿವಭಕ್ತಿಯಿಂದಲೇ ಬಾಳಿದ ಇವನ ಬದುಕು ಸಾರ್ಥಕವೆನಿಸಿ ಶಿವನಿಂದ ಮೆಚ್ಚುಗೆ ಪಡೆದು ಗಣಪದವಿಯನ್ನು ಗಳಿಸಿದ ಭಕ್ತಶ್ರೇಷ್ಠ. ಹೀಗೆ ಆ ತಕ್ಕಡಿಯಲ್ಲಿ ಒಂದೆಡೆ ಶಿವನಿತ್ತ ಕೌಪೀನದಲ್ಲಿ ಶಿವನೇ ಏರಿದನು. ಮತ್ತೊಂದೆಡೆ ವಸ್ತ್ರದುಡುಗೊರೆಗಳ ಜೊತೆಗೆ ಶಿವಭಕ್ತ ಅಮರನೀತಿಯ ಕುಟುಂಬ ಭಕ್ತಿಯ ಕಳೆಯಿಂದ ರಾರಾಜಿಸುತ್ತಿತ್ತು. ಈ ಭಕ್ತರ ಭಕ್ತಿ ಶಿವನ ಭಾರಕ್ಕೆ ಸಮವಾಯಿತು. ದಾಸ್ಯ ಸಂಬಂಧದಡಿಯಲ್ಲಿ ದೇವ ಮತ್ತು ಭಕ್ತರ ಭಾರ ಸಮನಾಗಿ ಲೋಕವೇ ಬೆರಗಾಗುವಂತೆ ಶಿವ ಸಾಕ್ಷಾತ್ಕಾರವನ್ನು ಗಳಿಸಿದ ಈ ಭಕ್ತನ ಭಕ್ತಿಯ ಪರಿ ಮೆಚ್ಚುವಂತದ್ದು. ಹೀಗೆ ಸರಿತೂಕದ ಜೊತೆಗೆ ಕುಟುಂಬ ಸಮೇತ ಅಮರನೀತಿಗೆ ಗಣಪದವಿ ನೀಡಿ ಹರಸಿದ ಶಿವನನ್ನು ಹರಿಹರ ತನ್ನ ರಗಳೆಯಲ್ಲಿ ಸ್ತುತಿಸಿದ್ದಾನೆ.

## ೪. <u>ತಿರುಕುರುಂಪೆತೊಂಡರ ರಗಳೆ :-</u>

ತಿರುಕುರುಂಪೆತೊಂಡರನು ಕಾಂಚೀಪುರದಲ್ಲಿ ವಾಸವಿದ್ದ ಓರ್ವ ಅಗಸನು. ಶಿವಭಕ್ತರು ನೀಡುವಂತಹ ಮಲಿನಬಟ್ಟೆಗಳನ್ನು ಮಾತ್ರ ಶುಚಿಗೊಳಿಸುವಂತಹ ಕಾಯಕ ನಿಷ್ಟನು. ದಿನನಿತ್ಯ ಶಿವಪೂಜೆ, ಧ್ಯಾನಗಳಲ್ಲಿ ತನ್ನ ಮನಸ್ಸನ್ನು ಸದಾ ಲೀನವಾಗಿಸಿದ್ದನು. ಕತ್ತೆಯ ಮೇಲೆ ಕೊಳಕು ಬಟ್ಟೆಗಳನ್ನು ಹೊರೆಸಿಕೊಂಡು ಹೋಗಿ ಸ್ವಚ್ಛಗೊಳಿಸುವ ಅವನ ಕಾಯಕ ಶುದ್ಧಿಯಂತೆ ಮನಸ್ಸು ಶುದ್ಧಿಯಾದುದು.

“ತನ್ನ ಉದ್ಯೋಗವನ್ನೇ ಆಧ್ಯಾತ್ಮಕ್ಕೆ ಅಳವಡಿಸಿಕೊಂಡು, ಇಹಪರಗಳೆರಡಕ್ಕೂ ಮಾನ್ಯನಾದ ಶರಣನಾತ ಪಾಪವೆಂಬ ಮಲಿನ ಮನದ ಬಟ್ಟೆಯ ಮೂಟೆಯನ್ನು ಕೋಪವೆಂಬ ಕತ್ತೆಯ ಬೆನ್ನ ಮೇಲೆ ಹೇರುತ್ತಾನೆ. ಶಿವಭಕ್ತಿರಸವೇ ಆತನು ಬಟ್ಟೆಒಗೆಯುವ ಹೊಳೆ, ದೇಹವೇ ಒಗೆಯುವ ಕಲ್ಲು, ದೇಹಭಾವವಳಿದು ಹೋಗುವಂತೆ ಒಗೆದು ಏಕನಿಷ್ಠೆಯಿಂದ ತಿರುಹಿ ತಿರುಹಿ ಹಳಿದು ಹಿಂಡಿ ದೇವನೊಬ್ಬನೇ ಎಂಬ ದಿಟದ ಬಿಸಿಲೊಳಗೆ ಒಣಗಿಸುತ್ತಾನೆ. ಹರನ ಪ್ರಸಾದವೆಂಬ ಗಂಜಿಯನ್ನು ಹಾಕಿ ಹೊಳಪು ಬರುವಂತೆ ಇಸ್ತ್ರಿ ಮಾಡಿ ತನ್ನ ಮನದ ಮಡಿಯನ್ನೇ ಸಕಲ ಭಕ್ತರಿಗೆ ಕೊಡುವಂತೆ ಬಟ್ಟೆಗಳನ್ನು ಮರಳಿಕೊಡುತ್ತಿದ್ದನು. ಹರಿಹರನ ರೂಪಕದ ಕೌಶಲ್ಯ, ಶಬ್ದ ಚಿತ್ರ, ಮಾತಿನ ಸೊಗಸು ಇವುಗಳನ್ನು ಈ ಚಿತ್ರದಲ್ಲಿ ಕಾಣಬಹುದು.” ೧೮ ಹೀಗೆ ಭಕ್ತರ ಕಾಯಕಕ್ಕೆ ಸಂಬಂಧಿಸಿದ ಕಾರ್ಯಗಳನ್ನೇ ಆರಿಸಿ ಅವುಗಳ ಮೂಲಕವೇ ಅವರ ಸೇವೆಯ ಸ್ವರೂಪವನ್ನು ಚಿತ್ರಿಸಿರುವುದು ಹರಿಹರನ ಕಥನ ಕಲೆಯ ಒಂದು ವಿಶೇಷವಾದ ಸಂಗತಿಯಾಗಿದೆ.

ಮಡಿವಾಳ ಕಾಯಕಯೋಗಿ ಶಿವಭಕ್ತನ ಪರೀಕ್ಷೆಗೆಂದು, ಶಿವನು ಶಿವಭಕ್ತರ ಬಟ್ಟೆಗಳೆಂದು ತಂದುಕೊಟ್ಟು ಅದನ್ನು ಶುಚಿಗೊಳಿಸಿದ ನಂತರ ನಾಳೆಯೇ ತೆಗೆದುಕೊಂಡು ಹೋಗುವ ಹಂಬಲ ತಿಳಿಸಿದನು. ಒಂದು ಕ್ಷಣವೂ ತಡಮಾಡದೆ ಬಟ್ಟೆಯನ್ನು ಒಗೆಯಲಿಕ್ಕೆ ಪ್ರಾರಂಭಿಸುವ ತಿರುಕುರುಂಪೆತೊಂಡರ ಹಗಲು ರಾತ್ರಿಯೆನ್ನದೆ ಬಟ್ಟೆಯನ್ನು ಒಗೆಯುತ್ತಾನೆ. ಒಗೆಯುತ್ತಿದ್ದಂತೆ ಬಟ್ಟೆಗಳು ಮತ್ತಷ್ಟೂ ಕಪ್ಪಾಗುತ್ತಿತ್ತು. ತನ್ನ ಕೈಯಲ್ಲಿ ಚರ್ಮಸುಲಿದು, ರಕ್ತ ಸುರಿಯುತ್ತಿದ್ದರೂ ಒಗೆಯುವುದನ್ನು ಬಿಡಲಿಲ್ಲ. ಸಾಲದೆಂಬಂತೆ ಶಿವನ ಮಾಯೆಯೆಂಬಂತೆ ಮಳೆಯೂ ಸುರಿಯಲಾರಂಭಿಸುತ್ತದೆ. ಯಾವುದಕ್ಕೂ ಗಮನವೀಯದೆ ತನ್ನ ದೇಹಶಕ್ತಿಯೂ ಸಂಪೂರ್ಣ

---

ಅಡಿಟಿಪ್ಪಣಿಗಳು : ೧೮. ಹರಿಹರನ ರಗಳೆಗಳಲ್ಲಿ ಜೀವನದರ್ಶನ-ಸ.ಸ. ಮಾಳವಾಡ, ಪು.ಸಂ.೮೨

ಬತ್ತಿದರೂ ಒಗೆಯುವುದನ್ನು ನಿಲ್ಲಿಸದೆ ಭೌತಿಕ ಶಾರೀರಿಕ ಶಕ್ತಿಯನ್ನು ಅದಕ್ಕೆ ಮೀಸಲಿಟ್ಟನು. ಆ ಶಿವಭಕ್ತನನ್ನು ಮೆಚ್ಚಿ ಪಾರ್ವತಿ ಸಮೇತ ದರ್ಶನ ನೀಡಿ ಅವನ ನಿಷ್ಠೆಯನ್ನು ಲೋಕಕ್ಕೆ ಸಾರಿ ಗಣಪದವಿಯನ್ನು ನೀಡಿದನು. ಕಾಯಕದಲ್ಲಿ ಪ್ರಾಮಾಣಿಕತನ, ನಿಷ್ಠೆ ಮತ್ತು ಶಿವಭಕ್ತಿ ಮೆರೆದ ಈ ತಿರುಕುರುಂಪೆತೊಂಡರನು ಶಿವನನ್ನು ಆರಾಧ್ಯದೈವ ಮತ್ತು ತನ್ನ ಒಡೆಯ ಎಂದು ಭಾವಿಸಿ ಅವನ ಸೇವೆಯಲ್ಲಿ ಜೀವನವನ್ನು ಕಳೆಯುತ್ತಾ ಸಮಾಜಕ್ಕೆ ಆದರ್ಶಪ್ರಾಯವಾಗಿದ್ದಾನೆ. ಕಾಯಕವನ್ನು ಆಧ್ಯಾತ್ಮಿಕ ಜೀವನದೊಂದಿಗೆ ಬೆರಸಿ ಶರಣುಹೋಗುವ ಇವನ ಜೀವನದ ಪರಿ ಸರ್ವಕಾಲಕ್ಕೂ ಸಲ್ಲುವಂತಹುದು.

## ೫. <u>ಕಲಿಕಂಪರ ರಗಳೆ :-</u>

ಪೆಣ್ಣಾಕಟಾಖ್ಯಪುರ ಎಂಬ ಊರಿನಲ್ಲಿ ಕಲಿಕಂಪರ ಎಂಬ ಶಿವಭಕ್ತನಿದ್ದನು. ಸುನೀತಿ, ಸದಾಚಾರ ತತ್ಪರನಾದ ಈ ಶಿವಭಕ್ತನು ಹರನನ್ನು ಬಿಟ್ಟು ಅನ್ಯ ದೇವರಗೊಡವೆಗೋದವನಲ್ಲ, ತಾರತಮ್ಯವಿಲ್ಲದೆ ಎಲ್ಲರನ್ನು ಸಮನಾಗಿ ನೋಡುವ ಗುಣವಿರುವ ಇವನ ಮನೆಗೆ ಯಾರೇ ಶಿವಭಕ್ತರು ಬಂದರೂ ಪಾದಸೇವೆ ಮಾಡಿ ಸುಭಕ್ಷ್ಯಬೋಜನವನ್ನು ನೀಡಿ ಅವರನ್ನು ತೃಪ್ತಿಪಡಿಸುವ ನೇಮವನ್ನು ಹೊಂದಿದ್ದನು.

ಒಮ್ಮೆ ಅವನ ಮನೆಗೆ ನಾಡಿನ ಹಲವು ಕಡೆಯಿಂದ ಬಂದ ಶಿವಭಕ್ತರ ಪಾದಪೂಜೆಯನ್ನು ಹೆಂಡತಿಯೊಂದಿಗೆ ಮಾಡುತ್ತಿರುತ್ತಾನೆ. ಹಿಂದೆ ಕಲಿಕಂಪರನ ಸೇವೆಯಲ್ಲಿ ಭಂಟನಾಗಿ, ಆದರೆ ಅನಂತರ ಜಗಳವಾಡಿಕೊಂಡು ಬಿಟ್ಟುಹೋಗಿ ಈಗ ಶಿವವೇಷಧಾರಿಯಾಗಿ ಬಂದು ಈ ಭಕ್ತರ ಜೊತೆಗೆ ಬಂದಿದ್ದನು. ಸರದಿ ಪ್ರಕಾರ ಅವನ ಪಾದಕ್ಕೆ ನೀರು ಹೊಯ್ಯಲು ನಿರಾಕರಿಸಿದ ಹೆಂಡತಿಯನ್ನು ತೆಗಳ, ಕೋಪದಿಂದ ತನ್ನ ಖಡ್ಗದಿಂದ ಬಲವಾಗಿ ಅವಳ ಕೈಗಳನ್ನು ಕತ್ತರಿಸಿದ. ಈ ನಿಷ್ಠೆಯುತ ಮತ್ತು ಕಠೋರ ಭಕ್ತಿಗೆ ಶಿವ ಒಲಿದು ಶಿವಗಣಪದವಿ ನೀಡಿದನು. ಗುರು-ಲಿಂಗ-ಜಂಗಮ ಸೇವೆಯೇ ಆದ್ಯ ಕರ್ತವ್ಯವೆಂದು ಭಾವಿಸಿದ್ದ ಕಲಿಕಂಪರನ ಶುದ್ಧ ಮತ್ತು ಬೇಧ ರಹಿತ ಮನಸ್ಸಿಗೆ ಶಿವನು ಒಲಿದನು. ಶಿವಭಕ್ತಿಯ ಮುಂದೆ ಯಾವ ಬಾಂಧವ್ಯವೂ ದೊಡ್ಡದಲ್ಲ ಎಂದು ಸಾಬೀತು ಮಾಡುವ ಕಠೋರ ಭಕ್ತಿ ಗಮನಾರ್ಹ. ಶಿವಭಕ್ತಿಯ ಮುಂದೆ ಯಾವ ಸಂಬಂಧಗಳೂ ಶಿವಭಕ್ತರಿಗೆ ಮುಖ್ಯವಲ್ಲ. ಶಿವಭಕ್ತರ ಸೇವೆಗೆ ಅಡಚಣೆ ಮಾಡಿದ ಹೆಂಡತಿಯ ಕಾರ್ಯವನ್ನು

ಅಕೃತ್ಯ ಎಂದು ಭಾವಿಸಿ ಅವಳಿಗೆ ತಕ್ಕ ಶಿಕ್ಷೆ ವಿಧಿಸುವ ಗಂಡ ಕಲಿಕಂಪರನ ಭಕ್ತಿ ನೈನವಾದುದು ಹಾಗು ಧೃತಿಯಿಂದ ಕೂಡಿದುದಾಗಿದೆ.

## ೬. ಕಲಿಯನಾಯನಾರ ರಗಳೆ :-

ಶಿವಪುರವೆಂದೇ ಖ್ಯಾತಿಯಾಗಿದ್ದು ಸಂಪದ್ಭರಿತ ತಿರುವತ್ತಿಯೂರಿನಲ್ಲಿ ಕಲಿಯನಾಯನಾರ ಎಂಬ ಶಿವಭಕ್ತನಿದ್ದನು. ಗಾಣಿಗರ ಕುಲದಲ್ಲಿ ಹುಟ್ಟಿದ್ದ ಕಲಿಯನಾಯನಾರ ತನ್ನ ಊರಿನ ಶಿವಾಲಯದಲ್ಲಿ ನಿತ್ಯ ಎಣ್ಣೆ ದೀಪಗಳನ್ನು ರಾತ್ರಿಯಿಡೀ ಹಚ್ಚಿ ಶಿವಪೂಜೆ ಮಾಡುವ ನೇಮವಿರಿಸಿಕೊಂಡಿದ್ದ ಈತನಿಗೆ ಬರಬರುತ್ತಾ ಬಡತನಕ್ಕೆ ಸಿಕ್ಕಿ ಹಣವಿಲ್ಲದೆ ಕೂಲಿಗೆ ಸೇರಿ ದೀಪವುರಿಸಿ ಪೂಜಿಸುತ್ತಿದ್ದನು. ಹರನ ಪರೀಕ್ಷೆಯೋ ಎಂಬಂತೆ ಇದ್ದ ಕೆಲಸವೂ ಹೋಗಿ ನೇಮ ಮುಂದುವರಿಸಲು ಎಣ್ಣೆಗಾಗಿ ಪತ್ನಿಯನ್ನು ಮಾರಲು ನಗರದೆಲ್ಲೆಡೆ ಬೇಡಿ ಅದು ಸಾಧ್ಯವಾಗುವುದಿಲ್ಲ. ಕೊನೆಗೆ ಶಿವಾಲಯಕ್ಕೆ ಬಂದು ದೀಪದಲ್ಲಿ ಭಕ್ತಿ ಎಂಬ ಭತ್ತಿ ಇರಿಸಿ, ಖಡ್ಗ ತೆಗೆದು ತನ್ನನ್ನು ಕತ್ತರಿಸಿ, ಆ ರಕ್ತದಿಂದಲೇ ದೀಪವುರಿಸಲು ಮುಂದಾದಾಗ ಅವನನ್ನು ತಡೆದು ತನ್ನ ರೂಪು ತೋರಿದನು. ಶಿವನಾಜ್ಞೆಯಂತೆ ಸತಿ-ಪತಿ ಸಮೇತ ಕೈಲಾಸದಲ್ಲಿ ಗಣಪದವಿ ಪಡೆದರು. ಒಮ್ಮೆ ಶಿವನ ಚರಣದಾಸನಾದ ಮೇಲೆ ಜೀವ ಮತ್ತು ಜೀವನದ ಹಂಗನ್ನು ತೊರೆದು ಭಕ್ತಿ ಮತ್ತು ಸೇವಾ ಮಾರ್ಗದಲ್ಲಿಯೇ ಸಾಗುವ ಶಿವಭಕ್ತರು ಶಿವನ ಪ್ರೀತಿ ಸಂಪಾದಿಸುವ ವಿಶೇಷ ಗುಣ ಸಂಪನ್ನರು.

ಕಲಿಯನಾಯನಾರನ ಶಿವಭಕ್ತಿ ಅತಿ ಕಠೋರವಾದುದು. ಶಿವನನ್ನು ಒಡೆಯನೆಂದು ಭಾವಿಸಿ ಸದಾ ಅವನ ಧ್ಯಾನದಲ್ಲಿ ಮುಳುಗಿದ್ದು, ಏನೇ ಕಷ್ಟಬಂದರೂ ನೇಮ ಬಿಟ್ಟುಕೊಡದ ಆತನ ಛಲಕ್ಕೆ ಶಿವನೊಲಿದಿದ್ದಾನೆ ಎಂಬ ಸಾರವು ಇಲ್ಲಿ ವ್ಯಕ್ತವಾಗಿದೆ, ಇಂತಹ ಕಥೆಗಳನ್ನು ಓದಿದ ಸಮಾಜದ ಸಾಮಾನ್ಯರು ನಿಷ್ಠೆಯಿಂದ ಪ್ರಾಣದ ಹಂಗು ತೊರೆದು ಉಗ್ರರೂಪದ ಶಿವಭಕ್ತಿರೂಡಿಸಿಕೊಳ್ಳಲು ಮುಂದಾಗಲಿ ಎಂಬ ದರ್ಶನವನ್ನು ಕವಿ ಮಾಡಿಸಿದಂತಿದೆ.

## ೭. ಅಯ್ಯಡಿಯರ ರಗಳೆ :-

ಶ್ರೀ ಪಲ್ಲವ ರಾಜ್ಯದಲ್ಲಿ ರಾಜನಾಗಿ ಧರ್ಮನಿಷ್ಠರಾಗಿ ರಾಜ್ಯವಾಳುತ್ತಿದ್ದನು. ಇಡೀ ಊರಿನಲ್ಲಿ ಶೈವಾಗಮದ ತತ್ವಬೋಧನೆಗಳೇ ಆವರಿಸಿ ಸಂಪದ್ಭರಿತವಾದುದಾಗಿತ್ತು. ಹೀಗಿರುವಾಗ

ಕುಟುಂಬದಲ್ಲಿರುವ ಎಲ್ಲಾ ಸಂಬಂಧಗಳು ಅಶಾಶ್ವತವಾದದ್ದು, ಶಿವನೊಲುಮೆಯೊಂದೇ ಶಾಶ್ವತ ಕೀರ್ತಿತರುವಂತದ್ದು ಎಂದು ಸಕಲೈಶ್ವರ್ಯಗಳನ್ನು ತೊರೆದು ಭೂಮಂಡಲದಲ್ಲಿರುವ ಸಕಲ ಶೈವಮಂದಿರಗಳನ್ನು ದರ್ಶನಮಾಡಿ ಶಿವಧ್ಯಾನಪೂಜೆ ಸಲ್ಲಿಸುತ್ತಾ ಬಂದನು. ಅವನ ಶಿವಗಾನ ಕೇಳಿ ಒಲಿದ ಶಿವನು ತನ್ನ ನಂದೀಶನೊಡನೆ ಅಯ್ಯಡಿಯನ್ನು ಕೈಲಾಸಕ್ಕೆ ಕರೆತಂದು ಗಣಪದವಿ ನೀಡಿ ಹರಿಸಿದನು.

ಎಲ್ಲಾ ಶಿವಭಕ್ತರ ಕಥೆಗಳಲ್ಲೂ ಶಿವನೇ ಭೂಲೋಕಕ್ಕೆ ಬಂದು ಶರಣರ ಭಕ್ತಿಯನ್ನು ಪರೀಕ್ಷಿಸಿ ಗಣಪದವಿಯನ್ನು ನೀಡಿರುವನು. ಆದರೆ ಇಲ್ಲಿ ನಂದೀಶನೊಂದಿಗೆ ಅಯ್ಯಡಿಯನ್ನು ಕರೆಸಿಕೊಳ್ಳುತ್ತಾನೆ. ಶಿವನ ಪರೀಕ್ಷೆಗೆ ಮುನ್ನವೇ ಅವನೇ ತನ್ನ ಭೋಗ ಜೀವನ, ಕುಟುಂಬದವರನ್ನೆಲ್ಲಾ ಅಶಾಶ್ವತ ಎಂದು ಮೋಹ ತೊರೆದ ಅವನ ನಿಷ್ಠೆಗೆ ಶಿವನೊಲಿದಿದ್ದನು. ಇಲ್ಲಿ "ಭೋಗ ಸುಖಕ್ಕಿಂತ, ಭಕ್ತಿ ಸುಖಕ್ಕೆ ಆದ್ಯತೆ ನೀಡಿರುವ ಅಯ್ಯಡಿಯರ ಭಕ್ತಿ ಚಿರವಾದುದು, ಶಿವನು ಒಲಿಯುವುದು ಭಕ್ತಿಗೇ ಹೊರತು ಆಡಂಬರ ಜೀವನ, ಭೋಗ-ಭಾಗ್ಯಕ್ಕಲ್ಲ" ಎಂಬ ಸಾರ್ವಕಾಲಿಕ ಸತ್ಯವನ್ನು ಪ್ರತಿಪಾದಿಸಿದ ಹರಿಹರ ಜನಸಾಮಾನ್ಯರಲ್ಲಿ ಭಕ್ತಿಯ ಪ್ರತಿಷ್ಠಾಪನೆಯನ್ನು ಮಾಡಿದ್ದಾನೆ.

೮. **ವಾಹಿಲ್ಯರ ರಗಳೆ :-**

ತುಂಡೀರ ಮಂಡಲದಲ್ಲಿ ಮಯೂರಪುರದಲ್ಲಿ ತನ್ನ ದೇಹವನ್ನೇ ದೇವಾಲಯವೆಂದು ಭಾವಿಸಿ, ಅದನ್ನು ಭಕ್ತಿಯಿಂದ ಪೂಜಿಸಿದ ವಾಹಿಲ್ಯನಿಗೆ ಶಿವನೊಲಿದು ಕೈಲಾಸದಲ್ಲಿ ಗಣಪದವಿ ನೀಡಿದ. ಈ ಕಥೆಯು ಬಸವಣ್ಣನವರೆ "ಎನ್ನ ಕಾಲೇ ಕಂಬ, ದೇಹವೇ ದೇವಾಲಯ, ಶಿರವೇ ಹೊನ್ನ ಕಳಸವಯ್ಯ" ಎಂಬ ವಚನವನ್ನು ನೆನೆಸುತ್ತದೆ. ವಾಹಿಲ್ಯನು ಶಿವನನ್ನು ತನ್ನ ಅಂತರಂಗದ ಒಡೆಯನೆಂದು ಭಾವಿಸಿ ಸದಾ ಅವನ ಧ್ಯಾನಚಿಂತನೆಯಲ್ಲಿ ಕಾಲ ಕಳೆದಿರುವ ಅವನಿಗೆ ಶಿವನೇ ಸರ್ವಸ್ವವಾಗಿದೆ. ಇಲ್ಲಿ ಶಿವಪೂಜೆಗೆ ಅಂತರಂಗ ಬಹಿರಂಗ ಶುದ್ಧಿ ಮುಖ್ಯ ಎಂಬ ಸಾರವನ್ನು ನೆನಪು ಮಾಡಿಕೊಡುತ್ತದೆ.

೯. **ಅತಿಭಕ್ತರ ರಗಳೆ :-**

ಚೋಳದೇಶದ ಕಾವೇರಿನದಿ ಸಮೀಪದಲ್ಲಿದ್ದ ಪುರದಲ್ಲಿ ಸಜ್ಜನರು ವಾಸವಾಗಿದ್ದು ಮೀನು ಹಿಡಿಯುವ ಕಾರ್ಯದಲ್ಲಿ ನಿರತರಾಗಿದ್ದರು. ಅವರಲ್ಲಿ ಶಿವಭಕ್ತನಾದ ಅತಿಭಕ್ತ ಎಂಬ

ಹೆಸರಿನ ಮೀನು ಹಿಡಿಯುವವನು ಸದಾ ಶಿವಧ್ಯಾನ, ಶಿವಪೂಜೆ ಮತ್ತು ಸಚ್ಚಾರಿತ್ರ್ಯಗಳಿಂದ ಕೂಡಿದವನಾಗಿದ್ದನು. ಮೀನು ಹಿಡಿಯುವ ವೃತ್ತಿಯವನಾಗಿದ್ದ ಅತಿಭಕ್ತ ನಿತ್ಯ ತನಗೆ ದೊರೆತ ಮೊದಲ ಮೀನನ್ನು ಶಿವಾರ್ಪಣೆಗೆಂದು ಬಿಟ್ಟು ಉಳಿದದ್ದನ್ನು ಮಾರಿ, ಬಂದ ಹಣದಲ್ಲಿ ಶಿವಪೂಜೆ, ಶಿವಶರಣರ ಸೇವೆ ಕುಟುಂಬ ನಿರ್ವಹಣೆ ಮಾಡುತ್ತಿದ್ದ. ಹೀಗೆ ವರ್ಷಗಳೇ ಕಳೆದವು ಆದರೆ ಕಾಲನಿಮಿತ್ತ ಅವನಿಗೆ ಒಂದೇ ಮೀನು ಸಿಗತೊಡಗುತ್ತಿತ್ತು. ಸಿಕ್ಕ ಮೀನನ್ನು ಶಿವಾರ್ಪಣೆಯ ಹೆಸರಿನಲ್ಲಿ ಬಿಟ್ಟರೆ ಮತ್ತಾವುದೇ ಮೀನು ಇವನ ಬಲೆಗೆ ಸಿಗುತ್ತಿರಲಿಲ್ಲ, ಹೀಗೆ ನಿತ್ಯ ಉಪವಾಸ. ಬಡತನ ಹೆಚ್ಚುತ್ತಾ ಹೋಯಿತು. ಏನೇ ಕಷ್ಟಬಂದರೂ ತನ್ನ ನೇಮವನ್ನು ಸಡಿಲಿಸಿಕೊಳ್ಳದ ಈ ಶಿವಭಕ್ತನು ಭಕ್ತಿಯಲ್ಲಿ ನಿಷ್ಠೆ, ಛಲದಿಂದಲೇ ಇದ್ದನು. ಆಶ್ಚರ್ಯವೆಂಬಂತೆ ಒಮ್ಮೆ ಶಿವನ ಲೀಲೆಯಿಂದ ನವರತ್ನ ಕಾಂತಿಯಿಂದ ಹೊಳೆಯುವ ಚಿನ್ನ ಖಚಿತ ಮೀನು ದೊರೆತಾಗ ಎಲ್ಲರೂ ಇವನನ್ನು ಉತ್ತೇಜಿಸಿ, ನಿನ್ನ ಕಷ್ಟಗಳು ತೀರುವ ಕಾಲಬಂದಿದೆ. ಈ ಮೀನಿನಿಂದ ಎಂದು ತಿಳಿಯಹೇಳಿದರು. ಆದರೆ ನಿಯಮದಂತೆ ಅದು ಹಿಡಿದ ಮೊದಲ ಮೀನಾಗಿದ್ದರಿಂದ ಅದನ್ನು ಶಿವಾರ್ಪಣೆಗೆ ಬಿಟ್ಟ. ಹೀಗೆ ಸಲಸಲ ಗಾಳ ಬೀಸಿದಾಗ ಅದೇ ಮೀನು ದೊರೆಯಿತು. ಸಂಪತ್ತಿಗೆ ಆಸೆ ಪಡದೆ ಶಿವಭಕ್ತಿಯನ್ನೇ ಮೆರೆದ. ಹೀಗೆ ಅತಿಭಕ್ತನ ನಿಷ್ಠೆ, ನಿಸ್ವಾರ್ಥ, ತೃಪ್ತ ಮನಸ್ಸು ಮನೋಭಾವಕ್ಕೆ ಒಲಿದ ಶಿವನು ಪ್ರತ್ಯಕ್ಷವಾಗಿ ಕೈಲಾಸದಲ್ಲಿ ಗಣಪದವಿಯನ್ನು ನೀಡಿ ಹರಿಸಿದನು. ಹೀಗೆ ಶಿವನ ಭಕ್ತಿಯ ವ್ರತನಿಷ್ಠೆಯ ಮುಂದೆ ಸಂಪತ್ತು ನಶ್ವರವಾದುದು ಎಂದು ಭಾವಿಸಿ ವ್ಯಾಮೋಹಕ್ಕೊಳಗಾಗದೇ ಅವನ ನಿಶ್ಚಲ ಮನಸ್ಸು ಅವನಿಗೆ ಮೋಕ್ಷಪ್ರಾಪ್ತಿಮಾಡಿತು. ಅತಿಭಕ್ತನಿಗೆ ಯಾವಾಗ ಪ್ರತಿಸಲವೂ ಅದೇ ಮೀನು ದೊರೆತಾಗ ವಿಚಲಿತನಾಗದೆ, ಮತ್ತೊಮ್ಮೆ ಅದೇ ಮೀನು ದೊರೆತರೆ ತನ್ನ ಕೈಯನ್ನು ಛೇದಿಸಿಕೊಂಡು ಶಿವನಿಗೆ ಅರ್ಪಿಸುತ್ತೇನೆ ಎಂದು ಬಲೆಬೀಸಿದಾಗ ಅವನಿಗೆ ಶಿವದರ್ಶನ ಪ್ರಾಪ್ತಿಯಾಯಿತು. ವ್ರತನಿಷ್ಠೆಯಲ್ಲಿ ತಲ್ಲೀನನಾದ ಭಕ್ತನಿಗೆ ಶಿವಭಕ್ತಿಯೇ ಜೀವನ, ಅದೇ ಸರ್ವಸ್ವ. ಲೌಕಿಕ ಮೋಹಕ್ಕೆ ಒಳಗಾಗಿ ಎಂದೆಂದಿಗೂ ವ್ರತಕ್ಕೆ ಭಂಗ ತಂದುಕೊಳ್ಳದ ನಿಷ್ಠೆಯ ಶಿವಭಕ್ತರು ಇಲ್ಲಿರುವರು.

"ಮಾನವನ ಭಕ್ತಿಯೆಂಬ ಪಾಶದಿಂದ ಶಿವನನ್ನೂ ಮೀನಿನಂತೆ ಹಿಡಿದು ಹಾಕಬಹುದೆಂದು ಅತಿಭಕ್ತನ ರಗಳೆಯಲ್ಲಿ ಹರಿಹರನು ನಿರೂಪಿಸಿದ್ದಾನೆ. ಮೀನುಗಾರಿಕೆಯನ್ನು ಕಾಯಕದ ತತ್ವಕ್ಕೇರಿಸಿದ್ದಾನೆ. ಈ ರಗಳೆಯಲ್ಲಿ ಮಾನವನ ಜೀವನದ ವೃತ್ತಿ ಏನೇ ಇದ್ದರೂ ಅದರಲ್ಲಿ ಭಕ್ತಿ ನಿಷ್ಠೆಗಳನ್ನು ಅಳವಡಿಸಿಕೊಂಡು ದೈವೀ ಪ್ರಸನ್ನತೆಗೆ ಅರ್ಹನಾಗಬಹುದು."೧೯ ಅತಿಭಕ್ತನ ಭಕ್ತಿಯು

ಔನತ್ಯಕ್ಕೇರಲು ಅವನಲ್ಲಿರುವ ನಿಷ್ಠೆ, ವೃತ್ತಿಗೌರವ, ಸಮರ್ಪಣಾ ಮತ್ತು ನಿಸ್ವಾರ್ಥಗುಣಗಳೇ ಪ್ರಮುಖ ಕಾರಣವಾಗಿದೆ.

## ೧೦. ಭೃಂಗೀಶ್ವರನ ರಗಳೆ :-

ಕೈಲಾಸದ ಶಿವನ ಒಡ್ಡೋಲಗದಲ್ಲಿ ಗಣಾಧರರು ದೇವಾನುದೇವತೆಗಳು, ಋಷಿಮುನಿವರ್ಯರ ಸಮ್ಮುಖದಲ್ಲಿ ಹರ್ಷದೊಂದಿಗೆ ನಗುಮುಖದಲ್ಲಿ ಕುಳಿತಿರುವ ಶಿವನು ಶೋಭಿಸುತ್ತಿದ್ದಾನೆ. ಈ ಸಂದರ್ಭದಲ್ಲಿ ಸಭೆಗೆ ಪ್ರವೇಶಿಸಿದ ಭೃಂಗೀಶ್ವರನು ಹಣೆಯಲ್ಲಿ ಭಸಿತ, ಅಂಗದ ಮೇಲೆ ಲಿಂಗ, ಸರ್ವಾಭರಣ ಭೂಷಿತನಾಗಿ ವಿವಿಧ ಹಾವಭಾವಗಳಿಂದ ಸಂಗೀತನಾದ, ನರ್ತನ ಮಾಡುತ್ತಾ ಸಭಿಕರನ್ನು ಆಕರ್ಷಿಸುತ್ತಾನೆ. ಇತ್ತ ಶಿವನ ಪಾದಚರಣಗಳ ಮೇಲೆ ಬಿದ್ದು ವಿಧ ವಿಧವಾಗಿ ಸ್ತುತಿಸಲಾರಂಭಿಸುತ್ತಾನೆ. ಭೃಂಗೀಶ್ವರನಲ್ಲಿಯ ಸಂಗೀತ, ನರ್ತನ ಸೇವೆ ಮತ್ತು ಹೃದಯ ತುಂಬಿ ಬಂದಿರುವ ಭಕ್ತಿ-ಭಾವಕೆ ಶಿವನೇ ಸೋತು ನನ್ನನ್ನೇ ನಿನಗೆ ಅರ್ಪಿಸುತ್ತೇನೆಂದು ಕೊಂಡಾಡುತ್ತಾನೆ. ಇದರಿಂದ ಭಾವ ಸಂತೃಪ್ತನಾದ ಭೃಂಗೀಶ್ವರನು ನರ್ತನ, ಗಾನಸೇವೆಯನ್ನು ಶಿವನಿಗೆ ಸಲ್ಲಿಸಿ ಕೃತಾರ್ಥನಾಗುವ ಈ ಕಥೆಯ ಭಾವವು ವಿಶೇಷವಾದುದು. ತಮ್ಮಲ್ಲಿಯ ಯಾವುದೇ ಕಲೆಯ ಮೂಲಕವೂ ಭಕ್ತಿ ಪ್ರದರ್ಶಿಸಿ ನಾವು ಶಿವನ ಹೃದಯವನ್ನು ಗೆಲ್ಲಬಹುದು ಎಂಬ ಸತ್ಯವೇದ್ಯವಾಗುತ್ತದೆ. ಕಲೆಯೆಂಬುದು ಜೀವನದ ಪರಮ ಲಲಿತಕಲೆಯಾಗಿದೆ, ಅದನ್ನು ಶಿವನ ಭಕ್ತಿಯಲ್ಲಿ ಮಿಳಿತಗೊಳಿಸುವ ಸಾರ್ಥಕತೆಯ ಬದುಕು ಇಲ್ಲಿ ಅನಾವರಣಗೊಂಡು ಸಮಾಜಕ್ಕೆ ಭೃಂಗೀಶ್ವರನ ಕಥೆ ಆದರ್ಶಪ್ರಾಯವಾಗಿದೆ.

## ೧೧. ವರಕೃತಾಂತರ ರಗಳೆ:-

ಚೋಳದೇಶದಲ್ಲಿ ತನ್ನ ತೋಳ್ಬಲದಿಂದ ವೈರಿಗಳನ್ನು ಹೆದರಿಸುತ್ತಾ ವಿಜಯಶೀಲನಾಗುತ್ತಾ ಆ ಮೂಲಕವೇ ತನ್ನ ಶಿವಭಕ್ತಿಯನ್ನು ಮೆರೆಯುತ್ತಿದ್ದ ವರಕೃತಾಂತರನ ಕಾಯಕವು ಇದೇ ಆಗಿತ್ತು. ಸಾಹಸಿಯು ಎಷ್ಟೇ ದೊಡ್ಡ ಸೈನ್ಯ ಹೊಂದಿದ್ದರೂ ಸರಿಯೇ ಇವನ ಮುಂದೆ ಸೋಲುಣ್ಣುತ್ತಿದ್ದರು. ಆದರೆ ವರಕೃತಾಂತನಿಗೆ ಒಂದು ರಾಜ್ಯದ ಅಧಿಪತ್ಯ ಮಕುಟವಿರಲಿಲ್ಲವೆಂಬ ಅಳುಕಿತ್ತು. ಈ ಕುರಿತು ಶಿವನನ್ನು ಸದಾ ಪ್ರಾರ್ಥಿಸುತ್ತಿದ್ದನು. ಇವನ ಇಚ್ಛೆಯಂತೆ ಕನಸ್ಸಿನಲ್ಲಿ ಬಂದ ಶಿವನು ಮಕುಟವನ್ನು ಶಿವನೊಲುಮೆಯಿಂದ ದೊರೆತ ರಾಜ್ಯವನ್ನು

---

ಅಡಿಟಿಪ್ಪಣಿಗಳು : ೧೯. ಹರಿಹರನ ರಗಳೆಗಳಲ್ಲಿ ಜೀವನದರ್ಶನ-ಸ.ಸ.ಮಾಳವಾಡ, ಪು.ಸ.೮೩

ಸ್ವೀಕರಿಸಿ ಶ್ರದ್ಧಾಭಕ್ತಿ, ಶಿವನೊಲುಮೆಯಿಂದ ಶರಣರ ಸೇವೆ, ಪುಣ್ಯಕಾರ್ಯವನ್ನು ನಿರಂತರವಾಗಿ ಮಾಡುತ್ತಿದ್ದನು. ನಿರಂತರ ಶಿವಧ್ಯಾನದಲ್ಲೇ ಉಳಿದು ಕೇರಳದ ಸರ್ವಜನರನ್ನು ರಕ್ಷಕನಂತೆ ಕಾಯುವ ಅವನ ಶಿವಭಕ್ತಿ ಮತ್ತು ಸುಕಾರ್ಯಕ್ಕೆ ಶಿವನು ಮೆಚ್ಚಿ ಕೈಲಾಸಕ್ಕೆ ಕರೆದೊಯ್ದು ಗಣಪದವಿಯನ್ನು ನೀಡಿ ಹರಸುತ್ತಾನೆ. ಶಕ್ತಿಯುಕ್ತಿ ಬಂದಾಗ ಅಹಂನಿಂದ ಮೆರೆಯದೆ ಭಕ್ತಿಮಾರ್ಗದಿಂದ ಮುನ್ನಡೆಯುವವನಿಗೆ ಶಿವನ ಆಶೀರ್ವಾದ ಬೆಂಬಲ ಎಲ್ಲವೂ ಇದ್ದೇ ಇರುತ್ತದೆ. ಇಂತಹ ಮಹತ್ವದ ಅಂಶವನ್ನು ಸಾರುವ ಈ ಶಿವಕಥೆ ಓರ್ವ ಆಸ್ತಿಕನ ಸಾಹಸದ ಕಥೆಯಾಗಿದೆ. ಇಲ್ಲಿ ಅವನ ಅಂತರಂಗ ಶುದ್ಧಿ, ಪೂಜಾಕೈಂಕರ್ಯ ಸೇವಾ ಮನೋಭಾವಗಳು ಎಲ್ಲರಿಗೂ ಪ್ರೇರಣೆಯಾಗುವಂತಹದ್ದಾಗಿದೆ. ಇಲ್ಲಿ ವರಕೃತಾಂತರನು ಶಿವನನ್ನು ಒಡೆಯನಂತೆ ಭಾವಿಸಿ ಭಕ್ತಿ-ಭಾವದಿಂದ ಆತ್ಮೀಯ ನೆಲೆಯಲ್ಲಿ ಕಾಣುತ್ತಾನೆ.

## ೧೨. ಮಲುಹಣನ ರಗಳೆ :-

ಕಾಶ್ಮೀರದ ಶಿವಭಕ್ತನ ಬದುಕಿನ ಮಹತ್ವವನ್ನು ಕುರಿತು ಹರಿಹರ ತನ್ನ ಈ ರಗಳೆಯಲ್ಲಿ ತಿಳಿಸಿದ್ದಾನೆ. ಲೌಕಿಕ ಸುಖಕ್ಕೆ ಜಾರಿ ಅದೇ ಹಿತವೆಂದು ಭಾವಿಸಿದ್ದ ಮಲುಹಣನ ಆಸಕ್ತಿಯನ್ನು ಅಲೌಕಿಕ ಶಕ್ತಿಯೆಡೆಗೆ ತಿರುಗಿಸಿದ ಮಲುಹಣಿಯೂ ಇಲ್ಲಿ ಅಷ್ಟೇ ಮುಖ್ಯಳು. ಮಲುಹಣಿಯ ಮೇಲಿಟ್ಟಿದ್ದ ಪ್ರೀತಿ ಮತ್ತು ಸ್ನೇಹವನ್ನು ಶಿವನ ಮೇಲಿಟ್ಟು ಭಕ್ತಿಯಿಂದ ಆರಾಧಿಸಿ, ಅವನ ಅನುಗ್ರಹ ಪಡೆದು ಕಾಮುಕನಾದ ಮಲುಹಣನು ಮಹಾಭಕ್ತನಾದ ಕಥೆ ಇದು. ಇಲ್ಲಿ ಮಲುಹಣಿಯು ಕಾಮುಕರ ದಾಹವನ್ನು ತೀರಿಸಿರುವ ವೇಶ್ಯೆಯಾಗಿದ್ದರೂ ಮಲುಹಣನ ಪ್ರೇಮಕ್ಕೆ ಪಾತ್ರಳಾಗಿ, ಇಬ್ಬರ ನಡುವೆ ನೈಜ ಪ್ರೀತಿ ಮತ್ತು ಸ್ನೇಹವಿರುತ್ತದೆ. ಮಲುಹಣನ ಬಳಿ ಹಣ ತೀರಿತೆಂಬ ಕಾರಣದಿಂದ ಮಲುಹಣಿಯ ತಾಯಿ ಇವರಿಬ್ಬರನ್ನು ದೂರ ಮಾಡಿದಾಗ ಇಬ್ಬರು ವಿರಹ ವೇದನೆಗೆ ಒಳಗಾಗುತ್ತಾರೆ. ತಾಯಿಯಂತೆ ಮಲುಹಣಿ ಕೇವಲ ಹಣಕ್ಕೋಸ್ಕರವಾಗಿ ಮಲುಹಣನ ಜೊತೆಗೆ ಬೆರೆಯದೆ ದಿವ್ಯವಾದ ಪ್ರಣಯವೇ ಇವರಿಬ್ಬರ ನಡುವೆ ಇರುತ್ತದೆ. ಅನುಪಮವಾದ ಶೃಂಗಾರರಸದ ಮೇಲೆ ಭಕ್ತಿರಸವ ಸೇರ್ಪಡೆ ಮಾಡಿರುವ ಹರಿಹರನ ದೃಷ್ಟಿಕೋನದಲ್ಲಿ ಅಲೌಕಿಕ ಶಕ್ತಿಯನ್ನು ಸಂಪಾದಿಸಿಕೊಂಡ ಭಕ್ತ ವೀರನಿಗೆ ಶಿವನು ಲೌಕಿಕ ಸುಖವನ್ನು ನೀಡುತ್ತಾನೆ ಎಂಬಂತಹ ನಿರೂಪಣೆ ಇದೆ. ಇಲ್ಲಿ ವೇಶ್ಯೆಯಾಗಿದ್ದರೂ ಶಿವಶರಣೆಯಂತೆ ಮಲುಹಣಿಯು ಶಿವಶಕ್ತಿಯ ಮಹತ್ವವನ್ನು ಸಾರುವ ಮೂಲಕ ಮಲುಹಣನ ಬಾಳು ಭಕ್ತಿಯಿಂದ ಕೂಡಿ ಹಸನಾಯಿತು. ಅವನ ಪ್ರೇಮ-ಪ್ರಣಯವನ್ನು ಶಿವಪೂಜೆಗೆ ಮಾರ್ಪಾಡಿಸಿದ ಶಿವಭಕ್ತಿಯ ಮಹಿಮೆ ಹಿರಿದಾದುದು. ಶಿವಭಕ್ತರ

ಲೌಕಿಕ-ಅಲೌಕಿಕ ಸಮನ್ವಯದ ಸವಿಯನ್ನು ಹರಿಹರ ಇಲ್ಲಿ ತಿಳಿಸಿದ್ದಾನೆ. ಗಂಡು ಹೆಣ್ಣಿನ ಪ್ರೀತಿ-ಪ್ರೇಮ-ಪ್ರಣಯದ ಅಮರವಾದ ಕಥೆಯಾಗಿದೆ. ಇಲ್ಲಿ ಪ್ರೇಮಿಗಳಿಬ್ಬರ ಮೊದಲ ನೋಟ, ಪ್ರೀತಿ, ಪ್ರಣಯ, ವಿರಹ, ಆಧ್ಯಾತ್ಮಿಕ ಭಕ್ತಿ, ಶಿವನೊಲುಮೆ ಮತ್ತು ದಾಂಪತ್ಯ ಸುಖಪಡೆದು ಒಟ್ಟಾಗಿ ಕೈಲಾಸ ಪ್ರವೇಶಿಸುವ ಈ ಕಥೆಯಲ್ಲಿ ಪ್ರೀತಿಯ ಮತ್ತು ಭಕ್ತಿಯ ಆಧಿಕ್ಯವನ್ನು ಕಾಣಬಹುದು. ಅತಿಭೋಗಿ, ಅತಿಕಾಮಿಯಾದವನು, ಅತಿಭಕ್ತನಾಗುತ್ತಾನೆ ಎಂಬ ಸತ್ಯವನ್ನು ಈ ಮಲುಹಣನ ರಗಳೆ ತಿಳಿಸಿಕೊಡುತ್ತದೆ. ಮಲುಹಣನು ಹೊಸ ವ್ಯಕ್ತಿತ್ವವನ್ನು ರೂಪಿಸಿಕೊಳ್ಳಲು ಮಲುಹಣಿಯ ಬೋಧನೆಯೇ ಪ್ರಮುಖ ಕಾರಣವಾಯಿತು ಎಂಬಂತೆ ಚಿತ್ರಿಸಿರುವ ಹರಿಹರ ಸ್ತ್ರೀಯೊಬ್ಬಳ ಅಂತಃಬೋಧೆಯ ಸತ್ವವನ್ನು ಒತ್ತಿ ತಿಳಿಸಿದ್ದಾನೆ. ಈ ಕಥೆಯಲ್ಲಿ ಲೌಕಿಕ ಸುಖಕ್ಕೆ ಹಾತೊರೆಯುವ ಜೀವಿಗೆ ಪಾರಲೌಕಿಕ ಒಡೆಯನಾದ ಶಿವನಿಂದ ಮಾತ್ರ ಶಾಶ್ವತ ಸುಖ ಸಿಗುವುದು ಎಂಬ ಸತ್ಯಗೋಚರವಾಗುತ್ತದೆ. ಮಲುಹಣನ ತಂದೆ ಮಗನಿಗಾಗಿ ಕಾಯ್ದಿರಿಸಿದ ಹಣ ಅವನನ್ನು ಹತ್ತು ವರ್ಷಗಳ ಕಾಲ ಮಾತ್ರ ಸುಖದಿಂದಿರಿಸಿದರೆ, ಜಗದೊಡೆಯನಾದ ಆ ಶಿವನ ರಕ್ಷೆಯನ್ನು ಸಂಪಾದಿಸಿದರೆ ಅಗಣಿತಕಾಲ, ಸುಖ-ನೆಮ್ಮದಿ ಮತ್ತು ಬಯಸಿದ್ದು ದೊರೆತು ನಂತರ ಮೋಕ್ಷ ಲಭಿಸುತ್ತದೆ. ಇಲ್ಲಿ ಮಲುಹಣ-ಮಲುಹಣಿ ನಡುವೆ ಪ್ರಾರಂಭವಾಗಿದ್ದ ಪ್ರೇಮವು ಕಾಮಕಷ್ಟೇ ಮೀಸಲಾಗಿರುತ್ತದೆ. ಆದರೆ ತನ್ನ ಪ್ರೇಯಸಿ ಮಲುಹಣಿಯೇ, ಮಲುಹಣನಲ್ಲಿದ್ದ ಪ್ರೇಮ-ಕಾಮವನ್ನು 'ಭಕ್ತಿಯ' ಕಡೆಗೆ ರೂಪಾಂತರಗೊಳ್ಳುವಂತೆ ಹೇಳಿದ ಒಂದೇ ಒಂದು ಮಾತು ಅವನ ಮೇಲೆ ಗಾಢವಾದ ಪರಿಣಾಮವನ್ನು ಬೀರಿ ಮನಸ್ಸು ಶ್ರದ್ಧಾ-ಭಕ್ತಿಯ ಕಡೆಗೆ ವಾಲುತ್ತದೆ. ನಂತರ ಶಿವನೇ ಅವರ ಪ್ರೀತಿಯನ್ನು ಉಳಿಸುತ್ತಾನೆ ಎಂಬಂಶವು ನಿಜ ಪ್ರೇಮಕ್ಕೆ ದೈವದ ಆಶೀರ್ವಾದವಿರುತ್ತದೆ ಎಂಬ ಈ ರಗಳೆಯ ಕಥೆಯು ಪ್ರೇಮಿಗಳಿಗೆ ಶಿವನು ತಮ್ಮ ಪ್ರೀತಿಯ ರಕ್ಷಕನು ಎಂಬ ಭಾವವನ್ನು ಹುಟ್ಟಿಸಿ ಯೌವ್ವನದಂಚಿನಲ್ಲಿರುವವರು ಈ ಕಾರಣಕ್ಕೆ ಶಿವನನ್ನು ಪ್ರಾರ್ಥಿಸುವವರು ಅಂಥ ಪುಣ್ಯಕ್ಷೇತ್ರದರ್ಶನ ಮಾಡಿ ಹರಕೆ ನೇಮವನ್ನು ಹೊರವವರು ಇರುತ್ತಾರೆ. ಇದು ಇಂದಿನ ಕಾಲದ ಆಚರಣೆಯ ಭಾಗವೂ ಆಗಿದೆ.

### ೧೩. <u>ಬಾಣನ ರಗಳೆ :-</u>

ಕಂದಾರ ಪಟ್ಟಣದಲ್ಲಿ ನಂದನೆಂಬ ಅರಸನ ಆಳ್ವಿಕೆಯಲ್ಲಿ ಬಾಣ, ಮಯೂರ ಮತ್ತು ಕಾಳಿದಾಸ ಎಂಬ ಕವಿಶ್ರೇಷ್ಠರಿದ್ದರು. ಬಾಣ, ಕಾಳಿದಾಸರಿಬ್ಬರೂ ಮಯೂರನ ಅವಯವ ದುರ್ವರ್ಣವಾಗಿದೆ ಎಂದು ಚಾಡಿ ಹೇಳಿದರು. ಅದನ್ನು ಪರೀಕ್ಷಿಸಲೆಂದು ರಾಜನು ಓಕುಳಿ ಆಟದ

ನೆಪಒಡ್ಡಿದನು. ಇದರಿಂದ ಬೇಸರಗೊಂಡ ಮಯೂರನು ಸೂರ್ಯದೇವನ ಆರಾಧನೆಗೆಯ್ದು ಸುವರ್ಣಗವಚವನ್ನು ಪಡೆದುಕೊಂಡನು. ಮರುದಿನ ಪರೀಕ್ಷೆಯಲ್ಲಿ ಸತ್ಯತಿಳಿದು ಬಾಣನನ್ನು ದಂಡಿಸಿದಾಗ ನಾವು ಹೇಳಿದ್ದು ಸತ್ಯವೆಂದೂ ಆದರೆ ನಿನ್ನೆಯದಿನ ಸೂರ್ಯದೇವನಿಂದ ಪಡೆದ ವರದ ವಿಚಾರವನ್ನು ತಿಳಿಸಿದಾಗ ಮಯೂರನು ಅದನ್ನು ಒಪ್ಪಿಕೊಂಡನು ಮತ್ತು ರಾಜನು ಅವರ ವರಬಲವನ್ನು ಕುರಿತು ಶ್ಲಾಘಿಸಿದನು ಅದಕ್ಕೆ ಬಾಣನು, ಇದು ಯಾವ ಮಹಾ ವರವಾಗುತ್ತದೆ? ನನ್ನ ಕೈಗಳನ್ನು ಕಡೆಯಿರಿ ಆ ಶಿವನ ದಯೆಯಿಂದ ನಾನು ಮರಳಿ ಪಡೆಯುತ್ತೇನೆ ಎಂದು ಭಕ್ತಿಯ ಛಲಹೂಡಿ ಕೈಗಳನ್ನು ಕಳೆದುಕೊಂಡನು. ನಂತರ ಇಂಧುಧರನನ್ನು ನಾನಾ ರೀತಿಯಲ್ಲಿ ಸ್ತುತಿಸಿ, ಭಜಿಸಿದರೂ ಅವನ ಮೇಲೆ ಶಿವನ ಕರುಣೆ ಉಂಟಾಗಲಿಲ್ಲ. ಆದರೆ ಕೊನೆಯಲ್ಲಿ 'ಅಂಬಿಕಾನೈತುಂಬ ಬಿಂಬಿಲಂ ಪಟಿ ಹಸ್ತ' ಎಂದು ನುಡಿದಾಕ್ಷಣ ಶಿವನು ಕರುಣೆದೋರಿ ಅವನ ಹಸ್ತವನ್ನು ಅವನಿಗೆ ದಯಪಾಲಿಸುವುದರೊಂದಿಗೆ ಆ ಊರಿನಲ್ಲಿ ಕೈ ಕಾಲು ಇಲ್ಲದವರಿಗೆಲ್ಲಾ ಕೈ ಕಾಲುಗಳನ್ನು ವರವಾಗಿ ನೀಡುತ್ತಾನೆ. ಇದರಿಂದ ಆಶ್ಚರ್ಯಚಕಿತರಾದ ಊರಿಗೇ ಊರೇ ಸಂತಸ ಸಂಭ್ರಮದಿಂದ ಬಾಣನನ್ನು ಆನೆಯ ಮಸ್ತಕದ ಮೇಲೆ ಕೂಡ್ರಿಸಿ, ಮೆರೆವಣಿಗೆ ಮಾಡಿ ನಲಿಯುತ್ತಾರೆ. ಹಲವು ಕಾಲದವರೆಗೆ ಹರನ ಸೇವೆಯಲ್ಲಿ ಕಾಲಕಳೆದು ನಂತರ ಕೈಲಾಸದಲ್ಲಿ ಗಣಪದವಿಯನ್ನು ಪಡೆಯುತ್ತಾನೆ.

ಈ ಕಥೆಯಲ್ಲಿ ಅನ್ಯದೇವರುಗಳಗಿಂತ ಶಿವನೇ ಮೇಲು ಶಿವನಿಗೆ ಶರಣಾದಲ್ಲಿ ಅಸಾಧ್ಯವೆನ್ನುವುದು ಯಾವುದು ಇಲ್ಲ. ಶಿವಭಕ್ತನೊಬ್ಬನು ತನ್ನಲ್ಲಿರುವ ಶಿವಶಕ್ತಿಯಿಂದ ಎಲ್ಲರನ್ನು ಉದ್ಧರಿಸುವ ಮಾರ್ಗ ತೋರುತ್ತಾನೆ. ಜಗದೊಡೆಯನೆಂದು ಯಾರೇ 'ಶಿವನನ್ನು ನಂಬಿದವರ ಕೈ ಬಿಡುವುದಿಲ್ಲ' ಎಂಬ ಸತ್ಯ ವೇದ್ಯವಾಗಿ ಜನರಲ್ಲಿ ಭಕ್ತಿಯನ್ನು ಹೆಚ್ಚಿಸುತ್ತದೆ. ಇಂತಹ ಪವಾಡಗಳು ಜನಮನದಲ್ಲಿ ಸದಾ ಹಸಿರಾಗಿ ಉಳಿದು ಬದುಕಿನಲ್ಲಿ ಭರವಸೆಯನ್ನು ಹುಟ್ಟಿಸುತ್ತದೆ.

### ೧೪. ಮುಸುಟೆಯ ಚೌಡಯ್ಯನ ಕಥೆ :-

ಉತ್ತರ ದಿಶಾಭಾಗ ಶಿವಪುರದಲ್ಲಿ ಶಿವಭಕ್ತಿ ಪಾರಾಂಗತನಾದ ಚೌಡಯ್ಯನು ಜಂಗಮ ಸೇವೆಯಲ್ಲಿ ತನ್ನ ಜೀವನವನ್ನು ಕಳೆಯುತ್ತಿದ್ದ ಮಹಾಶಿವಭಕ್ತ. ಒಮ್ಮೆ ಶಿವನ ಮಜ್ಜನಕ್ಕಾಗಿ ನೀರು ತರುತ್ತಿರುವಾಗ ಎದುರಾದ ಶಿವಭಕ್ತನ ಶವಕ್ಕೆ ತನ್ನಲ್ಲಿರುವ ಶಿವಭಕ್ತಿಯಿಂದ ಜೀವಬರಿಸಿದನು. ಎತ್ತೊಂದು ಸತ್ತಿರುವುದನ್ನು ಕಂಡು ಏಳೇಳು ಬಸವ ಎಂದು ಜೀವಬರಿಸಿದನು. ಮಕ್ಕಳೊಮ್ಮೆ

ಕಲ್ಲಿನಲ್ಲಿ ಆಟವಾಡುತ್ತಿರುವಾಗ ಗೂಳಕಲ್ಲಿನ ಅರ್ಥವೇನೆಂದು ಕೇಳಿ ಇದರ ಕೆಳಗೆ ಹಲವು ವರ್ಷಗಳ ಹಿಂದೆ ಸತ್ತಿರುವ ಗೂಳಿಯನ್ನು ಸಮಾಧಿ ಮಾಡಲಾಗಿತ್ತು. ಆದ್ದರಿಂದ ಇದಕ್ಕೆ ಗೂಳಕಲ್ಲು ಎಂಬ ಹೆಸರು ಬಂದಿದೆ ಎಂದು ತಿಳಿಸಿದರು. ಇದು ಅದಲ್ಲ ಮಕ್ಕಳೇ ಎಂದು ಹೇಳಿದ ಚಾವುಂಡರಾಯನಿಗೆ ಪ್ರತಿವಾದಿಸಿದ ಮಕ್ಕಳಿದರು ತನ್ನ ಶಿವಶಕ್ತಿಯಿಂದ ಆ ಗೂಳಿಯನ್ನು ಎಬ್ಬರಿಸಿದನು. ಊರಿಗೆ ಊರೇ ಬೆರಗಾಗುವಂತೆ ಈತನ ಶಿವಭಕ್ತಿ ಎಲ್ಲೆಡೆ ಮೆರೆಯಿತು ಇವನ ಭಕ್ತಿಗೆ ಮೆಚ್ಚಿದ ಶಿವನು ಗಣಪದವಿ ನೀಡಿದನು. ಪವಾಡಗಳು ಬೆರೆತಾಗ ಸತ್ಯಕ್ಕೆ ದೂರಾಗುವ ಇಂತಹ ಕಥೆಗಳು ಸಮಾಜದ ಜನರಲ್ಲಿ ಮಾತ್ರ ಆಸಕ್ತಿಯನ್ನು ಕೆರಳಿಸುತ್ತವೆ. ಏಕೆಂದರೆ ಹುಟ್ಟಿನ ಸಂದರ್ಭದಲ್ಲಿ ಸಂತೋಷದಿಂದ ಸಂಭ್ರಮ ಪಡುವ ಕುಟುಂಬವರ್ಗ ಸಾವಿನಲ್ಲಿ ದುಃಖತಪ್ತರಾಗುತ್ತಾರೆ. ಅಂತಹ ಸಾವನ್ನು ಗೆಲ್ಲಿಸುವ ಶಕ್ತಿ ಶಿವಭಕ್ತಿಯಲ್ಲಿದೆ ಎಂಬ ರೋಮಾಂಚನಕಾರಿ ಕಥೆಗಳು ಆಸಕ್ತಿ, ಭಯಭಕ್ತಿಯಿಂದ ಶಿವನನ್ನು ಆರಾಧಿಸುವ ಪಂಥ ಹುಟ್ಟುವುದಕ್ಕೆ ಪ್ರೇರೇಪಣೆ ದೊರೆಯುತ್ತದೆ ಎಂಬ ಹರಿಹರನ ಚಿಂತನೆ ಅರ್ಥಪೂರ್ಣವಾದುದು. ಶಿವನನ್ನು ಆರಾಧಿಸುವ ಚೌಡಯ್ಯನಂತಹ ಭಕ್ತರು ಜಂಗಮ ಸೇವೆಯಲ್ಲಿ ಸದಾ ಕಳೆಯುವ ಅವರ ಏಳಿಗೆಗಾಗಿ ಶ್ರಮಿಸುವ ಸೇವಾ ಮನೋಭಾವ ಹಿರಿದಾದುದು. ಇಂತಹ ಆದರ್ಶ ಗುಣ ಎಲ್ಲರಿಗೂ ಆದರ್ಶಪ್ರಾಯವಾಗುತ್ತದೆ.

### ೧೫. ಮಾದಾರ ಚೆನ್ನಯ್ಯನ ರಗಳೆ :-

ಶಿವಭಕ್ತ ಕರಿಕಾಳ ಚೋಳನೆಂಬ ಸುಪ್ರಸಿದ್ಧ ಮಹಾರಾಜನಿಗೆ ಅಶ್ವಶಾಲೆಯಲ್ಲಿ ಹುಲ್ಲು ತಂದು ಹಾಕುವ ಕಾಯಕ ಮಾಡುವ ಓರ್ವ ಆಳಿದ್ದನು. ಅವನು ಗುಪ್ತ ಶಿವಭಕ್ತನಾಗಿದ್ದನು. ಅವನು ಒಮ್ಮೆ ಕಾಡಿಗೆ ತೆರಳಿ ಹೂಹಣ್ಣುಗಳನ್ನು ತಂದು ಸೆಜ್ಜೆಯಲ್ಲಿ ಶಿವಲಿಂಗವನ್ನು ಮಾಡಿ ಪೂಜಿಸಿದನು. ಅಲ್ಲಿಂದ ಹುಲ್ಲು ತಂದು ಅಶ್ವಶಾಲೆಯಲ್ಲಿ ಹಾಕಿ ತನ್ನ ಕರ್ತವ್ಯ ನಿರ್ವಹಿಸಿ ಮನೆಗೆ ತೆರಳಿದನು. ಅಲ್ಲಿ ಹೆಂಡತಿಯು ಸಿದ್ಧಪಡಿಸಿದ ಅಂಬಲಿಯನ್ನು ಶಿವಲಿಂಗಕ್ಕೆ ನೈವೇದ್ಯಮಾಡಿ ಧ್ಯಾನಾಸಕ್ತನಾದನು. ಆಗ ಪರಶಿವನನ್ನು ಸ್ಮರಿಸಿ, ಅಂಬಲಿಯನ್ನು ಸಂತೋಷದಿಂದ ಸೇವಿಸತೊಡಗಿದನು. ಉಪ್ಪಿನಕಾಯಿ ಮತ್ತು ಅಂಬಲಿಗಳು ಸೇರಿದ ರುಚಿ ಒಂದೆಡೆಗೆ ಪ್ರಸನ್ನ ಚಿತ್ತದಿಂದ ಸೇವಿಸುವ ಸಂತಸ ಎರಡೂ ನಾಲಿಗೆಗೆ ರುಚಿ ಹೆಚ್ಚುತ್ತದೆ. ಚೆನ್ನನ ಭಕ್ತಿಗೆ ಒಲಿದಿದ್ದ ಶಿವನು ಕೂತಲ್ಲಿಯೇ ಕೂತು ಅಂಬಲಿಯನ್ನು ಸೇವಿಸತೊಡಗಿದನು. ಒಲಿದುಂಡ ಅಂಬಲಿಯ ರುಚಿ ಶಿವನಿಗೆ ಮಾಹಾದಾನಂದವಾಯಿತು. ಮರುದಿನ ಚೋಳರಾಜನು ಶಿವಾಲಯಕ್ಕೆ ಆಗಮಿಸಿ ಸುಭಕ್ಷ್ಯಭೋಜನವನ್ನು ನೈವೇದ್ಯಮಾಡಿ ಶಿವನನ್ನು ಆರಾಧಿಸಿ ಸ್ವೀಕರಿಸಲು ವಿನಂತಿಸಿದಾಗ,

ಮುಲಾಜಿಲ್ಲದೆ ಮಾದಾರಚೆನ್ನಯ್ಯನ ಮನೆಯಲ್ಲಿ ಅಂಬಲಿಯನ್ನು ಉಂಡಿರುವುದರಿಂದ ಹಸಿವಿಲ್ಲ ಎಂಬ ಶಿವನ ಮಾತು ಕೇಳಿದಾಗ ರಾಜನ ದರ್ಪ ಇಳಿದು ಹೋಗಿ ಮಾದಾರ ಚೆನ್ನಯ್ಯನನ್ನು ಹುಡುಕಿಸಿ, ಅಂಬಾರಿಯ ಮೇಲೆ ಕರೆತಂದು ಅವನ ಪಾದಗಳಿಗೆರಗಿ, ಕಣ್ಣೀರು ಸುರಿಸಿ ಜೀವನ ಸಾರ್ಥಕ ಪಡಿಸಿಕೊಳ್ಳಲು ಹೋದ ರಾಜನನ್ನು ಕಂಡು ಆಶ್ಚರ್ಯಗೊಂಡು ತನ್ನ ಗುಪ್ತಭಕ್ತಿ ಪ್ರಕಟವಾಯಿತಲ್ಲಾ ಎಂದು ಕಡುನೊಂದು ಕತ್ತಿಯಿಂದ ತನ್ನ ಕತ್ತು ಕತ್ತರಿಸಿಕೊಳ್ಳಲು ಮುಂದಾಗುವಷ್ಟರಲ್ಲಿ ಪರಶಿವನು ಪ್ರತ್ಯಕ್ಷನಾಗಿ ಅವನ ಭಕ್ತಿ ಮೆಚ್ಚಿ ಗಣಪದವಿ ನೀಡುತ್ತಾನೆ.

ಈ ಪ್ರಸ್ತುತ ರಗಳೆಯಲ್ಲಿ ಹರಿಹರನು, ಶಿವಭಕ್ತಿ ಶಕ್ತಿಯುತವಾದದ್ದು. ಆತನ ಪರಮ ಸೇವೆಯೇ ಜೀವನಕ್ಕೆ ಮುಕ್ತಿದಾಯಕವಾದುದು ಎಂದು ಗುಪ್ತಭಕ್ತಿಯ ಮೂಲಕ ಶಿವನನ್ನು ಸ್ಮರಿಸುತ್ತಾ ಕಾಯಕ ನಿಷ್ಠೆಯಲ್ಲಿ ತೊಡಗಿ ಗಣಪದವಿಯನ್ನು ಪಡೆದ ಮಾದಾರ ಚೆನ್ನಯ್ಯನ ಕಥೆಯನ್ನು ತನ್ನ ಧ್ಯೇಯ ಆದರ್ಶಗಳಿಗೆ ತಕ್ಕಂತೆ ಚಿತ್ರಿಸಿದ್ದಾನೆ. "ಬಡವರ ಮನೆಯ ಊಟಚೆಂದ ಶ್ರೀಮಂತರ ಮನೆಯ ನೋಟಚೆಂದ" ಎಂಬ ಗಾದೆ ಮಾತಿನಂತೆ ಬಡವರು ಆದರಾತಿಥ್ಯದಿಂದ ಬಡಿಸುವ ಊಟ ಅತಿ ರುಚಿಯಿರುತ್ತದೆ. ಅದೇ ರೀತಿ ಶ್ರೀಮಂತನು ತನ್ನಲ್ಲಿರುವ ಶ್ರೀಮಂತಿಕೆಯ ದರ್ಪದಿಂದ ಬಡಿಸುವ ಊಟದಲ್ಲಿ ಪ್ರೀತಿಯ ಕೊರತೆಯಿದ್ದು ಕಾಟಾಚಾರದ ಆಡಂಬರವಿರುತ್ತದೆ. ಇಲ್ಲಿ ಅಸ್ಪೃಶ್ಯ ಚೆನ್ನಯ್ಯನ ಮನೆಯಲ್ಲಿ ಪ್ರೀತಿಯಿಂದ ನೀಡಿದ ಅಂಬಲಿಯ ಸವಿಯುಣ್ಣುವ ಪರಶಿವನು ಚೋಳರಾಜನ ಆಡಂಬರದ ಭಕ್ಷ್ಯಭೋಜನವನ್ನು ತಿರಸ್ಕರಿಸಿ ಚೆನ್ನಯ್ಯನ ಮನೆಯ ಅಂಬಲಿಯನ್ನು ಉಂಡಿರುವುದರಿಂದ ನನಗೆ ಹಸಿವಿಲ್ಲ ಎಂದು ಹೇಳುವ ಪರಿ ಮತ್ತಷ್ಟೂ ಸೊಗಸಾಗಿದೆ. ಇಲ್ಲಿ ಪರಶಿವನು ಅಂತ್ಯಜನ ಭಕ್ತಿಗೆ ಮಾತ್ರ ಒಲಿದಿದ್ದಾನೆ ಎಂದು ಸಂಕುಚಿತವಾಗಿ ನೋಡುವ ಬದಲು ರಾಜಪ್ರಭುತ್ವದೆದರು ಹೀನಾಯ ಸ್ಥಿತಿಯಲ್ಲಿರುವ ಎಲ್ಲಾ ಕೆಳಜಾತಿ ಮತ್ತು ಬಡವವರ್ಗಕ್ಕೆ ದೊರೆತಿರುವ ಮಾನ್ಯತೆ, ಜಯದ ಸಂಕೇತವಾಗಿದೆ. ಪರಮೇಶ್ವರನು ಅಂತ್ಯಜನನ್ನು ಒಪ್ಪಿ ಗಣಪದವಿಯನ್ನು ನೀಡಿದನೆಂದ ಮೇಲೆ, ರಾಜನದು ಯಾವಲೆಕ್ಕ ಇದು ಶ್ರೀಮಂತವರ್ಗಕ್ಕೆ ಒದಗಿರುವ ಹೀನಾಯ ಸೋಲು ಎಂದು ಪರಿಗಣಿಸಬೇಕಾಗುತ್ತದೆ.

ಹೃದಯದಲ್ಲಿ ಪರಿಶುದ್ಧವಾದ ಭಕ್ತಿಯಿಲ್ಲದೆ ಹೊರಗೆ ಯಾಂತ್ರಿಕವಾಗಿ ಮಾಡುವ ಪೂಜೆ ಪುನಸ್ಕಾರಗಳು ವ್ಯರ್ಥವೆಂಬುದನ್ನು ಈ ಬಸವಣ್ಣನ ವಚನವು ತಿಳಿಸುತ್ತದೆ.

ಒಲವಿಲ್ಲದ ಪೂಜೆ, ನೇಹವಿಲ್ಲದ ಮಾಟ
ಆ ಪೂಜೆಯು, ಆ ಮಾಟವು
ಚಿತ್ರದ ರೂಹು ಕಾಣಿರಣ್ಣ! ಚಿತ್ರವ ಕಾಣಿರಣ್ಣ
ಅಪ್ಪಿದರೆ ಸುಖವಿಲ್ಲ, ಮೆಲಿದರೆ ಸವಿಯಿಲ್ಲ (ಸಂ. ಬಸವಣ್ಣನ ವಚನಗಳು)

ಚಿತ್ರದಲ್ಲಿ ವ್ಯಕ್ತವಾಗುವ ಕಬ್ಬನ್ನು ಎಷ್ಟೇ ಸಜೀವವೆಂಬಂತೆ ಚಿತ್ರಿಸಿದರೂ ಅದು ನಿರ್ಜೀವವೇ ಸರಿ. ಅದು ತೋರಿಕೆಯ ಕೃತಕ ಆಕೃತಿಗಳಾಗಬಹುದೇ ವಿನಃ ವಾಸ್ತವವೆನಿಸಿಕೊಳ್ಳಲಾರದು. ಭಕ್ತಿಯಿಲ್ಲದ ಆಡಂಬರ ಪೂಜೆಯೂ ಮೇಲ್ನೋಟಕ್ಕೆ ನಿಜವಾದ ಭಕ್ತಿ, ನಿಷ್ಠೆ ಉಂಟೆಂದು ಭ್ರಮೆಯಾಗಬಹುದು ಆದರೆ ಹತ್ತಿರಕ್ಕೆ ಬಂದು ಪರೀಕ್ಷಿಸಿದರೆ ಇದೊಂದು ಗಟ್ಟಿಯಿರದ ಪೊಳ್ಳು ಭಕ್ತಿಯೆಂಬ ಸತ್ಯ ತಿಳಿಯುತ್ತದೆ. ಆದರೆ ಭಗವಂತನಿಗೆ ಈ ತೆರನಾದ ಭಕ್ತಿ ಹಿಡಿಸುವುದಿಲ್ಲ. ಚಿತ್ರದ ರೂಹಿನಂತೆ, ಕಬ್ಬಿನಂತೆ. "ದೇವನೊಲಿದಾತನೆ ಕುಲಜ" ಎಂಬ ಮಾತಿನಂತೆ ಜಾತಿವಿಂಗಡಣೆಯು ಮನುಷ್ಯರಿಂದ ನಿರ್ಮಿತವಾಗಿದ್ದು ಅವುಗಳ ಅನುಸರಣೆಯಿಂದ ಭೂಲೋಕದಲ್ಲಿ ಮೇಲು–ಕೀಳೆಂಬ ತಾರತಮ್ಯದಿಂದ ಎಲ್ಲರೂ ನರಕಸದೃಶವಾದ ಬಾಳನ್ನು ಬಾಳುತ್ತಿರುತ್ತಾರೆ. ಆದರೆ ದೇವರ ದೃಷ್ಟಿಯಲ್ಲಿ ಇರುವುದು ಎರಡೇ ಜಾತಿ, ಉಳಿದೆಲ್ಲವೂ ಮನುಷ್ಯನಿರ್ಮಿತ ಜಾತಿ–ಪಂಗಡಗಳು.

(೧) ಭಕ್ತ ವರ್ಗ
(೨) ಡಾಂಭಿಕ ವರ್ಗ

ಚೆನ್ನಯ್ಯನ ಭಕ್ತಿ ಕಾಯಕ ನಿಷ್ಠೆ, ಪ್ರಾಮಾಣಿಕ ಮನೋಭಾವ ಶಿವನಿಗೆ ಅಮೂಲ್ಯವೆನಿಸಿ ಅವನನ್ನು ಮೇಲ್ವರ್ಗ ಅಂದರೆ ಭಕ್ತವರ್ಗಕ್ಕೆ ಸೇರಿಸಿ ತನ್ನೆಡೆಗೆ ಕರೆದುಕೊಂಡು ಗಣಪದವಿಯನ್ನು ನೀಡುತ್ತಾನೆ. ಸತ್ಯ ನಿಷ್ಠೆ ಇಲ್ಲದ ಚೋಳರಾಜನ ಭಕ್ತಿಯನ್ನು ಆಡಂಬರವೆಂದು ಗುರುತಿಸಿ ಡಾಂಭಿಕ ವರ್ಗಕ್ಕೆ ಸೇರಿಸುತ್ತಾನೆ.

ರಾಜನು ಚೆನ್ನಯ್ಯನಿಗೆ ಸಾಷ್ಟಾಂಗ ನಮಸ್ಕಾರ ಹಾಕಿ ಅವನ ಪಾದಗಳ ಮೇಲೆರಗಿ ಅಂಬಾರಿಯ ಮೇಲೆ ಮೆರವಣಿಗೆ ಮಾಡಿಸುವುದು ಸ್ವೋಪಜ್ಞವಾಗಿದೆ. ರಾಜ ಪ್ರಭುತ್ವ ಮತ್ತು ಮೇಲುಜಾತಿಯವರು ಬಡವ ಮತ್ತು ಕೆಳಜಾತಿವರ್ಗಕ್ಕೆ ಮಣಿಯುವಂತೆ ಕಥಾಹಂದರವನ್ನು ಹೆಣೆದಿರುವ ಹರಿಹರನು ಜಾತಿ–ಬೇಧವನ್ನು ಖಂಡಿಸುತ್ತಾ ಸಮಾಜವನ್ನೇ ಬುಡಮೇಲು ಮಾಡುವಂತಹ ಕಾವ್ಯಧರ್ಮವನ್ನು ಅನುಸರಿಸಿದ್ದಾನೆ. ಇದು ಹೊಡೆದಾಟ ಸಂಘರ್ಷಗಳಿಲ್ಲದ

ಬಹುದೊಡ್ಡ ಪ್ರತಿಭಟನೆಯಂತಿದೆ. ಜಾತಿ ಬೇಧ ನಿವಾರಣೆ ಮಾಡುವ ಮಾರ್ಗಗಳನ್ನು ಬೆಂಬಲಿಸುವಂತಹ ಹರಿಹರನ ಕಾವ್ಯದರ್ಶನ ಸರ್ವಕಾಲಕ್ಕೂ ಸಲ್ಲುವಂತದ್ದು.

### ೧೬. ಏಕಾಂತರಾಮಿ ತಂದೆ :-

ಉತ್ತರ ದಿಕ್ಕಿನಲ್ಲಿ ಏಕಾಂತರಾಮಿತಂದೆ ಎಂಬ ನಿಷ್ಠಾವಂತ, ಪ್ರತಿಜ್ಞಾವಂತ ಶಿವಭಕ್ತನೊಬ್ಬನಿದ್ದನು. ಅವನು ಶಿವದೇವಾಲಯ, ಪುಣ್ಯ ಕ್ಷೇತ್ರಗಳನ್ನು ವೀಕ್ಷಿಸಬೇಕೆಂಬ ಅತೀತ ಹಂಬಲದಿಂದ ಪ್ರಯಾಣ ಬೆಳಸಿರುತ್ತಾನೆ. ಇತ್ತ ಅಬ್ಬಲೂರಿಗೆ ಆಗಮಿಸಿ ದೂರದಿಂದಲೇ ಎತ್ತರದಲ್ಲಿ ಹೊಳೆಯುವ ಬಿಳಿಯ ಮಂದಿರವನ್ನು ಕಂಡು ಶಿವಾಲಯ ಎಂದು ಕೈಮುಗಿದು ದೇವಾಲಯದೊಳಗಿನ ಅರೆಬೆತ್ತಲೆ ವಿಗ್ರಹಗಳನ್ನು ನೋಡಿ ಹೇಸಿದನು. ಆಗ ಅಲ್ಲಿದ್ದ ಶಿವಭಕ್ತ ಬ್ರಹ್ಮೇಶ್ವರನು ತನ್ನ ಮಠಕ್ಕೆ ಕರೆದೊಯ್ದು ಜೈನರ ವಿರೋಧದ ಬಗೆ ತಿಳಿಸಿ ನಮ್ಮ ಶೈವ ಧರ್ಮವನ್ನು ಉಳಿಸಿಕೊಳ್ಳುವುದಕ್ಕೆ ತಮ್ಮ ಸಹಾಯ ಬೇಕೆಂದನು. ಅದರಂತೆ ಪೂಜೆಗೆಂದು ಬೆಳಗ್ಗೆ ಹೂ ಕೊಯ್ಯಲು ಬಂದ ಸಂದರ್ಭದಲ್ಲಿ ಬ್ರಹ್ಮೇಶ್ವರ ಲಿಂಗದತ್ತ ಕಾಲು ನೀಡಿ ಮಲಗಿದ್ದ ಜೈನರನ್ನು ಹೆದರಿಸಿದಾಗ, ಶಿವನಾರು? ಅವನೇನು ಮಾಡುವನು ಎಂದು ಕೇಳಿದನು. ಮಧುರೈಯಲ್ಲಿ ಜೈನರನ್ನು ಸೋಲಿಸಿದ ಆ ಪುಲಿಗೆರೆ ಸೋಮನಾಥನು ಮಯೂರನಿಗೆ ಮೈ, ಕಾಳಿದಾಸನಿಗೆ ಕಣ್ಣು ಮತ್ತು ನಂಬಿಯಣ್ಣನಿಗೆ ತನ್ನನ್ನೇ ಕೊಟ್ಟು ರಕ್ಷಿಸಿದ ಶಿವನ ಬಗ್ಗೆ ಹೀಗೆ ಕೇಳುವುದುಂಟೆ? ಎಂದನು. ಇಲ್ಲಿನ ಜಿನಾಲಯಗಳಲ್ಲಿನ ಬತ್ತಲಮೂರ್ತಿಗಳನ್ನು ಉರುಳಿಸಿ ಶಿವಲಿಂಗಗಳನ್ನು ಪ್ರತಿಷ್ಠಾಪಿಸುವುದಾಗಿ ತಿಳಿಸಿದನು. ಆಗ ಜೈನರು ನಿನ್ನ ತಲೆಯನ್ನು ಕತ್ತರಿಸಿಕೊಂಡು ಪುನಃ ಜೋಡಿಸಿ ಪ್ರಾಣಬರಿಸಿಕೊ ಆಗ ನಾವೇ ಆ ಕೆಲಸ ಮಾಡುತ್ತೇವೆ ಎಂದರು. ಅದರಂತೆ ತಲೆ ಕತ್ತರಿಸಿಕೊಳ್ಳುವ ಪ್ರತಿಜ್ಞೆ ಊರೆಲ್ಲಾ ಹಬ್ಬಿ ಸಮಸ್ತರು ಆಗಮಿಸಿದರು. ಆಗ ತಲೆ ಕತ್ತರಿಸಿಕೊಂಡ ರಾಮಿತಂದೆಯನ್ನು ನೋಡಿ ಇದರಲ್ಲಿ ಮಾಯಾಜಾಲದ ಕೈವಾಡವಿದೆ. ಕತ್ತರಿಸಿದ ತಲೆಯನ್ನು ಏಳು ದಿನಗಳ ನಂತರ ದೇಹದಲ್ಲಿರಿಸಿ ಜೀವಂತವಾದರೆ ನಂಬುತ್ತೇವೆ ಎಂದೆಸೆದ ಸವಾಲನ್ನು ಸ್ವೀಕರಿಸಿದ ಶೈವರು ಆತನ ದೇಹವನ್ನು ರಕ್ಷಿಸಿದರು. ಇತ್ತ ಶಿವನ ಕೀರ್ತಿ ಕಳಸವನ್ನು ಹೊತ್ತು ತರುವಂತೆ ಶಿವಕ್ಷೇತ್ರಗಳಿಗೆ ಅವನ ತಲೆಯನ್ನು ಹರಿವಾಣದಲ್ಲಿಟ್ಟುಕೊಂಡು ಹೋಗಿ ಶಿವದರ್ಶನ ಮಾಡಿ ಮರಳಿದರು. ಅಬ್ಬಲೂರಿನ ಬ್ರಹ್ಮೇಶ್ವರನ ದೇವಾಲಯದ ಮುಂದೆ ಏಳನೇ ದಿನಕ್ಕೆ ದೇಹಕ್ಕೆ ಶಿರವನ್ನಿಟ್ಟು ಸಜೀವವಾದ ರಾಮಿತಂದೆಯ ಶಿವಭಕ್ತಿಯ ಮುಂದೆ ಜೈನರು ಸೋತು ಓಡಿದರು. ಎಲ್ಲಾ ಜಿನಾಲಯದಲ್ಲಿ ಮೂರ್ತಿಗಳನ್ನು ಕಿತ್ತೆಸೆದು ಶಿವಲಿಂಗಗಳನ್ನು ಪ್ರತಿಷ್ಠಾಪಿಸಿ ನಿರಂತರ

ಪೂಜಾಕಾರ್ಯ ನಡೆಯುವಂತಾಯಿತು. ಸಮಸ್ತ ಜನರಿಗೆ ಶಿವನ ಮಹಿಮೆ ತಿಳಿದು ಕೊಂಡಾಡಿದರು. ಇತ್ತ ತನ್ನ ಕೀರ್ತಿಯಿಂದ ಜೈನರನ್ನು ಸೋಲಿಸಿದ ಏಕಾಂತರಾಮಿತಂದೆ ಶಿವನ ಪ್ರೀತಿಗೆ ಪಾತ್ರನಾಗಿ ಕೈಲಾಸದಲ್ಲಿ ಗಣಪದವಿ ಪಡೆದನು.

(i) ಜೈನರು-ಶೈವರ ನಡುವೆ ಇದ್ದ ಸಂಘರ್ಷದಲ್ಲಿ ಶಿವಭಕ್ತರ ಗೆಲುವು, ಜೈನರ ಸೋಲಿನಿಂದಾಗಿ ಶೈವಧರ್ಮವನ್ನು ಎಲ್ಲರ ಹೃದಯದಲ್ಲಿ ಪ್ರತಿಷ್ಠಾಪಿಸುವ ಕಾರ್ಯವನ್ನು ಹರಿಹರ ಅಂದಿನ ಧಾರ್ಮಿಕ, ಸಾಮಾಜಿಕ, ರಾಜಕೀಯ ಒತ್ತಡಗಳಿಗೆ ಒಳಗಾಗಿ ಇಂತಹ ಕಥೆ ರಚನೆ ಮಾಡಿರಬಹುದು.

(ii) ತಲೆಕಡಿದ ಮೇಲೆ ಜೀವವಿಲ್ಲದ ರುಂಡ ಮುಂಡಗಳನ್ನು ಏಳನೇ ದಿನಕ್ಕೆ ಮತ್ತೆ ಒಂದುಗೂಡಿಸಿ ಜೀವಬರಿಸುವುದು ಪವಾಡವೆನಿಸಿ, ಸತ್ಯಕ್ಕೆ ದೂರವಾಗಿದೆ ಎಂದೆನಿಸಿದರೂ ರಾಮಿತಂದೆಯ ಉಗ್ರಶಿವಭಕ್ತಿ ಮತ್ತು ನಿಷ್ಠೆಯ ಮುಂದೆ ಒಂದು ಧರ್ಮದ ಸೋಲು ಅಡಗಿದೆ. ಈ ರೀತಿಯ ಪವಾಡ ಸದೃಶ ಕಥೆಗಳು ಜನಮನದಲ್ಲಿ ಭಯ-ಭಕ್ತಿ ಹುಟ್ಟಿಸಿ ಆ ಧರ್ಮದ ಪ್ರಭಾವಕ್ಕೆ ಬಹುಬೇಗನೆ ಒಳಗಾಗಬಹುದು.

(iii) ಶಿವಶರಣಧರ್ಮದ ಉಳಿವಿಗಾಗಿ ತನ್ನ ಸಮರ್ಪಣೆಗೂ ಸಿದ್ಧರಿರುವ ಉದಾರ ಹೃದಯವಂತಿಕೆ ಎದ್ದು ಕಾಣುತ್ತದೆ.

(iv) ಒಂದು ಧರ್ಮದ ಉಳಿವಿಗಾಗಿ ಶಿವಶರಣರು ಯುಕ್ತಿಯಿಂದ ಹೋರಾಡುವುದು ಇಲ್ಲಿ ಪ್ರಧಾನವಾಗಿ ಕಂಡುಬರುತ್ತದೆ. ಏಕಾಂತರಾಮಿತಂದೆ ಓರ್ವ ಮಹಾನ್ ಶಿವಭಕ್ತ. ಅವನಿಗೆ ಶಿವನೇ ಸರ್ವಸ್ವ, ಅವನೇ ಒಡೆಯ ತಾನು ಅವನ ದಾಸನೆಂದು, ಶಿವಪೂಜೆ, ಧ್ಯಾನ, ಕ್ಷೇತ್ರದರ್ಶನ ಮಾಡಿಕೊಂಡು ವೀರಶೈವ ಧರ್ಮದ ಪ್ರಭಾವವು ಅನ್ಯಧರ್ಮಗಳ ಮೇಲೆ ಬೀರುವಂತೆ ಮಾಡಿದನು.

## ೧೭. ಕೊಂಗುಲಿಯ ಕಲಿಯಾರರ ರಗಳೆ :-

ಚೋಳನಾಡಿನ ಕಡವೂರ ಎಂಬ ಒಂದು ಊರಿನಲ್ಲಿ, ಶಿವನಿಷ್ಠೆ ಶಿವಚಾರಗಳನ್ನು ಮೈಗೂಡಿಸಿಕೊಂಡ ಶಿವಭಕ್ತನು ಕೊಂಗುಲಿ ಕಲಿಯಾರನೆಂಬ ಹೆಸರಿನಿಂದ ಖ್ಯಾತಿಯಾಗಿದ್ದನು. ಶಿವಭಕ್ತರ ಸೇವೆ ಶಿವಲಿಂಗಕ್ಕೆ ಪ್ರತಿನಿತ್ಯವೂ ಧೂಪಾರ್ಪಣೆ ಮಾಡಿ ಪ್ರಾಮಾಣಿಕ ಮನಸ್ಸಿನಿಂದ

ಶಿವಪೂಜೆ ಮಾಡುವ ನೇಮವಿಟ್ಟುಕೊಂಡಿದ್ದನು. ತನ್ನ ಸಂಪತ್ತೆಲ್ಲಾ ಕರಗಿ ಹೋಗುವವರೆಗೂ ಈ ನೇಮವನ್ನು ನಿಷ್ಠೆಯಿಂದಲೇ ಮಾಡುತ್ತಿದ್ದನು. ಹಣವಿಲ್ಲದೆ ಧೂಪವನ್ನು ಶಿವಲಿಂಗಕ್ಕೆ ಹಾಕಲು ಸಾಧ್ಯವಾಗದೆ ಶಿವಭಕ್ತಿಯಿಂದಲೇ ಹಣ ಸಂಪಾದನೆಗಾಗಿ ತನ್ನ ಊರನ್ನು ಬಿಟ್ಟು ನಡೆದನು. ತಿರುವನಂದಾಳು ಎಂಬ ಪಟ್ಟಣದಲ್ಲಿ ಶಿವಲಿಂಗವನ್ನು ಚೋಳಮಹಾರಾಜನು ಸ್ಥಾಪಿಸಿದ್ದನು. ಆದರೆ ಅದು ವಾಲಿಹೋಗಿತ್ತು, ಎಷ್ಟೇ ಕಠಿಣ ಪರಿಶ್ರಮದಿಂದ ಪ್ರಯತ್ನಿಸಿದರೂ ಅದನ್ನು ಸರಿಮಾಡಲು ಸಾಧ್ಯವಾಗಲಿಲ್ಲ. ಭಕ್ತಿಗೆ ವಶವಾಗುವ, ಭಕ್ತರಿಗೆ ಬಾಗುವ, ಭಕ್ತರು ಕರೆದತ್ತ ಬರುವ, ಅವರು ಒಲಿದತ್ತ ವಾಲುವ ಶಿವಲಿಂಗ ಎಂದು ಇಲ್ಲಿ ಭಕ್ತಿ ಪ್ರಯೋಗ ನಡಿಯುತ್ತದೆಯೆ ವಿನಃ ತೋಳ್ಬಲ ಎಂಬುದು ಖಾತ್ರಿಯಾಗಿತ್ತು. ಸಾಮಾರ್ಥ್ಯವು ನಡೆಯುವುದಿಲ್ಲ, ಆಗ ರಾಜನು ಯಾವ ಶಿವಭಕ್ತರು ಈ ಲಿಂಗವನ್ನು ಸರಿಮಾಡುತ್ತಾರೋ ಅವರಿಗೆ ಹೊನ್ನಕಾಣಿಕೆ ಎಂದು ಡಂಗೂರ ಹೊಡಿಸಿದನು. ಇದನ್ನು ಕೇಳಿ ಸಂತೋಷಿಸಿದ ಶಿವಭಕ್ತ ಕಲಿಯಾರನು ತನ್ನ ಭಕ್ತಿ ಒಲುಮೆಯಿಂದ ಶಿವಲಿಂಗವನ್ನು ನೇರ ಮಾಡುವುದೆಂದು ಪಣತೊಟ್ಟು ಮುಂದೆ ಬರುವನು. ದಿನನಿತ್ಯ ಅದಕ್ಕೆ ಧೂಪವನ್ನು ಸುರಿದು ಶಿವಸ್ತುತಿ ಮಾಡುತ್ತಾ ಬರುವನು. ತರತರ ಮುಗ್ಧ ಮಾತುಗಳನ್ನು ಹೇಳಿ ಛಲಭಾವಗಳಿಂದ ಸ್ತುತಿಸುತ್ತಾ ಶಿವಲಿಂಗವು ನೆಟ್ಟಗಾಗದಿದ್ದ ಪಕ್ಕದಲ್ಲಿ ತನ್ನ ಪ್ರಾಣವನ್ನು ಅರ್ಪಿಸುವುದಾಗಿ ನುಡಿದನು. ಶಿವಲಿಂಗ ನೆಟ್ಟಗಾಗುವಂತೆ ಭಕ್ತಿಯ ಸಾಹಸ ಮಾಡಿದ ನಂತರ ಮುಕ್ಕಣ್ಣ ಪ್ರತ್ಯಕ್ಷನಾಗಿ ಆತನನ್ನು ಅಪ್ಪಿಕೊಂಡು ಇಂತಹ ಛಲದ ಭಕ್ತರು ಇನ್ನುಂಟೆ? ಎಂದು ಹೇಳಿ ಆತನನ್ನು ಕೈಲಾಸಕ್ಕೆ ಕರೆದೊಯ್ದನು.

ಇಲ್ಲಿ ನೇಮನಿಷ್ಠೆ, ಛಲಭಕ್ತಿ, ಶರಣಸೇವೆ ನಿರಂತರವಾಗಿ ಪ್ರಾಮಾಣಿಕ ಮನಸ್ಸಿನಿಂದ ಮಾಡಿಕೊಂಡು ಬಂದ ಕಲಿಯಾರನಿಗೆ ಶಿವಸಾಯುಜ್ಯ ದೊರೆಯಿತು. ಹಾಗೆಯೇ ಯಾವ ಈ ಬಗೆಯ ನೇಮನಿಷ್ಠೆ ಇರುತ್ತದೆಯೋ ಅವರಿಗೂ ಶಿವಕೈವಲ್ಯ ದೊರೆಯುವುದು ಎಂಬ ನೀತಿ ಪ್ರಕಟವಾಗುತ್ತದೆ. ಛಲ ಭಕ್ತಿಯಿದ್ದರೆ ಅಸಾಧ್ಯವೆನಿಸುವುದು ಸಾಧ್ಯವಾಗುತ್ತದೆ. ಶಿವನೇ ನನ್ನ ಸರ್ವಸ್ವ ಮತ್ತು ಒಡೆಯನೆಂದು ಭಾವಿಸಿ, ಶಿವ ಭಕ್ತಿಯ ಮುಂದೆ ಅಸಾಧ್ಯವೆಂಬುದಕ್ಕೆ ಅರ್ಥವೇ ಇಲ್ಲ ಎಂಬ ಆಶಯ ವ್ಯಕ್ತವಾಗಿದೆ.

## ೧೮. ಮನು ನೀತಿ ಚೋಳನ ಕಥೆ :-

ಚೋಳನಾಡಿನಲ್ಲಿ ಕಮಲಾಯಖ್ಯಪುರದಲ್ಲಿ ಮನು ಎಂಬ ರಾಜನಿದ್ದನು. ಭೂಮಿಯಪಾಲಕನಾಗಿದ್ದ ಅವನು ವೇದಮಾರ್ಗದ ಮುಖೇನ ಶಿವನನ್ನು ಆರಾಧಿಸುತ್ತಿದ್ದ. ಪ್ರಜಾಪಾಲನೆ, ನೀತಿ–ಧರ್ಮ ಪ್ರಭುವಾಗಿದ್ದ ಅವನಿಗೆ ಶ್ರೀ ರತ್ನಮಾಲೆ ಎಂಬ ಪತ್ನಿಯು ಹಾಗು ಚಂಚಲ ಎಂಬ ಮಗನಿದ್ದನು. ಅವನು ಒಮ್ಮೆ ಅಂಗಾರ್ಚನೆಯನ್ನು ಮಾಡಿ ರಥದಲ್ಲಿ ಬರುತ್ತಿರುವಾಗ, ಮನುವಿನ ಧರ್ಮಪಾಲನೆ, ಧೃಢಮನಸ್ಸನ್ನು ಪರೀಕ್ಷಿಸಲೋಸುಗ ಗೋವು ತನ್ನ ಕರುವಿನೊಂದಿಗೆ ಬರುತ್ತಿರುವಾಗ ಕರುವು ಚಂಚಲನ ರಥದ ಗಾಲಿಗೆಗೆ ಸಿಲುಕಿ ಪ್ರಾಣಬಿಟ್ಟಿತು. ಕರುವಿನ ಈ ಸ್ಥಿತಿಗೆ ಗೋವಿನ ಗೋಳಾಟ, ವೇದನೆ ಹೃದಯವಿದ್ರಾವಕವಾಗಿತ್ತು. ಆದ್ದರಿಂದ ಗೋವು ತನ್ನ ಗೋಳಿನ ಕೂಗನ್ನು ರಾಜನಿಗೆ ನಿವೇದನೆ ಮಾಡುವಂತೆ ರಾಜದ್ವಾರಕ್ಕೆ ಬಂದು ಘಂಟೆಯನ್ನು ಭಾರಿಸುತ್ತದೆ. ಇದಕ್ಕೆ ಕಾರಣವನ್ನು ಕೇಳತಿಳಿದ ರಾಜನು ದುಃಖದಿಂದ ಮರುಗಿ ಪಶ್ಚಾತ್ತಾಪ ಪಟ್ಟು ಸಾವಿಗೆ ಕಾರಣನಾದವರನ್ನು ನಡುಬೀದಿಯಲ್ಲಿ ರಥದಗಾಲಿಗೆ ಸಿಲುಕಿಸಿ ನೂಕಿ ಕೊಲ್ಲಬೇಕು ಎಂದು ಆಜ್ಞೆ ವಿಧಿಸಿದನು. ಅದರಂತೆ ಚಂಚಲನು ಆ ಧರ್ಮಯುತ ಕಾರ್ಯಕ್ಕೆ ಅಣಿಯಾದನು. ಅವನನ್ನು ರಥದ ಗಾಲಿಗೆ ನೂಕಿ ಎಳೆದೊಯ್ಯಲು ಶಿವನು ಪ್ರತ್ಯಕ್ಷನಾಗಿ ನಿನ್ನ ಧರ್ಮಪಾಲನೆಯನ್ನು ಪರೀಕ್ಷಿಸಲೆಂದು ಧರ್ಮದೇವತೆ ಗೋವಿನ ರೂಪ ತಾಳಿ ಬಂದಿದೆ. ಈ ಸದ್ಧರ್ಮ ಪರೀಕ್ಷೆ ಗೆದ್ದವನಿಗೆ ವರವನ್ನು ನೀಡುವೆ, ನಿನಗಿಷ್ಟವಾದುದನ್ನು ಬೇಡಿಕೋ ಎಂದಾಗ ಮಗನ ಮತ್ತು ಕರುವಿನ ಪ್ರಾಣ ಬೇಕೆಂದು ಹಾಗು ನನ್ನ ಈ ಪಶುವೃತ್ತಿಯಿಂದ ಕಳೆದು ಶಿವಪಾದಸೇವೆ, ಭಕ್ತಿಯೊಲುಮೆ ಶಾಶ್ವತವಾಗಿರಿಸು ಎಂದು ಬೇಡುತ್ತಾನೆ.

ಈ ಕಥೆಯಲ್ಲಿ ಸತ್ತ ತನ್ನ ಕರುವಿಗಾಗಿ ಗೋಳಿಡುವ ಗೋವಿನ ದುಃಖಕ್ಕೆ ಊರಿನ ಜನರೆಲ್ಲಾ ಕಂಬನಿ ಮಿಡಿಯುವುದು. ಆ ಗೋವೇ ತನ್ನ ದುಃಖ ತೋಡಿಕೊಂಡು ನ್ಯಾಯ ಕೇಳಲು ರಾಜದ್ವಾರಕ್ಕೆ ಬಂದು ನ್ಯಾಯ ಘಂಟೆ ಬಾರಿಸುವುದು, ಆ ಮೂಕ ಪ್ರಾಣಿಯ ವೇದನೆಗೆ ಪ್ರತಿದುಃಖವನ್ನು ಪಟ್ಟು, ತಪ್ಪಿಗೆ ತನ್ನ ಮಗನ ತಲೆದಂಡವನ್ನು ಶಿಕ್ಷೆಯಾಗಿ ವಿಧಿಸುವ ರಾಜನ ನ್ಯಾಯವು ಗಮನಾರ್ಹವಾದುದು.

(i) ನ್ಯಾಯವೇ ದೇವರು ಎಂದು ತಿಳಿದಿರುವ ರಾಜನು ಪ್ರಜಾಪಾಲನೆಯಲ್ಲಿ ಪ್ರಾಣಿಗಳ ಭಾವನೆಗೂ ಬೆಲೆನೀಡಿ ದಯಾಪರನಾದವನು.

(ii) ಗೋವಿನ ದುಃಖವನ್ನು ಅದರ ದೃಷ್ಟಿಕೋನದಿಂದ ನೋಡಿ ತನಗೂ ಅದರ ದುಃಖವನ್ನು ಸಮನಾಗಿ ಹಂಚಿಕೊಳ್ಳಬೇಕು ಎಂದು ತೀರ್ಮಾನಿಸಿ ಗೋವಿನಂತೆ ಪುತ್ರಶೋಕ ಪ್ರಾಪ್ತಿಯಾಗುವಂತಹ ಶಿಕ್ಷೆವಿಧಿಸಿಕೊಂಡು ಮಗನನ್ನು ರಥದಗಾಲಿಗೆ ನೂಕಿಸಿ ಪ್ರಾಣಹರಣ ಮಾಡಿಸಿದ ಅವನ ನಿಷ್ಠೆಯ ಮನೋಧರ್ಮ ಬಹಳ ಉನ್ನತವೂ, ಉದಾತ್ತವೂ ಹೌದು.

(iii) ಶಿವನನ್ನು ಭಕ್ತಿಯಿಂದ ಆರಾಧಿಸುವಷ್ಟೇ ಮುಖ್ಯವಾದ ಇನ್ನೊಂದು ಅಂಶವೆಂದರೆ ಆ ರಾಜನು ತನ್ನ ರಾಜಧರ್ಮಪಾಲನೆಯಲ್ಲಿ ದೈವವನ್ನು ಕಾಣುವ ಅವನ ನಡೆ-ನುಡಿ ಎರಡೂ ಶುದ್ಧವಾಗಿತ್ತು. ಈ ಹೃದಯವಂತಿಕೆಯ ಕಾರ್ಯಕ್ಕೆ ಶಿವನು ಮೆಚ್ಚಿ ವರನೀಡುವನು. ಈ ಎಲ್ಲಾ ದಿವ್ಯ ವಿಚಾರಗಳನ್ನು ಹರಿಹರ ತನ್ನ ಕಥೆಯಲ್ಲಿ ಬಹಳ ಸೊಗಸಾಗಿ ತಿಳಿಸಿದ್ದಾನೆ.

## ೧೯. ಓಹಿಲಯ್ಯನ ರಗಳೆ :-

ಉತ್ತರ ದಿಶಾಭಾಗದಲ್ಲಿ ವಿಳಾಸವತಿ ಪಟ್ಟಣದಲ್ಲಿ ನಿಃಕುಂಭ ಎಂಬ ಅರಸನಿದ್ದನು. ಹಲವು ವರ್ಷಗಳವರೆಗೆ ಮಕ್ಕಳಿಲ್ಲದ ಕಾರಣ ಶಿವಪೂಜೆ ಮಾಡಿ ಹರನ ಆಶೀರ್ವಾದದಿಂದ ಸುಪುತ್ರನನ್ನು ಪಡೆದನು. ಅವನೇ ಓಹಿಲಯ್ಯ ಎಂಬ ಶಿವಭಕ್ತನು. ಇವನ ೧೬ನೇ ವರ್ಷದಲ್ಲಿ ತಂದೆಯು ತೀರಿಹೋದನು. ಊರಿನವರು, ಬಂಧುಮಿತ್ರರು ಅವನ ಸಂಸ್ಕಾರವನ್ನು ದುಃಖದಲ್ಲಿ ಮಾಡಿ ಬರುತ್ತಿರುವಾಗ, ಎಂದು ನನ್ನ ತಂದೆ ಬರುವನು? ಎಂದು ಮತ್ತೆ ಮತ್ತೆ ಕೇಳಿದಾಗ ಅವನು ಸತ್ತಿದ್ದಾನೆ, ದೇವಲೋಕಕ್ಕೆ ಹೋಗಿದ್ದಾನೆ, ಇನ್ನೆಂದೂ ಬರುವುದಿಲ್ಲ ಎಂದು ಪರಿ ಪರಿಯಾಗಿ ಬಂಧು-ಮಿತ್ರರು ವಿವರಿಸಿದರೂ ಕೇಳಲಿಲ್ಲ. ಆಗ ಅಲ್ಲಿದ್ದ ಶಿವಜ್ಞಾನಿಯೆಂಬುವವನು ಸಾವನ್ನು ಗೆಲ್ಲುವುದಕ್ಕೆ ಶಿವನಿಗೆ ಮಾತ್ರ ಸಾಧ್ಯವಿದೆ. ಆ ಸೌರಾಷ್ಟ್ರ ಸೋಮನಾಥನ ಮೊರೆಹೋಗು ನಿನ್ನನ್ನು ರಕ್ಷಿಸುತ್ತಾನೆ ಎಂದಾಗ ಅದರಿಂದ ಸೋಮನಾಥನ ಬಳಿಗೆ ಹೋಗಿ ಓಹಿಲಯ್ಯ ತನ್ನ ಕಷ್ಟವನ್ನು ಪರಿಪರಿಯಾಗಿ ಹೇಳಿಕೊಂಡು ಶಿವಲಿಂಗದ ಸ್ತೋತ್ರಗೆಯ್ಯುತ್ತಾನೆ. ಅವನ ಭಕ್ತಿಗೆ ಮೆಚ್ಚಿದ ಶಿವನು ೧೨ ವರ್ಷಕಾಲ ನಮಗೆ ಗೊಗ್ಗುಳ ಸೇವೆಯನ್ನು ಮಾಡು, ಆಮೇಲೆ ನಿನಗೆ ಮೋಕ್ಷ ಪ್ರಾಪ್ತಿಯಾಗುತ್ತದೆ ಎಂದನು. ಅದರಂತೆ ಧೂಪದ ಸೇವೆಯನ್ನು ಚಾಚೂತಪ್ಪದೆ ಪೂರ್ಣಗೊಳಿಸಿದನು. ಆದರೂ ಅವನು ಸಶರೀರ ಸಮೇತ ಕೈಲಾಸಕ್ಕೆ ಬರಲು ಸಾಧ್ಯವಾಗಲಿಲ್ಲ. ಯಾರ ಆಶ್ರಯವಿಲ್ಲದೆ ಸಹಾಯವಿಲ್ಲದೆ ದ್ವೀಪಕ್ಕೆ ನಡೆದೇ ಹೋಗಿ ಗುಗ್ಗಳಸೇವೆಯನ್ನು ಮಾಡು

ಎಂದ ಶಿವನಿಚ್ಛೆಯಂತೆಯೇ ಮತ್ತೆ ದೇಶ–ದೇಶ ಅಲೆದು ಒಬ್ಬನೇ ಹೋಗಿ ಧೂಪದ ಮಣಭಾರವನ್ನು ತಂದು ೧೨ ವರ್ಷಗಳ ಕಾಲ ಧೂಪ ಸೇವೆಯನ್ನು ಮಾಡಿದ ಬಳಿಕ ಶಿವನ ಅಪ್ಪಣೆಯಂತೆ ಕೈಲಾಸಕ್ಕೆ ನಡೆದೇ ಬಂದು ಗಣಪದವಿ ಪಡೆದನು. ಅವನ ಉಗ್ರನಿಷ್ಠ ಭಕ್ತಿಗೆ ಮೆಚ್ಚಿದ ಶಿವನು ಅವನ ಗುಣಾವಳಿಯನ್ನು ಕೈಲಾಸದಲ್ಲಿ ಹೊಗಳಿ ಹರಸಿದನು.

"ಮಾನವ ಜೀವನದಲ್ಲಿಯ ಸಾವಿನ ಭೀತಿಯನ್ನು ಅಳಿಯಲು ದೇವನನ್ನೇ ಮೊರೆಹೋಗಬೇಕು. ಅವನು ತಂದೊಡ್ಡುವ ಬೀಕರ ಸಂಕಟಗಳನ್ನು ಪ್ರಸನ್ನ ಚಿತ್ತದಿಂದ ಎದುರಿಸಬೇಕು. ಅಚಲವಾದ ದೈವನಿಷ್ಠೆಯಿಂದ ದೈವೀ ಕೃಪೆಯು ನಿಶ್ಚಿತವಾಗಿ ದೊರೆಕೊಳ್ಳುವುದು. ಸಂಪ್ರದಾಯದ ವ್ರತನೇಮಗಳು ಭಕ್ತನ ನಿಷ್ಠೆಯನ್ನು ಪರೀಕ್ಷಿಸುವ ಸಾಧನಗಳು ಮಾತ್ರ ಅವುಗಳ ಅಡಚಣೆಯಲ್ಲಿ ದೈವೀಕೃಪೆಗಾಗಿ ಮಾನವನು ತೋರುವ ಉತ್ಕಟ ಭಾವ ಚಿತ್ರಣ ಹರಿಹರನ ಕಾವ್ಯದಲ್ಲಿ ಹೃದಯಂಗಮವಾಗಿ ಬರುತ್ತಿದೆ."೨೦ "ಹುಟ್ಟು ಸಾವು ಸಹಜ" ಆದರೆ ಇದನ್ನರಿಯದ ಓಹಿಲಯ್ಯ ತಂದೆಯ ಸಾವಿನ ನೋವಿನಿಂದ ಸಾವಿನ ಭೀತಿಯನ್ನು ಗೆಲ್ಲಬೇಕು ಶಿವನನ್ನು ಸಾಕ್ಷಾತ್ಕರಿಸಿಕೊಳ್ಳಬೇಕು ಎಂಬ ಉಗ್ರಭಕ್ತಿನಿಷ್ಠೆಯನ್ನು ಮತ್ತು ಛಲದಿಂದ ಶಿವಭಕ್ತಿಯನ್ನು ಮೆರೆದು ಗಣಪದವಿಯನ್ನು ಪಡೆದು "ಧೂಪದೋಹಿಲ" ಎಂದೇ ಖ್ಯಾತಿಯಾಗುತ್ತಾನೆ. ಈ ಪ್ರಪಂಚದಲ್ಲಿ ಯಾವುದೂ ಸುಮ್ಮನೆ ಸಿಗುವುದಿಲ್ಲ ಅಂದ ಮೇಲೆ ಶಿವನ ಕರುಣೆಯನ್ನು ಸುಲಭವಾಗಿ ಪಡೆದುಕೊಳ್ಳಲು ಸಾಧ್ಯವೇ ಇಲ್ಲ. ಎದುರಾದ ಕಷ್ಟಗಳನ್ನೆಲ್ಲಾ ಸಹಿಸಿಕೊಂಡು ಶಿವನೇ ನನ್ನ ಒಡೆಯ, ಸರ್ವಸ್ವ ಎಂದು ಭಾವಿಸಿ ಶಿವನಾಜ್ಞೆಯನ್ನು ಶಿರಸಾಃ ವಹಿಸಿ ಶಿವಕೈವಲ್ಯ ಪಡೆದ ಓಹಿಲಯ್ಯ ಓರ್ವ ಭಕ್ತಶ್ರೇಷ್ಠನೆನಿಸಿದ್ದಾನೆ.

### ೨೦. ಪೊಯ್ಯೈಡಿಯರ ರಗಳೆ :–

ಚೋಳನಾಡಿನಲ್ಲಿದ್ದ ಪೊಯ್ಯೈಡಿಯಿಲ್ಲದ ಪುಲವರ ಎಂದೆಂಬ ಶಿವಭಕ್ತನು ಸದಾ ಶಿವನ ಸ್ತೋತ್ರ, ಧ್ಯಾನ ಮತ್ತು ಅವನ ಸೇವೆಗೆಂದೇ ತನ್ನ ಜೀವನವನ್ನು ಮುಡಿಪಾಗಿಸಿದ್ದನು. ಅಲ್ಲದೆ ತನ್ನ ಕವಿತಾ ಸಾಮರ್ಥ್ಯದಿಂದ ವೈವಿಧ್ಯಮಯ ವರ್ಣನೆಗಳಿಂದ ಶಿವನನ್ನು ಕೊಂಡಾಡಿ ಒಲಿಸಿಕೊಂಡಿದ್ದನು. ಶಿವನೇ ಅವನಿಗೆ ಒಡೆಯ ಮತ್ತು ಸರ್ವಸ್ವವು ಆಗಿದ್ದರಿಂದ ಪರಮೇಶ್ವರನ ಕುರಿತಾದ ವರ್ಣನಾತೀತ ಕವಿತ್ವ ಶಕ್ತಿಯನ್ನು ವರಮುನಿಗಳೂ ಮೆಚ್ಚಿಕೊಂಡಿದ್ದರು. ಪೊಯ್ಯೈಡಿಯ ಶಿವಭಕ್ತಿ, ಸೇವೆ ಮತ್ತು ಕವಿತ್ವ ಶಕ್ತಿಯನ್ನು ಶಿವನು ಮೆಚ್ಚಿ ಪಾರ್ವತಿದೇವಿಯೊಂದಿಗೆ ಅವನ

ಗುಣಗಾನವನ್ನು ಮಾಡುತ್ತಾನೆ. ಈ ಭಕ್ತಕವಿಯನ್ನು ಪುಷ್ಪಕವಿಮಾನದಲ್ಲಿ ಕೂರಿಸಿಕೊಂಡು ರುದ್ರಗಣಪದವಿ ನೀಡಿ ಹರಿಸಿದನು. ಈ ಕಥೆಯಿಂದ ಪೊಯ್ಯಡಿಯ ಮನಸ್ಸು ಮತ್ತು ಭಾವಗಳಲ್ಲಿ ಶಿವನೇ ಇರುವುದರಿಂದ ಅವನ ಧ್ಯಾನ, ಸೇವೆಯಲ್ಲಿ ನಿಷ್ಣಾತನಾಗಿ ಶಿವದೀಕ್ಷೆಯನ್ನು ಪಡೆದುಕೊಳ್ಳಲು ಈ ಮಾರ್ಗವೂ ಒಂದು ಮಹತ್ವಯುತವಾದುದು ಎಂಬಂಶ ಅಭಿವ್ಯಕ್ತವಾಗುತ್ತದೆ.

**೨೧. ತಿಲ್ಲೆವೇಳಂದರನ ರಗಳೆ :-**

ತಿಲ್ಲೆಪುರ ಎಂಬ ಊರು ಧರ್ಮಮಾರ್ಗದ ತವರೂರಾಗಿತ್ತು ಎಂದರೆ ತಪ್ಪಾಗಲಾರದು. ಅಲ್ಲಿ ತಿಲ್ಲೆವೇಳಂದರನೆಂಬ ಭಕ್ತನು ಸದಾ ಶಿವನ ಧ್ಯಾನ, ಸೇವೆ, ತಪಸ್ಸು, ಸದ್ಭಕ್ತಿ, ಸದಾಚಾರಗಳಲ್ಲೇ ತೊಡಗಿದ್ದವನಾಗಿದ್ದನು. ಶಿವನನ್ನು ಬಿಟ್ಟರೆ ಅನ್ಯದೇವರಗೊಡವೆಗೆ ಹೋಗದ ಇವನು ಭಕ್ತಶ್ರೇಷ್ಠನು. ಕಲಾವಿದನೂ ಆದ ಅವನು ಪರಮತ್ಯಾಗಿಗಳು ಘನತೆವತ್ತ ಸೌಮ್ಯವಂತನು ಮತ್ತು ತೇಜಸ್ಸು ಉಳ್ಳವನು ಆಗಿದ್ದಾನೆ. ವೇದಶಾಸ್ತ್ರನಿಪುಣನಾಗಿರುವ ಇವನು ಬ್ರಾಹ್ಮಣರಿಗಿಂತಲೂ ಶ್ರೇಷ್ಟನು ಹಾಗು ಅರವತ್ತನಾಲ್ಕು ಕಲೆಗಳಲ್ಲಿ ಪ್ರಖ್ಯಾತವಾಗಿರುವ ಇವನ ಶಿವಭಕ್ತಿ ಸೇವೆಯನ್ನು ಹಂಪೆಯ ವಿರೂಪಾಕ್ಷನೇ ಮೆಚ್ಚಿ ಕೊಂಡಾಡಿದ್ದಾನೆ. ಆದ್ದರಿಂದ ಇವನ ಅನುಪಮ ಶಿವಭಕ್ತಿಗೆ ಶಿವನೇ ಸೋತು ತಿಲ್ಲೆವೇಳಂದರನನ್ನು ಮೆಚ್ಚಿ ಅವನಿಗೆ ರುದ್ರಪದವಿ ಕರುಣಿಸಿದ್ದಾನೆ.

**೨೨. ಪ್ರಭು ದೇವರ ರಗಳೆ :-**

ಕೈಲಾಸದಲ್ಲಿ ನಿರ್ಮಾಯನೆಂಬ ಗಣಾಧರ ದೇವಕನ್ನಿಕೆಯೋರ್ವಳನ್ನು ಆಸೆಪಟ್ಟು ನೋಡಿದುದ್ದನ್ನು ಗಮನಿಸಿದ ಶಿವನು ನೀವಿಬ್ಬರು ಭೂಲೋಕದಲ್ಲಿ ಹುಟ್ಟಿ ಸರ್ವಸುಖವನ್ನು ತೀರಿ ಮತ್ತೆ ಬನ್ನಿ ಎಂದು ಹರಸಿ ಕಳಿಸಿದನು. ಬಳ್ಳಿಗಾವೆಯಲ್ಲಿರುವ ನಿಷ್ಠದಂಪತಿಗಳಿಗೆ ಮಗನಾಗಿ ನಿರ್ಮಾಯನು ಅಲ್ಲಮನಾಗಿ ಹುಟ್ಟಿದನು. ಅದೇ ಊರಿನ ಧನದತ್ತನ ಸತಿಯ ಮಗಳಾಗಿ ಕಾಮಲತೆ ಹುಟ್ಟಿ ವಿದ್ಯೆಯಲ್ಲಿ ಸರಸ್ವತಿಗೆ ಸಮಳಾಗಿ ಬಹಳ ಸುಂದರಳಾಗಿ ಯೌವ್ವನಕ್ಕೆ ಪ್ರಾಪ್ತಿಯಾದಳು. ಒಮ್ಮೆ ಗೊಗ್ಗೇಶ್ವರನ ದೇವಾಲಯದಲ್ಲಿ ಅಲ್ಲಮನು ಮೃದಂಗ ಬಾರಿಸುತ್ತಾ, ಶಿವನನ್ನು ಧ್ಯಾನಿಸುತ್ತಾ ಕುಳಿತಿರುತ್ತಾನೆ. ಕಾಮಲತೆಯು ಶಿವಲಿಂಗ ದರ್ಶನ ಮಾಡಿ ಬರುತ್ತಿರುವಾಗ ಇಬ್ಬರೂ ಪರಸ್ಪರ ನೋಡಿ ಮೂರ್ಛೆಹೊಂದಿಬಿದ್ದರು. ಹೀಗೆ ಆ ಜೀವಗಳ ನಡುವೆ ಪರಸ್ಪರ ಪ್ರೇಮಾಂಕುರವಾಯಿತು. ಕಾಯ, ವಾಚ, ಮನಸಾದಿಂದ ಒಂದಾಗಿ ಸುಖ, ಶಾಂತಿ, ನೆಮ್ಮದಿಯಿಂದ ಬಾಳುಸವೆಸುತ್ತಾ ಸಾಗಿದರು. ಹೀಗಿರುವಾಗ ಕಾಮಲತೆಗೆ ಒಮ್ಮೆ ಮಹಾತಾಪದ

ಜ್ವರವುಂಟಾಗಿ ತೀರಿಹೋದಳು. ಅವಳ ನೆನಪಲ್ಲೇ ವಿರಹವೇದನೆಗೊಳಗಾದ ಅಲ್ಲಮನು ಸದಾ ಚಿಂತಾಕ್ರಾಂತನಾಗಿ ದುಃಖದಲ್ಲಿ ಮುಳುಗಿ ಹೋಗಿದ್ದನು. ಒಮ್ಮೆ ಹೀಗೆ ಚಿಂತೆಯಲ್ಲಿಯೇ ತನಗರಿವಿಲ್ಲದಂತಾಗಿ ತನ್ನ ಕಾಲಿನ ಹೆಬ್ಬೆರಳಿನಿಂದ ನೆಲವನ್ನು ಬರೆಯುತ್ತಿರುವಾಗ ಕಾಲಿಗೆ ಚೂಪಾದ ವಸ್ತುವೊಂದು ಚುಚ್ಚಿದಂತಾಗಿ ಅದನ್ನು ರಾಜರ ಬಳಿ ನಿವೇದಿಸಿ, ಅಗಿಸಿ ನೋಡಿದಾಗ ದೊಡ್ಡ ಶಿವಾಲಯವೊಂದು ಕಂಡಿತು. ಎಲ್ಲರೂ ಆಶ್ಚರ್ಯದಿಂದ ನೋಡುತ್ತಿರಲು ಮನದನ್ನೆ ಕಾಮಲತೆಯನ್ನು ಕಳೆದುಕೊಂಡ ಮೇಲೆ ಈ ಜೀವಕ್ಕೆ ಬೆಲೆಯೇ ಇಲ್ಲ, ಇದ್ದರೆ ಏನು? ಹೋದರೆ ಏನು? ಎಂದು ಮನಸ್ಸಿನಲ್ಲಿ ತಿಳಿದುಕೊಂಡು ತಾನೇ ಆಲಯದೊಳಗೆ ಹೋದನು. ಅಲ್ಲಿ ಅನಿಮಿಷಯ್ಯವೆಂಬ ಗುರುಗಳು ತನ್ನ ಕರಸ್ಥಳದಲ್ಲಿದ್ದ ಲಿಂಗವನ್ನು ಅಲ್ಲಮನ ಕರಸ್ಥಳಕ್ಕೆ ಇಟ್ಟು ಲಿಂಗೈಕ್ಯರಾದರು. ಅಲ್ಲಮನ ದೇಹದಲ್ಲಿ ಹೊಸ ಚೈತನ್ಯವೊಂದು ತುಂಬಿಹೋಗಿ ಸಂಸಾರ, ಕಾಮಲತೆಯ ವ್ಯಾಮೋಹ ಇಲ್ಲವಾಗಿ ಶಿವಭಕ್ತಿಗೆ ಶರಣಾದನು. ಊರಿನಿಂದ ಹೊರಬಿದ್ದು ಅರಣ್ಯದಲ್ಲಿ ಸಕಲ ಜೀವರಾಶಿಗಳ ಹಾರೈಕೆ ಪಡೆದು, ಮುನ್ನಡೆದು ಶಿವಲಿಂಗಕ್ಕೆ ತನ್ನ ನೋಟದಿಂದ ಮಜ್ಜನ, ಕಣ್ಣುಗಳಿಂದಲೇ ಪೂಜೆ, ಮನಸ್ಸಿನ ಬೆಳಗೇ ಆರತಿಯಂತೆ ಪೂಜಿಸಿದನು. ಸಕಲ ಜೀವ ನಿರ್ಜೀವ ರಾಶಿಗಳಲ್ಲಿ ಶಿವನನ್ನು ಕಾಣುತ್ತಾ ಎಲ್ಲಿರುವವೋ, ಅದೇ ಪುಣ್ಯಕ್ಷೇತ್ರವಾಗುತ್ತಾ ಹೋಯಿತು. ಸೊನ್ನಲಿಗೆಯಲ್ಲಿ ಸಿದ್ಧರಾಮನನ್ನು ಕಂಡು ವಿವೇಕವನ್ನು ತಿಳಿಸಿ, ಶ್ರೀ ಶೈಲ ಪರ್ವತದ ಕಡೆಗೆ ನಡೆದನು. ಹೆಜ್ಜೆಹೆಜ್ಜೆಗೂ ಶ್ರೀ ಶೈಲ ಪರ್ವತದ ಮಹಿಮೆಯನ್ನು ಕೊಂಡಾಡುತ್ತಾ ವಿಶಿಷ್ಟವಾದ ಅನೇಕ ಅದ್ಭುತಗಳನ್ನು ನೋಡುತ್ತಾ ಸಾಗಿದ ಅಲ್ಲಮ ಮೋಕ್ಷದ ದಾರಿ ಹಿಡಿದು ಕೈಲಾಸಕ್ಕೆ ನಡೆದನು. ತನ್ನ ಕರಸ್ಥಳದಲ್ಲಿ ಲಿಂಗ ಸಮೇತ ಹರನ ಪಾದಕ್ಕೆರಗಿ ಕುಳಿತುಕೊಂಡನು. ಶಿವನು ನಿರ್ಮಾಯನಾಗಿರು ಎಂದು ಹರಸಿ ಇವನ ಶಿವಭಕ್ತಿಗೆ ಮೆಚ್ಚಿ ಗಣಪದವಿಯನ್ನು ನೀಡಿ ಆನಂದಿಸಿದನು.

ತನ್ನ ಪ್ರಿಯಾಮಣಿಯಾದ ಕಾಮಲತೆಯ ಮೇಲೆ ಇಟ್ಟ ಚಿತ್ತವನ್ನು ಶಿವನೆಡೆಗೆ ತಿರುಗಿಸಿಕೊಂಡ ಶಿವಾನುಭವಿಯಾದ ಪ್ರಭುದೇವ ಚರಿತ್ರೆ ಗಮನಾರ್ಹವಾದುದು. ಪ್ರೇಮಲತೆಯ ಪ್ರೇಮವೇ ಹೆಚ್ಚು ಎಂದು ಭಾವಿಸಿದ್ದ ಪ್ರಭುವಿಗೆ ಅನಿಮಿಷಯೋಗಿ ಸಾನಿಧ್ಯ ಫಲದಿಂದ ಶಿವಭಕ್ತನಾಗಿ ಮಾರ್ಪಟ್ಟು ಮತ್ತೆಂದು ತನ್ನ ಹಳೆಯ ಲೌಕಿಕ ಪ್ರೇಮದ ಬದುಕನ್ನ ನೆನೆಯಲಿಲ್ಲ. ಪ್ರಭುವಿನ ಪಾಲಿಗೆ ಪ್ರೇಮವೇ ಶಿವಪೂಜೆ, ಭಕ್ತಿಯೇ ಸರ್ವಸ್ವವಾಯಿತು. ಪ್ರಭುವಿನ ಈ ದಿಟ್ಟ ವ್ಯಕ್ತಿತ್ವದಿಂದಲೇ ಶಿವನ ಸಾಕ್ಷಾತ್ಕಾರವನ್ನುಂಟು ಮಾಡಿತು. 'ಹೆಣ್ಣು, ಹೊನ್ನು, ಮಣ್ಣಿ' ಗಾಗಿ

ಆಸೆಪಟ್ಟು ಅದು ನಮ್ಮಿಂದ ದೂರವಾದಾಗ ದುಃಖಿಗಳಾಗಿ ಬದುಕಿನ ಅರ್ಥಕಳೆದುಕೊಳ್ಳುತ್ತೇವೆ. ಆದರೆ ಅದು ಮಾಯೆ! ಭಕ್ತಿಯೊಂದೇ ಶಾಶ್ವತವೆಂದು ತಿಳಿಯುವವನಿಗೆ ನಿಜವಾದ ಅರ್ಥ ಜೀವನದಲ್ಲಿ ಲಭಿತವಾಗುತ್ತದೆ. ದೈವಸಾಕ್ಷಾತ್ಕಾರ, ದೈವ ಪ್ರಚೋದನೆಗೆ ಒಳಗಾದ ಮನುಷ್ಯನ ಬದುಕು ಹೇಗೆ ಬೇಕಾದರೂ ತಿರುಗಬಹುದು ಎಂಬ ಸತ್ಯವನ್ನು ಈ ಕಥೆ ತಿಳಿಸಿಕೊಡುತ್ತದೆ. ಪ್ರೇಮಿಯಾದ ಪ್ರಭುದೇವನು ಕಾಮಲತೆಯ ಮರಣದ ನಂತರ ಶಿವಯೋಗಿಯಾಗಿ ಮಹಾನ್ ಕಾರ್ಯಸಾಧನೆಗೆ ದಾರಿಮಾಡಿಕೊಟ್ಟಿತು.

ಹೀಗೆ ಅಲ್ಲಮ್ಮನಲ್ಲಿ ಉಂಟಾದ ಶಿವಭಕ್ತಿಯಿಂದ ಪ್ರೇಮ-ಕಾಮದ ಕಾವು ದೂರವಾಗಿ ಜ್ಞಾನ-ಕ್ರಿಯೆ, ಲಿಂಗ-ಜಂಗಮ ಪ್ರೀತಿ ಒಂದೆಡೆ ಬೆಸೆಯುತ್ತಾ ಬಂತು. ಪ್ರಭುದೇವನು ಆ ಮೂಲಕ ಅನುಭವ ತತ್ವವನ್ನು ಪ್ರತಿಪಾದಿಸುತ್ತಾ ಅನುಭವ ಮಂಟಪದಲ್ಲಿ ಹಲವು ವಚನಕಾರರ ನಡುವಿನ ಜಿಜ್ಞಾಸೆಯಲ್ಲಿ ಬೆರೆತು ತನ್ನ ಹೊಸ ಧೋರಣೆಗಳನ್ನು ರೂಪಿಸುವುದರ ಮೂಲಕ ಬದುಕಿಗೆ ಹೊಸ ದಾರಿ ಮತ್ತು ಅರ್ಥವನ್ನು ತಿಳಿಸಿಕೊಡುತ್ತಾನೆ.

ಶಿವಭಕ್ತಿಯಿಂದ ಮಾತ್ರ ಬದುಕು ಹಸನಾಗುವುದು ಎಂಬ ಸತ್ಯವನ್ನು ಶಿವಶರಣರು ಅರಿತಿದ್ದರು. ಪರಿಪೂರ್ಣತೆಯತ್ತ ಸಾಗುವುದೇ ಬಾಳಿನ ಉನ್ನತ ಗುರಿ ಎಂದು ತಿಳಿದು ಜೀವಿಸುತ್ತಿದ್ದ ಆ ಶಿವಭಕ್ತರುಗಳ ಅನುಭಾವದ ನೆಲೆಯೇ ಹರಿಹರನ ರಗಳೆಗಳ ತತ್ವದರ್ಶನವಾಗಿದೆ. ಗರ್ವವನ್ನು ತ್ಯಜಿಸಿದ ಶಿವಶರಣರು ಸತ್ಯ, ದಾನ-ಧರ್ಮ, ದಯೆ, ಕಾಯಕನಿಷ್ಠೆ, ಸಮಾನತೆಗಳನ್ನು ಬೆಳೆಸಿಕೊಂಡು ಬದುಕಿದ ಅವರ ಜೀವನವು ಯಶೋಗಾಥೆಗಳಾಗಿವೆ. ಆತ್ಮಸಾಧನೆಯಿಂದ ಶಿವನ ಕೈವಲ್ಯ ಸಂಪಾದಿಸಿದ ಶರಣರ ಬಾಳು ಲೌಕಿಕ ಮತ್ತು ಅಲೌಕಿಕವಾಗಿಯೂ ಸಾರ್ಥಕತೆಯನ್ನು ಪಡೆದು ಕೀರ್ತಿವಂತರಾದರು.

ಕೈಲಾಸದಲ್ಲಿ ಮಾಡಿದ ತಪ್ಪಿಗೆ ನರಲೋಕದಲ್ಲಿ ಮನುಷ್ಯನ ಜನ್ಮವೆತ್ತಿ ಇಲ್ಲಿ ನಾನಸುಖ-ತಾಪತ್ರಯಗಳಲ್ಲಿ ಬಳಲಾಡಿ ಕೊನೆಗೂ ತನ್ನ ನಿಜಸ್ಥಳ ಕೈಲಾಸವನ್ನು ಸೇರಿ ಶಿವಸಾಯುಜ್ಯವನ್ನು ಪಡೆದು ಶಿವನ ಭಕ್ತಿಯಲ್ಲಿ ಪ್ರಭುದೇವನು ಲೀನನಾದನು.

## ೨೨. ಸಿರಿಯಾಳನ ರಗಳೆ :-

ಚೋಳನಾಡಿನಲ್ಲಿ ಕಾಂಚಿ ಎಂಬ ಶಿವಪುರದಲ್ಲಿ ಶಿವಭಕ್ತ ಸಿರಿಯಾಳನು ಬಾಲ್ಯದಿಂದಲೂ ಭಕ್ತಿ, ಉತ್ತಮ ನಡೆ-ನುಡಿ, ಆಚಾರ-ವಿಚಾರಗಳನ್ನು ಪರಿಪಾಲಿಸುತ್ತಿದ್ದ ಅವನ ಗುಣಕ್ಕೆ ತಕ್ಕ ಕುಲಸತಿಯಾಗಿ ಚಂಗಳೆ ಕೈ ಹಿಡಿದಳು. ಇಬ್ಬರೂ ಅನ್ಯೋನ್ಯರಾಗಿದ್ದುಕೊಂಡು ತಮ್ಮ ತನು-ಮನ-ಧನವನ್ನು ಶಿವಭಕ್ತಿ ಮತ್ತು ಭಕ್ತರ ಸೇವೆಗೆ ಅರ್ಪಿಸಿ, ಶಿವಭಕ್ತರು ಬಯಸಿದ್ದನ್ನೆಲ್ಲಾ ದಾನ ನೀಡುವ ಮಹಾದಾನಿಗಳಾದ ಇವರ ಮೇಲೆ ಶಿವಕೃಪೆ ಉಂಟಾಗಿ ಚೀಲಾಳ ಎಂಬ ಮಗನು ಹುಟ್ಟಿದನು. ತಂದೆ-ತಾಯಿಗಳ ಲಾಲನೆ ಪಾಲನೆಯಲ್ಲಿ ಬೆಳೆದ ಮಗು ಅವರ ಶಿವಭಕ್ತಿ, ಮೌಲ್ಯಾದರ್ಶ ಮತ್ತು ನೇಮಾಚರಣೆಯಲ್ಲಿ ಪಾಲ್ಗೊಂಡು ಗುರುಭಕ್ತಿಯಿಂದ ವಿದ್ಯೆಯನ್ನು ಕಲಿಯತೊಡಗಿತು. ಹೀಗಿರುವಲ್ಲಿ ಒಮ್ಮೆ ಅತಿಥಿಸತ್ಕಾರಕ್ಕಾಗಿ ಊರೆಲ್ಲಾ ಹುಡುಕಿ ಬಂದರೂ ಒಬ್ಬ ಶಿವಭಕ್ತರು ದೊರೆಯಲಿಲ್ಲವೆಂದು ಬಂದ ಸಿರಿಯಾಳನ ಮನೆಯ ಅಂಗಳದ ಮರದ ಬುಡದಲ್ಲಿ ಶಿವಭಕ್ತನೊಬ್ಬನು ಸಿರಿಯಾಳನನ್ನು ನೋಡುವ ಸಲುವಾಗಿಯೇ ಬಂದು ಕಾದು ಕುಳಿತಿರುವ ವಿಚಾರವನ್ನು ಹೆಂಡತಿಯ ಬಾಯಿಂದ ಕೇಳಿ ಬಲು ಸಂತೋಷನಾದನು. ಅವರನ್ನು ಹೋಗಿ ಮಾತನಾಡಿಸಿ, ಅತಿಥಿಸತ್ಕಾರದ ದಾಸೋಹಕ್ಕೆ ಆಗಮಿಸಬೇಕೆಂದು ವಿನಂತಿಸಿದಾಗ, ಅವರು ಬಯಸುತ್ತಿರುವ ಭೋಜನ ವಿಶೇಷ ಗುಣವುಳ್ಳ ನರಮನುಷ್ಯನದು ಎಂದು ಕೇಳಿ ಸಂತೋಷಿಸಿ, ಒಪ್ಪಿ ಮನೆಯೊಳಗೆ ಸೇವೆಗಾಗಿಯೇ ಕರೆತಂದನು. ನಂತರ ವೇಷಾಧಾರಿ ಶಿವನು ಚಂಗಳೆಯಲ್ಲಿ ಮಾತೃವಾತ್ಸಲ್ಯ ಮತ್ತು ಚೀಲಾಳನಲ್ಲಿ ಜೀವಭಯವನ್ನು ಹುಟ್ಟಿಸುವ ಮೂಲಕ ಅವರ ಧೃತಿಯನ್ನು ಕೆಡಿಸುವ ಪ್ರಯತ್ನದಲ್ಲಿ ಸೋಲುತ್ತಾನೆ. ನಂತರ ಶಿವಭಕ್ತಿಯ ನಿಶ್ಚಲತೆಯಿಂದ ದಂಪತಿಗಳು ಮನಸ್ಸು ಮಾಡಿ ಮಸಾಲೆಯನ್ನು ಹಾಕಿ ರುಚಿಯಾಗಿ ಅಡುಗೆ ಸಿದ್ಧಪಡಿಸಿ ಸತ್ಕರಿಸಿದಾಗ, ತನಗೆ ಶ್ರೇಷ್ಠವಾದ ತಲೆಯ ಮಾಂಸದ ಆಹಾರದ ಬಯಕೆ ಒಡ್ಡಿದಾಗ ಮಹಾಭಕ್ತೆ ಅದನ್ನೂ ಪೂರೈಸಿದಳು. ಕೊನೆಗೆ ಶಿವಭಕ್ತರೊಡನೆ ತಾನು ಊಟಮಾಡುವುದು ವಾಡಿಕೆ ಎಂದು ಹೇಳಿ ಊರೆಲ್ಲಾ ಹುಡುಕುವಂತೆ ಮಾಡಿದ ವೇಷದಾರಿ ಶಿವನ ಆ ಪರೀಕ್ಷೆಯನ್ನು ಸ್ವೀಕರಿಸಿ ಎಲ್ಲೇ ಹುಡುಕಿದರೂ ಶಿವಭಕ್ತರು ಸಿಗಲಿಲ್ಲ ಎಂದು ತಾನೂ ಶಿವಭಕ್ತನೆಂದು ಹೇಳಿ ವಿಭೂತಿಯನ್ನು ಬಳಿದುಕೊಂಡು ಆಗಮಿಸಿ ಊಟಕ್ಕೆ ಕುಳಿತ ಸಿರಿಯಾಳನನ್ನು ಅಷ್ಟಕ್ಕೇ ಬಿಡದೆ ನಿನ್ನ ಮಗನನ್ನೂ ಕರೆ ಒಟ್ಟಿಗೆ ಊಟ ಮಾಡುವುದು ಸರಿ, ಅವನಿಲ್ಲದೆ ನಾವು ಊಟಮಾಡುವುದಿಲ್ಲ ಇದು ನಮ್ಮ ಪದ್ಧತಿ ಎಂದು ಪೀಡಿಸಿದನು. ನಂತರ ಆ ತಪಸ್ವಿಯ ಬಳಿ ಇದು ತನ್ನ ಮಗನ ದೇಹವೇ ಎಂದು ತಿಳಿಸಿದರೆ ಎಲ್ಲಿ ಊಟ ಮಾಡದೆ ಹೋಗಿ ಅವನು ಹಸಿವಿನಿಂದ ಇರುವನೋ ಎಂದು ಸಾತ್ವಿಕ ಸಂಕಟ ಅನುಭವಿಸಿ

ಸಿರಿಯಾಳನು ಆದುದಾಗಲಿ ಎಂದು ತನ್ನ ಸುಪುತ್ರನ ಹೆಸರಿಡಿದು ಕರೆದು ಊಟಮಾಡುವಿಯಂತೆ ಬಾರಾ ಮಗನೇ ಎಂದು ಕರೆದಾಕ್ಷಣ ಮಹದಾಶ್ಚರ್ಯವೆಂಬಂತೆ ಓಡೋಡಿ ಬಂದ ಮಗನನ್ನು ಪುತ್ರವಾತ್ಸಲ್ಯದಿಂದ ದಂಪತಿಗಳು ಅಪ್ಪಿ ಮುದ್ದಾಡಿದರು. ನಂತರ ತಪಸ್ವಿಯನ್ನು ನೋಡಿದರೆ ಅಲ್ಲಿರಲಿಲ್ಲವಾದ್ದರಿಂದ ನಾವು ಪಾಪಿಗಳು ಅವನ ಊಟ ಕಿತ್ತೆವು ಎಂದು ತಮ್ಮನ್ನೇ ಶಪಿಸಿಕೊಂಡು ತಟ್ಟೆಯಲ್ಲಿ ಬಡಿಸಿದ ಆಹಾರವನ್ನು ನೋಡಿದಾಗ ಅಲ್ಲಿ ಏನೊಂದು ಕಾಣದೇ ಹೋಯಿತು. ಅಷ್ಟರಲ್ಲಿ ಪಾರ್ವತಿ-ಪರಮೇಶ್ವರರು ತನ್ನ ಸಮೂಹದೊಂದಿಗೆ ದರ್ಶನವಿತ್ತು ನಿನಗೇನು ವರಬೇಕೋ ಕೇಳಕೊ ಎಂದು ಕೇಳದಾಗ ಏಳು ಕೇರಿಯಲ್ಲಿ ಬಾಳುವವರೆಲ್ಲಾ ಸುಖವಾಗಿರಲೆಂದು ಈ ಶಿವಪುರವನ್ನೇ ಹರಸಬೇಕೆಂದು ಅಪೇಕ್ಷಿಸಿದನು. ಅವರ ವರವನ್ನು ಈಡೇರಿಸಿದ ಪರಶಿವನು ಸಿರಿಯಾಳ, ಚಂಗಳೆ, ಚೀಲಾಳ ದಾದಿ ಚಂಡಣೆಯರಿಗೆ ವಿಶೇಷ ಗಣಪದವಿಯನ್ನು ನೀಡಿ ಹಾರೈಸಿದನು.

ಈ ಕಥೆಯು ಬಹಳ ಅರ್ಥಪೂರ್ಣವಾಗಿಯೂ ಮತ್ತು ಇನ್ನಿತರ ಕಥೆಗಳಗಿಂತ ವಿಶೇಷವಾದುದುದಾಗಿದೆ. ಶಿವಭಕ್ತರಿಗೆ, ಶಿವನೇ ಸರ್ವಸ್ವ, ಒಡೆಯ. ಅವನ ಪ್ರತಿರೂಪವೆಂಬಂತೆ ಮನೆಗೆ ಬಂದ ಭಕ್ತರಿಗೆ ಅತಿಥಿಸತ್ಕಾರ ನೆರವೇರಿಸಿ, ಅವರ ತೃಪ್ತಿ ಪಡಿಸುವುದು ಎಂದರೆ ಶಿವಭಕ್ತರಿಗೆ ಪಂಚಪ್ರಾಣ ಮತ್ತು ಅದನ್ನು ಬಲು ನೇಮ-ನಿಷ್ಠೆಯಿಂದ ನಿರ್ವಹಿಸುವರು. ಅದಕ್ಕೆ ತಮ್ಮ ಪ್ರಾಣ ಅಥವ ಮಕ್ಕಳ ಪ್ರಾಣ ಬಲಿಯಾದರೂ ಸ್ವಲ್ಪವೂ ಲೆಕ್ಕಿಸರು, ಶಿವನು ನೀಡಿದ್ದನ್ನು ಶಿವನಿಗೆ ಸಮರ್ಪಿಸುವುದಕ್ಕೆ ಅಳುಕೇಕೆ? ಎಂಬ ಸದೃಢ ಮನೋಬಲವುಳ್ಳ ಈ ಶಿವಭಕ್ತರು ಆದರ್ಶದಂಪತಿಗಳು. ಅವರ ದಿಟ್ಟ ಶಿವಭಕ್ತಿಯ ಸಧೃಢತೆಯ ಹೋರಾಟದ ಮುಂದೆ ಶಿವನೇ ಸೋತು ವರನೀಡಿ ಹರಸುತ್ತಾನೆ. ಇಲ್ಲಿ ಶಿವನ ಒಲುಮೆಯನ್ನು ಬಿಟ್ಟುಕೊಡದ ಭಕ್ತರು ಒಂದೆಡೆಯಾದರೆ, ತನ್ನ ಭಕ್ತನನ್ನು ಸುಲಭವಾಗಿ ಬಿಟ್ಟುಕೊಡದ ರಕ್ಷಕ ಶಿವನು ಮತ್ತೊಂದೆಡೆ, ಇವರಿಬ್ಬರ ಈ ನಂಟು ಎಂದಿಗೂ ಗಟ್ಟಿಯಾಗಿ ಬೆಸದಿರುವಂತದು ಇದನ್ನು ಬೇರ್ಪಡಿಸಲು ಎಂದಿಗೂ ಸಾಧ್ಯವಾಗದು. ಶಿವ-ಭಕ್ತನ ನಡುವೆ ಇರುವ ಈ ಗಾಢವಾದ ಸಂಬಂಧ ಒಂದು ಧರ್ಮವನ್ನು ಮುಂಚೂಣಿಗೆ ತಂದು ನಿಲ್ಲಿಸುತ್ತದೆ ಎಂಬ ಸರ್ವಕಾಲಕ್ಕೂ ಸಲ್ಲುವಂತಹ ಆದರ್ಶವನ್ನು ಸಾರುತ್ತದೆ.

## ೨೩. ಕೋವೂರ ಬೊಮ್ಮಿತಂದೆಯ ರಗಳೆ :-

ಉತ್ತರ ದಿಶಾಭಾಗದಲ್ಲಿ ಕೋವೂರವೆಂಬ ಪಟ್ಟಣದಲ್ಲಿ ಚಾಲುಕ್ಯವಂಶದಲ್ಲಿ ಬೊಮ್ಮಯ್ಯನೆಂಬ ಓರ್ವಶಿವಭಕ್ತ ಶ್ರೇಷ್ಠನಿದ್ದ. ನಿಷ್ಠೆಯಿಂದ ಶಿವಪೂಜೆಯನ್ನು ಮಾಡಿಕೊಂಡು ತನ್ನ ಆಪ್ತ ಶಿವಭಕ್ತ ಬಳಗದೊಂದಿಗೆ ಹಾಗು ಹನ್ನೆರಡು ಜನ ಹೆಂಡತಿಯರ ನಿರ್ಮಲ ಪ್ರೇಮದೊಂದಿಗೆ ನೆಮ್ಮದಿಯಿಂದ ಶಿವಭಕ್ತಿಸುಖದಲ್ಲಿ ಶಿವನಿಚ್ಛೆಯಂತೆ ಆಳ್ವಿಕೆ ನಡೆಸುತ್ತಿದ್ದ ಭೂಪನಾಗಿದ್ದನು. ಇವನ ಸತಿ ಕಲಾವತಿಯ ಉದರದಲ್ಲಿ ಶಿವನ ಆಶೀರ್ವಾದದಿಂದ ಮಲ್ಲಿದೇವನೆಂಬ ಮಗನು ಹುಟ್ಟಿ ಅವನೂ ಶಿವಭಕ್ತಿಯ ನೆರಳಲ್ಲೇ ಬೆಳೆಯುತ್ತಾನೆ. ಒಮ್ಮೆ ರಾಜ ಬೊಮ್ಮಿತಂದೆ ಎಲ್ಲಾ ಧಾನ್ಯರಾಶಿಗಳನ್ನು ಒಟ್ಟುಗೂಡಿಸಿ ೬ ತಿಂಗಳಕಾಲ ಗಣಪರ್ವ ಮಾಡಿ ತನ್ನ ಮೂನ್ನೂರು ಶಿವಭಕ್ತರೊಡಗೂಡಿ ಶಿವಭಕ್ತಿ ಸುಖವನ್ನು ಅನುಭವಿಸಬೇಕೆಂಬ ಉದ್ದೇಶವಿದೆ ಅದಕ್ಕೆ ನಾವೆಲ್ಲರೂ ಹೊರಡುತ್ತಿದ್ದೇವೆ. ಏನೇ ಅವಘಡ ಬಂದರೂ ನಮ್ಮ ಬಳ ವಿಷಯವನ್ನು ಮುಟ್ಟಿಸಬಾರದು ಎಂಬ ಆಜ್ಞೆಯನ್ನಿತ್ತು ಹೊರಟರು. ಹೀಗಿರುವಾಗ ಆಸ್ಥಾನಕ್ಕೆ ಶಿವಭಕ್ತನ ವೇಷದಲ್ಲಿ ಬಂದ ಜೈನನೊಬ್ಬ, ೧೬ ವರ್ಷದ ಬೊಮ್ಮಿತಂದೆಯ ಮಗ ಮಲ್ಲಿನಾಥನನ್ನು ಇರಿದು ಕೊಂದು ಪರಾರಿಯಾದನು. ರಾಣಿಯರೆಲ್ಲಾ ಅತೀವ ದುಃಖಪಟ್ಟು ಬೊಮ್ಮಿತಂದೆಯ ಗಣಪರ್ವದ ಭಕ್ತಿಸುಖಕ್ಕೆ ತೊಂದರೆಯನ್ನೀಯಬಾರದೆಂದು ಅರಮನೆಯ ಒಂದು ಕೋಣೆಯಲ್ಲಿ ಹೆಣ ಕೆಡದಂತೆ ಜೋಪಾನವಾಗಿಟ್ಟರು. ಬೊಮ್ಮಿತಂದೆ ತನ್ನ ಶಿವಭಕ್ತರೊಡಗೂಡಿ ಆರು ತಿಂಗಳ ಕಾಲ ಶಿವಧ್ಯಾನ ಭಕ್ತಿಸುಖದಲ್ಲಿ ಮುಳುಗೆದ್ದು ಕೋವೂರಿಗೆ ವಾಪಸ್ಸಾದಾಗ ಜೈನರೆಲ್ಲ ಇದಿರಾದರು. ಆಲದ ಮರದ ಕೆಳಗೆ ವಿಶ್ರಮಿಸುತ್ತಿದ್ದ ಶಿವಭಕ್ತರು. ಶಿವಭಕ್ತರಾಗಿರುವುದೇ ನಮ್ಮ ಪುಣ್ಯ, ಇದೇ ಪ್ರತ್ಯಕ್ಷ ದರ್ಶನ ಎಂಬ ದಿಟ್ಟ ನೇರ ಉತ್ತರ ನೀಡಿದರು. ಅದಕ್ಕೆ ಪ್ರತಿಯಾಗಿ ಜೈನ ಋಷಿಗಳು ಎದುರಿಗಿರುವ ಆಲದ ಮರವನ್ನು ನಮ್ಮ ಶಕ್ತಿಯಿಂದ ಸುಟ್ಟು ಭಸ್ಮ ಮಾಡುತ್ತೇವೆ. ನೀವು ನಿಮ್ಮ ಶಿವಶಕ್ತಿಯಿಂದ ಅದನ್ನು ಮೊದಲಿನಂತೆ ಮಾಡಿದರೆ ನಿಮ್ಮ ಕೈ ಮಿಗಿಲು ಎಂದು ಆಲದಮರವನ್ನು ಸುಟ್ಟು ಭಸ್ಮ ಮಾಡಿದರು, ಆಗ ಬೊಮ್ಮಿತಂದೆಯು ಇದು ಯಾವ ಮಹಾ ಪವಾಡ? ಹರಹರಾ ಶಿವ ಶಿವಾ ಎಂದು ತನ್ನ ಶಿವಭಕ್ತರ ವೃಂದದೊಡಗೂಡಿ ಹೇಳುತ್ತಿದ್ದಂತೆ ಸುಟ್ಟುಭಸ್ಮವಾದ ಆ ಜಾಗದಲ್ಲಿ ಬೀಜವೊಡೆದು, ಸಸಿಯಾಗಿ ಮರವಾಗಿ ವಿಸ್ತೃತವಾಗಿ ಬೆಳೆಯಿತು, ಜೈನರು ಅಂಜಿ ಓಡಿದರು. ಕೋವೂರಿಗೆ ಬಂದಾಗ ಬೊಮ್ಮಿತಂದೆಗೆ ತನ್ನ ಮಗನನ್ನು ಶತ್ರು ಜೈನನೊಬ್ಬ ಮೋಸದಿಂದ ಕೊಲೆಗೈದಿರುವ ವಿಚಾರ ತಿಳಿದು ನೂರ್ಮಡಿ ದುಃಖಪಟ್ಟು ಶಿವನನ್ನು ನೆನೆದು ಶಿವಭಕ್ತಿಯಿಂದ ಎಂದೋ ಸತ್ತಿರುವ

ಮಗನನ್ನು ಏಳು ಮಗನೆ ಎಂದು ಎಬ್ಬರಿಸಿ ಜೀವತರಿಸಿದರು. ಇದರಿಂದ ಎಲ್ಲರೂ ಸಂತೋಷಿಸಿ ಶಿವಶಕ್ತಿಯನ್ನು ಕೊಂಡಾಡಿದರು ಮತ್ತು ಸವಣರೂ ಸೇರಿದಂತೆ ಎಲ್ಲರೂ ಆಶ್ಚರ್ಯಚಕಿತರಾದರು. ಈ ಸಂಭ್ರಮವನ್ನು ಅತ್ಯುತ್ಸಾಹದಿಂದ ಬೊಮ್ಮಿತಂದೆ ಪಂಚಪಕ್ವಾನ್ನ, ಸುಭಕ್ಷ್ಯ ಭೋಜನವನ್ನು ಶಿವನಿಗೆ ನೈವೇದ್ಯಮಾಡಿ ಗಣಪರ್ವವನ್ನು ಸಡಗರದಿಂದ ಆಚರಿಸಿದರು. ಇಷ್ಟರಲ್ಲಿ ಜೈನರು ಈ ಶಿವಭಕ್ತರ ವಿರುದ್ಧ ಯಾವಾಗಲೂ ಹೋರಾಟದಲ್ಲೇ ಮುಂದುವರಿದರು. ಬೊಮ್ಮಿತಂದೆಯು ಅವರ ಮೂರು ತಪ್ಪುಗಳನ್ನು ಕ್ಷಮಿಸುತ್ತೇನೆ, ಅನಂತರ ಅವರೆಲ್ಲರನ್ನು ಸಂಹರಿಸಿ ಶಿವಧರ್ಮವನ್ನು ಎತ್ತಿಹಿಡಿಯುತ್ತೇನೆ ಎಂದು ಪಣತೊಟ್ಟನು. ಜೈನರು ಪುಷ್ಪಾಂಜಲಿ ಎಂಬ ಮಾರಿಹಬ್ಬದೊಂದಿಗೆ ಶಿವದ್ರೋಹ ಕಾರ್ಯವನ್ನು ಎಸಗುತ್ತಿರುವುದು ತಿಳಿದ ಬೊಮ್ಮಿತಂದೆ ತನ್ನ ಗಣ ಸಮೂಹದೊಂದಿಗೆ ಅವರನ್ನೆಲ್ಲಾ ಸಂಹರಿಸಿ, ಜೈನಮಂದಿರದಲ್ಲಿ ಜಿನ ಮೂರ್ತಿಗಳನ್ನು ಒಡೆದು ಶಿವಲಿಂಗವನ್ನು ಪ್ರತಿಷ್ಠಾಪಿಸಿದನು. ಶಿವಪೂಜೆಯನ್ನು ಸದಾ ಶುಚಿರ್ಭೂತನಾಗಿ, ಭಸ್ಮಾದಿಗಳನ್ನು ಲೇಪಿಸಿಕೊಂಡು ಶಿವಪುರವನ್ನು ಪ್ರೀತಿಯಿಂದ ಪಾಲಿಸಿಕೊಂಡು, ಶಿವಭಕ್ತರ ನುಡಿಯನ್ನು ತಪ್ಪದೇ ಪಾಲಿಸಬೇಕೆಂಬ ಹಿತವಚನವನ್ನು ಮಲ್ಲಿದೇವನಿಗೆ ಬೊಮ್ಮಿತಂದೆಯು ಒಪ್ಪಿಸಿದನು. ನಂತರ ಬೊಮ್ಮಿತಂದೆಯು ಅಂಬುಧರಾ ರಾಮನಾಥನಲ್ಲಿಗೆ ಬಂದು ಮನಸ್ಸಾರೆ ಬಿಗಿದಪ್ಪಿಕೊಂಡು ವೀರಭಕ್ತರು ನಾನಾಪರಿಯಲ್ಲಿ ತಮ್ಮ ಭಕ್ತಿಸಾಹಸಗಳನ್ನು ಮೆರೆದರು. ಶೂರಶಿವಶರಣರ ಭಕ್ತಿಯ ನಿಷ್ಠೆ ಮತ್ತು ವೀರಬಲಿದಾನಕ್ಕೆ ಮೆಚ್ಚಿದ ಶಿವನು ಪುಷ್ಪಕವಿಮಾನವನ್ನು ತಂದು ಎಲ್ಲರನ್ನೂ ಕೂಡಿಸಿಕೊಂಡು ಕೈಲಾಸಕ್ಕೆ ಕರೆತಂದು ಕಲಿಭಕ್ತರ ಛಲ, ತನುಪೂಜೆಯ ಒಲವನ್ನು ಮೆಚ್ಚಿ ಹೊಗಳಿ ಬೊಮ್ಮಿತಂದೆಗೆ ಗಣಪದವಿಯನ್ನು, ಉಳಿದ ಶಿವಭಕ್ತಕುಲಕ್ಕೆ ಮಾನ್ಯವೃತ್ತಿಯನ್ನು ನೀಡಿ ಸಲಹಿದನು. ಈ ಶಿವಭಕ್ತರಿಗೆ ಶಿವನ ಮೇಲೆ ಅಪಾರ ನಂಬಿಕೆ, ಅಷ್ಟೇ ಒಲವೂ ಇದೆ. ಅವನ ಸೇವೆಗೆ ತನು-ಮನ-ಧನ ಸರ್ವವನ್ನೂ ಅರ್ಪಿಸುವವರಾಗಿದ್ದಾರೆ. ಶಿವಭಕ್ತಿಯಲ್ಲಿ ನಿಷ್ಠಾವಂತರಾದ ಇವರು ತಮ್ಮ ಧರ್ಮಕ್ಕಾಗಲೀ ಇಲ್ಲವೆ ತಮ್ಮ ಶಿವಭಕ್ತಿಯ ಆಚರಣೆಗೆ ಎದುರಾದವರನ್ನು ಮುಲಾಜಿಲ್ಲದೆ ನಾಶಪಡಿಸುವವರು. ಶಿವ ಭಕ್ತರಿಗೆ ಅಸಾಧ್ಯವೆಂಬುದು ಏನೂ ಇಲ್ಲ ನಮ್ಮ ಶಿವನೇ ಪ್ರಧಾನ ಶಕ್ತಿ ಎಂಬ ನಂಬಿಕೆಯ ಮುಂದೆ ಅನ್ಯಧರ್ಮ, ಅನ್ಯದೇವರು ತೃಣಕ್ಕೆ ಸಮಾನರು ಎಂದು ಚಿತ್ರಿಸಿರುವ ಹರಿಹರನು ಬೊಮ್ಮಿತಂದೆಯ ಶಿವಭಕ್ತಿಯ ಸಾಮರ್ಥ್ಯವನ್ನು ಅಧಿಕವಾಗಿಯೇ ಚಿತ್ರಿಸಿದ್ದಾನೆ.

೨೪. <u>ಬಸವರಾಜದೇವರ ರಗಳೆ :-</u>

ಕೈಲಾಸದಲ್ಲಿ ಶಿವಗಣಾಧರರೊಂದಿಗೆ ಶಿವನು ಒಡ್ಡೋಲಗದಲ್ಲಿರಬೇಕಾದರೆ ಮಾಲೆಗಾರನೊಬ್ಬ ಸಂಪಗೆಯ ಹೂಗಳನ್ನು ಶಿವನಿಗೆ ಅರ್ಪಿಸಿದನು. ಆ ಹೂಗಳನ್ನು ಪ್ರಸಾದದ ರೂಪವಾಗಿ ಎಲ್ಲರಿಗೂ ಹಂಚು ಎಂದು ನೀಡಿದ ಶಿವನ ಮಾತಿನಂತೆ ವೃಷಭನು ಎಲ್ಲರಿಗೂ ಹಂಚಿದನು. ಆದರೆ ಕುಮಾರಸ್ವಾಮಿ ತನಗೆ ಪ್ರಸಾದ ಸಿಗಲಿಲ್ಲವೆಂದರೂ ಶಿವನ ಮುಂದೆ ಬಲವಾದ ವಾದ ಮಾಡಿದನು. ನಾನು ಪ್ರಸಾದವನ್ನು ಅವರಿಗೂ ಹಂಚಿರುವೆ ಎಂದ ವೃಷಭನ ನುಡಿಗಳಿಂದ ಶಿವನು ಎಲ್ಲರ ಮುಂದೆ ಸುಳ್ಳು ಹೇಳುವುದು ತರವಲ್ಲ, ಈ ತಪ್ಪಿಗಾಗಿ ಭೂಲೋಕದಲ್ಲಿ ಹುಟ್ಟಿ ಪ್ರಸಾದವನ್ನು ಹಂಚುವ ಕಾರ್ಯವನ್ನು ಮಾಡಿ ಕೈಲಾಸವನ್ನು ಮತ್ತೆ ಸೇರಬೇಕೆಂಬ ಆದೇಶವನ್ನಿತ್ತನು. ಭೂಲೋಕಕ್ಕೆ ತೆರಳಲು ತನಗೆ ಮನಸ್ಸಿಲ್ಲವೆಂಬ ತನ್ನ ಇಂಗಿತವನ್ನು ಶಿವನ ಮುಂದಿಡಲು, ಶಿವನು ಹೆದರಬೇಡ ಮಗನೇ ನಿನ್ನಯ ಪಾಲಿಗೆ ಪ್ರೀತಿಯ ಸಖನಾಗಿ ನೆರಳಂತೆ ಕಾಯಲು ನಾನಿರುವೆ, ಇಲ್ಲಿ ಸುಳ್ಳಾನ್ನಾಡಿದ ನಿಮಿತ್ತ ಅಲ್ಲಿ ಸತ್ಯವನ್ನು ಮೆರೆಸಿ ಗುರು-ಲಿಂಗ-ಜಂಗಮ ಭಕ್ತಿಯನ್ನು ಯಶಸ್ವಿಯಾಗಿ ಮೆರೆಸಿ ಬರಲು ಆಜ್ಞೆಯಿತ್ತನು.

ಈ ಕಥೆಯ ಪ್ರಾರಂಭದಲ್ಲಿಯೇ ಶಿವನು ತನ್ನ ಶ್ರೇಷ್ಠಭಕ್ತನಾದ ಗಣಪ ವೃಷಭನ ತಪ್ಪಿಗೆ ಶಾಪಾವಾಗಿಯೋ ಇಲ್ಲ, ವರವಾಗಿಯೋ ಭೂಲೋಕದಲ್ಲಿ ಜನಿಸಲು ಆದೇಶನೀಡಿ ಅವನ ಕೈಯಲ್ಲಿ ಅಗಣಿತ ಭಕ್ತಿಯ ಸೇವೆಯನ್ನು ಮೆರೆಸಿರುವುದು ವೈಶಿಷ್ಟ್ಯವೆನಿಸಿದೆ. ಅಷ್ಟೇ ಅಲ್ಲದೆ ಪ್ರೀತಿಯಿಂದ ಮಗನೇ ಎಂದು ಸಂಬೋಧಿಸಿ ನಿನ್ನ ಸ್ನೇಹಿತನಾಗಿ, ನಿನಗೆ ಹಿತವಾಗಿ ಸದಾ ರಕ್ಷಕನಂತೆ ನಾನಿರುವೆ ಎಂದು ನೀಡುವ ಈ ಅಭಯದ ಮಾತಿನಂತೆ ಇಡೀ ಕಥೆಯಲ್ಲಿ ಬಸವಣ್ಣನ ಬೆಂಗಾವಲಾಗಿಯೇ ಇದ್ದು ಕೊನೆಗೆ ಕೈಲಾಸಕ್ಕೆ ಕರೆಸಿಕೊಳ್ಳುವ ಪರಿಯಲ್ಲಿ ಶಿವನಿಗೆ ತನ್ನ ಭಕ್ತರ ಬಗ್ಗೆ ಇರುವ ಕಾಳಜಿ, ಪ್ರೀತಿ ಮತ್ತು ಸ್ನೇಹ ಬಂಧುತ್ವ ಗಮನಾರ್ಹವಾದುದು. ಶಿವ ಮತ್ತು ಭಕ್ತರ ಈ ಸಂಬಂಧ ಬಹಳ ಅವಿನಾಭಾವವಾದುದು ಹಾಗು ಘನತೆಯಿಂದ ಕೂಡಿದುದು ಆಗಿರುವುದರಿಂದ ಭಕ್ತಿ ಭಂಡಾರಿ ಬಸವಣ್ಣನಂತಹ ಮಿಗಿಲಾದ ಶಿವಭಕ್ತರನ್ನು ಸೃಷ್ಟಿಸಿ, ಅಗಣ್ಯ ಸೇವಾಕಾರ್ಯಗಳನ್ನು ಮಾಡಿರುವುದು ಚರಿತ್ರಾರ್ಹವಾಗಿದೆ. ವೃಷಭನು ಭೂಲೋಕದಲ್ಲಿ ಘನತೆವೆತ್ತ ಬಾಗೇವಾಡಿಯ ಅಗ್ರಹಾರದಲ್ಲಿ ಮಾದರಸ ಮಾದಲಾಂಬಿಕೆಯ ಪುತ್ರನಾಗಿ ಹುಟ್ಟಿ ಬಸವನೆಂದು ನಾಮಾಂಕಿತನಾದನು. ಚಿಕ್ಕವಯಸ್ಸಿನಲ್ಲಿ ತಂದೆ-ತಾಯಿಯನ್ನು ಕಳೆದುಕೊಂಡು ಸದಾ ಶಿವಭಕ್ತಿಯಲ್ಲಿ ಲೀನವಾಗಿ, ಶಿವಭಕ್ತಿ ಪರಿಸರವನ್ನೇ ಸೃಷ್ಟಿಸಿಕೊಂಡು ಭಕ್ತಿಸುಖದಲ್ಲೇ ಕಳೆಯುತ್ತಿದ್ದ

ಇವನು ನಾನಾ ಪರಿಯಲ್ಲಿ ಶಿವಪೂಜೆಯನ್ನು ಮಾಡುತ್ತಿದ್ದನು. ಮೂಢನಂಬಿಕೆಗಳ ವಿರುದ್ಧ ಧನಿ ಎತ್ತುವುದು ಹಾಗು ಸಮಾಜ ಕಲ್ಯಾಣದಂತಹ ಕಾರ್ಯಗಳ ಕಡೆ ಮನಸ್ಸು ಸದಾ ಎಚ್ಚೆದ್ದುಕೊಳ್ಳುತ್ತ ಬಸವನು ಬೆಳೆದು ಕಪ್ಪಡಿ ಸಂಗಮಕ್ಕೆ ತೆರಳಿ, ಅಲ್ಲಿ ಈಶಾನ ದೇವಗುರುಗಳ ಸಮ್ಮುಖದಲ್ಲಿ ಸಂಗಮೇಶ್ವರನ ಆರಾಧ್ಯದೊಂದಿಗೆ ಬಹುಕಾಲಕಳೆದು ಶಿವನಲ್ಲಿ ಸಲುಗೆಯಿಂದ ಬೇಡುತ್ತ ನಾನಾ ವೈಖರಿಯಲ್ಲಿ ಅರ್ಚನೆ, ಸ್ತೋತ್ರಪಠಣ, ಗೀತಗಾಯನ, ನರ್ತನ ಸೇವೆ, ಪ್ರಸಾದ ಆರೋಗಣೆ ಹೀಗೆ ರೋಮಾಂಚನಗೊಂಡು ಸ್ನೇಹರಸದಿಂದ ಶಿವನನ್ನು ಸ್ತುತಿಸುತ್ತಾ ಅವನೊಡನೆ ಆತ್ಮೀಯ ಒಡನಾಟವನ್ನು ಸಂಪಾದಿಸುತ್ತಾ ಬಂದನು. ಕೊನೆಗೆ ಶಿವನ ಪ್ರೇರಣೆಯಂತೆ ಕಲ್ಯಾಣನಗರದ ಮಂಗಳವಾಡದ ಬಿಜ್ಜಳನ ಅರಮನೆಯಲ್ಲಿ, ಭಂಡಾರಿಯಾದ ಸಿದ್ಧದಂಡೇಶನ ತಪ್ಪಿದ ಲೆಕ್ಕದ ಹಾದಿಯನ್ನು ಸರಿಮಾಡಿ ತೋರಿಸಿ ಅವನಿಂದ ಮೆಚ್ಚುಗೆಪಡೆದು ಮಹಾರಾಜ ಬಿಜ್ಜಳನಲ್ಲಿಗೆ ಕರೆತಂದು ಭಂಡಾರದ ಕೆಲಸಕ್ಕೆ ನಿಯುಕ್ತನಾಗಿ ಅಚ್ಚುಕಟ್ಟಾಗಿ ತನ್ನ ಕಾಯಕ ಶುದ್ಧಿಯೊಂದಿಗೆ ಗುರು-ಲಿಂಗ-ಜಂಗಮರಲ್ಲಿ ಪ್ರೀತಿಯ ಸೇವೆಯನ್ನು ಮಾಡುತ್ತಾ ಶಿವಧ್ಯಾನ, ಶಿವಪೂಜೆಯಲ್ಲಿ ನಿರತನಾಗಿರುತ್ತಾನೆ.

(i) ಒಮ್ಮೆ ಬಿಜ್ಜಳನ ಸಭೆಯಲ್ಲಿ ಮಾಲೆಗಾರನು ತಂದು ಕೊಟ್ಟ ಕೇದಗೆ ಹೂವಿನಿಂದ ಲಿಂಗ ಪೂಜೆಯನ್ನು ಇದ್ದ ಸ್ಥಳದಲ್ಲಿಯೇ ಮಾಡಿದ್ದನ್ನು ನೋಡಿದ ನಾರಾಯಣಭಟ್ಟನು ಶಿವಪುರಾಣದಲ್ಲಿ ಶಿವನಿಗೆ ಕೇದಗೆಯನ್ನು ಏರಿಸುವಂತಿಲ್ಲ ಎಂದು ಪ್ರಶ್ನಿಸಿ ಖಂಡಿಸಿದನು. ವಿಷಯಕ್ಕೆ ಪ್ರತಿಯಾಗಿ ಬಸವಣ್ಣನು ಕೇದಗೆಯ ದಳದ ಎಳೆಗಳು ಮಂಗಳವಾಡದ ಎಲ್ಲಾ ಶಿವಾಲಯದ ಲಿಂಗಗಳಲ್ಲಿಯೂ ಇರುವುದನ್ನು ತೋರಿಸಿ ಭಕ್ತಿಯ ವೈಶಿಷ್ಟ್ಯವನ್ನು ಮೆರೆದನು.

(ii) ಬಿಜ್ಜಳನ ಆಸ್ಥಾನದಲ್ಲಿ ಬೇರೆ ಬೇರೆ ಊರು, ಕ್ಷೇತ್ರಗಳಿಂದ ಆಗಮಿಸುತ್ತಿದ್ದ ಶಿವಶರಣರು, ಜಂಗಮ ಮತ್ತು ಶಿವಭಕ್ತರೆಲ್ಲರಿಗೂ ಮಹಾಮನೆಯಲ್ಲಿ ನಿತ್ಯದಾಸೋಹ ಉಡುಗೊರೆ ಪ್ರಧಾನ ಮಾಡುತ್ತಿದ್ದ ಬಸವಣ್ಣನ ಕಾರ್ಯಗಳಿಂದ ಅವನ ವಿರುದ್ಧ ಆಸ್ಥಾನಿಕರು ಬಿಜ್ಜಳನಿಗೆ ಭಂಡಾರದ ಹಣ ದೋಚಿರುವ ಆರೋಪ ಮಾಡಿದರು. ರಾಜನು ಪರಿಶೀಲಿಸಿ ನೋಡಿದಾಗ ಭಂಡಾರದ ಹಣ ಅಗಣಿತವಾಗಿತ್ತು. ಏಕೆಂದರೆ ಶಿವಶರಣರೆಲ್ಲಾ ಕಾಯಕಯೋಗಿಗಳಾಗಿದ್ದು ರಾಜ್ಯದ ಬೊಕ್ಕಸಕ್ಕೆ ವಿವಿಧ ರೀತಿಯಲ್ಲಿ ಆದಾಯ ಅಧಿಕವಾಗಿಯೇ ಇತ್ತು ಎಂಬುದು ಸತ್ಯಸಂಗತಿಯಾಗಿತ್ತು.

(iii) ಬಸವಣ್ಣನಿಗೆ ಶಿವಶರಣರ ಮೇಲೆ ಅಪಾರ ಪ್ರೀತಿಗೌರವ ಎಂಬುದನ್ನು ತಿಳಿದು ವೇಷಧಾರಿ ಶಿವಭಕ್ತರು ಲಿಂಗದ ಬದಲಾಗಿ ಬದನೆಕಾಯಿ ಕಟ್ಟಿಕೊಂಡು ಬಂದು ಏಮಾರಿಸಿದರು. ಆದರೆ ಬಸವಣ್ಣನ ಮಹಿಮೆಯಿಂದ ಕೊನೆಗೆ ಬದನೆಕಾಯಿಗಳೆಲ್ಲಾ ಲಿಂಗಗಳಾಗಿ ಬದಲಾವಣೆಯಾಗಿತ್ತು, ವೇಷಧಾರಿಗಳೆಲ್ಲಾ ಶಿವಭಕ್ತರಾಗಿ ಬದಲಾಗಿ ಹೋಗಿದ್ದರು.

(iv) ಬಸವನ ಮನೆಯ ಗೋವುಗಳನ್ನು ಕಳ್ಳರು ಭಕ್ತರವೇಷದಲ್ಲಿ ಬಂದು ಕಳ್ಳತನ ಮಾಡಿದ್ದಾರೆ ಎಂಬ ಸುದ್ದಿ ಮುಟ್ಟಿದ ಕೂಡಲೇ ಶಿವಗೋಷ್ಠಿಯಲ್ಲಿದ್ದ ಬಸವಣ್ಣನು, ಗೋವಳನಿಗೆ ಕರುಗಳನ್ನು ಬಿಚ್ಚಿಬಿಡಬೇಕೆಂದು ಹೇಳಿದ್ದನ್ನು ಗಮನಿಸಿದಾಗ ಲಿಂಗಧಾರಿ ಶಿವಶರಣರಲ್ಲಿ ಬಸವನಿಗೆ ಬಲು ಪ್ರೀತಿಯ ಸಲುವಾಗಿ ಅವರೇನೇ ತಪ್ಪು ಮಾಡಿದರೂ ಅದನ್ನು ಮನ್ನಿಸಿ ಅವರಿಗೆ ಅನುಕೂಲಕರವಾಗಿಯೇ ನಡೆದು ಅವರನ್ನು ಸರಿದಾರಿಗೆ ತರಬೇಕೆಂಬ ಬಸವಣ್ಣನ ಭಾವನಾತ್ಮಕ ನಿಲುವು ಮೆಚ್ಚತಕ್ಕದ್ದು. ಬಸವಣ್ಣನಿಗೆ ಲಿಂಗ ಮತ್ತು ಜಂಗಮರಲ್ಲಿ ಬೇಧವಿರಲಿಲ್ಲವೆಂಬುದು ವೇದ್ಯವಾಗುತ್ತದೆ

(v) ಜಂಗಮರ ಜೊತೆ ಬಸವನ ಪ್ರಾಣ ಹೋದದ್ದು, ನಂತರ ಅವರನ್ನು ಹುಡುಕಿ ಕರೆತಂದ ಮೇಲೆ ಬಸವಣ್ಣನ ಪ್ರಾಣ ಬಂದು, ಬಸವ ಜಂಗಮರ ಪ್ರಾಣ ಎನಿಸಿಕೊಂಡಿದ್ದು ವಿಶಿಷ್ಟ ಪ್ರಸಂಗ

(vi) ಸಭೆಯಲ್ಲಿದ್ದ ಬಸವಣ್ಣನು ಕಂಬಳನಾಗಿದೇವನ ಮನೆಯಲ್ಲಿ ಊಟವನ್ನು ಮಾಡಿ ಮತ್ತೆ ಸಭೆಗೆ ಬರುವುದರಿಂದ ಇಲ್ಲಿಯವರೆಗೂ ಹೊಲೆತನವನ್ನು ತಂದು ಕೂರಿಸುತ್ತಾನೆ ಎಂಬ ಕುಹುಕಿಗಳು ರಾಜನಿಗೆ ದೂರಿತ್ತರು. ಪ್ರತಿಯೊಬ್ಬ ಶಿವಶರಣರು ಮೇಲ್ಜಾತಿ ಪಂಡಿತೋತ್ತಮರಿಗಿಂತ ಉತ್ತಮರೆಂದು ಹೇಳಿ ಕಂಬಳನಾಗಿದೇವನ ಉಂಗುಟದಿಂದ ಕ್ಷೀರಧಾರೆಯನ್ನು ಕರೆಯಿಸಿ, ವಿಪ್ರರ ಮೈಯಲ್ಲಿ ನೆತ್ತರು ಹರಿಸಿದ್ದು. ಶರಣಸಂಕುಲದ ಸಾತ್ವಿಕ ಭಕ್ತಿಯನ್ನು ಮೆಚ್ಚಿ ಬೇಧಭಾವವನ್ನು ಅಳಿಸಿಹಾಕಿ ಶರಣರ ಸ್ಥಾನದ ಮೇಲ್ಮೈಯನ್ನು ಎತ್ತಿಹಿಡಿದ ಬಸವಣ್ಣನು ಸಾಮಾಜಿಕ ಸಮಾನತೆಗೆ ಕನ್ನಡಿ ಹಿಡಿದ ಕ್ರಾಂತಿಕಾರಿ.

(vii) ಜಂಗಮರಲ್ಲಿ ಬೇಧಭಾವವೆಣಿಸದೆ ಕಿನ್ನರಿಬೊಮ್ಮಯ್ಯನನ್ನು ಉಪಚರಿಸಿದನು ಬೊಮ್ಮಯ್ಯನಿಗೆ ಪ್ರಿಯವಾದ ಉಳ್ಳಿಯ ಅಡುಗೆಯನ್ನು ಲೇವಡಿ ಮಾಡಿದ್ದಕ್ಕೆ ಮುನಿಸಿಕೊಂಡು ಮನೆಬಿಟ್ಟು ಹೋದ ಬೊಮ್ಮಯ್ಯನನ್ನು ಕರೆದು ತಂದು ಅವನಿಗೆ

ಪ್ರೀತ್ಯರ್ಥವಾಗಿ ಉಳ್ಳಿಯ ಸಂತರ್ಪಣೆಯನ್ನು ಮಾಡಿ, ಪ್ರತಿವರ್ಷ ಉಳ್ಳಿಯ ಹಬ್ಬವನ್ನು ಮಾಡುವುದಾಗಿ ನಿಶ್ಚಯಿಸಿದನು.

(viii) ದವಸಧಾನ್ಯಗಳನ್ನು ಕೇಳಿದ ಕಳಿಂಗ ದೇಶದ ಮಹಾದೇವಿಶೆಟ್ಟಿಗೆ ನವರತ್ನದ ಮಳೆಯನ್ನು ಕರೆಯಿಸಿದ್ದು, "ಕೂಡುವವಂಸಂಗಂ, ಬೇಡುವವಂ ಸಂಗಮ ದೇವಂ, ಎನಗೊಂದು ಭಾರವಿಲ್ಲ" ಎಂದು ಬಸವಣ್ಣನು ಯಾವಾಗಲೂ ಸಂಗಮನ ಸಮನಾಗಿ ಜಂಗಮನನ್ನು ಪ್ರೀತಿಯಿಂದ ಆತ್ಮೀಯತೆಯಿಂದ ಕಾಣುವ ಬಸವಣ್ಣನ ಹೃದಯ ವೈಶಾಲ್ಯತೆ ವ್ಯಕ್ತವಾಗುತ್ತದೆ.

(ix) ಹೆಣ್ಣನ್ನು ಕೇಳಬಂದ ವಿಟವೇಷಧಾರಿ ಜಂಗಮ ವೇಷದ ಶಿವನಿಗೆ ತನ್ನ ಪತ್ನಿಯನ್ನೇ ಒಪ್ಪಿಸಿದನು. ಅವನ ಶಿವಭಕ್ತಿಗೆ ಮೆಚ್ಚಿ ಶಿವನು ಪ್ರತ್ಯಕ್ಷವಾಗಿ ಹರಸಿದನು. ಶಿವಭಕ್ತಿಯ ಮುಂದೆ ಯಾವುದು ದೊಡ್ಡದಲ್ಲ ಎಂಬ ಭಾವನೆಯಿಂದ ಬಸವಣ್ಣನ ಸರ್ವಸಮರ್ಪಣಾ ಮನೋಭಾವ ವೇದ್ಯವಾಗುತ್ತದೆ.

(x) ಗಂಗಾದೇವಿಯ ಓಲೆ ಕದಿಯಲು ಬಂದಿದ್ದ ಕಳ್ಳನ ಪರವಾಗಿ ಸಂಗನ ಕೈ ನೋಯಬಾರದು ಕೊಡದೆ ಇರುವುದು ಅನ್ಯಾಯವೆಂದು ತಿಳಿಸಿ ಕಳ್ಳನನ್ನು ಶಿವಭಕ್ತನನ್ನಾಗಿ ಪರಿವರ್ತಿಸಿದುದು. ವೈದಿಕರಿಗೂ, ಬಸವಣ್ಣನಿಗೂ ಮತ್ತು ಬಿಜ್ಜಳನಿಗೂ ವೈಮನಸ್ಸಿಗೆ ಕಾರಣವಾಗಿ ಸಂಘರ್ಷ ತಲೆ ದೋರಿ ಬಿಜ್ಜಳನ ಹತ್ಯೆಯಾಯಿತು ಕೊನೆಗೆ ಕೈಲಾಸಕ್ಕೆ ತೆರಳಿ ಗಣಪದವಿಯನ್ನು ಸ್ವೀಕರಿಸಿ ಶಿವನಿಂದ ಹಾರೈಕೆ, ಸ್ತುತಿಯನ್ನು ಪಡೆಯುತ್ತಾನೆ. "ಬಸವಣ್ಣನಿಗೆ ಸಂಬಂಧಪಟ್ಟ ಅನೇಕಸಂಗತಿಗಳನ್ನು ನಿರೂಪಿಸುವ ಕ್ರಮದಲ್ಲೇ ಹರಿಹರನು ಆತನ ಜೀವನದ ಈ ಮೂಲರೇಖೆಗಳು ಸುಸ್ಪಷ್ಟವಾಗುವಂತೆ ಕಾವ್ಯರಚನೆ ಮಾಡಿದ್ದಾನೆ. ತನ್ನ ನೈಪುಣ್ಯದಿಂದ ಬಸವಣ್ಣನ ವ್ಯಕ್ತಿ ಚಿತ್ರಕ್ಕೆ ಜೀವಕಳೆಯನ್ನು ಕೊಟ್ಟಿದ್ದಾನೆ. ಬಸವಣ್ಣನ ಅಲೌಕಿಕ ಕಾರ್ಯಗಳನ್ನು ಅದ್ಭುತಗಳನ್ನೂ, ಮಹಿಮೆಗಳನ್ನು ಹರಿಹರನು ಮೇಲಿಂದ ಮೇಲೆ ಉದ್ಘೋಷಿಸಿದರೂ ಆತನ ಸರಳವಾದ ಮಾನವ ಹೃದಯವನ್ನು ಮಾತ್ರ ಎಲ್ಲಿಯೂ ಮರೆಮಾಡಿಲ್ಲ."೨೧ ಕೈಲಾಸದಲ್ಲಿ ಪ್ರಸಾದವನ್ನು ಸರಿಯಾಗಿ ಹಂಚಲಾರದ ಕಾರಣ ಭೂಲೋಕದಲ್ಲಿ ಶಿವನು ನಿವೇದಿಸಿದ ಕಾರ್ಯವನ್ನು ಯಶಸ್ವಿಯಾಗಿ ನಿರ್ವಹಿಸಿದ ಬಸವಣ್ಣನನ್ನು ಪ್ರತಿ ಸಂದರ್ಭದಲ್ಲೂ ಶಿವಭಕ್ತಿ, ನೇಮ ನಿಷ್ಠೆ, ವಿಶಾಲ ಹೃದಯವಂತಿಕೆ,

---

ಅಡಿಟಿಪ್ಪಣಿಗಳು : ೨೧. ಹರಿಹರನ ರಗಳೆಗಳಲ್ಲಿ ಜೀವನದರ್ಶನ – ಸ.ಸ.ಮಾಳವಾಡ, ಪು.ಸಂ.೩೧

ಕಾಯಕ ಮಹತ್ವವನ್ನು ಸದಾ ಮೈಗೂಡಿಸಿಕೊಂಡು ಪರಿಪಕ್ವವಾಗುತ್ತ ನಡೆಯುತ್ತಾ ೧೨ನೇ ಶತಮಾನದಲ್ಲಿ ಮಹಾನ್ ಕ್ರಾಂತಿಕಾರಿ, ಭಕ್ತಿಭಂಡಾರಿಯಾಗಿ ಚರಿತ್ರೆಯಲ್ಲಿ ಸ್ತುತ್ಯಾರ್ಹನಾಗಿದ್ದಾನೆ. ಬಸವಣ್ಣ ಒಬ್ಬ ಮಂತ್ರಿಯಾಗಿದ್ದರೂ ಕೂಡ ಆತನು ರಾಜಕೀಯದಲ್ಲಿ ಆಸಕ್ತಿ ತೋರದೆ ತನ್ನ ಸಮಯವನ್ನೆಲ್ಲಾ ಭಕ್ತಿ-ಧಾರ್ಮಿಕ-ಸಾಮಾಜಿಕ ಜೀವನದಲ್ಲಿ ವಿನಿಯೋಗಿಸುತ್ತಿದ್ದನು. ವೈದಿಕಧರ್ಮ ಹುಟ್ಟುಹಾಕಿದ ಮೌಢ್ಯತೆಯನ್ನು ಅಳಸಿಹಾಕಿ ಜನಸಮುದಾಯವನ್ನು ಹೊಸಧರ್ಮದ ಬೆಳಕಿನತ್ತ ಕರೆತರುವ ಹಾದಿಯಲ್ಲಿ ಬಸವಣ್ಣನ ಪ್ರಯತ್ನ ಶ್ಲಾಘನೀಯ.

ಬಸವಣ್ಣನವರು ಸ್ವಾಭಿಮಾನದ ಪ್ರತೀಕವಾಗಿ ಬಾಳ 'ಎನಗಿಂತ ಕಿರಿಯರಿಲ್ಲ'ವೆಂಬ ವಿನಯವನ್ನು ವ್ಯಕ್ತಪಡಿಸಿದ್ದಾರೆ, ಅಲ್ಲದೆ ಅವನ ಆತ್ಮಸ್ಥೈರ್ಯ ಮೆಚ್ಚುವಂತದ್ದು. ಇಂದಿಗೂ ಬಹುಜನರ ಮನೆಮಾತಾಗಿರುವ ಬಸವಣ್ಣನೆಂದರೆ ಬೇರೆಯಲ್ಲ, ಶಿವನೆಂದರೆ ಬೇರೆಯಲ್ಲ ಎಂಬ ಮನೋಭಾವ ಪ್ರಧಾನವಾಗಿದೆ. ಇಡೀ ಭೂಲೋಕದಲ್ಲಿ ಜ್ಞಾನವೆಂಬ ಜ್ಯೋತಿಯ ಕಿಡಿಯನ್ನು ಬೆಳಗಿದ ಈ ಬಸವಣ್ಣನ ಶಿವನ ಆತ್ಮೀಯ ಭಂಟನೇ ಸರಿ ಎಂಬಂತೆ ಇವರಿಬ್ಬರ ನಡುವಿನ ಬಾಂಧವ್ಯ ಸದಾ ಹಸಿರಾಗಿರುವಂತದ್ದು ಎಂಬ ನಿಲುವನ್ನು ಹರಿಹರ ತನ್ನ ಕೃತಿಯಲ್ಲಿ ಸ್ಪಷ್ಟವಾಗಿ, ಸುವರ್ಣಕ್ಷರಗಳಲ್ಲಿ ಬರೆದಂತಿದೆ. ಈ ಕೃತಿಯು ವ್ಯಾಪಕ ಮನ್ನಣೆ ಪಡೆದಿರುವುದು ಗಮನಾರ್ಹವಾದುದು.

## ೨೫. ದಂಡೀಶ ಭಕ್ತರ ರಗಳೆ :-

ತಿರುವಾರೂರು ಎಂಬ ಪಟ್ಟಣದಲ್ಲಿ ಓರ್ವ ಮಹಾನ್ ಶಿವಭಕ್ತ ದಂಡೀಶನೆಂಬ ಸುಗುಣ ಸಂಪನ್ನನಿದ್ದನು. ಅವನು ಸದಾ ಅಂತರಂಗದ ಕಣ್ಣುಗಳಲ್ಲಿ ಶಿವನನ್ನು ಜಪಿಸಿ, ಅರ್ಚಿಸಿ, ಪೂಜಿಸಿ ಶಿವದರ್ಶನ ಮಾಡಿಕೊಳ್ಳುತ್ತಿದ್ದನು. ಆದರೆ ಅವನು ಭೌತಿಕವಾಗಿ ಕಣ್ಣುಗಳಿಲ್ಲದ ಕುರುಡನಾಗಿದ್ದನು. ನಿರಂತರ ಭಕ್ತರ ಸೇವೆ ಸಲ್ಲಿಸುತ್ತಾ, ಶಿವನ ದಾಸನಾಗಿದ್ದನು. ಆ ಊರಿನಲ್ಲಿ ಜೈನರು ಹೆಚ್ಚಿನ ಸಂಖ್ಯೆಯಲ್ಲಿದ್ದು ಸರೋವರದ ದಡದಿಂದಾಚೆಗೆ ಬಹು ವಿಸ್ತಾರ ವ್ಯಾಪ್ತಿಯಲ್ಲಿ ಜೈನ ಬಸದಿಗಳನ್ನು ನಿರ್ಮಾಣಮಾಡಿಕೊಂಡು ಜಿನಭಕ್ತಿಯಲ್ಲಿ ಮುಳುಗಿದ್ದರು. ಸರೋವರವನ್ನು ವಿಸ್ತರಿಸಿ ಆ ಬಸದಿಗಳನ್ನು ಇಲ್ಲವಾಗಿಸಬೇಕೆಂಬ ಉದ್ದೇಶದಿಂದ ಭೂಮಿಯನ್ನು ಅಗೆಯುವ ಕಾರ್ಯವನ್ನು ನಿಷ್ಠೆಯಿಂದ ಮಾಡುತ್ತಿದ್ದ ದಂಡೀಶನನ್ನು ದಂಡಿಸಿದ ಜೈನರು ನಿನ್ನದು ಅಧರ್ಮಕಾರ್ಯ ಇದಕ್ಕೆ

ಜೀವಹಾನಿಯಾಗುತ್ತದೆ ನೀನೊಬ್ಬ ಅವಿವೇಕಿ, ಕುರುಡ ನಿನಗೆ ಕಣ್ಣಷ್ಟೇ ಅಲ್ಲ, ಕಿವಿಗಳೂ ಇಲ್ಲ ಎಂದು ಟೀಕಿಸಿದರು. ಅದಕ್ಕೆ ಪ್ರತಿಯಾಗಿ ವಾಗ್ದಾಳಿಯನ್ನು ಜೈನರ ವಿರುದ್ಧ ಮಾಡಿದ ದಂಡೀಶ ನನಗೆ ಕಣ್ಣುಗಳು ಬಂದರೆ ಏನು ಮಾಡುವಿರಿ ಎಂದು ಸವಾಲೆಸಿದನು. ಅದಕ್ಕೆ ಪ್ರತಿಸವಾಲಾಗಿ ನಾವೂ ಇಲ್ಲಿಂದ ಹೊರಡುವೆವು ಎಂದು ಒಡಂಬಡಿಕೆ ಮಾಡಿಕೊಂಡರು. ಆ ದಿನ ರಾತ್ರಿ ದಂಡೀಶನ ಕನಸ್ಸಿನಲ್ಲಿ ಬಂದ ಶಿವನು ಅವನನ್ನು ಸಂತೈಸಿದನು. ಅಲ್ಲದೆ ಅದೇ ಊರಿನ ರಾಜನ ಕನಸ್ಸಿಗೆ ಶಿವನು ಬಂದು ಜೈನರ ಉಪಟಳದಿಂದ ದಂಡೀಶವನ್ನು ರಕ್ಷಿಸಿ ಮತ್ತು ಅವನ ಕಾರ್ಯವನ್ನು ಉತ್ತೇಜಿಸಲು ಆಜ್ಞೆ ನೀಡಿದನು. ಅದರಂತೆ ರಾಜನ ಸಮಕ್ಷಮದಲ್ಲಿ ಇಬ್ಬರನ್ನು ಕರೆಸಿ ವಿಚಾರಿಸಲು ನಡೆದದ್ದಷ್ಟನ್ನು ಕೇಳಿ ತಿಳಿದುಕೊಂಡನು. ಕೊನೆಗೆ ಶಿವನೇ ನಾನು ನಿನ್ನ ಚರಣದಾಸನಾಗಿದ್ದರೆ ಕಣ್ಣುಗಳನ್ನು ನನಗೆ ನೀಡಿ, ನನ್ನ ಈ ಕಾರ್ಯಕ್ಕೆ ಜಯಲಭಿಸುವಂತೆ ಮಾಡು ಎಂದು ಬೇಡಿದ ಕೂಡಲೇ ಶಿವನ ದಯೆಯಿಂದ ದಂಡೀಶನಿಗೆ ಕಣ್ಣುಗಳು ಬಂದು ಜೈನರೆಲ್ಲಾ ಕಣ್ಣುಗಳನ್ನು ಕಳೆದುಕೊಂಡು ದಿಕ್ಕುಕಾಣದೆ ಪರಿಪರಿಯಾಗಿ ಪರಿತಪಿಸಿ ಓಡಿಹೋದರು. ಕೊನೆಗೆ ರಾಜನ ನೆರವಿನಿಂದ ಬಸದಿಗಳನ್ನೆಲ್ಲಾ ಶಿವಾಲಯಗಳನ್ನಾಗಿ ನಿರ್ಮಿಸಿದನು. ಅವನ ಕಾರ್ಯಕ್ಕೆ ಮೆಚ್ಚಿ ರಾಜನಿಂದ ಸನ್ಮಾನ ದೊರೆಯಿತು. ದಿನನಿತ್ಯ ಶಿವಪೂಜೆ, ಧ್ಯಾನ, ಭಕ್ತಿಸುಖದಲ್ಲೇ ಕಳೆದು ಶಿವನ ಆಜ್ಞೆಯಂತೆ ಕೈಲಾಸಕ್ಕೆ ಧಾವಿಸಿ ಗಣಪದವಿಯನ್ನು ಪಡೆದು, ಜೈನರ ಸೊಕ್ಕಡಗಿಸಿದ ವೀರಭಕ್ತನೆಂದು ಶಿವನಿಂದ ಹೊಗಳಿಸಿಕೊಂಡು ಆನಂದದಿಂದಿದ್ದನು.

ಈ ಕಥೆಯಲ್ಲಿ ದಂಡೀಶನು ಶಿವನನ್ನೇ ತನ್ನ ಒಡೆಯನೆಂದು ಸ್ವೀಕರಿಸಿ ಶಿವಾಲಯಗಳನ್ನು ನಿರ್ಮಿಸಿ ಶೈವ ಪ್ರಭೆಯನ್ನು ಬೆಳಗಿಸಬೇಕೆಂಬ ಮನೋನಿಷ್ಠೆ ಉಳ್ಳವನು. ತಾನು ಕುರುಡ, ಕೈಲಾಗದವನೆಂದು ಎಂದಿಗೂ ಅಸಹಾಯಕನಾಗಿ ಕೂರದೆ ಸರೋವರದ ವ್ಯಾಪ್ತಿ ಹೆಚ್ಚಿಸಿ ಇರುವ ಜಿನಬಸದಿಗಳನ್ನು ಇಲ್ಲವಾಗಿಸಲು ಮಣ್ಣನ್ನು ತೋಡುವ ಕಾರ್ಯವನ್ನು ನಿಷ್ಠೆಯಿಂದ ಮಾಡುತ್ತಿದ್ದವನು. ಇಲ್ಲಿ ಜೈನ ಧರ್ಮವನ್ನು, ವಿರೋಧಿನೆಲೆಯಲ್ಲಿ ಕಾಣುವ ಶಿವಭಕ್ತರು ಅವರ ಜಿನನಿಗಿಂತ ಶಿವನೇ ಮೇಲು ಎಂದು ಸಾಧಿಸಿ, ಬಸದಿಗಳನ್ನು ನಾಶಮಾಡಿ ಶಿವಾಲಯಗಳನ್ನು ನಿರ್ಮಾಣ ಮಾಡುವ ಕಾರ್ಯ ರಾಜಕೀಯ, ಧಾರ್ಮಿಕ ಒತ್ತಡಗಳಿಂದ ನಡೆದಿರಬಹುದು ಎಂದು ಊಹಿಸಲು ಅವಕಾಶವಿದೆ. ಒಟ್ಟಾರೆ ಹರಿಹರ ತನ್ನ ರಗಳೆಗಳಲ್ಲಿ ಶೈವಧರ್ಮದ ಮೇಲುಗೈ ಸಾಧಿಸಲು ಜೈನರನ್ನು ತುಚ್ಛವಾಗಿ ಕಂಡಿದ್ದಾನೆ. ನಂಬಿಕೆಟ್ಟವರಿಲ್ಲ ಎಂಬ ಮಾತಿನಂತೆ ದಂಡೀಶ

ಶಿವನ ದಾಸ ನಾನು ಎಂದು ನಂಬಿ ಜೈನರ ವಿರುದ್ಧ ಹೋರಾಟಕ್ಕಿಳಿದನು. ಅದರಂತೆ ಶಿವನೂ ಅವನಿಗೆ ಸಕಾಲಕ್ಕೆ ರಾಜನ ನೆರವು, ಕಣ್ಣುಗಳ ಬೆಳಕು ಮತ್ತು ಗಣಪದವಿಯನ್ನು ನೀಡಿ ಹರಸಿದನು.

**೨೩. ಮೂರ್ಖನಾಯನರರ ರಗಳೆ :-**

ತೊಂಡೀರ ಮಂಡಳದ ತೀರದಲ್ಲಿ ಶಿವಪುರದಲ್ಲಿ ನಾಯನಾರನೆಂಬುವನು ಸದಾ ಶಿವಭಕ್ತಿಸುಖದಲ್ಲಿದ್ದು, ಶಿವಶರಣರಿಗೆ ಸಕಲ ಭೋಜನಾದಿಗಳನ್ನು ನೀಡಿ ತೃಪ್ತಿಪಡಿಸುವವನು ಅದಕ್ಕಾಗಿ ತನ್ನ ಧನ ಸಂಪತ್ತನ್ನೆಲ್ಲಾ ಕರಗಿಸಿ ಶಿವಭಕ್ತರಿಗೆ ಆದರ ಆತಿಥ್ಯ ನೀಡಿ ತನ್ನ ನೇಮನಿಷ್ಠೆಯನ್ನು ನಡೆಸುತ್ತಿದ್ದ. ತನ್ನಲ್ಲಿದ್ದ ಆಸ್ತಿ ಶಿವಭಕ್ತರ ಸೇವೆಗಾಗಿ ಸವೆಸುತ್ತಿದ್ದನು. ಜೂಜಾಟವನ್ನು ಆಡಿ ಗೆದ್ದು ಬಂದುದ್ದನ್ನು ಭಕ್ತರ ಮನದಿಚ್ಛೆಯನ್ನು ಪೂರೈಸುತ್ತಿದ್ದ. ಹೀಗಿರುವಾಗ ಒಮ್ಮೆ ಜೂಜಾಟದಲ್ಲಿ ಸಾಕಷ್ಟು ಸಂಪತ್ತನ್ನು ಗೆದ್ದ ಮೇಲೆ ಸೋತವರು ಹಣವನ್ನು ಕೊಡದೆ ಪೀಡಿಸಿದಾಗ ಪಟ್ಟು ಹಿಡಿದು ಕೂತ ನಾಯನರನಿಗೆ ಶಿವನು ದರ್ಶನ ನೀಡಿ ಅಗಣಿತ ಸಂಪತ್ತನ್ನು ನೀಡಿ ಹರಸಿದನು. ಪುಷ್ಪಕವಿಮಾನ ಕರೆಸಿ ಕೈಲಾಸಕ್ಕೆ ಕರೆದೊಯ್ದು ಗಣಾಧೀಶ ಪದವಿ ನೀಡಿ ಕರುಣೆ ತೋರಿದನು.

ಈ ಕಥೆಯಲ್ಲಿ ಬದುಕನ್ನು ಸಾಗಿಸಬೇಕಾದರೆ ದುಡಿಯುವ ಹಲವು ಮಾರ್ಗಗಳಿರುತ್ತದೆ ಅದೆಲ್ಲವನ್ನು ಬಿಟ್ಟು ನಾಯನರ ಭಕ್ತಜನರ ಆತಿಥ್ಯಕ್ಕಾಗಿ ತನ್ನ ಸಂಪತ್ತನ್ನೆಲ್ಲಾ ಕಳೆದ ಮೇಲೆ ಹಣಸಂಪಾದನೆಗಾಗಿ ಶ್ರಮವಹಿಸಿ ದುಡಿಯುವ ಬದಲು ಜೂಜಿನಂತಹ ಅಕ್ರಮ ಮಾರ್ಗದಲ್ಲಿ ಸಂಪಾದಿಸಿ ಹಣವನ್ನು ಖರ್ಚುಮಾಡುವುದು ಸರಿಯೇ? ಹರಿಹರನ ರಗಳೆಗಳು ಜನ ಸಾಮಾನ್ಯರಿಗೆ ಪ್ರೇರಕಶಕ್ತಿ, ಮಾರ್ಗದರ್ಶಕದಂತಿರಬೇಕಾದುದು ಈ ರೀತಿ ಜೂಜಾಟದಲ್ಲಿ ಸಂಪಾದಿಸುವ ಹಿನ್ನೆಲೆಯಲ್ಲಿ ರಚನೆಗೊಂಡಿರುವುದನ್ನು ಗಮನಿಸಿದರೆ ಮೂರ್ಖನಾಯನರರ ಜೀವನ ಸಂಸ್ಕಾರಯುತವಾದುದೆ? ಎಂಬ ಪ್ರಶ್ನೆ ನಮ್ಮ ಮುಂದೇಳುತ್ತದೆ. ಜೊತೆಗೆ ಶಿವನೇ ಜೂಜಾಟವನ್ನು ಆಡಿ ಸೋತು ಗೆದ್ದ ಹಣವನ್ನು ನೀಡದೆ ಸತಾಯಿಸಿ ನಂತರ ಅಗಣಿತ ಸಂಪತ್ತನ್ನು ನೀಡಿ ಹರಸುವ ಬಗೆ ಜನತೆಗೆ ಅಪಮಾರ್ಗವನ್ನು ಈ ಕಥೆ ತೋರಿಸಿಕೊಟ್ಟಂತಾಗುತ್ತದೆ. ಇಳೆಯಾಂಡ ಗುಡಿಮಾರನು, ತಿರುಕುರುಂಪೆತೊಂಡರಂತಹ ಶ್ರೇಷ್ಠ ಶ್ರಮಿಕಜೀವಿಗಳು ತಮ್ಮ ಕಾಯಕನಿಷ್ಠೆಯಿಂದ ಭಕ್ತಸಾಧಕರಾಗಿರಬೇಕಾದರೆ ನಾಯನಾರನು ನೇಮಕ್ಕಾಗಿ ಜೂಜಾಟದ ಮಾರ್ಗವನ್ನು ಹಿಡಿದುದಾಗಲಿ, ಶಿವನು ಅವನನ್ನು ಪ್ರೋತ್ಸಾಹಿಸಿ ಗಣಪದವಿಯನ್ನು ನೀಡಿದುದು ಕೆಲವೊಮ್ಮೆ

ಪ್ರಶ್ನಾರ್ಹವಾಗುತ್ತದೆ. ಈ ಎಲ್ಲಾ ಕಾರಣಗಳಿಂದ ನಾಯನಾರನಿಗೆ ಮೂರ್ಖನಾಯನಾರ ಎಂಬ ಹೆಸರು ಸರಿಯೆನಿಸುತ್ತದೆ. ಆದರೆ ಏನೇ ಆಗಲಿ ಶಿವನು ಮಾತ್ರ ನನ್ನ ಭಕ್ತನಿಷ್ಟರನ್ನು ಕಾಯುತ್ತಾನೆ ಎಂಬುದು ವೇದ್ಯವಾಗುತ್ತದೆ.

## ೨೭. ತಿರುಮೂಲದೇವರ ರಗಳೆ :-

ಕೈಲಾಸದಲ್ಲಿ ದೇವಸಮಿತಿಗಳಲ್ಲಿ ಮುಖ್ಯನಾಗಿದ್ದ ನಂದಿಕೇಶ್ವರನಿಂದ ಸರ್ವಜ್ಞಾನ ಸಂಪತ್ತನ್ನು ತಿಳಿದುಕೊಂಡಿದ್ದ ಒಬ್ಬ ಯೋಗೀಶ್ವರ ಮುನಿಯು ರಜತಗಿರಿಯಿಂದ ಭೂಲೋಕಕ್ಕೆ ಬಂದು ಇಲ್ಲಿ ಎಲ್ಲಾ ಶಿವ ಕ್ಷೇತ್ರಗಳನ್ನು ನೋಡಿ, ನಮಿಸಿ ಭಕ್ತಿಸುಖದಲ್ಲಿ ಕಾಲವನ್ನು ಕಳೆಯುತ್ತಿದ್ದನು. ಈ ಯೋಗಿಶ್ವರನಿಗೆ, ಒಮ್ಮೆ ಹಸುಗಳ ಸಮೂಹ ತನ್ನ ಗೋವಳ ಮೂಲನನ್ನು ಕಳೆದು ಕೊಂಡು ಅವನ ಮೇಲಿನ ಪ್ರೀತಿಯಿಂದ ದುಃಖದಲ್ಲಿ ಮುಳುಗಿರುವುದನ್ನು ನೋಡಿ ಅವುಗಳನ್ನು ಸಂತೈಸ ಬೇಕೆಂದು ತನ್ನ ದೇಹವನ್ನು ಗೋಪ್ಯವಾಗಿ ಬಚ್ಚಿಟ್ಟು ತನ್ನ ಆತ್ಮ ಮೂಲನ ಪರಕಾಯ ಪ್ರವೇಶ ಮಾಡಿತು. ಮತ್ತೆ ಮೂಲನು ಜೀವಂತವಾಗಿ ಎದ್ದುದ್ದನ್ನು ನೋಡಿ ಸಂತೋಷದಿಂದ ಹಸುಗಳು ಹಿಗ್ಗಿದವು. ಸಂಜೆ ಅವುಗಳನ್ನು ಹೊಡೆದುಕೊಂಡು ಅದರ ಮನೆಗೆ ಕಳಸಿದ ಮೇಲೆ ತಾನೆಲ್ಲಿ ಹೋಗುವುದು ಎಂದು ಅರ್ಥವಾಗದೆ ಮೌನವಾಗಿ ಒಂದೆಡೆ ನಿಂತನು. ಮೂಲನ ಹೆಂಡತಿ ಬಂದು ಕರೆದರೂ ಬರಲು ಸಮ್ಮತಿಸದೆ ಮುಟ್ಟಬೇಡ ಎಂದು ಮರವೊಂದರ ಕೆಳಗೆ ಆಶ್ರಯ ಪಡೆದನು. ಮೂಲನ ಹೆಂಡತಿ ಗಂಡನ ಈ ಬದಲಾವಣೆಗೆ ನ್ಯಾಯಕೇಳ ರಾಜನಲ್ಲಿ ದೂರಿದಳು. ಪರಿಶೀಲಿಸಿ ನೋಡಿದರೆ ಅವನು ಒಬ್ಬ ಶ್ರೇಷ್ಠಯೋಗಿವರ್ಯ ಎಂದು ತಿಳಿದು ಉತ್ತರ ಬಿಡಿಸಲು ಯಾರಿಗೂ ಸಾಧ್ಯಾವಾಗಲಿಲ್ಲ. ಬೆಳಗ್ಗೆ ದನಗಳೊಟ್ಟಿಗೆ ಅದೇ ಸ್ಥಳಕ್ಕೆ ಹೋಗಿ ನೋಡಿ ತನ್ನ ದೇಹ ಅಲ್ಲಿಲ್ಲದ್ದನ್ನು ಖಚಿತಪಡಿಸಿಕೊಂಡು ಶಿವಕೃಪೆಯೆಂದು ನೆನೆದು ಈಶ್ವರನನ್ನು ಒಲಿದು, ಧ್ಯಾನಿಸಿ ತನ್ನ ಮನಸ್ಸನ್ನು ಆತ್ಮದಲ್ಲಿ ಬೆರಸಿಕೊಂಡು ಆ ಮಾಂಸದೇಹದಲ್ಲಿಯೇ ಇದ್ದುಕೊಂಡು ಶಿವನನ್ನು ಹಾಡಿ ಹೊಗಳಿ, ಸ್ತುತಿಸಿ ಕೈಲಾಸಕ್ಕೆ ಬಂದು ತಿರುಮೂಲದೇವ ಶಿವನಿಂದ ಹಾರೈಕೆ ಮತ್ತು ಶ್ರೇಷ್ಠ ಗಣಪದವಿಯನ್ನು ಪಡೆದು ಆನಂದಿಸಿದನು.

ಶಿವನು ಸೂತ್ರಧಾರಿ, ನಾವೇನಿದ್ದರೂ ಪಾತ್ರಧಾರಿಗಳು ಎಂಬ ಸತ್ಯವನ್ನರಿತ ತಿರುಮೂಲದೇವನು ತನ್ನ ಜೀವನದಲ್ಲಿ ಎದುರಾದ ಒಂದು ಪ್ರಸಂಗದಲ್ಲಿ ದೇಹವನ್ನೇ ಬಿಡಬೇಕಾಗಿಬಂದು ಕೊನೆಗೆ ಧನಕಾಯುವವನ ದೇಹದಲ್ಲಿ ತನ್ನ ಜ್ಞಾನ-ಭಕ್ತಿಯಿಂದ ಕೂಡಿದ

ಮನಸ್ಸು ಮತ್ತು ಆತ್ಮವನ್ನು ಸಮ್ಮಿಳಿತಗೊಳಿಸಿ ಅದರಲ್ಲೇ ತೃಪ್ತಭಾವವನ್ನು ಪಟ್ಟು ಎಡೆಬಿಡದೆ ಶಿವ ಭಕ್ತಿಯನ್ನೇ ಪ್ರಕಟಮಾಡಿದ ಅವನಿಗೆ ಮೂಳೆ ಮಾಂಸಗಳಿಂದ ಕೂಡಿದ ದೇಹ ಅನಿತ್ಯತೆಯಿಂದ ಕೂಡಿದೆ ಎಂಬುದು ಅರ್ಥವಾಗಿ ಮೂಲನ ದೇಹದಲ್ಲೇ ಉಳಿದು ಕೈಲಾಸವನ್ನು ಸೇರುವನು. ಅವನಿಗೆ ಪ್ರಾಣಿಗಳ ಮೇಲಿರುವ ದಯಾಶೀಲತೆ ಮೆಚ್ಚತಕ್ಕಂತದ್ದು. ಆ ಪ್ರಾಣಿಗಳ ಮೇಲಿನ ದಯೆಯಿಂದ ಅವುಗಳ ದುಃಖವನ್ನು ಪಾರುಮಾಡಲು ತನ್ನ ದೇಹವನ್ನು ಅಲ್ಲಿಯೇ ಬಿಟ್ಟು ತನ್ನ ಆತ್ಮ ಮಾತ್ರ ಮೂಲನ ದೇಹಕ್ಕೆ ಸೇರಿ ಹಸುಗಳನ್ನು ಆನಂದಿಸುವಂತೆ ಮಾಡುವ ಅವನ ಸಮಯೋಚಿತ ನಿರ್ಧಾರ, ನಿಲುವು ಗಮನಾರ್ಹವಾದುದು. ಅನಂತರ ಮಾರನೆಯ ದಿನ ತನ್ನ ದೇಹ ಕಾಣದಾಗಲು ಇವೆಲ್ಲಾ ಶಿವನ ಕೃಪೆಯೆಂದೇ ಭಾವಿಸಿ ಇರುವ ಮೂಲನ ದೇಹವನ್ನೇ ತೃಪ್ತಿಯಿಂದ ಸ್ವೀಕರಿಸಿ ಅದರಲ್ಲಿ ಆತ್ಮ, ಜ್ಞಾನ ಮತ್ತು ಭಕ್ತಿ ಯೋಗವನ್ನು ಸಾಧಿಸಿ ಶಿವನ ಒಲುಮೆಯನ್ನು ಸಂಪಾದಿಸಿದ ಈ ಶಿವಭಕ್ತನ ವಿಚಾರಶೀಲತೆ ಪರಿಪಕ್ವವಾದುದು. ಶಿವನನ್ನೇ ತನ್ನ ಒಡೆಯನೆಂದು ಭಾವಿಸಿ ಅವನೊಂದಿಗೆ ಇರಬಯಸುವ ಇಂತಹ ಸುಭಕ್ತರನ್ನು ಶಿವನು ಎಂದಿಗೂ ಕೈ ಬಿಡುವುದಿಲ್ಲ. ಭಕ್ತರು ಶಿವನಿಗಾಗಿಯೇ ಅವನ ಸಂಪ್ರೀತಿಗಾಗಿಯೇ ಬದುಕಿದರೆ ಆ ಶಿವನೂ ಅಷ್ಟೇ ಭಕ್ತರ ಭಕ್ತಿಪ್ರಿಯನಾಗಿಯೇ ಇರುತ್ತಾನೆ.

## ೨೮. ಸಾಂಖ್ಯತೊಂಡರ ರಗಳೆ :-

ಶ್ರೀ ಸಂಘಮಂಘ ನಗರದಲ್ಲಿ ಶೂದ್ರಕುಲದಲ್ಲಿ ಹುಟ್ಟಿದ ವಿಚಾರ ನಿಧಿ ಭೂಲೋಕದಲ್ಲಿರುವ ಸಕಲ ಶಾಸ್ತ್ರಗಳನ್ನು, ಧರ್ಮವನ್ನು ಅರಿತು ಕೊನೆಗೆ ಸಾಂಖ್ಯ ಸಿದ್ಧಾಂತವನ್ನು ತಿಳಿದನು. ಆಗ ಅವನಿಗೆ ಜೈನಮತದ ಸುಖಕ್ಕಿಂತ ಶೈವಧರ್ಮವೇ ಹೆಚ್ಚು ಸತ್ವಯುತವಾದದು ಎಂದು ತಿಳಿದು ಅದರಲ್ಲೇ ಭಕ್ತಿಯಿಂದ ಮುಂದುವರಿದನು. ಒಮ್ಮೆ ಇವನು ಶಿವಲಿಂಗ ದರ್ಶನ ಮಾಡುತ್ತಿರುವಾಗ ಶಿವನು ಬೆತ್ತಲೆಯಿಂದ ಲಿಂಗದ ಎದುರಿಗೆ ನಿಂತನು. ಅದನ್ನು ಕಂಡು ತವಕಪಟ್ಟು ಕಲ್ಲಲ್ಲಿಹೊಡೆದನು ಅದನ್ನೇ ಮೂಲವಾಗಿಟ್ಟುಕೊಂಡು ದಿನನಿತ್ಯ ಹೀಗೆ ಶಿವನನ್ನು ನೋಡಿಯೇ ತನ್ನ ಇತರ ಕಾರ್ಯವನ್ನು ಮಾಡುವುದಕ್ಕೆ ತೊಡಗುತ್ತಿದ್ದನು. ಇದನ್ನೇ ತನ್ನ ನೇಮವಾಗಿ ಸ್ವೀಕರಿಸಿ ಪರಿಪಾಲಿಸುತ್ತಿದ್ದ ಒಮ್ಮೆ ಸಾಂಖ್ಯತೊಂಡರನು ತನ್ನ ನೇಮವನ್ನು ಮಾಡದೆ ಊಟಕ್ಕೆ ಕುಳಿತನು. ಮತ್ತೆ ತನ್ನ ನೇಮದ ನೆನಪಾಗಿ ಓಡೋಡಿ ಹೋಗಿ ಆ ಶಿವಲಿಂಗದ ಮೇಲೆ ಕಲ್ಲು ಎಸೆದಾಗ ಅವನ ನಿಷ್ಕಲ್ಮಶ ಭಕ್ತಿಭಾವಕ್ಕೆ ಒಲಿದ ಶಿವನು ಪ್ರೀತಿ ಮತ್ತು ಸ್ನೇಹರಸದಿಂದ ಪುಷ್ಪಕವಿಮಾನದಲ್ಲಿ ಅವನನ್ನು ಕುಳ್ಳಿರಿಸಿಕೊಂಡು ಹೋಗಿ ಸಂತೋಷದಿಂದ ಅವನನ್ನು ಹರಸಿ ಗಣಪದವಿಯನ್ನು ಇತ್ತನು.

ಬಾಹ್ಯ ವೇಷಕ್ಕಿಂತ ಅಂತರಂಗದ ಶುದ್ಧತೆಗೆ ಒಲಿಯುವ ಶಿವನು ಬಾಹ್ಯ ಪೂಜಾ ಪರಿಕರಗಳು ಸುಗಂಧಭರಿತವಾಗಿಯೇ ಇರಬೇಕೆಂದು ಬಯಸುವುದಿಲ್ಲ. ಅವನಿಗೆ ಅಂತರಂಗ ಶುದ್ಧಿಯೊಂದೇ ಪ್ರಮುಖವಾದುದು. ಒಳಗೊಂದು ಹೊರಗೊಂದನ್ನು ಇಷ್ಟಪಡದೆ ಲಿಂಗದ ಮುಂದೆ ಒಮ್ಮೆ ಬೆತ್ತಲಾಗಿ ನಿಂತಿದ್ದ ಶಿವನನ್ನು ಕಂಡು ತಡವರಿಸಿ ಹೊಡೆದ ಸಾಂಖ್ಯತೊಂಡರನು ಅದನ್ನೇ ನೇಮವಾಗಿಸಿಕೊಂಡು ದಿನ ನಿತ್ಯ ಹಾಗೇ ಮಾಡುತ್ತಾ ಬಂದು ಶಿವನ ಪ್ರೀತಿ ಸಂಪಾದಿಸಿದನು. ಕಣಪ್ಪನ ರಗಳೆಯಲ್ಲಿ ರಕ್ತ ಮಾಂಸದ ಅಭಿಷೇಕವಾದರೂ ಚಿಂತಿಸದ ಶಿವನು ಕಲ್ಲಿನ ಪೂಜೆಗೆ ಹೆದರುವನೇ ಎಂಬುದು ಇಲ್ಲಿ ವೇದ್ಯವಾಗುತ್ತದೆ. ವಿವಿಧ ಹೂ, ಪೂಜಾ ಪರಿಕರಗಳನ್ನಿಟ್ಟುಕೊಂಡು ಪೂಜಿಸಿದ ವಿಪ್ರರ ಪೂಜೆಯನ್ನೇ ಎಷ್ಟೋ ಬಾರಿ ತಿರಸ್ಕರಿಸಿದ ಶಿವನು ಶುದ್ಧ ಮನಸ್ಸಿನ ಕಲ್ಲಿನ ಪೂಜೆಗೆ ಒಲಿಯುವ ಶಿವನ ಪರಿ ವಿಶಿಷ್ಟವಾದುದು.

**೨೯. <u>ಸೋಮಾಸಿಮಾರರ ರಗಳೆ :-</u>**

ಉತ್ತರ ದಿಶಾಭಾಗದಲ್ಲಿನ ಕಾಶ್ಮೀರ ನಗರದಲ್ಲಿ ಸೋಮಸಿಮಾರನೆಂಬ ಬ್ರಾಹ್ಮಣ ಶಿವಭಕ್ತನಿದ್ದನು. ಅವನು ಒಮ್ಮೆ ಸತಿಯನ್ನು ಉದ್ದೇಶಿಸಿ ನಾವು ಕಾಶಿಯಾತ್ರೆಗೆ ಇಡೀ ನಮ್ಮ ಶಿವಪುರದಲ್ಲಿ ಬರಲಿಚ್ಚಿಸುವವರೊಂದಿಗೆ ಹೊರಟು ಹಲವು ದಾನ ಧರ್ಮಕಾರ್ಯಗಳನ್ನು ಯತಾರ್ಥವಾಗಿ ನಡೆಸೋಣವೆಂದು ಹೇಳಿದನು. ಅದರಂತೆ ಡಂಗುರಸಾರಿಸಿ, ಶಿವಭಕ್ತರಾದ ಹದಿನಾರು ಸಾವಿರ ವಿಪ್ರ ಮತ್ತು ಹನ್ನೆರಡು ಸಾವಿರ ಅಶ್ವಪುಸ್ತಕದ ಪೆಟ್ಟಿಗೆ ಹೊರೆಹೇರಿಕೊಂಡು ಕಾಶೀಕ್ಷೇತ್ರಕ್ಕೆ ಆಗಮಿಸಿ ಭಕ್ತಿಯಿಂದ ಪೂಜೆ, ವ್ರತನಿಯಮ, ದಾನ ಧರ್ಮವನ್ನು ಮಾಡಿದರು. ಅನಂತರ ಎಲ್ಲಾ ವಿಪ್ರರನ್ನು ಬೀಳ್ಕೊಟ್ಟು ಸತಿಯೊಂದಿಗೆ ಸೋಮಾಸಿಮಾರನು ಕೇದಾರ ಕ್ಷೇತ್ರಕ್ಕೆ ಹೊರಟನು. ಆ ಅರಣ್ಯದಲ್ಲಿ ಬೇಟೆಗಾರ ಶ್ವಪಚನೊಬ್ಬ ಎದುರಾಗಿ ಸೋಮಾಸಿಮಾರನು ಎಷ್ಟೇ ತಿರಸ್ಕರಿಸಿದರೂ ಕೇಳದೆ ವೇದಮಂತ್ರಗಳನ್ನು ಉಚ್ಚರಿಸಿ. ತನಗೆ ಉಪದೇಶಮಾಡಿ ಎಂದು ಬೇಡಿದನು. ಕೊನೆಗೆ ತತ್ವೋಪದೇಶ ಮಾಡುವ ಬ್ರಹ್ಮಸಭೆಗೆ ಸೋಮಾಸಿಮಾರನನ್ನು ಕರೆದುಕೊಂಡು ಬಂದರು. ಸಭೆಯಲ್ಲಿದ್ದ ವಿಪ್ರರೆಲ್ಲಾ ಹೇಸಿದರೆ ಅವರಿಗೆ ಅವನ ವಿದ್ವತ್ತನ್ನು ತಿಳಿಯ ಹೇಳಿ ಅವನ ಪಾಂಡಿತ್ಯ ಪ್ರದರ್ಶನ ಮಾಡಿಸಿ ಅವರೆಲ್ಲರೂ ಹಾರೈಸಿದರು. ಮುಂದೆ ಶ್ರೀಗಿರಿಯ ಜ್ಯೋತಿರ್ಲಿಂಗ ಘನಮಲ್ಲಿಕಾರ್ಜುನನ ಸೇವೆಯನ್ನು ಹಲವು ದಿನ ವಿಶಿಷ್ಟ ರೀತಿಯಲ್ಲಿ ಕೈಗೊಂಡು, ನಂತರ ಹಂಪೆಯ ವಿರೂಪಾಕ್ಷ ಮಹಾದೇವನನ್ನು ಕಂಡು ಆನಂದ ಪಟ್ಟು, ಅಲ್ಲಿಂದ ಪೊನ್ನಾಂಬಲ

ಕ್ಷೇತ್ರಕ್ಕೆ ಆಗಮಿಸಿ ಶಿವನ ಯಾಗದ ಅಗ್ರಪೂಜೆಗೆ ಯಾಗದ ವ್ರತಹಿಡಿದಿರುವುದಾಗಿ ಅದಕ್ಕೆ ಶಿವನು ಆಗಮಿಸಬೇಕೆಂದು ತನ್ನ ಮನೋರಥವನ್ನು ಪೊನ್ನಾಂಬಲದ ಶ್ರೀ ವಿಶ್ವನಾಥನಲ್ಲಿ ಮೊರೆಯಿಟ್ಟನು. ಚೋಳರಾಜನು ಶಿವಾರ್ಚನೆ ಮಾಡಿ ಕೊಂಡದಲ್ಲಿ ಎಸೆಯುತ್ತಿದ್ದ ಹೂಗಳನ್ನು ಸಂಗ್ರಹಿಸಿ ಕಾವೇರಿ ತೀರದಲ್ಲಿಟ್ಟು ಪೂಜಿಸಿ ಯಾಗಕ್ಕೆ ಕೃಪೆ ತೋರಬೇಕೆಂದು ವಿನಂತಿಸುತ್ತಿದ್ದನು. ಒಮ್ಮೆ ಶಿವನು ಕನಸ್ಸಿನಲ್ಲಿ ಬಂದು ನನ್ನ ಪ್ರೀತಿಯ ಮಗ ನಂಬಿಯಣ್ಣ ಬಂದಿದ್ದಾನೆ ಎಂದು ಹೇಳದನು. ಅದರಂತೆ ಎದ್ದು ನೋಡಿದರೆ ಅವನಿರಲಿಲ್ಲ ನಂತರ ಅವನ ಅರಮನೆಗೆ ಬಂದು ಪರಿವೆನಾಚಿಗೆ ತನ್ನ ಗುರುತು ಹೇಳ ಶಿವನೇ ಕಳಸಿದ್ದಾನೆ ಎಂದು ಹೇಳದಾಗ ಸೇವಕರು ಚೋಳನೃಪನ ಬಳಗೆ ಕರೆದೊಯ್ದು ನಾವು ಹೊಂಡಕ್ಕೆ ಎಸೆದ ಹೂಗಳನ್ನು ಏಕೆ ಸಂಗ್ರಹಿಸಿರುವೆ? ಎಂದು ಪ್ರಶ್ನಿಸಿದರು. ಪ್ರತಿಯಾಗಿ ಶಿವನು ಇಂಥ ಹೂಗಳನ್ನು ಸ್ವೀಕರಿಸುವುದಿಲ್ಲ ಎಂದು ವಾದಿಸಿ ಅದಕ್ಕಾಗಿ ಕಾವೇರಿ ನದಿಯ ಬಳ ಕರೆದುಕೊಂಡು ಹೋಗಿ ಈ ನೂರೆಂಟು ಹೂಗಳನ್ನು ಎಸೆದರೆ ನೀರು ಅಡ್ಡಲಾಗಿ ನಿಂತು ಬೆರಗು ಹುಟ್ಟಿಸಿತು. ಬದಲಿಗೆ ನೂರಾರು ಬಂಡಿ ಅನ್ಯ ಹೂಗಳನ್ನು ತಂದು ನೀರಿಗೆ ಎಸೆದರೆ ಅದು ತೇಲುತ್ತಿತ್ತು. ಈ ದೃಷ್ಟಾಂತದಿಂದ ಸೋಮಾಸಿಮಾರರ ಶಿವಭಕ್ತಿಗೆ ತಲೆಬಾಗಿ ಉಪದೇಶ ಪಡೆದು ತನ್ನ ಗುರುಗಳಾಗಿ ಸ್ವೀಕರಿಸಿದನು. ಅಷ್ಟರಲ್ಲಿ ದಿನಾ ಹೂಗಳನ್ನು ತಂದುಕೊಡುತ್ತಿದ್ದಾಗ ಇವಾವುದರ ಪರಿವೆಯಿಲ್ಲದ ನಂಬಿಯಣ್ಣ ಸೋಮಾಸಿಮಾರರ ಗುರುತು ಕೇಳದಾಗ, ತಾನು ಶಿವನ ಅಗ್ರ ಪೂಜೆ ಯಾಗದ ವ್ರತ ಕೈಗೊಂಡಿರುವುದಾಗಿ ಅದಕ್ಕೆ ಶಿವನನ್ನು ತಂದು ಕೊಡಿರಯ್ಯ ಎಂದು ಬೇಡಿದನು. ಅದಕ್ಕೆ ಒಪ್ಪಿಗೆ ಸೂಚಿಸಿ ಯಾಗದ ಕಾರ್ಯ ನೀವು ಪ್ರಾರಂಭ ಮಾಡಿಕೊಳ್ಳರಿ ಎಂದು ಹೇಳಕಳಸಿದನು. ಅದರಂತೆ ವಿಪ್ರರಿಂದ ಕೂಡಿ ಯಾಗವು ಯಥಾರ್ಥವಾಗಿ ನಡೆಯುತ್ತಿರುವಾಗ ಶಿವನು ಯಾವ ರೂಪದಲ್ಲಿ ಬರುತ್ತಾನೋ ಅದನ್ನು ಭಕ್ತ ಸೋಮಾಸಿಮಾರನೇ ಕಂಡುಹಿಡಿಯಬೇಕೆಂದು ಶಿವನು ಹೇಳರುವನು ಎಂಬ ವಿಷಯವನ್ನು ನಂಬಿಯಣ್ಣ ಭಕ್ತನಿಗೆ ಮುಟ್ಟಿಸಿದನು. ಇನ್ನೇನು ಯಜ್ಞಕ್ಕೆ ಹವಿಸ್ಸನ್ನು ಅರ್ಪಿಸುವ ಸಮಯಕ್ಕೆ ಶ್ವಪಚಯ್ಯ ಕೈಯಲ್ಲಿ ಸಂಬಳಗೋಲು ಮತ್ತು ಹೆಗಲಮೇಲೆ ಸತ್ತಕರುವನ್ನು ಹೊತ್ತು ಯಜ್ಞದ ಸ್ಥಳಕ್ಕೆ ಆಗಮಿಸಿದನು. ಅವನನ್ನು ನೋಡಿ ವಿಪ್ರರೆಲ್ಲಾ ಓಡಿಹೋದರೆ ಸೋಮಾಸಿಮಾರ ವಿಶ್ವದೇವನಿಗೆ ವಂದಿಸಿ ಅಗ್ರಪೂಜೆ ಕೈಗೊಂಡಾಗ ಶಿವದರ್ಶನ ನೀಡಿ ಅವನ ಶಿವಭಕ್ತಿಗೆ ಮೆಚ್ಚಿ ಕೈಲಾಸದಲ್ಲಿ ಗಣಪದವಿಯನ್ನು ನೀಡಿ ಹರಸಿದನು. ತನ್ನ ಲಿಂಗವನ್ನು ನೀಡಿ ಶ್ರೀ ಗಿರಿಯ ಮಲ್ಲಿಕಾರ್ಜುನನ ಹೆಸರಿನಲ್ಲಿ ಇಲ್ಲಿ ಪೂಜಿಸುವುದು ನಿನಗೆ ನನ್ನ ವರವೆಂದು ತಿಳಸಿದನು.

ಈ ಕಥೆಯಲ್ಲಿ ಶಿವಭಕ್ತ ಸೋಮಾಸಿಮಾರನ ಧರ್ಮಕಾರ್ಯಗಳು ಮತ್ತು ಅವನು ಕೈಗೊಂಡ ಶಿವನ ಅಗ್ರಪೂಜೆಯ ಯಾಗದ ಕಾರ್ಯಕ್ಕಾಗಿ ನಿಷ್ಠೆಯಿಂದ ಶಿವನನ್ನು ಬರಮಾಡಿಕೊಳ್ಳಬೇಕೆಂದು ಬಯಸಿ ಅದಕ್ಕಾಗಿ ನಂಬಿಯಣ್ಣನಿಗೆ ಶಿವನನ್ನು ತಂದು ಕೊಡಬೇಕೆಂದು ಬೇಡುತ್ತಾನೆ. ಸೋಮಾಸಿಮಾರನಿಗೆ ಶಿವನೇ ಸರ್ವಸ್ವ, ತನ್ನ ಒಡೆಯನೆಂದು ತಿಳಿದು ಭಕ್ತಿಕಾರ್ಯದಲ್ಲಿ ಮುಳುಗಿರುತ್ತಾನೆ. ಆದರೆ ಶಿವನು ಶ್ವಪಚನ ವೇಷದಲ್ಲಿ ಬಂದಾಗ ವಿಪ್ರರೆಲ್ಲಾ ತಿರಸ್ಕರಿಸಿ, ಅಸಹ್ಯಪಟ್ಟು ಓಡಿಹೋದರೆ ಇವನು ಮಾತ್ರ ಆ ಶ್ವಪಚನನ್ನೇ ಶಿವನೆಂದು ಅಗ್ರ ಪೂಜೆ ನಡೆಸಿದಾಗ ಇವನ ಭಕ್ತಿಗೆ ಒಲಿದ ಶಿವನು ಪ್ರತ್ಯಕ್ಷನಾಗುತ್ತಾನೆ. ಇಲ್ಲಿ ಭಕ್ತಿಯಲ್ಲಿ ಮೇಲು–ಕೀಳು ಎಂಬುದಿಲ್ಲ. ಮತ್ತು ಶ್ವಪಚ ಒಬ್ಬ ಹೊಲೆಯನೆಂದು ಸಮಾಜ ಅವನನ್ನು ತಿರಸ್ಕರಿಸಿದರೆ ಅವನಲ್ಲೇ ತನ್ನ ಇರವನ್ನು ತೋರಿಸುವ ಶಿವನಿಗೆ ಜಾತಿ ಬೇಧದ ವ್ಯತ್ಯಾಸವಿಲ್ಲ. ವೇದ ಮಂತ್ರಗಳ ಸೊಕ್ಕಿನಿಂದ ಮೆರೆಯುವ ವಿಪ್ರರಮುಂದೆ ಶ್ವಪಚನ ಬಾಯಿಯಲ್ಲಿ ವೇದ ಮಂತ್ರೋಪನಿಷತ್ತುಗಳು ಬಂದಾಗ ಅದು ಧರ್ಮಕ್ಕೆ ವಿರೋಧವಾದದು ಎಂದು ಹೇಳಿ ಕಡೆಗಣಿಸಿದರು. ಕೊನೆಗೆ ಅವನಿಗೆ ಶರಣಾಗತಯಾಗುವುದನ್ನು ಗಮನಿಸಿದರೆ ಶಿವಭಕ್ತನ ಮುಂದೆ ಜಾತಿ ಬೇಧದ ಅಂತಸ್ತಿನ ಪ್ರಯೋಜನವಿಲ್ಲವೆನ್ನುವುದು ತಿಳಿಯುತ್ತದೆ. ಸೋಮಾಸಿಮಾರರ ಈ ನಿಷ್ಠೆಯ ಭಕ್ತಿಗೆ ಒಲಿದ ಶಿವನು ಗಣಪದವಿಯನ್ನು ನೀಡಿ ಹರಸಿದನು.

### ೩೦. ಬಾಹೂರ ಬೊಮ್ಮಿ ತಂದೆಯ ರಗಳೆ :–

ದಕ್ಷಿಣ ದಿಕ್ಕಿನ ಕಲ್ಯಾಣಪಟ್ಟಣದಲ್ಲಿ ಬಾಹೂರ ಎಂಬ ಊರಿನಲ್ಲಿ ಮಹಾನ್ ಶಿವಭಕ್ತ ಬಾಹೂರ ಬೊಮ್ಮಿತಂದೆ ಎಂಬ ಓರ್ವ ಶಿವಶರಣನಿದ್ದನು. ಅವನು ಪ್ರತಿನಿತ್ಯ ಶಿವಪೂಜೆ, ಧ್ಯಾನ, ತನ್ನಲ್ಲಿರುವ ದಿವ್ಯ ಸಂಪತ್ತನ್ನು ಶಿವಶರಣರ ಸಮೂಹಕ್ಕೆ ಪ್ರೀತಿಯಿಂದ ದಾನಮಾಡುತ್ತಾ, ಸಂಸಾರ ಬಂಧನದಿಂದ ವಿಮುಕ್ತನಾಗಿದ್ದನು. ಇವನು ಪ್ರತಿ ಸೋಮವಾರದ ದಿನ ಕಲ್ಯಾಣದ ತ್ರಿಪುರಾಂತಕೇಶ್ವರ ದೇವಾಲಕ್ಕೆ ತೆರಳಿ, ದೃಷ್ಟಿ ಅತ್ತಿತ್ತ ಹರಿಸದೆ ಅವನನ್ನೇ ಈಕ್ಷಿಸಿ ತನ್ನ ಮನಸ್ಸನ್ನು ಶುದ್ಧಿಮಾಡಿಕೊಳ್ಳುವ ವ್ರತವನ್ನು ಸ್ವೀಕರಿಸಿದ್ದನು. ಹೀಗಿರುವಾಗ ಒಮ್ಮೆ ಕಲ್ಯಾಣದ ಬೀದಿಯಲ್ಲಿ ಜೈನರು ಜೋಳಗಳನ್ನು ರಾಶಿ ಹಾಕಿಕೊಂಡು ಮಾರುವಾಗ ಅದಕ್ಕೆ ಶಂಕರಗಂಡ ಎಂದು ಹೆಸರಿಡಿದು ಕರೆದು ಶಂಕರನಿಗಿಂತಲೂ ಈ ಜೋಳವೇ ಹೆಚ್ಚು ಶಕ್ತಿ ಶಾಲಿ ಎಂದು ಲೇವಡಿ ಮಾಡುತ್ತಾ ನಗುತ್ತಿದ್ದರು. ಇದರಿಂದ ಕುಪಿತಗೊಂಡ ಬೊಮ್ಮಿತಂಡೆ ಜೋಳದ ರಾಶಿಗೆ ಪ್ರದಕ್ಷಿಣೆ ಹಾಕಿ ಓಂಕಾರನಾದದ ಧನಿ ಮೊಳಗಿ ಶರಣ ಕುಲವನ್ನು ಉದ್ಧರಿಸುವಂತೆ ಭೂಲೋಕದಲ್ಲಿ

ಪ್ರತಿಧ್ವನಿಗೊಳ್ಳುವಂತೆ 'ಓಂ' ಎನ್ನುವ ಧ್ವನಿಯನ್ನು ಶಂಕರನ ಅನುಗ್ರಹದಿಂದ ಮೊಳಗಿಸಿದನು. ಈ ಸನ್ನಿವೇಶವನ್ನು ನೋಡಿ ಜೈನರೆಲ್ಲ ಗಾಬರಿಯಾಗಿ ಹೆದರಿ ಓಡಿ ಹೋದರೆ, ಶಿವಭಕ್ತ ಸಮೂಹವೆಲ್ಲಾ ಒಂದು ಭಕ್ತಿ ಸುಖದಲ್ಲಿ ಒಂದುಗೂಡಿದರು. ಈ ವಾರ್ತೆ ಎಲ್ಲೆಡೆ ಹಬ್ಬಿ ಬೊಮ್ಮಿತಂದೆಯ ಹಿಂಬಾಲಕರಾಗಿ ಶರಣರ ಭಕ್ತರ ಕುಲವೆಲ್ಲ ಶಿವನ ಧ್ಯಾನದಲ್ಲಿ ಒಮ್ಮೆ ಕಲ್ಯಾಣದ ನಗರದಲ್ಲಿ ಬರುತ್ತಿರಬೇಕಾದರೆ, ಪೆರ್ಮಾಡಿರಾಯನ ಆಸ್ಥಾನದ ಮದಗಜವೊಂದು ರಾಜಬೀದಿಯಲ್ಲಿ ಮದವೇರಿ ಎಲ್ಲರ ಮೇಲೆ ಹರಿಹಾಯ್ದು ತೊಯ್ದಾಡುತ್ತಿತ್ತು. ಇದರಿಂದ ಜನರು ದಿಕ್ಕಾಪಾಲಾಗಿ ಓಡಿಹೋಗುತ್ತಿರಲು, ಶಿವನನ್ನು ಸ್ತುತಿಮಾಡಿಕೊಂಡು ಬರುತ್ತಿದ್ದ ಈ ಭಕ್ತವೃಂದಕ್ಕೆ ಬೊಮ್ಮಿತಂದೆಯು ಹೆದರುವ ಅಗತ್ಯವಿಲ್ಲವೆಂದು ಅಭಯನೀಡಿ, ಆನೆಯ ಮುಂದೆ ಕೈಮಾಡಿ ಸಾಯುವವನ ಮನೆಯ ಆನೆಯಾದ ನಿನಗೆ ಇಷ್ಟು ಸೊಕ್ಕಾದರೆ, ಶಿವನ ಆನೆ ನಾನು ಇಲ್ಲಿಂದ ತೊಲಗುವುದಿಲ್ಲ ನನ್ನ ಮೇಲೆ ಆಣೆ ನಿಲ್ಲು, ಅಲ್ಲೇ ನಿಲ್ಲು ಎಂದು ಗದರಿಸಿದಾಗ ಹೆದರಿದ ಆನೆ ಅಲುಗಾಡದೆ ನಿಂತಿತು. ಆಸ್ಥಾನಿಕರಿಂದ ಈ ವಿಷಯವನ್ನು ಅರಿತ ಪೆರ್ಮಾಡಿರಾಜ ಬೊಮ್ಮಿತಂದೆಯನ್ನು ಪ್ರಶ್ನಿಸಿ ಅದರೊಂದಿಗೆ ಯುದ್ಧಕ್ಕೆ ಆಹ್ವಾನ ನೀಡಿದ. ಅದರಂತೆ ಆನೆಯ ಮೇಲೆ ಯುದ್ಧಮಾಡಿ ಅದನ್ನು ಅಡಗಿಸಿ ಕೊಂದು ಕೊನೆಗೆ ಶಿವನದಯೆಯಿಂದ ಬದುಕುವಂತೆ ಹರಿಸಿ, ಊರಿಗೆ ಊರೇ ಆಶ್ಚರ್ಯಪಡುವಂತೆ ತನ್ನ ಭಕ್ತಿ ಮತ್ತು ಶೌರ್ಯವನ್ನು ಪ್ರದರ್ಶಿಸಿದನು. ಬೊಮ್ಮಯ್ಯ ಶರಣಸಮೂಹದೊಡನೆ ಶಿವಾಲಯದತ್ತ ಹೊರಟನು ಅಲ್ಲಿ ಗಾಯನ, ನರ್ತನ, ಮೇಳ, ಕಹಳೆ, ವಾದ್ಯಗಳ ನಾನಾ ವೈಖರಿಯಲ್ಲಿ ಶಿವಪೂಜೆ ನಡೆಯುತ್ತಿತ್ತು. ಆದರೆ ಬೊಮ್ಮಯ್ಯ ಅಲ್ಲಿಗೆ ಬಂದು ಕುಳಿತ ಮೇಲೆ ನಾಟ್ಯವಾಡುವುದನ್ನು ನಿಲ್ಲಿಸಿದ ಕಲ್ಯಾಣದೇವಿಯ ಪ್ರಿಯಕರನನ್ನು ಪ್ರಶ್ನಿಸಿದ ಬೊಮ್ಮಿತಂದೆಗೆ ಜೋಳದ ಬಾಯಿಯಲ್ಲಿ ಓಂ ಕಾರದ ಧನಿ, ಮದಗಜವನ್ನು ಮೆಟ್ಟಿ ಮತ್ತು ಪ್ರಾಣ ಬರಿಸಿದ ಗರ್ವವು ನಿಮ್ಮಲ್ಲಿರಬೇಕಾದರೆ ನಮ್ಮನ್ನು ಸುಖದಿಂದರಲು ಬಿಡುವುದೇ ಎಂದು ತಿಳಿಸಿದನು. ನಿನ್ನ ಸಾಮರ್ಥ್ಯ ನಿಜವಾದುದಾದರೆ ನಮ್ಮ ಬಳಿ ಇರುವ ಕಬ್ಬಿನ ಜಲ್ಲೆಗಳನ್ನು ಕಲ್ಲಿನ ಈ ನಂದಿಗೆ ತಿನ್ನಿಸು ಆಗ ನಾವು ಶರಣಾಗುವೆವು ಎಂದು ಸವಾಲೆಸೆದನು. ಸವಾಲಿಗೆ ಪ್ರತಿ ಸವಾಲೆಂಬಂತೆ ಈ ನಂದಿಗೆ ಕೇವಲ ನಿನ್ನ ಕೈಯಲ್ಲಿನ ಕಬ್ಬಲ್ಲ ಊರಿನಲ್ಲಿ ಬೆಳೆದ ರಾಶಿ ರಾಶಿ ಕಬ್ಬುಗಳನ್ನು ತಿನ್ನಿಸಿ ಊರ ಕೆರೆಯ ನೀರು ಕುಡಿಸಿ, ಶಿವಾಲಯವನ್ನು ಪ್ರದಕ್ಷಿಣೆಹಾಕಿಸುತ್ತೇನೆಂದು ಪ್ರತಿಜ್ಞೆಮಾಡಿದನು. ಅದರಂತೆ ನಂದಿಯ ಒಡೆಯ ಶಿವನನ್ನು ಪ್ರಾರ್ಥಿಸಿ ನಂದಿಯನ್ನು ಬರಮಾಡಿಕೊಂಡು ಶಿವನಿಗೆ ಮೊದಲು ನೈವೇದ್ಯ ಮಾಡಿದ ನಂತರ ಕಬ್ಬುಗಳನ್ನು ತಿಂದು ಮುಗಿಸಿ, ನೀರನ್ನು ಕುಡಿದು ಹಾಗು ಶಿವಾಲಯಕ್ಕೆ ಬಲದಿಂದ ಪ್ರದಕ್ಷಿಣೆ ಮಾಡಿಸಿ ಭಕ್ತಿಯ ಜಯ ಗಳಿಸಿದನು.

ಇದರ ನೆನಪಿಗೋಸ್ಕರ ನಂದಿ ತನ್ನ ಸ್ಥಾನವನ್ನು ಸ್ವಲ್ಪ ಅಡ್ಡವಾಗಿ ತನ್ನ ದೇಹದ ಚಲನವಲನವನ್ನು ವ್ಯತ್ಯಾಸಗೊಳಿಸಿತು. ಬೊಮ್ಮಯ್ಯನ ಈ ಶಿವಭಕ್ತಿಗೆ ಮೆಚ್ಚಿ ಶಿವನು ಪುಷ್ಪಕವಿಮಾನದಲ್ಲಿ ಆಗಮಿಸಿ ಅವನನ್ನು ಕೈಲಾಸಕ್ಕೆ ಕರೆದೊಯ್ದು ಗಣಪದವಿ ನೀಡಿ, ಅವನ ಭಕ್ತಿಯವೈವಿಧ್ಯವನ್ನು ಹೊಗಳಿ ಹರಿಸಿದನು.

ಈ ಕಥೆಯಲ್ಲಿ ಬಾಹೂರ ಬೊಮ್ಮಿತಂದೆಯ ಶಿವಭಕ್ತಿಯೊಂದಿಗೆ ಆತನ ದಾನ ಧರ್ಮದ ಗುಣವೂ ಮುಖ್ಯವಾದುದು.

(i) ಜೋಳದ ರಾಶಿಯಲ್ಲಿ 'ಓಂ' ಕಾರ ಬರೆಸಿದುದು.

(ii) ಮದಗಜವನ್ನು ತಡೆದು ಕೊಂದು ಜೀವಬರಿಸಿದುದು.

(iii) ನಂದಿಗೆ ಕಬ್ಬು, ನೀರು ಮತ್ತು ಶಿವಾಲಯದ ಬಲ ಪ್ರದಕ್ಷಿಣೆ ಮಾಡಿಸಿದುದು.

ಈ ಮೂರು ಕಾರ್ಯಗಳನ್ನು ಸಾಧಿಸಿದ ಬೊಮ್ಮಯ್ಯನ ಭಕ್ತಿಯು ಧೃತಿಯಿಂದ ಕೂಡಿದುದು. ಇವನ ಶಿವಭಕ್ತಿಯ ಸಾಮರ್ಥ್ಯ ಎಂತಹ ಸಾಹಸಗಳನ್ನು ಮಾಡುತ್ತದೆ ಎಂದುದಕ್ಕೆ ಸಾಕ್ಷಿಯಂತಿದೆ. ಅತ್ಯುತ್ಸಾಹದಿಂದ ಶಿವನನ್ನು ಆರಾಧಿಸಿ, ಧ್ಯಾನಿಸುವ ಇವನಿಗೆ ಶಿವನ ಮೇಲೆ ಅಪಾರ ನಂಬಿಕೆಯೊಂದಿಗೆ ಆತ್ಮೀಯ ನಂಟಿದೆ.

**೩೧. <u>ವಾಗೀಶ್ವರ ದೇವನ ರಗಳೆ :-</u>**

ಚೋಳದೇಶ ತಿರುವಾರೂರು ಎಂಬಲ್ಲಿ ವಾಗೀಶ ತನ್ನ ಪೂರ್ವವಾಸನೆಯಿಂದ ಧರ್ಮಸೇನನಾಗಿ ಜೈನರ ಬಸದಿಯಲ್ಲಿ ಜಿನಭಕ್ತನಾಗಿ ವಾಸವಿದ್ದನು. ಆದರೆ ಅವರ ಅಕ್ಕ ಶಿವಭಕ್ತೆಯಾಗಿ ತಿರುವಂಥೆ ಎಂಬ ಊರಿನಲ್ಲಿ ತಿರುವಲ್ಲಿನಾಚಿ ಎಂಬ ಹೆಸರಿನಿಂದ ಶಿವಧ್ಯಾನಾಸಕ್ತಿಯಲ್ಲಿದ್ದಳು. ಒಮ್ಮೆ ವಾಗೀಶ್ವರನಿಗೆ ಶಿವನ ಪರೀಕ್ಷೆ ಎಂಬಂತೆ ಒಂದೇ ಸಮನೆ ಹೊಟ್ಟೆಯ ಬಾಧೆಯಿಂದ ಬಳಲಿದನು. ಏನೇ ಮಾಡಿದರೂ ಅವನ ನೋವು ಕಡಿಮೆಯಾಗಲಿಲ್ಲ. ಅದರಿಂದ ಅವನನ್ನು ತಂದು ಅವನ ಅಕ್ಕ ತಿರುವಲ್ಲಿನಾಚಿಯು ವಾಸವಿದ್ದ ದೇವಾಲಯದ ಸಮೀಪದಲ್ಲಿ ಇರಿಸಿಹೋದರು. ಅನಂತರ ಈ ವಿಷಯ ಅವನ ಅಕ್ಕ ಶಿವಭಕ್ತೆಗೆ ತಿಳಿದಾಗ ಮೊದಲಿಗೆ ಪಾಪಿಯಾದ ಇವನ ಹಣೆಗೆ ವಿಭೂತಿಯನ್ನು ಬಳಿಯಲು ತಿಳಿಸಿದಳು. ಆಗ ಶಿವನ ಒಲುಮೆಯಿಂದ ನಿಧಾನವಾಗಿ ಇವನ ಬೇನೆ ತಗ್ಗಿತು. ಇದರಿಂದ ವಾಗೀಶನಿಗೆ ಶಿವನ ಮೇಲೆ ಭಕ್ತಿ ಉಂಟಾಗಿ ಶಿವಧ್ಯಾನಾಸಕ್ತನಾಗಿದ್ದನು. ಇತ್ತ ಜೈನರು ಬಂದು ಇವನನ್ನು ಮತ್ತೆ ಜೈನಧರ್ಮಕ್ಕೆ ಸೇರಿ

ಜಿನ ಬಸದಿಯಲ್ಲಿ ಉಳಿಯಲು ಒತ್ತಾಯ ಮಾಡಿದ್ದನ್ನು ತಿರಸ್ಕರಿಸಿದ ವಾಗೀಶ್ವರನಿಗೆ ತೊಂದರೆ ಕೊಡಲು ಶುರು ಮಾಡಿದರು. ಮೊದಲಿಗೆ ಸುಣ್ಣದ ಗೂಡಿನಲ್ಲಿ ವಾಗೀಶನನ್ನು ಕೂಡಿಹಾಕಿ ನೀರು ಹಾಕಿ ಸುಡಲು ಯತ್ನಿಸಿದರು. ಎರಡನೆಯದಾಗಿ ವಿಷಸರ್ಪಗಳನ್ನು ಬಿಟ್ಟು ಕಚ್ಚಿಸಾಯಿಸಲು ಯೋಜನೆ ಹೂಡಿದರು ಮತ್ತು ಆನೆಗಳನ್ನು ಬಿಟ್ಟು ಅವನನ್ನು ತುಳಿಸಬೇಕೆಂದು ಪ್ರಯತ್ನಿಸಿದರು. ಯಾವುದು ಪ್ರಯೋಜನಕ್ಕೆ ಬಾರದೆ ಶಿವಶಕ್ತಿಯಿಂದ ಅವನು ಎಲ್ಲದರಿಂದಲೂ ಪಾರಾಗಿ ಶಿವನ ಕರುಣೆಗೆ ಪಾತ್ರನಾದನು. ಪ್ರಾಣಿ ವಧೆ ಮಾಡುವುದಿಲ್ಲ ಎಂದು ಹೇಳುವ ಜೈನರು ತಮ್ಮ ಧರ್ಮಕ್ಕೆ ವಿರುದ್ಧವಾಗಿ ವಾಗೀಶನನ್ನು ಗೋಣಿಯಲ್ಲಿ ಹಾಕಿ ಹೊಲಿದು ಕಲ್ಲುಕಟ್ಟಿ ಸಮುದ್ರದಲ್ಲಿ ಹಾಕಿದಾಗಲೂ ಶಿವನ ಕರುಣೆಯಿಂದ ಪಾರಾಗಿ ಬಂದು ಅಕ್ಕ ಶಿವಭಕ್ತೆಗೆ ನಮಿಸಿದಾಗ ತಮ್ಮನಲ್ಲಿ ಶಿವಭಕ್ತಿಯ ಪಡಿಯಚ್ಚು ಮೂಡಿರುವುದನ್ನು ಕಂಡು ಸಂತೋಷಿದಳು. ಆದರೆ ಒಮ್ಮೆ ಶಿವನಿಗೆ ಒಲುಮೆಯಿಂದ ವಾಗೀಶನು ಹೂವನ್ನು ಸಮರ್ಪಿಸಲು ಹೋದಾಗ ಶಿವಲಿಂಗದಿಂದ ಧನಿಕೇಳಿದಾಗ ಹೆದರಿದ ವಾಗೀಶನು ಶಿವನು ಹೇಳಿದಂತೆ ಮಾಹೇಶ್ವರನ ಕೇರಿಯಲ್ಲಿರುವ ಕುರಿಕುಳಾಳ್ವ ಎನ್ನುವನಿಂದ ಉಪದೇಶ ಪಡೆದು ಶಿವಭಕ್ತನಾದನು. ಒಮ್ಮೆ ವಾಗೀಶನನ್ನು ನೋಡಲು ಪಿಳ್ಳೆನಾಯನಾರರು ಬಂದು ನಿಮಗೆಷ್ಟು ವರ್ಷ ಎಂದು ಕೇಳಿದಾಗ ಎರಡು–ಮೂರು ವರ್ಷ ಎಂದು ಉತ್ತರಿಸಿದ ವಾಗೀಶನನ್ನು ಕುರಿತು ಶಿವಜ್ಞಾನಿಗಳು ಶಿವಭಕ್ತರು ಎಂದಿಗೂ ಸುಳ್ಳನಾಡದವರು, ನೀನು ಏಕೆ ಸುಳ್ಳನ್ನು ಹೇಳುತ್ತಿದ್ದೀಯ ಎಂಭತ್ತು, ತೊಂಭತ್ತರ ಪ್ರಾಯದವನು ನೀನು ಎಂದು ಹೇಳಿದರು. ಅದಕ್ಕೆ ವಾಗೀಶನು ಶಿವಭಕ್ತನಾಗಿ ಎರಡು ಮೂರು ವರ್ಷಗಳಷ್ಟೇ ಕಳೆದಿವೆ. ಶಿವನನ್ನು ಒಲಿಯದ ಆ ದಿನಗಳು ಲೆಕ್ಕವಿಲ್ಲ ಎಂದು ದಿಟ್ಟವಾಗಿ ಉತ್ತರಿಸಿದನು. ನಂತರ ವಾಗೀಶನು ವಿರಕ್ತಿಯಿಂದ ತನ್ನ ತನುವನ್ನು ಶಿವನಲ್ಲಿ ಲೀನವಾಗಿಸಿದನು. ಆಗ ಶಿವನು ದೇಹನಾಶವೊಂದಿದರೂ ಭಕ್ತಿ, ಕೀರ್ತಿ ಮತ್ತು ನಾವು ಸಂಪಾದಿಸಿದ ಪುಣ್ಯ ಮಾತ್ರ ನಾಶವೊಂದುವುದಿಲ್ಲ ಎಂದು ಹೇಳಿ ಅವನಿಗೆ ಕೈಲಾಸದಲ್ಲಿ ಗಣಪದವಿ ನೀಡಿ ಹರಸಿದರು.

ಈ ಕಥೆಯಲ್ಲಿ ಪ್ರಮುಖವಾಗಿ ಶೈವಧರ್ಮದ ಕೀರ್ತಿಯನ್ನು ಸದಾ ಅಳಿಸಲು ಪ್ರಯತ್ನ ಪಡುವ ಜೈನಧರ್ಮದವರ ಸಂಘರ್ಷ ಎದ್ದು ಕಾಣುತ್ತದೆ ಎಂಬಂತೆ ಹರಿಹರನು ಚಿತ್ರಿಸಿದ್ದಾನೆ. ಕೊನೆಗೆ ಶಿವಶಕ್ತಿಯ ಮುಂದೆ ಜೈನಧರ್ಮವು ಮಾಸಿರುವಂತೆ ಕಳೆಹೀನವಾಗಿ ಪರಿಚಯಿಸಿದ್ದಾನೆ. ಜೈನಧರ್ಮದಲ್ಲಿ ಧರ್ಮಸೇನನಾಗಿದ್ದ ಜಿನಭಕ್ತನು ಶಿವಭಕ್ತನಾಗಿ ವಾಗೀಶ್ವರನಾದುದಕ್ಕೆ ಅವನ ಮೇಲೆ ಸೇಡುತೀರಿಸಿಕೊಂಡು ಅವನನ್ನು ಕೊಲ್ಲುವುದಕ್ಕೆ ಪ್ರಯತ್ನಪಡುವ ಜೈನರು ಅದು ಯಾವ

ಲೆಕ್ಕದಲ್ಲಿ ಅಹಿಂಸಕರು ಎಂದು ಕರೆಸಿಕೊಳ್ಳುವುದಕ್ಕೆ ಸಾಧ್ಯ ಎಂಬ ಬಲವಾದ ವಾದಮಂಡನೆ ಇಲ್ಲದೆ. ವಿಭೂತಿಯನ್ನು ಧರಿಸದ ನಿಮಿತ್ತ ಸ್ವಂತ ತಮ್ಮನಾದರೂ ಪಾಪಿಯೆಂದು ಪರಿಗಣಿಸುವ ತಿರುವಲ್ಲಿನಾಚಿಯ ಶಿವಭಕ್ತಿ ಮೆಚ್ಚುವಂತದ್ದು. ಗುರುವಿನ ಉಪದೇಶಕ್ಕಾಗಿ ಕುರಿಕುಳಾಳ್ವ ಎಂಬ ಶಿವಭಕ್ತನ ಬಳ ಕಳಸುವುದನ್ನು ಗಮನಿಸಿದಾಗ ಗುರು ಎನ್ನುವವನು ಹಿಮಾಲಯ ಪರ್ವತದಲ್ಲಿ ತಪ್ಪಸ್ಸಿಗೆ ಕುಳತಿರುವವನಾಗಲಿ ಕೇವಲ ಉತ್ತಮ ಜಾತಿಯಲ್ಲಿ ಹುಟ್ಟಿರುವವನು ಎಂಬ ಸಂಕುಚಿತ ಮನೋಭಾವದಿಂದ ನೋಡುವುದು ಸರಿಯಲ್ಲ, ದೂರವುಳದು ಸಮಾಜದಿಂದ ಕಡೆಗಣಿಸಲ್ಪಟ್ಟಿರುವ ಒಬ್ಬ ಕೆಳಜಾತಿಯವನನ್ನು ಗುರು ಎಂದು ಪರಿಗಣಿಸುವಲ್ಲಿ ಶಿವಭಕ್ತಿಯೊಂದೇ ಗುರುವಿನಲ್ಲಿ ಪ್ರಧಾನವಾಗಿ ಇರಬೇಕಾದ ಆಸ್ತಿ ಎಂಬುದನ್ನು ತಿಳಸಿರುವ ಹರಿಹರ ಜಾತಿ-ಬೇಧವನ್ನು ವಿರೋಧಿಸುವ ನೆಲೆಯಿಂದ ಹೀಗೆ ಚಿತ್ರಿಸಿದ್ದಾನೆ, ಅಷ್ಟೇ ಅಲ್ಲದೆ ಗುರುವಿನ ಮಹತ್ವವನ್ನು ಒತ್ತಿಹೇಳದ್ದಾನೆ. ಶಿವಭಕ್ತನಲ್ಲದ ಸಮಯವು ಭವಿಯಾಗಿದ್ದು ನಮ್ಮ ಜೀವನದ ಬರಡು ಸಮಯ, ಅದು ಲೆಕ್ಕಕ್ಕೆ ಬರುವುದಿಲ್ಲ. ಯಾವಾಗ ನಾವು ಶಿವಭಕ್ತರಾಗುತ್ತೀವೋ ಆಗ ಮಾತ್ರ ಅದು ನಮ್ಮ ಜೀವನದ ಪರಮ ಸಮಯವೆಂದು ಹೇಳ ಶಿವಭಕ್ತಿಯ ಮಹಿಮೆಯನ್ನು ವಾಗೀಶನ ಪರಮ ಶಿವಭಕ್ತಿಯೊಂದಿಗೆ ತಿಳಸಿದ್ದಾನೆ. ತನ್ನ ತನುವನ್ನೇ ಶಿವಲಿಂಗದಲ್ಲಿ ಲೀನವಾಗಿಸಿದ ವಾಗೀಶನಿಗೆ ಜೀವನದಲ್ಲಿ ಜೈನರಿಂದ ಎಷ್ಟೇ ತಾಪತ್ರಯಗಳಗೆ ಒಳಗಾದರೂ ಶಿವನ ಪಾದವನ್ನು ಬಿಡುವುದಿಲ್ಲವೆಂದು ಹೇಳ ಶಿವಭಕ್ತಿಯಲ್ಲೇ ಮುಂದುವರಿದ ವಾಗೀಶನು ಶಿವನನ್ನು ಒಲಿಸಿಕೊಂಡು ಶಿವಸಾಯುಜ್ಯವನ್ನು ಪಡೆದನು. ಶಿವ-ಭಕ್ತರ ಈ ಬಾಂಧವ್ಯ ಅಪೂರ್ವವಾದುದು ಎಂಬುದು ಈ ಕಥೆಯಿಂದ ವೇದ್ಯವಾಗುತ್ತದೆ.

## ೩.೨. ಸುರಿಗೆಯ ಚೌಡಯ್ಯನ ರಗಳೆ :-

ಉತ್ತರ ದಿಕ್ಕಿನಲ್ಲಿ ಶಿವಪುರವಿದೆ, ಅಲ್ಲಿ ಸುರಿಗೆಯ ಚಾಮುಂಡರಾಯ ಎಂಬ ಶಿವಭಕ್ತನಿದ್ದಾನೆ. ಅವನು ಶಿವಭಕ್ತ, ಧ್ಯಾನ, ನಿಷ್ಠೆ, ನೇಮಗಳಲ್ಲಿ ತನ್ನನ್ನು ತೊಡಗಿಸಿಕೊಂಡಾತನು. ತಾನು ಶಿವನನ್ನು ನೋಡುವಾಗ ಅಡ್ಡವಾಗಿ ಯಾರೇ ಬಂದರೂ ಅವರ ಶಿವನ್ನು ಕತ್ತರಿಸಿ ಬಿಡುವ ಆಜ್ಞೆಯನ್ನು ಮಾಡಿಕೊಂಡು ನೇಮವಾಗಿ ಆಚರಿಸುತ್ತಿದ್ದನು. ಅದಕ್ಕಾಗಿ ಒಂದು ಕೈಗತ್ತಿಯನ್ನು ಸಂಪಾದಿಸಿಕೊಂಡು ತನ್ನ ಬಳ ಇಟ್ಟುಕೊಂಡಿರುತ್ತಾನೆ. ಶಿವನಿಗೆ ನೈವೇದ್ಯ, ಧೂಪ, ದೀಪಾರತಿ ಮಾಡಿ ಶಿವಾಲಯಕ್ಕೆಂದು ಒಮ್ಮೆ ಬಂದಿರುತ್ತಾನೆ. ಆವತ್ತಿನ ದಿನ ಅಪರಿಚಿತರಿಬ್ಬರು ಶಿವಾಲಯದಲ್ಲಿ ಅಡ್ಡಲಾಗಿ ಎದುರಿಗೆ ಬಂದರು, ನೇಮದ ಪ್ರಕಾರವಾಗಿ ಶಿವನ ದರ್ಶನಕ್ಕೆ ಎದುರಾದ ಅವರಿಬ್ಬರನ್ನು

ಕ್ಷಣಮಾತ್ರದಲ್ಲಿ ಕೊಂದನು. ಈ ವಿಷಯವು ಊರೆಲ್ಲ ಹಬ್ಬಿದ್ದರಿಂದ ಜನರು ದೇವಾಲಯದ ಮುಂದೆ ಸುತ್ತುವರಿದರು. ದೇವರ ದರ್ಶನ ಮಾಡಿ ಬಂದ ಚೌಡಯ್ಯನು ಹೊರಗಡೆ ಬಿದ್ದಿದ್ದ ಹೆಣಗಳನ್ನು ಉದ್ದೇಶಿಸಿ 'ಹೇ ಏಳಿ ಮೇಲಕ್ಕೆ' ಎಂದು ಹೇಳುತ್ತಿದ್ದಂತೆ ಮೇಲೆದ್ದರು. ನೆರೆದ ಜನಗಳು ಇದೆಂಥಾ ಭಕ್ತಿ, ಅಡ್ಡಲಾಗಿ ಎದುರು ಬಂದವರನ್ನು ಸಾಯಿಸುವುದೇ? ಎಂದು ಬೈಯ್ದಾಡುತ್ತಿದ್ದವರೆಲ್ಲಾ ಆಶ್ಚರ್ಯಚಕಿತರಾದರು. ಅಷ್ಟರಲ್ಲಿ ಚೌಡಯ್ಯನ ಶಿವಭಕ್ತಿಗೆ ಮೆಚ್ಚಿದ ಶಿವನು ಕೈಲಾಸಕ್ಕೆ ಕರೆದುಕೊಂಡು ಹೋಗಿ ಗಣಪದವಿಯನ್ನು ನೀಡಿ ಹರಸಿದನು. ಸುರಿಗೆಯ ಚೌಡಯ್ಯನು ಶಿವನನ್ನು ತನ್ನ ಒಡೆಯನೆಂದು ಭಾವಿಸಿ ಶಿವಪೂಜೆಯನ್ನು ನೇಮನಿಷ್ಠಾನುಸಾರವಾಗಿ ಮಾಡುತ್ತ ಶಿವದೀಕ್ಷೆಯನ್ನು ಪಡೆದ. ಈ ಶಿವಭಕ್ತನ ನೇಮಕ್ಕೆ ಶಿವನೇ ಹೆದರಿದನು. ಕೈಲಾಸದಲ್ಲಿ ಅವನನ್ನು ಕರೆದುಕೊಂಡು ಹೋಗುವಾಗ ಅಡ್ಡಲಾಗಿ ನಿಂತವರನ್ನು ಪಕ್ಕಕ್ಕೆ ಸರಿಯಲು ಹೇಳಿದ ಸಂದರ್ಭವನ್ನು ಗಮನಿಸಿದಾಗ ನೇಮನಿಷ್ಠ ಭಕ್ತರಿಗೆ ಶಿವನೂ ಹೆದರುತ್ತಾನೆ ಎಂಬುದು ವೇದ್ಯವಾಗುತ್ತದೆ.

### ೩೩. <u>ಚಿಲುಮಲಿಯರ ರಗಳೆ :-</u>

ಚೋಳ ಮಂಡಲದ ತಿರುವಾರೂರು ಎಂಬ ಪ್ರಸಿದ್ಧ ಊರಿನಲ್ಲಿ, ಚಿಲುಮಲಿಯರ ಎಂಬ ಶಿವಭಕ್ತನು ಶಿವಶರಣರ ಪಾದಸೇವೆ, ಶಿವಪೂಜೆಯನ್ನು ಯಥಾವತ್ತಾಗಿ ನಿರ್ವಹಿಸಿಕೊಂಡು ಹೋಗುತ್ತಿದ್ದನು. ಈ ಶಿವಭಕ್ತ ತನ್ನಲ್ಲಿರುವ ಸರ್ವಸ್ವವನ್ನು ದಾನ ಮಾಡುವ ಮೂಲಕ ಶಿವಭಕ್ತಿಯಿಂದ ಸಾರ್ಥಕ ಜೀವನವನ್ನು ಬಾಳಿ ಶಿವಸಾಕ್ಷಾತ್ಕಾರ ಪಡೆದ ಇವನ ಜೀವನ ಹಲವರಿಗೆ ಮಾರ್ಗದರ್ಶಕವಾಗುವಂಥದ್ದು. ಶಿವಭಕ್ತರ ಮೇಲೆ ಸದಾ ಕರುಣೆಯನ್ನು ತೋರುತ್ತಿದ್ದ ಚಿಲುಮಲಿಯರನ ಪಾಲಿಗೆ ಶಿವನೇ ಒಡೆಯನಾಗಿದ್ದನು. ಶಿವನ ಸೇವೆಯಲ್ಲಿ ತನ್ನ ಬದುಕನ್ನು ಸಾಗಿಸುತ್ತಿದ್ದ ಚಿಲುಮಲಿಯರ ಓರ್ವ ವಿಶಾಲ ಹೃದಯವಂತ ಎಂಬುದು ಈ ರಗಳೆಯಿಂದ ವೇದ್ಯವಾಗುತ್ತದೆ.

### ೩೪. <u>ನಿಡುಮಾರದೇವರ ರಗಳೆ :-</u>

ಪಾಂಡ್ಯ ದೇಶದಲ್ಲಿ ರಾಜ್ಯವನ್ನು ಧರ್ಮದಿಂದ ಪಾಲನೆ ಮಾಡುತ್ತ ಸದ್ಗುಣಗಳಿಂದ ಕೂಡಿದ ನಿಡುಮಾರದೇವರ ಎಂಬ ಶಿವಭಕ್ತನಿದ್ದನು. ಮೊದಲಿಗೆ ಜೈನ ಸಂಬಂಧದ ಬಂಧನದಿಂದ ಬಿಡುಗಡೆ ಮಾಡಿಸಿ ಜ್ಞಾನವಂತರು ಈ ಶಿವಭಕ್ತನಿಗೆ ಶಿವದೀಕ್ಷೆಯನ್ನು ನೀಡಿದರು. ಅಂದಿನಿಂದ ಧರ್ಮವನ್ನು ಪಾಲಿಸುತ್ತಾ ಶಿವನನ್ನು ಸ್ತುತಿಸುತ್ತಾ ಧರ್ಮನಿಷ್ಟನಾಗಿ ದೇವೇಂದ್ರನಂತೆ ರಾಜ್ಯವನ್ನು

ಪಾಲಿಸುತ್ತಿದ್ದನು. ತನ್ನ ಸಾಮ್ರಾಜ್ಯದ ವಿರುದ್ಧ ದಂಡೆತ್ತಿ ಬಂದ ಉದೀಚ್ಯ ಭೂಪನ ಸಮೂಹವನ್ನು ಸೋಲಿಸಿ ಸದ್ಭಾವನೆ, ಸಚ್ಚಾರಿತ್ರ್ಯಗಳಿಂದ ಜೀವನವನ್ನು ನಡೆಸಿದ ಈ ಧರ್ಮಕಾರ್ಯಕ್ಕೆ ಶಿವನು ಒಲಿದು ಗಣಪದವಿಯನ್ನು ನೀಡಿ ಹಾರೈಸಿದನು. ಶಿವನನ್ನು ಜಗತ್ಕರ್ತನಾಗಿ ಕಾಣುವ ನಿಡುಮಾರದೇವರ ಧರ್ಮ ಮತ್ತು ಸೇವಾ ಮನೋಧರ್ಮ ಮೆಚ್ಚತಕ್ಕದ್ದು.

**೩೫. ಕಣಂಬುಲ್ಲರ ರಗಳೆ :-**

ಮಹಾಶ್ವೇತನದಿ ಹರಿಯುವ ಚೋಳಮಂಡಲದಲ್ಲಿ ವೇದ ಸ್ಕಂದಪುರದಲ್ಲಿ ಕಣಂಬುಲ್ಲನೆಂಬ ಶಿವಭಕ್ತನೊಬ್ಬನಿದ್ದನು. ಶಿವನ ಪಾದವೇ ಗತಿ ಎಂದು ತಿಳಿದು ಆ ಜಗದೊಡೆಯನ ಮುಂದೆ ದೀಪವನ್ನು ಹಚ್ಚುತ್ತಾ, ಶಿವಭಕ್ತರಿಗೆ ತನ್ನ ಸಂಪತ್ತನ್ನು ದಾನಮಾಡುತ್ತಾ ಶಿವಸ್ತುತಿಯನ್ನು ಮಾಡುವುದರಲ್ಲಿಯೇ ಜೀವನದಲ್ಲಿ ಸುಖದಿಂದ ಇದ್ದನು. ಈ ಶಿವಭಕ್ತನ ಭಕ್ತಿಯನ್ನು ಒರೆಗಲ್ಲಿಗೆ ಹಚ್ಚಿನೋಡಬೇಕೆಂದು ಶಿವನು ಅವನಿಗೆ ಬಡತನ ಒಡ್ಡಿದನು. ಆದರೂ ಎದೆಗುಂದದೆ ಆ ಶಿವಭಕ್ತನು ತನ್ನ ಸಂಪತ್ತುಗಳನ್ನೆಲ್ಲಾ ಮಾರಿ ದೀಪವನ್ನು ಶಿವಾಲಯದಲ್ಲಿ ಹಚ್ಚುವ ತನ್ನ ನೇಮವನ್ನು ನಿಲ್ಲಿಸಲಿಲ್ಲ. ಕಟ್ಟಿಗೆ ಹೊರೆಗಳನ್ನು ಕಾಡಿಗೆ ಹೋಗಿ ಸಂಗ್ರಹಿಸಿ ಅವುಗಳನ್ನು ಮಾರಿ ಬಂದ ಹಣದಲ್ಲಿ ತುಪ್ಪ, ಎಣ್ಣೆಗಳನ್ನು ತಂದು ಶಿವಾಲಯವನ್ನು ಬೆಳಗಿಸಲು ಪ್ರಯತ್ನಿಸಿದರೂ ಅದು ಸಹ ಬೇಗನೆ ಉರಿದು ಹೋಗುತ್ತಿದ್ದಾಗ, ಚಿಂತಾಕ್ರಾಂತನಾದ ಕಣಂಬುಲ್ಲನು ತನ್ನ ನೇಮವನ್ನು ಮಾತ್ರ ನಿಲ್ಲಿಸಬಾರದೆಂದು ತನ್ನ ಕೂದಲನ್ನೇ ಬಿಚ್ಚಿ ಊರಿಗೆ ತಾಗಿಸಲು ಮುಂದಾದನು. ಬೆಂಕಿಯ ತಾಪದಿಂದ ಅವನ ತಲೆ, ಕಪಾಲದ ಭಾಗವೆಲ್ಲಾ ಉರಿದು ಸಿಡಿದುಹೋಯಿತು. ಆದರೂ ಅಳುಕದ ಆ ಶಿವಭಕ್ತನ ಭಕ್ತಿಗೆ ಶಿವನು ಒಲಿದು ಅವನಿಗೆ ರುದ್ರಗಣಪದವಿಯನ್ನು ನೀಡಿ ಹರಸಿದನು.

ಹೀಗೆ ಶಿವನ ವ್ರತವನ್ನು ಸ್ವೀಕರಿಸಿ ನಿಷ್ಠರಾದ ಶಿವಭಕ್ತರು ತನ್ನ ನೇಮವನ್ನು ಮುಂದುವರಿಸಲು ಯಾವುದಕ್ಕೂ ಹಿಂಜರಿಯದೆ ತನ್ನ ಒಡೆಯನಾದ ಶಿವನಿಗೆ ಸರ್ವಸ್ವವನ್ನೂ ಸಮರ್ಪಣಾ ಮನೋಭಾವದಿಂದ ಅರ್ಪಿಸುವ ವಿಶಾಲಹೃದಯಿಗಳು ಮತ್ತು ಮುಗ್ಧ ಭಕ್ತ ಜೀವಿಗಳು. ಅವರಿಗೆ ತಮ್ಮ ಸುಖಕ್ಕಿಂತ ಶಿವನನ್ನು ಸಂತೃಪ್ತಗೊಳಿಸಿ ಅವನ ಒಲುಮೆ ಸಂಪಾದಿಸುವುದೇ ಪರಮ ಧ್ಯೇಯವಾಗುತ್ತದೆ ಎಂಬುದು ಈ ರಗಳೆಯಿಂದ ನಮಗೆ ತಿಳಿದುಬರುತ್ತದೆ.

## ೧೧. <u>ಪೆರುಮಳಲಿಯ ಕುರುಂಬ ರಗಳೆ :-</u>

ಮಿಥಿಲಾ ನಗರವೆಂಬ ಪಟ್ಟಣದಲ್ಲಿ ಪೆರುಮಳಲಿಯ ಕುರುಂಬರ್ ಎಂಬ ಶಿವಭಕ್ತನು ತನ್ನ ಸಂಪತ್ತನ್ನು ವಿನಿಯೋಗಿಸಿ ಶಿವಭಕ್ತರನ್ನು ಸಂತುಷ್ಟಪಡಿಸುತ್ತಿದ್ದನು. ಶಿವನ ಪಾದವೇ ನನ್ನ ಜೀವನ್ಮುಕ್ತಿ ಎಂದು ಭಕ್ತಿಯಿಂದ ಬಾಳುತ್ತಿದ್ದನು. ಅದರೊಂದಿಗೆ ಶಿವ-ಪಾರ್ವತಿಯರ ಮಗನಾದ ನಂಬಿಯನ್ನು ತನ್ನ ಕುಲದೊಡೆಯ ಎಂದು ಆರಾಧಿಸುತ್ತಿದ್ದನು. ನಂಬಿಯಣ್ಣನು ಶಿವನ ಪ್ರಿಯಸಖನಾಗಿರುವುದರಿಂದ ಅವನು ನಾಳೆ ಕೈಲಾಸಕ್ಕೆ ಹೋಗುತ್ತೇನೆ ಎಂದು ಘೋಷಿಸಿರುವಾಗ, ನಂಬಿಯನ್ನು ನಾನು ತೊರೆದು ಇಲ್ಲೇ ಇರುವುದು ತನಗೆ ಪ್ರಾಣಬಿಟ್ಟು ದೇಹವೊಂದೇ ಇದ್ದ ಹಾಗೆ ಎಂದುಕೊಂಡನು. ಆಧ್ಯಾತ್ಮಿಕ ಒಲವಿನಿಂದ ಭೌತಿಕ ಶರೀರ ಸಹಿತ ಕೈಲಾಸಕ್ಕೆ ಇಂದೇ ಹೋಗಬೇಕೆಂದು ತೀರ್ಮಾನಿಸಿ ಕೈಲಾಸಕ್ಕೆ ನಡೆದನು. ಆಗ ಶಿವನು ಭಕ್ತನ ಈ ಸಂಭ್ರಮವನ್ನು ಗಮನಿಸಿ ನಂಬಿ ಶಿವನಿಗೆ ತೊತ್ತಾದರೆ, ನಂಬಿಯ ತೊತ್ತಾದ ಪೆರುಮಳಲಿಯ ಕುರುಂಬರನು ನಂಬಿ ಕೈಲಾಸಕ್ಕೆ ಹೋಗುವ ವಿಷಯವನ್ನು ಮುನ್ನಾದಿನವೇ ತಿಳಿದು ಇಂದೇ ಕೈಲಾಸಕ್ಕೆ ಬಂದ ಈ ಭಕ್ತ ಶ್ರೇಷ್ಠ, ಇವನ ಶಿವಭಕ್ತಿಯ ಪರಿಯನ್ನು ಮನಃ ತುಂಬಿ ಶ್ಲಾಘಿಸಿ ಅವನಿಗೆ ಗಣಪದವಿಯನ್ನು ನೀಡಿ ಹರಸಿದನು.

## ೧೨. <u>ಗಣನಾಥನ ರಗಳೆ :-</u>

ಶಿವಪೂಜೆಯನ್ನು ಮಾಡಿ ಶಿವನನ್ನು ತನ್ನ ಮನಸ್ಸಿಚ್ಛೆಗೆ ತಕ್ಕಂತೆ ಭಕ್ತಿಯಿಂದ ಭಜಿಸುತ್ತಿದ್ದ ಗಣನಾಥಾಖ್ಯನೆನ್ನುವ ಶಿವಭಕ್ತನು ಚಂಪಾಪುರದಲ್ಲಿ ವಾಸವಿದ್ದನು.

ಶಿವನ ಪೂಜೆಗೆಂದು ಹೂ ಸಂಗ್ರಹ, ದೀಪಾರತಿ, ಶಿವಾಗಮ ಪಠಣದಂತಹ ವಿವಿಧ ಸೇವೆಗೆಯ್ಯಲೆಂದು ಹಲವು ಶಿವಭಕ್ತರನ್ನು ನಿಯುಕ್ತಿಗೊಳಿಸಿದ್ದನು. ಅವರೆನ್ನೆಲ್ಲಾ ತೃಪ್ತಿಪಡಿಸುತ್ತಾ ಗ್ರಹಸ್ಥಾಶ್ರಮದಲ್ಲೇ ಇದ್ದು ಶಿವಪೂಜಾಕಾರ್ಯದಲ್ಲಿ ತೊಡಗಿದ್ದ ಈ ಶಿವಭಕ್ತನು ತನ್ನ ವಿನಮ್ರ ನುಡಿಗಳಿಂದ ಎಲ್ಲರನ್ನೂ ಪ್ರೀತಿಯಿಂದ ಕಾಣುತ್ತ ಅವರೊಂದ ಶಿವನನ್ನು ಆರಾಧಿಸುತ್ತಿದ್ದನು. ಶಿವನೇ ಜಗದೊಡೆಯ, ಅವನ ಪಾದಪೂಜೆಯಲ್ಲೇ ನಿಯುಕ್ತನಾದ ಇವನು ಶಿವನ ದಾಸನಾಗಿದ್ದನು. ಗ್ರಹಸ್ಥಾಶ್ರಮದಿಂದ ದಿನೇ ದಿನೇ ದೂರವಾಗುತ್ತಾ ಕೊನೆಯಲ್ಲಿ ಜ್ಞಾನಮುನಿ ಗುರುಗಳ ಪ್ರಭಾವದಿಂದ ಕೈಲಾಸದಲ್ಲಿ ಗಣಪದವಿ ಪಡೆದನು.

## ೩೮. ನರಸಿಂಹಮೊನೆಯರ ರಗಳೆ :-

ತಿರುನಾಳ ಎಂಬ ಖ್ಯಾತಿಹೊಂದಿದ್ದ ಕ್ಷೇತ್ರದಲ್ಲಿ ಅಗ್ರಪಾದ ಎಂಬ ಹೆಸರಿನ ಶಿವಪುರದಲ್ಲಿ ಶಿವಭಕ್ತನಾದ ನರಸಿಂಗ ಮೊನೆಯರನೆಂಬ ಶಿವಭಕ್ತನಿದ್ದನು. ಅವನು ರಾಜ್ಯಪಾಲನೆಯನ್ನು ಮಾಡಿಕೊಂಡು ಪ್ರಜೆಗಳ ರಕ್ಷಕನಾಗಿದ್ದ, ಪ್ರತಿನಿತ್ಯ ಹೂ ಹಣ್ಣು ಧೂಪ ದೀಪಾರತಿ, ನೈವೇದ್ಯಾದಿಗಳಿಂದ ಶಿವನನ್ನು ಅರ್ಚಿಸಿ ಪೂಜಿಸುತ್ತಿದ್ದನು. ಮನೆಗೆ ಬಂದ ಭಕ್ತಾಧಿಗಳಿಗೆ ಹೊನ್ನುಗಳನ್ನು ಶಿವನ ಹೆಸರಿನಲ್ಲಿ ದಾನ ಮಾಡುವ ಗುಣಸಂಪನ್ನಾಗಿದ್ದ ಇವನನ್ನು ಶಿವನು ಒಮ್ಮೆ ಪರೀಕ್ಷೆ ಮಾಡಲು ನಿರ್ಧರಿಸಿ ವಿಟವೇಷಧರಿಸಿ ಬಂದನು. ಭಟರು ಅರಮನೆಯ ಸುತ್ತ ವೀಕ್ಷಿಸುತ್ತಾ ನಿಂತಿದ್ದ ಇವನನ್ನು ಹಿಡಿದುತಂದು ರಾಜನ ಮುಂದೆ ನಿಲ್ಲಿಸಿದಾಗ ವಿಟವೇಷಭಕ್ತನಲ್ಲಿದ್ದ ಕುಂದುಕೊರತೆಗಳನ್ನು ಎತ್ತಾಡುವಂತೆ, ಮಾತನಾಡಿದ ಮೇಲೆ ನನಗೆ ಶಾಪ ಬರುವ ಮುನ್ಸೂಚನೆಯನ್ನು ಯೋಚಿಸಿ ಆ ವೇಷಧಾರಿ ಭಕ್ತನನ್ನು ಅರಮನೆಗೆ ಕರೆದೊಯ್ದು, ಆದರದಿಂದ ಸತ್ಕರಿಸಿದ ಅವನ ಶಿವಭಕ್ತಿಗೆ ಮೆಚ್ಚಿ ಕೈಲಾಸದಲ್ಲಿ, ಗಣಪದವಿ ನೀಡಿ ಹರಸಿದನು. ತನ್ನ ತನು ಮನವನ್ನು ಶಿವನಿಗೆ ಅರ್ಪಿಸಿ, ದಾನಧರ್ಮ ಕಾರ್ಯಮಾಡುತ್ತಾ ಬಂದ ಈ ನಿಷ್ಠಾವಂತ ಶಿವಭಕ್ತನು ಶಿವನ ಮೆಚ್ಚುಗೆಗೆ ಪಾತ್ರನಾದನು. ಶಿವನನ್ನು ತನ್ನ ಒಡೆಯನೆಂದು ಭಾವಿಸುವ ಇಂತಹ ಶಿವಭಕ್ತರ ಮೇಲೆ ಜಗತ್ಕರ್ತನ ಕರುಣೆ ಸದಾ ಇರುತ್ತದೆ ಎಂಬುದನ್ನು ಸಾಕ್ಷಾತ್ಕರಿಸುವ ಈ ಕಥೆ ಗಮನಾರ್ಹವಾದುದು.

## ೩೯. ಕಳಚೆಂಗ ಪೆರುಮಾಳೆಯರ ರಗಳೆ :-

ಚೋಳರಾಜ್ಯದಲ್ಲಿ ಚೋಳನ ಮುಡುಂಗೊಂಡ ಎಂಬ ಪಟ್ಟಣದಲ್ಲಿ ಕಳಚೆಂಗ ಪೆರುಮಾಳೆಯೆಂಬ ಶಿವಭಕ್ತನಿದ್ದನು. ಇವನಿಗೆ ಶಿವಪುರ ಎಂದರೆ ಬಹಳ ಪ್ರೀತಿ ಊರಿನಲ್ಲಿರುವವರೆಲ್ಲಾ ಶಿವಭಕ್ತರೇ ಆಗಿರಬೇಕೆಂಬ ಹಂಬಲ ಇವನದು. ಭಸ್ಮವನ್ನು ಹಣೆಗೆ ಧರಿಸದೆ ಇರುವವರು ಇವನ ಪಾಲಿಗೆ ಕ್ರಿಮಿಗಳಿಗೆ ಸಮಾನ. ಶಿವಪೂಜೆ, ಶಿವಧ್ಯಾನ, ರುದ್ರಾಕ್ಷಿಗಳೇ ಇವನಿಗೆ ಸಂಪತ್ತಿದ್ದಂತೆ, ರುದ್ರನ ಹೊರತು ಅನ್ಯದೇವರ ನೆರಳಿಗೂ ಇವನು ಹೋಗಲಾರದವ. ಒಟ್ಟಾರೆ ಶಿವನನ್ನು ಕಂಡರೆ ಅತಿಭಕ್ತಿ, ವಿನಯ, ಸ್ನೇಹ, ಆಚಾರ-ವಿಚಾರ, ಬಲು ನಿಷ್ಠಾವಂತ. ಶಿವನಿಗೆ ಅಭಿಮಾನಪೂರ್ವಕ ಭಕ್ತನಾಗಿದ್ದನು.

ತಿರುವಾರೂರಿನ ತಿರುನಾಳ ಹಬ್ಬದಿನದಂದು ಜನಸಾಗರದ ಮಧ್ಯೆ ಇವನ ಪ್ರಿಯ ಹೆಂಡತಿ ಚೊಲ್ಲಡಿನಾಚಿಯೊಂದಿಗೆ ದೇವಸ್ಥಾನಕ್ಕೆ ಹೋಗಿರುವಾಗ ಶಿವನಿಗೆ ಸಲ್ಲಬೇಕಾಗಿದ್ದ ಹೂವೊಂದನ್ನು ಮೂಸಿನೋಡಿದಳಲ್ಲ ಎಂಬ ಕೋಪಕ್ಕೆ ಇವಳ ಮೂಗನ್ನು ಕತ್ತರಿಸಿದರು. ರಾಜರ ಬಳಿ ಈ ದೂರು ಹೋದಾಗ ನೀವು ತಪ್ಪು ಮಾಡಿದ್ದೀರ ಮೊದಲಿಗೆ ಹೂವನ್ನು ತೆಗೆದುಕೊಂಡಿದುದು ಇವಳ ಕೈ ಅನಂತರ ವಾಸನೆ ನೋಡಿದ್ದು ಮೂಗು ಹಾಗಾಗಿ ಆ ಕೈಗೆ ಇನ್ನೂ ಶಿಕ್ಷೆ ನೀಡಿಲ್ಲ ಎಂದು ಆ ಕೈಗಳನ್ನು ಕತ್ತರಿಸುವುದಕ್ಕೆ ಆಜ್ಞೆಯಾಗಿ ಅವಳ ಎರಡು ಕೈಗಳನ್ನು ಕತ್ತರಿಸಲಾಯಿತು. ಕಳಚೆಂಗಪೆರುಮಾಳನ ಶಿವಭಕ್ತಿಗೆ ಶಿವನು ಮೆಚ್ಚಿ ಪ್ರತ್ಯಕ್ಷನಾಗಿ ಹರಸಿ ಕೈಲಾಸಕ್ಕೆ ದಂಪತಿ ಸಮೇತ ಕರೆದುಕೊಂಡು ಇವರ ಕೀರ್ತಿಯನ್ನು ಸಾರಿದನು.

ಶಿವಭಕ್ತಿಯಲ್ಲಿ ಲೀನವಾಗಿರುವ ಕಳಚೆಂಗ ಪೆರುಮಾಳ್ ಎಂಬ ಈ ಶಿವಭಕ್ತನಿಗೆ ಜಗದೊಡೆಯ ಶಿವನ ನಂಟಿನ ಮುಂದೆ ಹೆಂಡತಿ ಮಕ್ಕಳು, ಬಂಧು ಬಾಂಧವ್ಯ ಅಧಿಕಾರ ಎಲ್ಲವೂ ತೃಣಕ್ಕೆ ಸಮ ಎಂಬಂಶವನ್ನು ಈ ಕಥೆಯ ಮೂಲಕ ಹರಿಹರ ಅಭಿವ್ಯಕ್ತಿಸಿದ್ದಾನೆ. ಪ್ರಿಯ ಹೆಂಡತಿ ಚೊಲ್ಲಡಿನಾಚಿ ಶಿವನ ಮುಡಿಗೇರುವ ಹೂವನ್ನು ಕೈಗೆತ್ತಿಕೊಂಡಿದ್ದು ಮತ್ತು ಮೂಸಿದ್ದು ಇವನ ಪಾಲಿಗೆ ಮಹಾನ್ ಅಪರಾಧವಾಗಿ ಅವಳನ್ನು ಶಿಕ್ಷಿಸಿದುದರಲ್ಲಿ ಅವನು ಶಿವನ ಮೇಲಿಟ್ಟಿರುವ ಅನನ್ಯ ಭಕ್ತಿ-ಭಾವ, ಅಭಿಮಾನ ಮತ್ತು ಗೌರವ ವ್ಯಕ್ತವಾಗುತ್ತದೆ. ಈ ಆದರ್ಶಗಳಿಗೆ ಯಾರೇ ಅಡ್ಡಿಯಾದರು ಅದನ್ನು ಸಹಿಸುವುದಿಲ್ಲ ಎಂಬುದು ವೇದ್ಯವಾಗುತ್ತದೆ.

## ೪೦. <u>ಎಡೆಗೆಳೆಯರ ರಗಳೆ :-</u>

ದಕ್ಷಿಣ ಭಾಗದಲ್ಲಿ ಕುಳಂಬಾಳಪುರವೆಂಬ ಪಟ್ಟಣವೊಂದಿತ್ತು. ಅದು ಅಧಿಕ ಶಿವಭಕ್ತರನ್ನು ಒಳಗೊಂಡಿದ್ದ ಶಿವಪುರವೇ ಆಗಿತ್ತು. ಅಲ್ಲಿ ಸೂರ್ಯವಂಶಜನಾದ ಎಡೆಗೆಳೆಯರನೆಂಬ ಶಿವಭಕ್ತನು ಶೈವಧರ್ಮದ ಅಭಿವೃದ್ಧಿ ಪೂರಕಕಾರ್ಯವಾಗಿ ದೇವಾಲಯ ನಿರ್ಮಾಣ, ದಾನ -ಧರ್ಮ, ಪ್ರಜಾಪಾಲನೆ, ಶಿವಪೂಜೆ ಧ್ಯಾನಾದಿಕಾರ್ಯಗಳನ್ನು ಎಡೆಬಿಡದೆ ಆಚರಿಸಿ ನೆಮ್ಮದಿಯ ಜೀವನವನ್ನು ನಡೆಸುತ್ತಿದ್ದನು. ಹೀಗಿರುವಾಗ ಅದೇ ಊರಿನಲ್ಲಿ ಗಣ್ಯಶಿವಭಕ್ತನೊಬ್ಬನಿದ್ದನು. ಅವನು ತನ್ನ ಸಂಪತ್ತೆಲ್ಲಾ ಕರಗಿ ಹೋಗುವವರೆಗೂ ಮತ್ತು ಮನೆಮಠ ಮಾರಿ ಶಿವಭಕ್ತರಿಗೆ ನಿತ್ಯ ಅತಿಥಿಸತ್ಕಾರದಂತಹ ಧರ್ಮಕಾರ್ಯವನ್ನು ಮಾಡುತ್ತಿದ್ದನು. ಒಮ್ಮೆ ಅವನಿಗೆ ದಾಸೋಹಕ್ಕಾಗಿ ಮೂರುಕಾಸು ಹುಟ್ಟದೆ ರಾಜನ ಅರಮನೆಯಲ್ಲಿ ಕಳ್ಳತನ ಮಾಡಬೇಕೆಂದು ನಿರ್ಧರಿಸಿ ವಿವಿಧ

ಪೋಷಾಕುಗಳನ್ನು ಧರಿಸಿ ಅತಿಥಿ ಸತ್ಕಾರದ ಕಾರ್ಯಕ್ಕಾಗಿ ಹೊನ್ನು ಆಭರಣಗಳನ್ನು ಕದಿಯಲಿಕ್ಕೆಂದು ಬಂದು ಕೊನೆಗೆ ಉಗ್ರಾಣದಲ್ಲಿ ನೇರವಾಗಿ ದೊರೆಯುವ ಧಾನ್ಯಗಳೇ ಸಾಕೆಂದು ತೆಗೆದುಕೊಂಡು ಹೋಗುತ್ತಿರಲು ಮಂತ್ರಿಗಳಿಂದ ಬಂಧಿತನಾದನು. ಮರುದಿನ ರಾಜನ ವಿಚಾರಣೆಯಲ್ಲಿ ಶಿವನ ಹೆಸರಿನಲ್ಲಿ ಮಾಡುತ್ತಿರುವ ಅತಿಥಿ ಸತ್ಕಾರದ ಕಾರ್ಯಕ್ಕಾಗಿ ಈ ಕಳ್ಳತನ ಎಂದು ಒಪ್ಪಿಕೊಂಡನು. ಅವನ ಧರ್ಮಕಾರ್ಯಕ್ಕೆ ಓಗೊಟ್ಟ ಎಡೆಗಳೆಯರ ಶಿವಭಕ್ತನೊಡಗೂಡಿ ಭಕ್ತರನ್ನೆಲ್ಲಾ ಅರಮನೆಗೆ ಕರೆಸಿ ಅನ್ನಸಂತರ್ಪಣೆ ಮತ್ತು ಸಂಪತ್ತಿನ ದಾನಮಾಡಿ ಸೈ ಎನಿಸಿಕೊಂಡರು. ಶಿವನ ಪ್ರೇರಣೆ ಎಡೆಗಳೆಯರ ಮೇಲೆ ಬೀರಿತ್ತೋ ಎಂಬಂತೆ ಪ್ರತ್ಯಕ್ಷನಾಗಿ ಅವನನ್ನು ಕೈಲಾಸಕ್ಕೆ ಕರೆದುಕೊಂಡು ಹೋಗಿ ಕೊಂಡಾಡಿ ಗಣಪದವಿ ನೀಡಿದನು.

ಶಿವನ ಹೆಸರಿನಲ್ಲಿ ನಡೆಯುವ ಯಾವುದೇ ದಾನಧರ್ಮ ಕಾರ್ಯದಲ್ಲಿ ಕೈಜೋಡಿಸಬೇಕೆಂಬ ಈ ಅನನ್ಯ ಶಿವಭಕ್ತಿಗೆ ಶಿವನು ಒಲಿದು ಹರಸಿದ್ದಾನೆ. ಶಿವನುದೋರಿದ ಧರ್ಮಮಾರ್ಗವನ್ನೇ ಹಿಡಿದು ಶಿವಭಕ್ತಿಯೊಂದಿಗೆ ಧರ್ಮಕಾರ್ಯವನ್ನು ಮಾಡಿದ ಅವನ ಉದಾರ ಹೃದಯವಂತಿಕೆಗೆ ಶಿವನು ತನ್ನ ಆ ಭಕ್ತನನಿಗೆ ಒಲಿದಿದ್ದಾನೆ.

**೪೧. ಚಿರುತೊಣೆಯಾಂಡರ ರಗಳೆ :-**

ಚೋಳದೇಶದಲ್ಲಿ ತಂಜಾವೂರಿನಲ್ಲಿ ವಾಸಿಸುತ್ತಿರುವ ಅನೇಕ ಘನತೆವತ್ತ ಜನಸಮೂಹದಲ್ಲಿ ಶೂದ್ರರ ಕುಲದಲ್ಲಿ ಚಿರುತೊಣೆಯಾಂಡನೆಂಬ ಶಿವಭಕ್ತನಿದ್ದನು. ಅವನಿಗೆ ಸದಾ ಶಿವನಾಮಸ್ಮರಣೆ ಮತ್ತು ಶಿವಪಾದಸೇವೆಯೊಂದೇ ತನ್ನಯ ಪಾಲಿಗೆ ಅಗಣಿತ ಸಂಪತ್ತು, ತಿರುವಾರೂರು ಒಡೆಯನನ್ನು ನೆನೆಯುತ್ತಾ ಸಂತೋಷದಿಂದ ಶಿವನನ್ನು ಕಾಣಬೇಕೆಂಬ ಹಂಬಲದಿಂದ ಶಿವಾಲಯಕ್ಕೆ ಬಂದು, ಶಿವಪಾದಸ್ಮರಣೆಯೇ ಎನಗೆ ಗತಿಯೆಂದು ತಿಳಿದು ಅಲ್ಲಿಂದ ತೆರಳಲು ಮನಸುಬಾರದೆ ಅಲ್ಲಿಯೇ ಉಳಿಯುತ್ತಿದ್ದನು. ಹೀಗೆ ಒಮ್ಮೆ ವೀರಸಿಂಹನ ರಾಣಿಯು ಶಿವನ ಪೂಜೆಗೆಂದು ಸಿದ್ಧಗೊಳಿಸಿದ್ದ ಹೂಮಾಲೆಯ ಹೂವನ್ನು ಮೂಸಿದಕ್ಕಾಗಿ ಅವಳ ಮೂಗನ್ನು ಬಲವಂತವಾಗಿ ಹಿಡಿದೆಳೆದು ಕೊಯ್ದನು. ಅವನ ಶಿವಭಕ್ತಿಗೆ ಮೆಚ್ಚಿದ ಶಿವನು ಕೈಲಾಸದಲ್ಲಿ ಗಣಪದವಿಯನ್ನು ನೀಡಿ ಹರಸಿದನು.

ಶಿವನಿಗೆಂದು ಮುಡಿಪಾಗಿಟ್ಟಿದ್ದ ಹೂವಿನ ಸುವಾಸನೆಯನ್ನು ಸೇವಿಸುವ ಮೂಲಕ ಅದನ್ನು ಮಲಿನಗೊಳಿಸಿದಳಲ್ಲಾ ಎಂಬ ಕೋಪಕ್ಕೆ ಅವಳಿಗೆ ತಕ್ಕಶಾಸ್ತಿಯನ್ನು ಮಾಡುವ ಚಿರುತೊಣೆಯಾಂಡರನು ಶಿವನ ಮೇಲಿಟ್ಟಿರುವ ಅನನ್ಯ ಪವಿತ್ರಭಕ್ತಿಯು ವೇದ್ಯವಾಗುತ್ತದೆ. ಕಳಚೆಂಗ ಪೆರುಮಾಳೆಯರ ರಗಳೆಯಲ್ಲಿ ಚೊಲ್ಲನಾಡಿಯಾಚಿಯಂತೆ ಈ ರಾಣಿಯೂ ಹೂವಿನ ವಾಸನೆಯನ್ನು ಮೊದಲು ಮೂಸಿನೋಡುವ ಮೂಲಕ ಶಿವನಿಗರ್ಪಿತವಾಗಬೇಕಾದ ಹೂವಿಗೆ ಧಕ್ಕೆ ಮಾಡಿದರೆಂದು ಒಂದೇ ರೀತಿಯ ಶಿಕ್ಷೆಗೆ ಶಿವಭಕ್ತರಿಂದ ಒಳಗಾಗುತ್ತಾರೆ.

## ೪೨. ಪೊಗಲ್ತೊಣೆಯಾಂಡರ ರಗಳೆ :-

ಸಮರ ವೀರಾಗ್ರಹಾರ ಎಂಬ ಸ್ಥಲದಲ್ಲಿ ಕೀರ್ತಿಮಿತ್ರನೆಂಬ ಹೆಸರಿನ ಶಿವಬ್ರಾಹ್ಮಣ ಭಕ್ತನಿದ್ದನು. ಮಾಡಿದ ಪುಣ್ಯಕಾರ್ಯದ ನಿಮಿತ್ತ ಶಿವಪೂಜೆಯಲ್ಲಿ ತೊಡಗಿ ಸುಖದಿಂದಿದ್ದನು. ಹೀಗಿರುವಾಗ ಬೇಸಿಗೆ ಕಾಲದಲ್ಲಿ ಬರಗಾಲವು ಎಲ್ಲಾ ಕಡೆ ಹರಡಿ ಜನಗಳನ್ನು ಪರದಾಡಿಸಿತ್ತು. ಇಂತಹ ಸಂದರ್ಭದಲ್ಲಿ ಹಸಿವನ್ನು ಗೆಲ್ಲುತ್ತೇನೆಂಬ ಛಲದಿಂದ ಮಡಿಕೆಯ ತುಂಬ ನೀರನ್ನು ಹೊತ್ತು ತಂದು ಶಿವಲಿಂಗದ ಅಭಿಷೇಕ ಮಾಡಿ, ಧೂಪ ದೀಪಾರತಿಗಳಿಂದ ಪೂಜಿಸುತ್ತಲಿದ್ದನು. ಕ್ಷಣ ಕ್ಷಣಕ್ಕೂ ಹಸಿವಿನಿಂದ ತೊಳಲಾಡಿ ಮೂರ್ಛೆಹೊಂದಿ ಕನಸ್ಸಿನಲ್ಲಿ ಶಿವನಿಂದ ಚಿನ್ನದ ಗಡಿಗೆಯನ್ನು ಪಡೆದನು. ಅದನ್ನು ಸ್ವಾರ್ಥಕ್ಕೆಂದು ಬಳಸದೆ ಮತ್ತೆ ಶಿವಲಿಂಗದ ಅಭಿಷೇಕಕ್ಕೆ ನೀರು ತರಲು ಹೋದನು. ಆಗ ಅಲ್ಲಿ ಹಲವು ಭವಾವಳಿಗಳು ಅವನಿಗೆ ಹೇರಿದವು. ಈತನ ಶಿವಭಕ್ತಿಗೆ ಮೆಚ್ಚಿ ಶಿವನು ಕೈಲಾಸದಲ್ಲಿ ಗಣಪದವಿಯನ್ನು ನೀಡಿ ಹರಸಿದನು. ಭವ ಬಂಧನದಿಂದ ಜೀವನ್ಮುಕ್ತಿ ಪಡೆಯಲು ನಮ್ಮ ಸ್ವಾರ್ಥ, ಪ್ರಲೋಭನೆಗಳನ್ನು ಗೆದ್ದಾಗ ಮಾತ್ರ ಸಾಧ್ಯ ಅದರೊಂದಿಗೆ ಜನ್ಮಾಂತರಗಳಿಂದ ಬಿಡಿಸಿ ಶಿವಸಾಯಜ್ಯ ಪಡೆಯಲು ಜಗತ್ಕರ್ತನಾದ ಶಿವನಿಂದ ಮಾತ್ರ ಸಾಧ್ಯವೆನ್ನುವ ಅಂಶ ಇಲ್ಲಿ ವೇದ್ಯವಾಗುತ್ತದೆ.

## ೪೩. ಕೊಲ್ಲುಲಿಯಾಂಡರನ ರಗಳೆ :-

ನಾಟ್ಯಪುರವೆಂಬ ಊರಿನಲ್ಲಿ ಕೊಲ್ಲುಲಿಯಾಂಡರನೆಂಬ ಹೆಸರಿನ ಶಿವಭಕ್ತನಿದ್ದನು. ಇವನು ಚೋಳ ಮಹಾರಾಜನ ಸೇನಾಧಿಪತಿಯಾಗಿಯೂ ಏಕದೇವೋಪಾಸಕನಾಗಿಯೂ ಇದ್ದನು. ಶಿವಕ್ಷೇತ್ರಗಳ ದರ್ಶನ, ಶಿವಭಕ್ತಿ, ಪೂಜೆಯೊಂದಿಗೆ ದಿನನಿತ್ಯ ನವವಿಧ ನೈವೇದ್ಯಗಳನ್ನು ದೇವರ ಮುಂದಿಡುತ್ತಾ ತನ್ನ ಭಕ್ತಿಯ ನೇಮವನ್ನು ಕಟ್ಟಿಕೊಂಡಿದ್ದ. ಹೀಗಿರುವಾಗ ಚೋಳರಾಜನ ಅಪ್ಪಣೆಯ ಮೇರೆಗೆ ವೈರಿಗಳನ್ನು ಹಿಮ್ಮೆಟ್ಟಿಸಲು ಉದ್ಯುಕ್ತನಾಗಿ ಹೊರಟ ಇವನು ಅದಕ್ಕೆ ಮುಂಚೆ ಭತ್ತದ ರಾಶಿಯೊಂದಷ್ಟನ್ನು ಸಮಾಜದ ಸಾಮಾನ್ಯ ಜನವರ್ಗದವರ ಮುಂದೆ ಇಟ್ಟು, ಇದು ಸದಾ ನನ್ನ ಶಿವನ ನೈವೇದ್ಯಕ್ಕಾಗಿ, ಇದನ್ನು ಯಾರೂ ಬಳಸಕೂಡದು ಎಂದು ಆಜ್ಞಾಪಿಸಿ ಹೋಗಿರುತ್ತಾನೆ. ಅದರಂತೆ ಯಾರೂ ಅದನ್ನು ಎಷ್ಟೋ ದಿನಗಳವರೆಗೆ ಬಳಸದೆ ಇರಲು ಒಮ್ಮೆ ಬರಗಾಲದಿಂದ ಊರಿಗೆ ಊರೇ ಹಸಿವಿನಿಂದ ತೊಯ್ದಾಡುತ್ತಿದ್ದರು. ಕೊಲ್ಲುಲಿಯಾಂಡರನ ಬಂಧುಗಳು ಸಂಕಟದಂತಹ ಇಂತಹ ಸಂದರ್ಭದಲ್ಲಿ ಸಾಯುವುದಕ್ಕಿಂದ ಆ ನೆಲ್ಲರಾಶಿಯನ್ನು ಬಳಸಿಕೊಂಡು ಸಾಧ್ಯವಾದಾಗ ಅದಕ್ಕಿಂತ ಹೆಚ್ಚಿನ ಬೆಳೆಯನ್ನು ಬೆಳೆದು ರಾಶಿ ಹಾಕಿದರೆ ಸರಿ ಹೋಗುತ್ತದೆ ಎಂದು ಎಲ್ಲರೂ ಆ ನೆಲ್ಲರಾಶಿಯನ್ನು ಬಳಸಿ ನೆಮ್ಮದಿಯ ನಿಟ್ಟುಸಿರಿಟ್ಟರು.

ಶತ್ರುಗಳನ್ನು ಹಿಮ್ಮೆಟ್ಟಿಸಿ ಬಂದ ಕೊಲ್ಲುಲಿಯಾಂಡರನು ರಾಜನಿಂದ ಬಹುತೇಕ ಉಡುಗೊರೆಗಳನ್ನು ಪಡೆದು ಶಿವನ ಉಣಿಸಿಗೆ ಇಟ್ಟ ಭತ್ತವನ್ನು ಬಳಸಿಕೊಂಡಿದ್ದಾರೆ ಎಂದು ಅತಿಕೋಪಗೊಂಡು ತನ್ನ ಇಡೀ ಬಂಧು-ಬಳಗವನ್ನು ಕೊಂದು ಹಾಕಿದನು. ಕೊನೆಗೆ ಬರಗಾಲದಲ್ಲಿ ಈ ಮಗು ಶಿವನಿಗೆ ಮುಡಿಪಾಗಿದ್ದ ಬೆಳೆಯನ್ನು ತಿಂದಿರುತ್ತದೆ. ಈ ಮೊಲೆಹಾಲು ಕುಡಿಯುವ ಮಗನನ್ನು ಕೊಲ್ಲುವೆಯಾ ಎಂದಾಗ ಮೀನಾಮೇಷ ಎಣಿಸದೆ ಶಿವನ ಉಣಿಸನ್ನು ತಿಂದು ಗರ್ವದಿಂದ ಕೊಬ್ಬಿ ಕೊನರಿದ್ದೀಯಾ? ಎಂದು ಅದನ್ನು ಕತ್ತಿಯಿಂದ ಇರಿದನು. ಅವನ ಕಠೋರ ಭಕ್ತಿಗೆ ಮೆಚ್ಚಿದ ಶಿವನು ತಕ್ಷಣ ಪ್ರತ್ಯಕ್ಷನಾಗಿ ಕೈಲಾಸಕ್ಕೆ ಕರೆದೊಯ್ದು ಗಣಪದವಿಯನ್ನು ನೀಡಿ ಹರಸಿದನು. ಈ ಕಥೆಯಲ್ಲಿ ಕೊಲ್ಲುಲಿಯಾಂಡರನ ಶ್ರದ್ಧಭರಿತ, ಉಗ್ರನಿಷ್ಠ ಭಕ್ತಿ ವ್ಯಕ್ತವಾಗುತ್ತದೆ. ಶಿವನಿಗೆ ದಾಸನಾಗಿರುವ ಈ ಭಕ್ತನಿಗೆ ತನ್ನ ಬಂಧುಬಳಗದ ಪ್ರಾಣ, ಮಾನವೀಯ ಗುಣಕ್ಕಿಂತ ಶಿವನನ್ನು ಮೆಚ್ಚಿಸುವುದೇ, ಅವನ ನೈವೇದ್ಯಕ್ಕೆ ಅಡ್ಡಿಯಾಗದೇ ಇರುವುದೇ ಮುಖ್ಯವೆನಿಸುತ್ತದೆ. ಶಿವಭಕ್ತಿ, ಶಿವನಿಷ್ಠೆ ಪ್ರಧಾನ ಆಚರಣೆಯೆಂದು ನಂಬಿರುವಾಗ ಮತ್ತೆಲ್ಲಾ ಸಂಬಂಧಗಳು ಗೌಣವಾಗಿದೆ. ಮೌಲ್ಯಗಳಿಗೆ ಒತ್ತು ನೀಡುವ ಹಲವು ರಗಳೆಗಳಿರುವಲ್ಲಿ

ಮಾನವೀಯ ಸಂಬಂಧಕ್ಕೆ ಬೆಲೆಯೇ ಕೊಡದ ಈ ರಗಳೆಯ ಕಥಾನಾಯಕನದು ಉಗ್ರನಿಷ್ಠಭಕ್ತಿ. ತನ್ನ ವ್ರತನಿಷ್ಠೆಯ ಪರಿಪಾಲನೆಗೆ ಧಕ್ಕೆ ಒದಗುವುದನ್ನು ಸಹಿಸದ ಶಿವಭಕ್ತರು ಕಠೋರ ಭಕ್ತಿಯ ಸ್ವರೂಪದಲ್ಲಿ ಧೃತಿಯನ್ನು ತೋರುತ್ತಾರೆ. ಪೂಜೆಗೆ ಅಡ್ಡಿಮಾಡಿದ ಯಾರನ್ನು ಅವರು ಬಿಡರು.

### ೪೪. ಶಕ್ತಿ ನಾರಾಯನಾರನ ರಗಳೆ :-

ಶ್ರೀ ಕಾವೇರಿ ನದಿಯಿಂದ ಸಕಲ ಸುಖಸಂಪದಕ್ಕೆ ಆಗರವಾದ ಚೋಳನಾಡಿನಲ್ಲಿ ಶಕ್ತಿನಾಯನಾರನೆಂಬ ಶಿವಭಕ್ತನೋರ್ವನು ಸದಾ ಶಿವಭಕ್ತಿ, ಧ್ಯಾನ, ಶಿವನ ಪಾದಸೇವೆಯನ್ನು ಮಾಡುತ್ತ ಭಕ್ತಿ ಸುಖದಲ್ಲಿ ಕೂಡಿದ್ದನು. ಯಾರೇ ಶಿವನಿಂದಕರಾಗಲಿ ಅವರ ಮಾತನ್ನು ಸಹಿಸದ ಅವರ ನಾಲಿಗೆಯನ್ನು ಕೊಯ್ದು ಅವರ ಪಾಪಕ್ಕೆ ಸರಿಯಾದ ಶಿಕ್ಷೆಯನ್ನು ವಿಧಿಸುವುದರ ಮೂಲಕ ಶಿವನ ನೇಮಾಚರಣೆಯನ್ನು ಹಮ್ಮಿಕೊಂಡು ವರಶಕ್ತಿ ಎಂದೇ ಖ್ಯಾತಿಯಾಗಿದ್ದನು. ಮಾನವ ಕುಲದ ಉದ್ಧಾರವೇನಿದ್ದರೂ ಅದು ತನ್ನ ಶಿವನಿಂದಲೇ ಎಂದು ನಂಬಿದ್ದ. ಇವನ ಶಿವ ಭಕ್ತಿಗೆ ಮೆಚ್ಚಿದ ಶಿವನು ಕೈಲಾಸದಲ್ಲಿ ಗಣಪದವಿ ನೀಡಿ ಹರಸಿದನು.

ಈ ಕೆಳಗಿನ ರಗಳೆಗಳು ತಾತ್ವಿಕ ವಿಚಾರಗಳನ್ನು ಒಳಗೊಂಡಿದೆ. ಇಲ್ಲಿ ಶಿವಶರಣರ ಚರಿತ್ರೆಗಳನ್ನು ಹೇಳುವುದರ ಜೊತೆಗೆ ಅವರು ನಡೆದ ಬಂದ ಹಾದಿ ಅನುಸರಿಸಿದ ತತ್ವ ಸಿದ್ಧಾಂತಗಳು ಆದರ್ಶ ಜೀವನ ಸತ್ಯಗಳನ್ನು ಇಲ್ಲಿ ಪ್ರತಿಪಾದಿಸಲಾಗಿದೆ.

### ೪೫. ಬಸವ ಪವಾಡ ರಗಳೆ :-

ಕೈಲಾಸದಲ್ಲಿ ಪ್ರಸಾದ ಹಂಚುವ ಕಾರ್ಯದಲ್ಲಿ ಬೇಧತೋರಿದ ಎಂಬ ಕಾರಣಕ್ಕಾಗಿ ವೃಷಭನಿಗೆ 'ಭೂಮಿಯಲ್ಲಿ ಭಕ್ತಿ-ಭಾವ ತೋರಿ, ಶ್ರೀಸಾಮಾನ್ಯರೆಲ್ಲರಿಗೂ ಶಿವದೀಕ್ಷೆಯೆಂಬ ಪ್ರಸಾದವನ್ನು ಹಂಚಿ ಬರುವ ಕಾರ್ಯವನ್ನು ವಹಿಸಿ ಶಿವನು ಸದಾ ನಿನ್ನ ಜೊತೆಗಿರುವೆ ಎಂಬ ಅಭಯವನ್ನು ನೀಡಿ ಹರಸಿ ಕಳಿಸಿದ ವೃಷಭನಿಗೆ ಬಸವಣ್ಣ ಎಂಬ ಹೆಸರಿನಿಂದ ಮಾದರಸ-ಮಾದಲಾಂಬಿಕೆಯೆಂಬುವವರ ಮಗನಾಗಿ ಬಾಗೇವಾಡಿಯಲ್ಲಿ ಜನಿಸಿದನು. ಸಂಪ್ರದಾಯವನ್ನು ತಿರಸ್ಕರಿಸಿ ತನ್ನ ಮನಸ್ಸಿನ ಇಚ್ಛೆಯಂತೆ ಕಪ್ಪಡಿಯ ಸಂಗಮಕ್ಕೆ ಆಗಮಿಸಿ, ಸಂಗಮೇಶ್ವರನ ಧ್ಯಾನದಲ್ಲಿ ದಿನಕಳೆದನು. ಒಮ್ಮೆ ಸಂಗಮೇಶ್ವರನ ಆದೇಶದಂತೆ ಕಲ್ಯಾಣದ ಬಿಜ್ಜಳನಲ್ಲಿಗೆ ಆಗಮಿಸಿ

ಮಂತ್ರಿ ಪದವಿಯನ್ನು ಅಲಂಕರಿಸಿ ಸಮಾಜ ಕಲ್ಯಾಣ ಕಾರ್ಯದಲ್ಲಿ ತೊಡಗಿ ಶಿವಭಕ್ತಿಯನ್ನು ಜನಸಾಮಾನ್ಯರಲ್ಲಿ ಹಬ್ಬಿಸಿ ೧೨ನೇ ಶತಮಾನದಲ್ಲಿ ಕ್ರಾಂತಿಕಾರಿ ಬಸವಣ್ಣನೆಂದು ಖ್ಯಾತಿಯಾಗಿದ್ದರು.

ಸೂರ್ಯನನ್ನು ಹತ್ತು ದಿನ ತಡೆಹಿಡಿದುದು, ಸತ್ತಗೂಳಿಯನ್ನು ಬದುಕಿಸಿದುದು, ರಾಜರ ಆಸ್ಥಾನದ ಖಜಾನೆಯಿಂದ ಹಣವನ್ನು ದೋಚಿ ಶರಣರಿಗೆ ಬಳಸಿದ್ದಾರೆ ಎಂಬ ಆರೋಪಕ್ಕೆ ಪ್ರತಿಯಾಗಿ ಖಜಾನೆಯನ್ನು ತುಂಬಿಸಿದ್ದು, ಕಾಯಕವೇ ಕೈಲಾಸವೆಂಬ ತತ್ವದಡಿಯಲ್ಲಿ ಪ್ರತಿಯೊಬ್ಬ ಶಿವಶರಣನು ಕಾಯಕತತ್ವವನ್ನು ಅವಲಂಭಿಸಿರುವುದು. ಲಿಂಗದಲ್ಲಿ ಕೂದಲು ಇರಬಹುದೇ? ಎಂಬ ರಾಜನ ಪ್ರಶ್ನೆಗೆ ಶಿವನ ಜಡೆಮುಡಿ ತೋರಿ ಮೆರೆದನು ಬಸವಣ್ಣ. ಜಂಗಮನ ಭೇಟಿಗೆ ತನ್ನ ಪ್ರಾಣ ಬಿಟ್ಟು ಹೋಗಿ ಮತ್ತೆ ಸೇರಿದುದು, ಜೇಡರು ನೀಡಿದ ವಿಷವನ್ನು ಅಮೃತವನ್ನಾಗಿ ಮಾರ್ಪಡಿಸಿದುದು, ಸತ್ತ ಹಾವಿಗೆ ಪ್ರಾಣಬರಿಸಿದುದು ಇವೇ ಮೊದಲಾದ ಬಸವ ಕಲ್ಯಾಣದಲ್ಲಿ ಎಂಬತ್ತೆಂಟು ಪವಾಡ ಮೆರೆದ ವಿವರಗಳನ್ನು ಈ ರಗಳೆಯಲ್ಲಿ ವಿಸ್ತೃತವಾಗಿ ತಿಳಿಸಲಾಗಿದೆ.

ಬಸವಣ್ಣನು ಲಿಂಗಸಂಗದಿಂದ ಸಂಗಮೇಶನಲ್ಲಿ ಬೆರೆತು ಬಯಲಾದ ಸನ್ನಿವೇಶವನ್ನು ಇಲ್ಲಿ ಹರಿಹರನು ಶಿವ ಮತ್ತು ಭಕ್ತ ಬಸವನ ಭಕ್ತಿದರ್ಶನವನ್ನು ಅಭಿವ್ಯಕ್ತಿಸಿದ್ದಾನೆ. ಬಸವಣ್ಣನಲ್ಲಿನ ಕಾಯಕ ನಿಷ್ಠೆ, ಶಿವಭಕ್ತಿ ನಿಷ್ಠೆಯನ್ನು ಇಲ್ಲಿ ವಿವರಿಸಲಾಗಿದೆ. ಪವಾಡ ಸದೃಶ ಘಟನೆಗಳು ಜನಮನಸ್ಸನ್ನು ಬೇಗನೆ ಸೂರೆಗೊಳ್ಳುತ್ತವೆ. ಎಲ್ಲಿ ಪವಾಡಗಳು ಬಿತ್ತರಿಸುತ್ತವೋ ಅಲ್ಲಿ ಆ ಧರ್ಮ ಶ್ರೇಷ್ಠವಾಗುತ್ತಾ, ಪ್ರಸಿದ್ಧಿಯಾಗಲು ಸಹಾಯವಾಗುತ್ತವೆ. ಬಸವನ ಪವಾಡಗಳು ಜನಸಾಮಾನ್ಯರಲ್ಲಿ ಭಕ್ತಿಯನ್ನು ಹುಟ್ಟಿಸಿ ಈ ಧರ್ಮದತ್ತ ತಿರುಗಿ ನೋಡುವಂತೆ ಮಾಡುತ್ತದೆ.

**೪೭. ಸಂಸಾರವ್ಯಾಮೋಹ ನಿರಸನ ರಗಳೆ :-**

ಸಂಸಾರವೆಂಬ ಸಾಗರದಲ್ಲಿ ಸಿಲುಕಿ ತೊಳಲಾಡುವ ಜೀವಗಳ ನಿತ್ಯನಿರಂತರ ಕಷ್ಟ ಪರಂಪರೆಯ ಸ್ವರೂಪವನ್ನು ಇಲ್ಲಿ ತಿಳಿಸಲಾಗಿದೆ. ಮನುಷ್ಯ ಜನ್ಮವು ಭವಾವಳಿ ತೊಡಕುಗಳಲ್ಲಿ ಜೀವಿಗಳು ಸಿಲುಕಿ ಹುಟ್ಟು-ಸಾವುಗಳಲ್ಲಿ ಬದುಕು ಸವೆಸಿ ಜೀವನದಲ್ಲಿ ಎದುರುಗೊಳ್ಳುವ ಅನೇಕ ರೋಗ-ರುಜಿನ ಕಷ್ಟನಷ್ಟಗಳನ್ನು ಅನುಭವಿಸಿ ಅದರಿಂದ ಮುಕ್ತಿಪಡೆಯಲು ಶಿವನ ಮೊರೆಹೋಗುವ ಭಕ್ತ ಪರಂಪರೆಯ ಚಿತ್ರಣದ ಸ್ವರೂಪವನ್ನು ಈ ಕಥೆಯಲ್ಲಿ ತಿಳಿಸಿದ್ದಾನೆ.

ಹರಿಹರನು ಇಂತಹ ಸಂಸಾರ ಬಂಧನದ ಕಷ್ಟ ಕೋಟಲೆಯಿಂದ ನನ್ನನ್ನು ಬಿಡಿಸಿ ಶಿವಭಕ್ತಿಯಲ್ಲಿ ಲೀನವಾಗಿಸೆಂದು ಹಂಪೆಯ ವಿರೂಪಾಕ್ಷನ ಒಲವನ್ನು ಬೇಡುತ್ತಿದ್ದಾನೆ. ಈ ಭಕ್ತಿ ಜನಸಾಮಾನ್ಯರಿಗೂ ಪ್ರೇರೇಪಣೆಯಾಗುವಂತೆ ಶಿವನ ಮೊರೆಹೋಗುವ ಅವಶ್ಯಕತೆಯನ್ನು ಈ ರಗಳೆಯಲ್ಲಿ ಚಿತ್ರಿಸಿದ್ದಾನೆ.

## ೪೭. ಪಂಪಾಕ್ಷೇತ್ರದ ರಗಳೆ :-

ದಕ್ಷಿಣ ಭಾಗದ ಹೇಮಕೂಟ ಪ್ರಾಂತ್ಯದಲ್ಲಿ ಶಿವನ ಆವಾಸಸ್ಥನದಂತೆ ಮೆರೆಯುತ್ತಿರುವ ಪಂಪಾಪುರವು ಶಿವಭಕ್ತರ ಸಮೂಹಗಳಿಂದ ಕೂಡಿದ್ದು ಶಿವಪುರವೆಂದೇ ಖ್ಯಾತಿಯಾಗಿದೆ. ಕಿನ್ನರೇಶ್ವರ, ಜಂಬುಕೇಶ್ವರ, ಸೋಮನಾಥಯ್ಯ ಮತ್ತು ವಾಣಭದ್ರೇಶ್ವರದಿಂದ ಕೂಡಿರುವ ನಾಲ್ಕು ಮಹಾನ್ ಬಾಗಿಲುಗಳು ಪಂಪಾಪುರಕ್ಕಿದೆ. ಇವುಗಳ ಮೂಲಕ ಶಿವಲಿಂಗಗಳ ದರ್ಶನ ಮಾಡಿಕೊಳ್ಳಬಹುದು. ಸೋಮತೀರ್ಥ, ನಾಗತೀರ್ಥ, ಗಜಾಶ್ವತೀರ್ಥಗಳೇ ಮೊದಲಾದ ತೀರ್ಥಕ್ಷೇತ್ರಗಳಿಂದ ಕೂಡಿದ ದಿವ್ಯಕ್ಷೇತ್ರಗಳ ಬೀಡಾಗಿರುವ ಪಂಪಾಪುರ ಭೂಮಿಯ ವರ್ಣರಂಜಿತ ಆಭರಣವೆಂಬಂತಿದೆ. ಪಂಪಾಪುರದ ಹೆಸರನ್ನು ಹೇಳುತ್ತಿದ್ದರೆ ಕಷ್ಟ ನೋವುಗಳೆಲ್ಲಾ ದೂರವಾಗಿ ಪುಣ್ಯ ಮತ್ತು ಯಶಸ್ಸು ಪ್ರಾಪ್ತಿಯಾಗುತ್ತದೆ. ಇಂತಹ ಪಂಪಾಪುರದಲ್ಲಿ ಹಂಪೆಯ ವಿರೂಪಾಕ್ಷ ಸ್ವಾಮಿ ನೆಲೆಸಿದ್ದಾರೆ ಅವನು ವಿಶ್ವಕ್ಕೆ ಗುರುವಾಗಿದ್ದಾನೆ, ಅವನ ಆಶೀರ್ವಾದ ನಮ್ಮೆಲ್ಲರಿಗೂ ಒದಗಲಿ ಎಂಬ ಆಶಯವನ್ನು ಹರಿಹರ ವ್ಯಕ್ತಪಡಿಸಿದ್ದಾನೆ.

## ೪೮. ಜಯಾ ರಗಳೆ :-

ಈ ರಗಳೆಯಲ್ಲಿ ಹರಿಹರನು ಹಂಪೆಯ ಶ್ರೀ ವಿರೂಪಾಕ್ಷನ ಹಲವು ನಾಮಗಳನ್ನು ಕುರಿತು ಸ್ತುತಿಸುತ್ತಾ ನಿನ್ನ ಪಾದಗಳಿಗೆ ನಿತ್ಯವೂ ಜಯವಾಗಲಿ ಎಂದು ಹಾಡುತ್ತಾ ಶಿವಭಕ್ತಿಯಲ್ಲಿ ಲೀನವಾಗಿ ಹೊಗಳುವ ಈ ಕಥೆ ಶಿವಭಕ್ತಿಯನ್ನು ಪ್ರಕಟಪಡಿಸುವುದಾಗಿದೆ.

## ೪೯. ನಮಃ ಶಿವಾಯ ರಗಳೆ :-

ಶಿವನ ವಿವಿಧ ಸ್ವರೂಪವನ್ನು, ಶಿವ ಶಕ್ತಿಯ ಮಹಿಮೆಗಳನ್ನು ಕೊಂಡಾಡುತ್ತಾ ಪ್ರತಿ ಪಾದದ ಕೊನೆಯಲ್ಲಿ ನಮಃ ಶಿವಾಯ ಎಂದು ಕೊನೆಯಾಗುತ್ತದೆ. ಶಿವ ಪೂಜೆಯ ಸಂದರ್ಭದಲ್ಲಿ ಶಿವನ

ನಾಮ ಸ್ತೋತ್ರಗಳಂತೆ ಹೇಳುತ್ತಾ ಕೊನೆಗೆ ನಮಃ ಶಿವಾಯ ಎಂದು ಕೊನೆಗೊಳಿಸಿರಬಹುದು. ಇಲ್ಲಿ ಹರನ ಮಹಿಮೆಯನ್ನು ಹಾಡುತ್ತಾ ಹರಿಹರನು ಈ ರಗಳೆಯನ್ನು ರಚಿಸಿದ್ದಾನೆ.

## ೫೦. ವಿಭೂತಿ ರಗಳೆ :-

ವಿಭೂತಿ ಹರನಿಗೆ ಪ್ರಿಯವಾದುದು. ಶಿವನು ತನ್ನ ಬಲುಶ್ರೇಷ್ಠ ಶಿವಭಕ್ತರು ಶಿವಗಣೈಕ್ಯರಾದ ಮೇಲೆ ಅವರ ದೇಹವನ್ನು ಸುಟ್ಟಿದ ವಿಭೂತಿಯನ್ನು ಹಣೆಯ ಮೇಲೆ ಧರಿಸುವುದು ಪ್ರಿಯವಾಗಿತ್ತು. ಇದನ್ನು ಧರಿಸುವುದು ಶೈವಧರ್ಮದವರಿಗೆ ಒಂದು ಪದ್ಧತಿ. ಅಂತಹ ವಿಭೂತಿಯ ಮಹತ್ವವನ್ನು ಸಾರುವಂತಹ ರಗಳೆ ಇದಾಗಿದೆ. ಹಂಪೆಯ ವಿರೂಪಾಕ್ಷ ಸ್ವಾಮಿಯನ್ನು ಲೋಚನೋದ್ಭವ ರುದ್ರಾಕ್ಷಿ ಎಂದು ಹರಿಹರನು ತನ್ನ ಈ ರಗಳೆಯಲ್ಲಿ ವೈಭವೀಕರಿಸಿದ್ದಾನೆ.

## ೫೧. ಗುಣಸ್ತೋತ್ರ ರಗಳೆ :-

ಶಿವನ ಗುಣಾವಳಗಳನ್ನು ಕೊಂಡಾಡಿರುವ ಈ ರಗಳೆ ಹಂಪೆಯ ವಿರೂಪಾಕ್ಷ ಸ್ವಾಮಿಯ ಗುಣಸ್ತೋತ್ರವನ್ನು ಕುರಿತಾಗಿದೆ.

## ೫೨. ಮಹಿಮಾ ರಗಳೆ :-

ವೇದಶಾಸ್ತ್ರ ಪುರಾಣಗಳ ಕಾಲದಿಂದಲೂ ಹರಿಹರ ಬ್ರಹ್ಮರಲ್ಲಿ ಹರನೇ ಶ್ರೇಷ್ಠನು ಎಂದು ಹೇಳುವ ದೃಷ್ಟಾಂತ ಕಥೆಗಳನ್ನು ಹರಿಹರನು ಇಲ್ಲಿ ಬಣ್ಣಿಸಿದ್ದಾನೆ. ಆ ಮೂಲಕ ಈಶ್ವರನ ಮಹಿಮೆಗಳನ್ನು ಕೊಂಡಾಡಿ ಅವನೇ ಸರ್ವಶ್ರೇಷ್ಠ ಎಂದು ತಿಳಿಸಿ ಅವನ ಕೃಪೆ ನಮಗೊದಗಲಿ ಎಂಬ ಆಶಯ ಎದ್ದುಕಾಣುತ್ತದೆ.

ಹರನು ಉರಿಲಿಂಗ ಸ್ವರೂಪದವನು, ಹರಿ ಬ್ರಹ್ಮರು ಹರನನ್ನು ಕಾಣದೆ ನಿಂತರು. ಹರಿಯೊಡನೆ ಸುಳ್ಳನಾಡಿದನೆಂಬ ಕಾರಣಕ್ಕೆ ಬ್ರಹ್ಮನ ಶಿರಬಡೆದು ಎಲ್ಲೂ ಸ್ಥಾನ ಸಿಗದೆ ಹೋಯಿತು. ಬ್ರಹ್ಮ ಶಿರವನ್ನು ಹಿಡಿದು ಕಾಪಾಲಿ ಲೀಲಾ ಮಾತ್ರದಿಂದ ಭಿಕ್ಷು ವೇಷಧರಿಸಿ ದ್ವಾರಕಾವತಿಗೆ ಬಂದನು. ಹರಿಯು ಬ್ರಹ್ಮ ಕಪಾಲವನ್ನು ಇಳಿಸಲು ಹೋಗಿ ಶಿವನ ಪವಾಡದಿಂದ ಅದು ಸಾಧ್ಯವಾಗದೆ ಹೋಗಿ ಇಬ್ಬರೂ ಶರಣಾದರು. ಆಗ ಈಶ್ವರನೇ ಸಕಲಕ್ಕೆಲ್ಲಾ ಒಡೆಯನಾಗಿದ್ದಾನೆ.

ಶ್ರೀಹರಿಯು ಹರನಾಮ ಸ್ತೋತ್ರಮಾಡುವಾಗ ಬಂದು ಕಮಲದ ಹೂ ಬಾಡಿಹೋಗಿದೆ ಎಂಬ ಕಾರಣಕ್ಕಾಗಿ ತನ್ನ ಕಣ್ಣನ್ನೇ ಅರ್ಪಿಸಲು, ಆ ಶಿವ ಭಕ್ತಿಗೆ ಮೆಚ್ಚಿ, ಶಿವನು ಪ್ರತ್ಯಕ್ಷನಾಗಿ ಶ್ರೀಚಕ್ರವನ್ನು ದಯಪಾಲಿಸಿದನು. ಹರಿಯು ಭಿಕ್ಷುಕ ವೇಷಧರಿಸಿ ಭೃಗುಮುನಿಯ ಹೆಂಡತಿಯ ಬಳಿ ಕಾಮಭಿಕ್ಷೆಯನ್ನು ಬೇಡಿದಾಗ ಅವಳು ಕೋಪಗೊಂಡಾಗ ಅವಳನ್ನು ಇಬ್ಭಾಗ ಮಾಡಿದನು. ಇದರಿಂದ ಭೃಗುಮುನಿಯು ಅವನಿಗೆ ನೀಡಿದ ಶಾಪದ ನಿಮಿತ್ತ ಹತ್ತು ಅವತಾರಗಳನ್ನು ಎತ್ತಿ ಬಂದ ವಿಷ್ಣು ಶಿವಲಿಂಗ ಸ್ಥಾಪಿಸಿ, ವರದಶಂಕರವ್ರತವನ್ನು ಆಚರಿಸಿ ಯಶಸ್ವಿಯೆನಿಸಿಕೊಂಡಿದ್ದಾನೆ. ಜಗಕ್ಕೆ ಸರ್ವತ್ರ ಒಡೆಯನಾಗಿರುವ ಶಿವನನ್ನು ಬಿಟ್ಟು ವಿಷ್ಣುವನ್ನು ಜಗದ್ಕರ್ತ ಎಂದು ಕರೆದ ವ್ಯಾಸನನ್ನು ವಿಷ್ಣುವೇ ಬಂದು ಬೈದು ನನಗೂ ನಿನಗೂ ಲೋಕಕ್ಕೆ ಒಡೆಯ ಶಿವನು ಎಂದು ಸಾರಿದನು. ಶಿವನು ತನ್ನ ಬೆರಳ ತುದಿಯಲ್ಲಿ ವಿಶ್ವರೂಪವನ್ನು ತೋರಿಸಿ ಅದು ನನ್ನ ಭಕ್ತರ ಹೃದಯದಲ್ಲಿದೆ ಎಂದು ತಿಳಿಸಿದನು. ಜಗತ್ತಿನಲ್ಲಿರುವ ದೇವಾನುದೇವತೆಗಳೇ ಈ ಶಿವನಿಗೇ ತಲೆಬಾಗುವರು. ಶಿವನೇ ಜಗತ್ಕರ್ತ, ಸರ್ವಸ್ವವೂ ಶಿವೋಮಯವಾದುದು ಎಂದು ಹರಿಹರ ತಿಳಿಸಿದ್ದಾನೆ. ನಿಜವಾದ ಶಿವಭಕ್ತರಿಗೆ ಬೇಡಿದ್ದನೆಲ್ಲಾ ನೀಡಿದ ಕರುಣಾಹೃದಯಿ ಈ ಶಿವನು. ಅವನಿಗೆ ಭಕ್ತರ ಹೃದಯವೇ ಆವಾಸಸ್ಥಾನ ಶಿವನೇ ಸರ್ವಶ್ರೇಷ್ಠನಾದವನು. ಎಲ್ಲಾ ದೇವರುಗಳಿಗೆ ಅವರ ಶಿರದಲ್ಲಿ ಪೂಜೆ ನಡೆದರೆ, ಶಿವನಿಗೆ ಮಾತ್ರ ಅವನ ಪಾದದಲ್ಲಿ ಪೂಜೆಯನ್ನು ಸ್ವೀಕರಿಸುತ್ತಾನೆ. ಈ ಮಹಾದೇವ ಎಲ್ಲರ ಕಷ್ಟ ದುಃಖ ನೋವು ನಿವಾರಿಸುವ ಮಹಾಮಹಿಮನಾಗಿದ್ದಾನೆ. ಶಿವನ ಹಾರೈಕೆ ನಮ್ಮ ಮೇಲೆ ಸದಾ ಇರಲಿ ಎಂದು ಬೇಡುತ್ತಾ ಶಿವನ ಮಹಿಮೆಯನ್ನು ಕೊಂಡಾಡಿ ಸರ್ವರೂ ಶಿವಭಕ್ತರಾಗಿ ಶೈವಧರ್ಮದ ಪಾಲನೆಗೆ ಹರಿಹರ ಒತ್ತು ನೀಡಿದ್ದಾನೆ.

## ೫೩. <u>ತಿರುನೀಲಕಂಠಪಾಣರ ರಗಳೆ :-</u>

ಚೋಳರಾಜ್ಯದ ಅರ್ಕಪುರವೆಂಬ ಪಟ್ಟಣದಲ್ಲಿ ಸಂಗೀತಗಾನ ವಿದೂಷಿಯಾದ ಭಕ್ತಶ್ರೇಷ್ಠ ತಿರುನೀಲಕಂಠ ಪಾಣರು ಚೋಳರಾಜ್ಯ ಪಾಂಡ್ಯದೇಶ, ಮಧುರಪುರ, ಚಂಪಾಪುರ ಮೊದಲಾದ ಶಿವಕ್ಷೇತ್ರಗಳಲ್ಲಿ ಹೋಗಿ ಹಲವು ರಾಗಗಳನ್ನು ಶಿವನ ಸ್ತೋತ್ರ ಗೀತೆಗಳನ್ನು, ಶಿವಲೀಲೆಗಳನ್ನು ಮುಕ್ತಕಂಠದಿಂದ ಹಾಡುವುದನ್ನೇ ನೇಮವಾಗಿ ಆಚರಿಸುತ್ತಿರುತ್ತಾರೆ. ಶಿವಕ್ಷೇತ್ರದಲ್ಲಿ ಶಿವನ ಗೀತೆಗಳನ್ನು ಹಾಡಿ ಶಿವನನ್ನೇ ಮೆಚ್ಚಿಸಿ ಕೈಲಾಸದಲ್ಲಿ ಗಣಪದವಿಯನ್ನು ಪಡೆದರು. ಸಂಗೀತ ಕಲೆಯಿಂದ ಶಿವನನ್ನು ಒಲಿಸಿಕೊಂಡ ತಿರುನೀಲಕಂಠಪಾಣರು ಶಿವನ ದಾಸನಾಗಿದ್ದಾನೆ.

## ೫೪. ಪಾಂಡ್ಯ ಮಹಾದೇವಿಯರ ರಗಳೆ :-

ಪಾಂಡ್ಯದೇಶದ ರಾಜನಾದ ಪಾಂಡ್ಯನೆಂಬ ರಾಜನ ಧರ್ಮಪತ್ನಿಯಾಗಿದ್ದ ಪಾಂಡ್ಯ ಮಹಾದೇವಿಯು ತನ್ನ ಅನನ್ಯ ಶಿವಭಕ್ತಿಯಿಂದ ಶಿವಶರಣರ ಸೇವಾಕಾರ್ಯ, ದಾನಧರ್ಮಾದಿಗಳಿಂದ ಶಿವನನ್ನು ಒಲಿಸಿಕೊಂಡು ಜೈನಧರ್ಮದಲ್ಲಿ ಹುರುಳಿಲ್ಲ ಎಂಬ ಸತ್ಯವನ್ನು ತನ್ನ ಪತಿ ಪಾಂಡ್ಯನಿಗೆ ಅರ್ಥಮಾಡಿಸಿ ಶೈವದೀಕ್ಷೆಯನ್ನು ಅವನಿಗೆ ನೀಡಿಸಿ ಶಿವಭಕ್ತನನ್ನಾಗಿ ಮಾರ್ಪಡಿಸಿದಳು. ಜೈನಧರ್ಮವನ್ನು ಅಳಿವಿನಂಚಿಗೆ ತಳ್ಳಿ, ಶೈವಧರ್ಮವನ್ನು ಮೆರೆಸಿದ ಈ ಶಿವಭಕ್ತರನ್ನು ಶಿವನು ಕೈಲಾಸದಲ್ಲಿ ರುದ್ರಕನ್ನಿಕೆ ಮತ್ತು ಗಣ ಪದವಿಯನ್ನು ನೀಡಿ ಹರಸಿದನು.

ಪಾಂಡ್ಯ ಮಹಾದೇವಿಯ ಪತಿ ಭಕ್ತಿ ಮತ್ತು ಶಿವಭಕ್ತಿ ಮೆಚ್ಚತಕ್ಕದ್ದು. ಇಲ್ಲಿ ಇವಳು ಓರ್ವ ಶಿವಭಕ್ತೆ, ಆದರ್ಶ ಸ್ತ್ರೀಯಾಗಿಯೂ ವ್ಯಕ್ತವಾಗಿದ್ದಾಳೆ. ಶಿವನ ಮೇಲೆ ಎಲ್ಲಿಲ್ಲದ ಭಕ್ತಿಯೊಂದಿಗೆ ಅಕ್ಕರೆ ಅಭಿಮಾನವೂ ಇವಳಿಗಿದೆ. ಸದಾ ಭಕ್ತಿ ಮತ್ತು ಧರ್ಮ ಕಾರ್ಯದಲ್ಲೇ ತೊಡಗಿದ ಇವಳು ಒಂದು ರಾಜಮನೆತನದ, ಸಮಾಜದ ಮತ್ತು ಶೈವಧರ್ಮದ ಅಭಿವೃದ್ಧಿಗೆ ಪ್ರೇರಣಶಕ್ತಿಯಂತೆ ಮೂಡಿ ಬಂದು ಸ್ತ್ರೀಸಮಾಜದ ಉನ್ನತಿಗೆ ಕೈಗನ್ನಡಿ ಹಿಡಿದ ಸಬಲೆಯಾಗಿದ್ದಾಳೆ.

## ೫೫. ನಮಿನಂದಿಯರ ರಗಳೆ :-

ಚೋಳನಾಡಿನ ಹೇಮಲಾಭಪುರವೆಂಬ ಊರಿನಲ್ಲಿ ಅಗಣ್ಯ ಸಂಪತ್ತು ಮತ್ತು ಧಾರ್ಮಿಕ ಕಲಾ ವೈಭವಗಳಿಂದ ಒಂದು ಸುಂದರವಾದ ಪಟ್ಟಣವಿತ್ತು. ಅಲ್ಲಿ ನಮಿನಂದಿಯೆಂಬ ಬ್ರಾಹ್ಮಣ ಶಿವಭಕ್ತನು ತಿರೂವಾರೂರಿನ ಶಿವಾಲಯಕ್ಕೆ ನಿತ್ಯವೂ ಆಗಮಿಸಿ ಭಕ್ತಿ ಸಂಪನ್ನನಾಗಿ ಪೂಜಾ ಕೈಂಕರ್ಯಗಳನ್ನು ನೆರವೇರಿಸಿಕೊಂಡು ಹೋಗುತ್ತಿದ್ದನು. ಪ್ರತಿ ಬೀದಿಗಳಲ್ಲಿರುವ ಶಿವಾಲಯಗಳಿಗೆ ಹೋಗಿ ಅಲ್ಲಿ ತುಪ್ಪದಿಂದ ಜ್ಯೋತಿಯುರಿಸಿ ಬರುವ ನೇಮವನ್ನು ಆಚರಿಸಿಕೊಂಡು ಬರುತ್ತಿದ್ದನು. ಹೀಗಿರುವಾಗ ಒಮ್ಮೆ ಅರಿಯದೇ ಜೈನರ ಮನೆಗೆ ಹೋಗಿ ಜ್ಯೋತಿಗೆ ತುಪ್ಪಬೇಕೆಂದು ಕೇಳಿದನು. ಅದಕ್ಕೆ ಪ್ರತಿಯಾಗಿ ಶಿವಭಕ್ತನನ್ನು ರೇಗಿ ತುಪ್ಪ ಸಿಗುವುದಿಲ್ಲ, ಭಕ್ತಿಯಿದ್ದರೆ ನೀರಿನಿಂದಲೇ ದೀಪವನ್ನು ಹಚ್ಚು ಎಂದು ಹೀಯಾಳಿಸಿ ಕಳುಹಿಸಿದನು. ಅದರಿಂದ ಮನನೊಂದು ಶಿವಾಲಯಕ್ಕೆ ಆಗಮಿಸಿ ಮನಸ್ಸಿನ ಇಂಗಿತವನ್ನು ಶಿವನ ಮುಂದೆ ನಿವೇದಿಸಿದನು. ಪ್ರತಿಯಾಗಿ ಶಿವನು ಸರೋವರದ ನೀರಿನಿಂದಲೇ ದೀಪವನ್ನು ಹಚ್ಚು ಎಂದು ಆಜ್ಞೆಯಿತ್ತನು. ಸರೋವರದ ನೀರನ್ನು ಕುಡಿಕೆಗಳಲ್ಲಿ ತಂದು ಶಿವಭಕ್ತಿಯ ಮಹಿಮೆಯಿಂದ ನಮಿನಂದಿ ದೀಪವನ್ನು ಬೆಳಗಿಸಿ

ಮಹಾಜ್ಯೋತಿಯ ನಗರವನ್ನಾಗಿಸಿ ಎಲ್ಲರೂ ಭಕ್ತಿಯ ಬೆರಗನ್ನು ವಿಸ್ಮಿತರನ್ನಾಗಿಸುವಂತೆ ಮಾಡಿದನು. ಹೀಗೆ ದಿನನಿತ್ಯ ನೇಮನಿಷ್ಠನಾದ ನಮಿನಂದಿಗೆ ಒಮ್ಮೆ ಶಿವನು ಅಂತ್ಯಜ ಭಕ್ತವೇಷದಲ್ಲಿ ಬಂದು ಶಿವಾಲಯದಲ್ಲಿ ಕುಳಿತನು. ಅವನ ಸೇವೆಯನ್ನು ಮಾಡಿದ ನಮಿನಂದಿ ಕೊನೆಗೆ ಮನೆಯ ಒಳಗೆ ಹೋಗಲು ತಬ್ಬಿಬ್ಬಾಗಿ ಹೊರಗೆ ಕುಳಿತಾಗ ಶಿವನು ಕನಸ್ಸಿನಲ್ಲಿ ಬಂದು ಅವನ ಮನಸ್ಸಿನ ಸಂದೇಹವನ್ನು ಬಿಡಿಸಿದನು. ನಂತರ ಸತಿಯ ಸಮೇತ ಕಮಲಾಲಯಕ್ಕೆ ಬಂದು ಶಿವಪೂಜನಿರತನಾದ ನಮಿನಂದಿಯ ಶ್ರೇಷ್ಠಭಕ್ತಿಯನ್ನು ಮೆಚ್ಚಿದ ಶಿವನು ಗಣಪದವಿಯನ್ನು ನೀಡಿ ಹರಸಿದನು. ಇಲ್ಲಿ ನಮಿನಂದಿಯ ಭಕ್ತಿಯ ಮಹಿಮೆಯಿಂದ ನೀರಿನಿಂದ ದೀಪಬೆಳಗಿಸಿದುದು ಗಮನಾರ್ಹವಾದದು. ಶಿವನ ಪಾದಸೇವಾ ನಿರತರಾದ ನಮಿನಂದಿಯ ಭಕ್ತಿಯು ಅಧಿಕವಾದದು. ಶಿವನು ಅಂತ್ಯಜನ ವೇಷದಲ್ಲಿ ಬಂದು ನಮಿನಂದಿಯಿಂದ ಸೇವೆ ಮಾಡಿಸಿಕೊಂಡು, ನಂತರ ಜಾತಿಬೇಧಗಳನ್ನು ಅಳಿಸಿಹಾಕುವ ಅವಶ್ಯಕತೆಯನ್ನು ಸಾರಿದನು.

### ೫೬. <u>ಕುಲಚ್ಚೆರೆಯರ ರಗಳೆ :-</u>

ಪಾಂಡ್ಯರಾಜರ ಸಾಮ್ರಾಜ್ಯದಲ್ಲಿ ಸೌರಭಪುರವೆಂಬ ಊರಿನಲ್ಲಿ ಸರ್ವಜನರು ಭಕ್ತಿಯ ಸುಖದಲ್ಲಿ ಮುಳುಗಿದ್ದು ಸಕಲ ಗುಣಸಂಪನ್ನರಾಗಿದ್ದರು. ಐಶ್ವರ್ಯ, ನೆಮ್ಮದಿ, ಸುಖ, ಸಂತೋಷ ಅಲ್ಲಿ ರಾರಾಜಿಸುತ್ತಿತ್ತು. ಇಂತಹವರ ಮಧ್ಯೆ ಕುಲಚ್ಚೆರೆಯೆಂಬ ಶಿವಭಕ್ತನು ಶಿವ ಭಕ್ತರ ಅರ್ಚನೆಮಾಡುತ್ತಾ ಅವರನ್ನು ವಂದಿಸುವುದೇ ಅವನ ನೇಮವಾಗಿತ್ತು. ಭಸ್ಮಧಾರಿ ಶಿವಭಕ್ತರನ್ನು ಕಂಡರೆ ಸಾಕ್ಷಾತ್ ಈಶ್ವರನೆಂದೇ ಭಾವಿಸುತ್ತಿದ್ದು ಅವರನ್ನು ಗೌರವಿಸುತ್ತಿದ್ದನು. ತನ್ನ ಊರಿನಲ್ಲಿ ಜೈನರ ಸದ್ದಡಗಿಸಿ ಶೈವಧರ್ಮವನ್ನು ಮೆರೆಸುತ್ತಾ ಶಿವಶರಣರ ಸೇವೆ ಮಾಡುತ್ತಿದ್ದ. ಇವನು ಶಿವನನ್ನು ತನ್ನ ಒಡೆಯನೆಂದು ಭಾವಿಸಿ ಸದಾ ಅವನ ಧ್ಯಾನದಲ್ಲೇ ಮುಳುಗೇಳುತ್ತಿದ್ದನು. ಇವನ ಪ್ರತಿಫಲಾಪೇಕ್ಷೆ ಇರದ ಶಿವಭಕ್ತಿಗೆ ಶಿವನು ಒಲಿದು ಗಣಪದವಿ ನೀಡಿ ಹರಸಿದನು.

### ೫೭. <u>ಮೊನೆಯಾಂಡವರ ರಗಳೆ :-</u>

ಚೋಳದೇಶದ ಶಿವಪುರದಲ್ಲಿ ಶೂದ್ರನಾದ ಮೊನೆಯಾಂಡವರನೆಂಬ ಶಿವಭಕ್ತನಿದ್ದನು. ಅವನು ನಿತ್ಯ ಶಿವಪಾದಸೇವೆ, ಶಿವಧ್ಯಾನ ಮತ್ತು ಶಿವಶರಣರ ಸೇವೆಯಲ್ಲಿ ತಲ್ಲೀನನಾಗಿದ್ದನು. ಇವನು ನೋಯಿಪಾಸೆ ಎಂಬ ಕತ್ತಿಯನ್ನು ಸಂಪಾದಿಸಿಕೊಂಡು ಭವಿಗಳನ್ನು ಇರಿಯುತ್ತಿದ್ದನು. ಏಕೆಂದರೆ ಇವನಿಗೆ ಸತ್ಯವೇ ಸಂಪತ್ತನ್ನಾಗಿ, ಸಮತೆಯೆ ಈಶ್ವರನನ್ನಾಗಿ, ಸತ್ಯಶರಣರ ಪಾದಸೇವೆ ಭುಜಬಲ

ಮತ್ತು ಧರ್ಮವೇ ಭೂಬಲವನ್ನಾಗಿ ಸ್ವೀಕರಿಸಿದ್ದನು. ಇವನು ಕಾರ್ಯಗಳನ್ನು ಕೇವಲ ಅಧರ್ಮಿಗಳ ವಿರುದ್ಧ ನಡೆಸುತ್ತಿದ್ದನು, ಧರ್ಮಯುತವೆಂದು ಪರಿಗಣಿಸಿ ಶಿವನೂ ಇದಕ್ಕೆ ಒಪ್ಪಿಗೆಯನ್ನು ಸೂಚಿಸಿದ್ದನು. ವೈರಿಗಳು ಮತ್ತು ಭವಿಗಳನ್ನು ಇರಿಯುವುದಕ್ಕೆ ಇವನಿಗೆ ಹಣವು ಪ್ರತಿಫಲರೂಪದಲ್ಲಿ ದೊರಕುತ್ತಿತ್ತು. ಆ ಹಣವನ್ನು ಶಿವಭಕ್ತರ ಸೇವೆಗಾಗಿ ಬಳಸಿಕೊಳ್ಳುತ್ತಾ ಶಿವ ಪೂಜೆಯಲ್ಲಿ ಧರ್ಮನಿರತನಾಗಿದ್ದನು. ಒಮ್ಮೆ ಶಿವನು ಇವನ ಪರೀಕ್ಷೆಗಾಗಿ ಮಾಸಾಳೂ ವೀರ ವೇಷಹಾಕಿಕೊಂಡು ತನ್ನ ಶೂರತನವನ್ನು ಊರಲ್ಲೆಲ್ಲ ಬಣ್ಣಿಸಿಕೊಂಡು ಮೊನೆಯಿಡುವರನಿಗಾಗಿ ಕಾಯುತ್ತಿದ್ದಾನೆ ಎಂದು ವೀರಾವೇಷದಿಂದ ನುಡಿದನು. ಸೇವಕನಿಂದ ಈ ಶೂರನ ವಿಷಯ ತಿಳಿದು ಅವನನ್ನು ಇರಿಯಲು ಹೋದನು. ಆದರೆ ಅವನು ಭಸ್ಮಧಾರಿ ಶಿವಭಕ್ತನಾದ್ದರಿಂದ ಸಾಧ್ಯವಿಲ್ಲವೆಂದು ಹೇಳಿ ಅಭಿಮಾನದಿಂದ ಆ ವೀರನನ್ನು ಕಂಡನು. ಆದರೆ ಆ ವೀರನು ನಿನ್ನನ್ನು ಕೊಲ್ಲುವುದಕ್ಕೆ ನಾನು ಹಣವನ್ನು ಪಡೆದಿರುವುದಾಗಿ ತಿಳಿಸಿದಾಗ, ನಿನಗೆ ಶ್ರಮದ ಅಗತ್ಯವಿಲ್ಲ ತನ್ನ ಕತ್ತನ್ನು ತಾನೇ ಕತ್ತರಿಸಿಕೊಳ್ಳುತ್ತಾನೆ. ಆಗ ಶಿವನು ಅವನ ಶಿವಭಕ್ತಿಗೆ ಮೆಚ್ಚಿ, ಕೈಲಾಸಕ್ಕೆ ಕರೆದೊಯ್ದು ಗಣಪದವಿಯನ್ನು ನೀಡಿ ಹರಸಿದನು. ಶಿವಭಕ್ತನು ಮಾಡುವ ಯಾವುದೇ ಅಧಮ ಕಾರ್ಯಗಳು ಶಿವನ ಮತ್ತು ಭಕ್ತರ ಸೇವೆಗಾಗಿ ಬಳಸಿಕೊಳ್ಳುವ ನಿಟ್ಟಿನಿಂದ ಅದು ಅಪರಾಧವಲ್ಲವೆಂದೇ ಪರಿಗಣಿಸಿ ತನ್ನ ಭಕ್ತರು ಭಕ್ತಿಯಿಂದ ಅನುಸರಿಸುವ ಮಾರ್ಗವನ್ನು ಪೋಷಿಸುವ ಶಿವನು ಅಮರ ಹಿತಚಿಂತಕನಂತೆ ಚಿತ್ರಿಸಿರುವ ಹರಿಹರನು ಏಕನಿಷ್ಠ ಮನೋಭಾವದವನು. ಶಿವಭಕ್ತರದೇ ಒಂದು ಕುಲವೆಂಬಂತೆ ಅಲ್ಲಿ ಅವರಿಗೆ ಶಿವನೇ ಒಡೆಯ, ಆ ಧರ್ಮರಕ್ಷಣೆ ಮತ್ತು ಶೈವಧರ್ಮದ ಅಭಿವೃದ್ಧಿಗೆ ಅಗತ್ಯವಾದ ದಾರಿಯನ್ನು ನೇಮದ ಹೆಸರಿನಲ್ಲಿ ಧರ್ಮಬದ್ಧವಾಗಿ ಮಾಡುವ ಶಿವಭಕ್ತರು ಹೃದಯವಂತರೆಂಬಂತೆ ಹರಿಹರನ ಭಾವ.

### ೫೮. <u>ಅಪ್ಪೂತಿ ಅಡಿಯರ ರಗಳೆ :-</u>

ಶ್ರೀ ತಿಂಗಳು ಎಂಬ ಹೆಸರಿನ ಪಟ್ಟಣದಲ್ಲಿ ಶಿವನ ಆಶೀರ್ವಾದದ ಬಲದಿಂದ ಒಂದು ಸಂಪನ್ನವಾದ ಪರಿಸರ ತೋಟ, ಅನ್ನಛತ್ರ, ದಾನಧರ್ಮಾದಿ ಎಲ್ಲಾ ಕಾರ್ಯಗಳು ಸುಸೂತ್ರವಾಗಿ ನಡೆಯುತ್ತಿತ್ತು. ಅಲ್ಲಿ ಅಪ್ಪೂತಿ ಅಡಿಯರನೆಂಬ ಓರ್ವ ಶಿವಭಕ್ತ ತನ್ನ ಹೆಂಡತಿ ಮಗನೊಂದಿಗೆ ವಾಸವಿದ್ದನು. ಅವನು ತಾನು ಮಾಡುವ ದಾನ ಕಾರ್ಯದ ಛತ್ರದ ಹೆಸರನ್ನೇ ವಾಗೀಶನೆಂದು ಎಲ್ಲೆಡೆ ಬರೆದು ಸಂಭ್ರಮಿಸಿದ್ದನು. ಶಿವಭಕ್ತ ವಾಗೀಶನ ಆರಾಧಕನಾಗಿದ್ದ ಅಪ್ಪೂತಿ ಅಡಿಯರನು ಸದಾ ಶಿವಪೂಜೆ, ಧ್ಯಾನ ನಿರತನಾಗಿದ್ದನು. ಒಮ್ಮೆ ಶಿವಾಲಯಗಳ ದರ್ಶನದ ಬಳಿಕ ವಾಗೀಶನು

ಇಲ್ಲಿಗೆ ಬಂದು ತನ್ನ ಹೆಸರುಗಳು ಇಷ್ಟು ಪರಿಯಲ್ಲಿ ಬರೆಸಿದವನಾರು ಎಂಬ ಸಂಗತಿಯನ್ನು ತಿಳಿದುಕೊಂಡು ಅಪ್ಪೂತಿ ಅಡಿಯರನ್ನು ಕಾಣಲು ಹೋದನು. ಅಲ್ಲಿ ಜೈನರ ಸಿದ್ಧಾಂತವನ್ನು ನಾಶಮಾಡಿ ವೀರಶೈವ ಧರ್ಮವನ್ನು ಮೆರೆದ ವಾಗೀಶರನ್ನು ಕೊಂಡಾಡಿದ ಅಪ್ಪೂತಿ ಅಡಿಯರ ಗುರುಭಕ್ತಿಗೆ ಮೆಚ್ಚಿ ಅವರೊಂದಿಗೆ ನಿತ್ಯ ದಾಸೋಹಕ್ಕೆ ಒಪ್ಪಿಕೂತನು. ಇತ್ತ ವಿವಿಧ ಭಕ್ಷ್ಯಭೋಜನಗಳನ್ನು ಸಿದ್ಧಪಡಿಸಿದ ಹೆಂಡತಿಯು ಒಂದೆಡೆ ಸಂಭ್ರಮಿಸುತ್ತಿರಲು ಅತ್ತ ಬಾಳೆಎಲೆಯನ್ನು ತರಲು ಹೋದ ಮಗ ಹಾವಿನ ಕಡಿತಕ್ಕೊಳಗಾಗಿ ತೀರಿಹೋದ ಸಂಗತಿಯನ್ನು ತಡೆಯಲಾರದೆ ದಂಪತಿಗಳು ತಾವೇ ಅನುಭವಿಸಿ, ಗುರುಗಳಿಗೆ ಸುದ್ದಿ ಮುಟ್ಟಿದರೆ ಉಣಲಾರರು ಎಂದು ನೋವನ್ನು ನುಂಗಿದರು. ಅವರ ಮನಸ್ಥಿತಿಯನ್ನು ಅರಿತು ನಡೆದ ಸಂಗತಿಯನ್ನು ತಿಳಿದು ತಮ್ಮ ದೈವಶಕ್ತಿ ನೆರವಿನಿಂದ ಸತ್ತ ಹುಡುಗನನ್ನು ಎಬ್ಬರಿಸಿದರು. ಮತ್ತೆ ಸ್ಥಳ ಶುಚಿಗೊಳಿಸಿ ಎಲ್ಲರೂ ಶಿವನ ನಾಮ ಸ್ಮರಣೆಯೊಂದಿಗೆ ಶಿವನ ಪ್ರಸಾದವಾಗಿ ಭೋಜನವನ್ನು ಮಾಡಿದರು. ಹೀಗೆ ವಾಗೀಶನ ಭಕ್ತಿಯಲ್ಲೇ ಸದಾ ಕಾಲ ಕಳೆದ ಅಪ್ಪೂತಿ ಅಡಿಯರ ಶಿವಭಕ್ತಿಗೆ ಮೆಚ್ಚಿದ ಶಿವನು ಗಣಪದವಿ ನೀಡಿ ಹರಸಿದನು. ಪವಾಡಗಳ ಹೆಸರಿನಲ್ಲಿ ಶಿವಭಕ್ತರು ಮನಸ್ಸನ್ನೇ ಗೆಲ್ಲುತ್ತಾರೆ. ಎಲ್ಲೆಡೆ ಶೈವಧರ್ಮದ ಅಭಿಯಾನ ಮತ್ತು ಶಿವಧ್ಯಾನದಿಂದ ಶಿವನಿಗೆ ಅಪರಿಮಿತ ಸಂತಸವುಂಟಾಗಿ ತನ್ನತ್ತ ಅವರನ್ನು ಕರೆಸಿಕೊಂಡು ಶಿವದೀಕ್ಷೆ ನೀಡುವ ಪರಿ ವಿಶೇಷವಾದುದು.

೫೯. **ಚೇರಮನಾಯನಾರ-ರಗಳೆ:-**

ಕೇರಳ ರಾಜ್ಯ ಸರ್ವ ಸುಖ ಸಂಪತ್ತು ಮತ್ತು ಧರ್ಮ ಬದ್ಧವಾಗಿದ್ದ ರಾಜ್ಯವಾಗಿತ್ತು. ಅಲ್ಲಿ ಸರ್ವವೂ ಶಿವೋಮಯವೇ ಆಗಿದ್ದರಿಂದ ಅದೊಂದು ಶಿವಪುರವೇ ಎಂದು ಹೆಸರಾಗಿತ್ತು. ಆ ರಾಜ್ಯಕ್ಕೆ ಚೇರಮಹಾರಾಜನು ಧರ್ಮದಿಂದ ರಾಜ್ಯನಡೆಸಿ ಕೊನೆಗೆ ಶಿವನಾಜ್ಞೆಯಿಂದ ತಪಸ್ಸಿಗೆ ತೆರಳಿದನು. ಆಗ ರಾಜ್ಯಕ್ಕೆ ರಾಜನಿಲ್ಲದಿರುವ ಸಂದರ್ಭವುಂಟಾಗಿ ಶಿವಭಕ್ತನಾದ ಗೋದನು ಶಿವನಪ್ಪಣೆಯಂತೆ ರಾಜ್ಯ ಸ್ವೀಕರಿಸಿ ಚೇರಮ ಅರಸನಾಗಿ ಸುಜ್ಞಾನ, ಸುಭಕ್ತಿ ಮತ್ತು ಸುಸೂತ್ರವಾಗಿ ರಾಜ್ಯವನ್ನು ಆಳ್ವಿಕೆ ನಡೆಸುತ್ತಾ ಬಂದನು. ಅವನ ರಾಜ್ಯದಲ್ಲಿ ಶಿವಭಕ್ತರು ಕೇಳಿ ಬಂದದ್ದೆಲ್ಲವನ್ನು ದಾನಮಾಡಿ, ಶಿವಪೂಜೆ, ಧ್ಯಾನ ಶಿವಗೋಷ್ಠಿಗಳನ್ನು ಯಥಾವತ್ತಾಗಿ ಸಾಂಗವಾಗಿ ನಡೆಸುತ್ತಾ ಬಂದ ಚೇರಮರಾಜ ಸದಾ ಶಿವಧ್ಯಾನ ಮಾಡುವಾಗ ಶಿವನ ಗೆಜ್ಜೆಯನಾದ ಕೇಳಿ ಬರುತ್ತಿತ್ತು. ಆದರೆ ಒಮ್ಮೆ ಆ ನಾದವುಂಟಾಗಲಿಲ್ಲ ಎಂದು ಹೆದರಿ ಶಿವನನ್ನು ಧೈರ್ಯದಿಂದ ಪ್ರಾರ್ಥಿಸಿ ಕೇಳಿದಾಗ ತಿರುವಾರೂರಿನ ನಂಬಿಯ ಹಾಡಿನ

ನಾದನರ್ತನದಲ್ಲಿದ್ದರಿಂದ ತಡವಾಯಿತೆಂದು ತಿಳಿಸಿದನು. ನಂತರ ನಂಬಿಯನ್ನು ನೋಡಲು ಪೊನ್ನಾಂಬಲಕ್ಕೆ ತೆರಳಿದ ಚೇರಮರಾಜನನ್ನು ಪ್ರೀತಿಯಿಂದ ಕರೆದುಕೊಂಡು ಶಿವಪೂಜೆಯಲ್ಲಿ ಭಾಗಿಯಾಗಿ ಸವಿಯೂಟವನ್ನು ಅವನೊಂದಿಗೆ ಸ್ವೀಕಾರ ಮಾಡಿದನು. ನಂತರ ಕಾವೇರಿ ತೀರವನ್ನು ದಾಟಿ ಆ ಊರಿನ ಎಲ್ಲಾ ಪ್ರಸಿದ್ಧ ಶಿವಕ್ಷೇತ್ರಗಳನ್ನು ಭೇಟಿಮಾಡಿ ಶಿವಪೂಜೆ, ಧ್ಯಾನ, ಹಾಡು ನಾದ ನರ್ತನಾದಿಗಳಿಂದ ಶಿವನನ್ನು ಮತ್ತು ಆ ಊರಿನ ಶಿವಭಕ್ತರನ್ನು ತೃಪ್ತಿಪಡಿಸಿದ ಚೇರಮ ಮತ್ತು ನಂಬಿಯ ಪೂಜಾ ಕಾರ್ಯ ಮನಮುಟ್ಟುವಂತಿತ್ತು. ನಂಬಿಯು ನನಗಿನ್ನು ಈ ಭೂಲೋಕಸಾಕೆಂದು ಕೈಲಾಸಕ್ಕೆ ಚೇರಮನೊಂದಿಗೆ ತೆರಳುತ್ತಾನೆ. ನಂಬಿಯನ್ನು ಮಾತ್ರ ಚೇರಮನನ್ನು ತಡೆದು ಪ್ರಶ್ನಿಸುತ್ತಾನೆ. ಶಿವನು ಚೇರಮನನ್ನು ನಿನಗೆ ಕೈಲಾಸದ ಪ್ರವೇಶವಿದೆಯೆಂದು ನಾನು ನಿನಗೆ ತಿಳಿಸಿಲ್ಲವಲ್ಲ ಎಂದು ಕೇಳಿದಾಗ ಶಿವಸ್ತುತಿಯನ್ನು ಹಾಡಿ ಹೊಗಳಿ ಶಿವನನ್ನು ಸಂತೋಷಪಡಿಸಿ ಮತ್ತು ನಂಬಿಯಿಂದ ಗುರುದೀಕ್ಷೆಯನ್ನು ಪಡೆದುಕೊಂಡು ಕೈಲಾಸ ಪ್ರವೇಶಿಸಿ ಗಣಪದವಿಯನ್ನು ಸ್ವೀಕರಿಸುತ್ತಾನೆ. ಹೂವಿನಿಂದ ನಾರು ಸ್ವರ್ಗವೆಂಬಂತೆ ನಂಬಿಯ ಜೊತೆಗಿನ ಸ್ನೇಹ ಮತ್ತು ಒಲವಿನ ಶಿವಭಕ್ತಿಯಿಂದ ಚೇರಮನು ಶಿವದೀಕ್ಷೆಯನ್ನು ಪಡೆದುಕೊಂಡು ಸಂತೋಷಿಸುತ್ತಾನೆ.

### ೬೦. <u>ಏನಾದಿನಾಥನ ರಗಳೆ:-</u>

ಚೋಳ ದೇಶದಲ್ಲಿ ರಾಜಾಧಿರಾಜನೆಂದೆಂಬ ಪಟ್ಟಣದಲ್ಲಿ ಚೋಳನು ಸಾಮ್ರಾಜ್ಯಾಧಿಪತಿಯಾಗಿ ಸುವ್ಯವಸ್ಥೆಯಿಂದ ರಾಜ್ಯವನ್ನು ನಿರ್ವಹಿಸಿಕೊಂಡಿದ್ದನು. ಆ ಊರಿಗೆ ಏನಾದಿನಾಥನೆಂಬ ಓರ್ವ ಶಿವಭಕ್ತನು ಆಗಮಿಸಿದನು. ತಾನು ಶಿವಭಕ್ತರ ಸೇವೆ ಮಾಡಿದರೆ ತನ್ನ ಶಿವನಿಗೆ ಸಂತಸವುಂಟಾಗಿ, ನಲಿದಾಡುವನು ಎಂದು ತಿಳಿದುಕೊಂಡು ಸದಾ ಭಕ್ತರ ಪರವಾಗಿ ಶಿವಭಕ್ತರಲ್ಲದ ಭವಿಗಳನ್ನು ದಂಡಿಸುವವನಾಗಿದ್ದನು. ಹೀಗಿರುವಾಗ ಶಿವಭಕ್ತರ ಸೇವೆಗಾಗಿ ಸಂಪತ್ತಿನ ಅವಶ್ಯಕತೆಗಾಗಿ ತಾನೇನುಮಾಡಬೇಕೆಂದಿರುವಾಗ ವೀರಭದ್ರಸ್ವಾಮಿ ಕನಸಿನಲ್ಲಿ ಬಂದು ಕತ್ತಿಯನ್ನು ನೀಡಿ ಭವಿಯಾದ ವೀರರೊಡನೆ ಹೋರಾಡಿ ಅಲ್ಲಿ ಗಳಿಸಿದ ಸಂಪತ್ತನ್ನು ಶಿವಭಕ್ತರ ಸೇವೆಗಾಗಿ ವಿನಿಯೋಗಿಸಲು ಆಜ್ಞೆಮಾಡಿ ಹೋದನು. ಅದರಂತೆ ಪಡೆದ ಆ ಕತ್ತಿಯಿಂದ ಶೂರಾಧಿಶೂರರನ್ನೆಲ್ಲ ಸೋಲಿಸಿ ಗಳಿಸಿದ ಸಂಪತ್ತಿನಿಂದ ಶಿವಶರಣರನ್ನು ಉಪಚರಿಸಿ ಅವರ ಸಂತಸದಲ್ಲಿಯೇ ತೃಪ್ತಿಯನ್ನು ಕಾಣುತ್ತಿದ್ದನು. ಒಮ್ಮೆ ಇವನ ಶೌರ್ಯಕ್ಕೆ ತನ್ನ ಹೋರಾಟದಲ್ಲಿ ಕೊಂದು ವೀರಾಧಿವೀರ ಎನಿಸಿಕೊಂಡ ಏನಾದಿನಾಥನ ಮುಂದೆ ಶೂರರೇ ಇಲ್ಲರೆನಿಸಿಕೊಂಡರು.

ಆಗ ಒಬ್ಬ ಗುರು ನಾನು ನಿನ್ನ ಸೋಲಿಸುವೆನೆಂದು ಯುದ್ಧ ಮಾಡಿ ಏನಾದಿನಾಥನಿಂದ ಹತನಾದನು. ನಂತರ ಸತ್ತ ಗುರುವಿನ ಹೆಂಡತಿ ಕೋಪದಿಂದ ತನ್ನ ಮಗನಿಗೆ ಶಿವಭಕ್ತನ ವೇಷಧಾರಿಯಂತೆ ಆಗಮಿಸಲು ಹೇಳಿ ಮೋಸದಿಂದ ಅವನನ್ನು ಇರಿಯುವ ಉಪಾಯನೀಡಿದಳು. ಅದರಂತೆ ಮೈತುಂಬ ವಿಭೂತಿಯನ್ನು ಧರಿಸಿದ ಶಿವಭಕ್ತನ ವಿರುದ್ಧ ಹೋರಾಡೆನು ಎಂದು ಹೇಳಿದರು. ಆದರೆ ತನ್ನ ಆ ವೇಷಧಾರಿ ವೀರನು ಏನಾದಿನಾಥನಿಗೆ ಹಲವು ಬಾರಿ ಇರಿತಗೊಳಿಸಿದನು. ಆಗ ಶಿವನು ಪಾರ್ವತಿಯೊಂದಿಗೆ ಪ್ರತ್ಯಕ್ಷನಾಗಿ ಏನಾದಿನಾಥನನ್ನು ಹರಸಿದಾಗ ತನ್ನ ಪಾಪಕೃತ್ಯದ ಅರಿವಾದ ಆ ವೇಷಧಾರಿ ಪಾತಕಿ ಗಾಬರಿಯಾದನು. ಸಜ್ಜನರ ಸಹವಾಸ ಹೆಜ್ಜೇನು ಸವಿದಂತೆ ಎಂಬ ಸರ್ವಜ್ಞನ ನುಡಿಯಂತೆ ಇಲ್ಲಿ ಪಾಪಿಯು ಏನಾದಿನಾಥನ ಹಿತಭಕ್ತಿಯ ಸದ್ಗುಣಗಳಿಂದ ಶಿವನನ್ನು ಪ್ರತ್ಯಕ್ಷವಾಗಿಸಿಕೊಂಡನು. ಏನಾಧಿನಾಥನ ಶಿವಭಕ್ತಿಗೆ ಸೋತು ತಾನು ಶಿವಶರಣನಾಗುವನು. ಏನಾದಿನಾಥನ ಶಿವಭಕ್ತಿ ಮತ್ತು ನೇಮನಿಷ್ಠೆಗೆ ಒಲಿದ ಶಿವನು ತನ್ನ ಭಕ್ತನ ಸಾಹಸ ಕಾರ್ಯಗಳನ್ನು ಹೊಗಳಿ ಗಣಪದವಿಯನ್ನು ನೀಡಿ ಹರಸಿದನು. ಶಿವನೇ ಸರ್ವಸ್ವ, ಶಿವಭಕ್ತರ ಒಲುಮೆಯ ಸಂಪಾದನೆಯೇ ಪರಮಸಂಪತ್ತು ಎಂದು ನಂಬಿದ್ದ ಏನಾಧಿನಾಥನ ಭಕ್ತಿನಿಷ್ಠೆಗೆ ಶಿವನ ಸಾಕ್ಷಾತ್ಕಾರ ಲಭಿತವಾಗುತ್ತದೆ.

## ೬೧. <u>ಇರಿಭಕ್ತಯ್ಯನ ರಗಳೆ:-</u>

ಚೋಳದೇಶದ ಕರವೂರ ಎಂಬ ಊರಿನಲ್ಲಿ ಹಗಲ್ಚೋಳನೆಂಬ ದೊರೆ ಸಾಮ್ರಾಜ್ಯವನ್ನು ವೈಭವದಿಂದ ನಡೆಸುತ್ತಿದ್ದನು. ಆ ಊರಿನಲ್ಲಿ ಶಿವನನ್ನು ಪೂಜಿಸುವ ಏಕವ್ರತನಿಷ್ಠೆಯ ಇರಿಭಕ್ತನೆಂಬ ಶಿವಭಕ್ತನಿದ್ದನು. ಶಿವನಿಂದಕರನ್ನು ಸಹಿಸದ ಇವನು ಅಂತಹವರನ್ನು ಸಂಪೂರ್ಣ ನಾಶಮಾಡುವ ವ್ರತನಿಷ್ಠೆಯನ್ನು ಸ್ವೀಕರಿಸಿದ್ದನು. ಅದಕ್ಕಾಗಿ ತೆಳುಗಾತ್ರದ, ಮೊನೆಯಾದ ಮತ್ತು ಪ್ರಕಾಶಿಸುವ ಕೊಡಲಿಯನ್ನು ಸಂಪಾದಿಸಿಕೊಂಡಿದ್ದನು. ಒಮ್ಮೆ ಶಿವಪೂಜೆ ಮುಗಿಸಿಕೊಂಡು ಮನೆಗೆ ತೆರಳುತ್ತಿದ್ದ ಇವನ ಎದುರು ನಾಮಧಾರಿ ವಿಷ್ಣುವಿನ ಭಕ್ತ ಎದುರಾದನು. ಅವನಿಗೆ ನಿನ್ನ ನಾಮವನ್ನು ಅಳಿಸಿಕೊಂಡು ವಿಭೂತಿಯನ್ನು ಧರಿಸಿಕೊಳ್ಳಲು ಒತ್ತಾಯಿಸಿ, ಶಿವಭಕ್ತನಾಗಲು ಸೂಚಿಸಿದನು, ಅದಕ್ಕವನು ಒಪ್ಪದಿದ್ದ ಕಾರಣ ಅವನ ತಲೆ ಕಡಿದು ಹಾಕಿದನು. ರಾಜನ ಬಳಿ ಈ ದೂರುಹೋದಾಗ, ಎಲ್ಲವನ್ನೂ ಧೈರ್ಯದಿಂದಲೇ ವಿವರಿಸಿದನು. ಅವನು ಶಿವಭಕ್ತನಾದರೆ ಅವನ ಪ್ರಾಣ ಮತ್ತೆ ಬರಿಸುತ್ತೀಯಾ ಎಂಬ ರಾಜನ ಮಾತಿಗೆ ಅವನಷ್ಟೇ ಅಲ್ಲ, ಅವನ ಇಡೀ ಬಂಧು-ಬಳಗ ಒಪ್ಪಿ ಶಿವಭಕ್ತರಾಗುವುದನ್ನು ಖಚಿತಪಡಿಸಿಕೊಂಡು ಅವನ ಜೀವ ಬರಿಸಿದನು. ಇಲ್ಲಿ ಶೈವ

ಮತ್ತು ವೈಷ್ಣವ ಧರ್ಮದ ಸಂಘರ್ಷದ ಸ್ವರೂಪವನ್ನು ಎತ್ತಿಹಿಡಿದು ಶೈವಧರ್ಮದ ಗೆಲುವನ್ನು ಸಾಧಿಸಿತೋರಿಸುವ ಮೂಲಕ ಶೈವರ ಮೇಲುಗೈಯನ್ನು ಮಾಡಿ ವೈಷ್ಣವರ ಅಪಜಯ, ಸೋಲೊಪ್ಪಿಕೊಳ್ಳುವ ಪರಿಯನ್ನು ತಿಳಿಸುವುದರೊಂದಿಗೆ ಒಮ್ಮೊಮ್ಮೆ ಎಂಥ ಸೋಜಿಗವೆನಿಸುವಂತಹ ಪ್ರಸಂಗಗಳನ್ನು ಪವಾಡಗಳ ರೀತಿಯಲ್ಲಿ ಚಿತ್ರಿಸಿದ್ದಾನೆ.

ಒಮ್ಮೆ ದಾರಿಯಲ್ಲಿ ಆನೆಯೊಂದು ಎಲ್ಲರ ಮೇಲೆ ಧಾಳಿಯಿಟ್ಟು ಶಿವನಿಗೆ ಸಲ್ಲಿಸಬೇಕಾದ ಪೂಜಾಪರಿಕರಗಳನ್ನು ನಾಶಪಡಿಸುತ್ತಿತ್ತು. ಅದರಿಂದ ಪುರೋಹಿತನೊಬ್ಬನು ಶಿವಧಾ ಎಂದು ಇರಿಭಕ್ತಯ್ಯನನ್ನು ಜೋರಾಗಿ ಕೂಗಿಕರೆದನು. ಅವನ ಸ್ಮರಣೆಗೆ ಓಗೊಟ್ಟ ಇರಿಭಕ್ತನು ವೇಗವಾಗಿ ಆಗಮಿಸಿ ಆನೆಯ ತಲೆಕಡಿದನು. ರಾಜನ ಬಳಿ ಈ ದೂರು ಹೋದಾಗ ತಪ್ಪು ಆನೆಯದಲ್ಲ, ನನ್ನದೆಂದು ತನ್ನ ತಲೆ ಕಡಿಯಬೇಕೆಂದು ಇರಿಭಕ್ತನನ್ನು ಕೇಳಿಕೊಳ್ಳುತ್ತಾನೆ. ಇದರಿಂದ ನಿರಪರಾಧಿಯಾದ ಆನೆಗೆ ಶಿಕ್ಷಿಸಿದೆನೆ ಎಂದು ಪೇಚಾಡಿ ತನ್ನ ಕತ್ತನ್ನು ತಾನೇ ಕತ್ತರಿಸಿಕೊಳ್ಳಲು ಮುಂದಾದಾಗ ಶಿವನು ಪ್ರತ್ಯಕ್ಷನಾಗಿ ಅವನ ಶಿವಭಕ್ತಿಯನ್ನು ಮೆಚ್ಚಿ ಕೈಲಾಸದಲ್ಲಿ ಗಣಪದವಿ ನೀಡಿ ಹರಸಿದನು.

ಇಲ್ಲಿ ಭಕ್ತಿಯ ಮೈವೆತ್ತ ಇರಿಭಕ್ತನು, ಶಿವನನ್ನು ತನ್ನ ಒಲವಿನ ಆರಾಧಕನೆಂದು ಪರಿಭಾವಿಸಿ, ನಾನಾವಿಧದಲ್ಲಿ ಅವನನ್ನು ಪೂಜಿಸುವುದರೊಂದಿಗೆ ಭವಿಗಳನ್ನು ದಂಡಿಸುವ ಕಾರ್ಯವನ್ನು ಮಾಡುತ್ತಿದ್ದನು. ಎಲ್ಲರೂ ಶಿವಭಕ್ತರೇ ಆಗಬೇಕೆಂದು ಬಯಸುವ ಅವನ ಮನದಿಚ್ಛೆ ಸರಿಯೇ? ತಪ್ಪೇ? ಎಂದು ಯೋಚಿಸದ ಏಕನಿಷ್ಠ ಮನೋಭಾವದವನು. ಅದನ್ನು ಬೆಂಬಲಿಸುವಂತೆ ಶಿವನೂ ಸಹ "ನನ್ನ ಭಕ್ತರು ನಡೆದುದೆ ಬಟ್ಟೆ ಕೇಳಯ್ಯ" ಎಂದು ಅವನನ್ನು ಕೊಂಡಾಡುವುದನ್ನು ಗಮನಿಸಿದಾಗ ಭಕ್ತನನ್ನು ಎಂದೂ ಬಿಟ್ಟುಕೊಡದ ರಕ್ಷಕನಾಗಿ ಸಾಗುವ ಇವರ ಮಧ್ಯೆ ಅಬೇಧ ಕಲ್ಪನೆಯಿದೆ ಎಂದು ತಿಳಿಯುತ್ತದೆ.

### ೬.೨. ಪಂಚಾಕ್ಷರಿಯ ರಗಳೆ :-

ನಮಃ ಶಿವಾಯ ಎಂಬುದೇ ಶಿವ ಪಂಚಾಕ್ಷರಿ ಮಂತ್ರವು. ಓಂ ಕಾರವನ್ನು ಸೇರಿಸಿದಾಗ "ಓಂ ನಮಃ ಶಿವಾಯ" ಎಂಬ ಷಡಾಕ್ಷರಿ ಮಂತ್ರವಾಗುತ್ತದೆ. ನಮಃ ಶಿವಾಯ ಎಂದೇ ಜಪ

ಮಾಡಿದರೂ ಸಾಕು, ಆಗ ಅದು ಪಂಚಾಕ್ಷರಿ ಮಂತ್ರವಾಗುತ್ತದೆ. ಹರಿಹರನು ತನ್ನ ಈ ರಗಳೆಯಲ್ಲಿ ಶಿವ ಪಂಚಾಕ್ಷರಿ ಮಂತ್ರದ ಮಹಿಮೆಯನ್ನು ಹೀಗೆ ತಿಳಿಸಿರುತ್ತಾನೆ.

೧. ಶಿವಪಂಚಾಕ್ಷರಿ ಜಪದಿಂದ ಪಂಚಭೂತಗಳಿಗೂ ಮತ್ತು ಪಂಚಾಂಗಗಳಿಗೂ ಸಂತೃಪ್ತಿಯಾಗುತ್ತದೆ. ಶಿವ ಪಂಚಾಕ್ಷರಿ ಜಪನಿಷ್ಠರಿಗೆ ಆಕಾಶಾದಿ ಪಂಚಭೂತಗಳಿಂದ ಯಾವ ತೊಂದರೆಯಾಗುವುದಿಲ್ಲ.

೨. ಶಿವಪಂಚಾಕ್ಷರಿ ಜಪದಿಂದ ಪಂಚಜ್ಞಾನೇಂದ್ರಿಯಗಳೂ, ಪಂಚಕರ್ಮೇಂದ್ರಿಯಗಳೂ ಶುದ್ಧವಾಗುತ್ತದೆ. ಕಣ್ಣು, ಕಿವಿ, ಮೂಗು, ನಾಲಗೆ, ಚರ್ಮ ಎಂಬ ಐದು ಜ್ಞಾನೇಂದ್ರಿಯಗಳಿಗೂ ವಾಕ್, ಪಾಣಿ, ಪಾದ, ಪಾಯು, ಉಪಸ್ಥಗಳೆಂಬ ಐದು ಕರ್ಮೇಂದ್ರಿಯಗಳೂ ಪಾವನಗೊಳ್ಳುತ್ತವೆ. ಪವಿತ್ರವಾಗುತ್ತದೆ. ಮತ್ತು ಶುದ್ಧವಾಗುತ್ತದೆ.

೩. ಶಿವಪಂಚಾಕ್ಷರಿ ಜಪದಿಂದ ಪಂಚಪ್ರಾಣಗಳು ಶುದ್ಧವಾಗುತ್ತದೆ. ಪ್ರಾಣ, ಅಪಾನ, ವ್ಯಾನ, ಉದಾನ ಮತ್ತು ಸಮಾನಗಳೆಂಬ ಐದು ಪ್ರಾಣಗಳು ಶುದ್ಧವಾಗುತ್ತದೆ.

೪. ಶಿವಪಂಚಾಕ್ಷರಿ ಜಪದಿಂದ ಪಂಚ ಮಹಾಪಾಪಗಳು ಶಮನವಾಗುತ್ತದೆ. ಬ್ರಹ್ಮ ಹತ್ಯೆ, ಸುರ ಪಾನ, ಸ್ವರ್ಣಸ್ತೇಯ, ಗುರುಪತ್ನಿ ಗಮನ ಈ ನಾಲ್ವರ ಸಹವಾಸ – ಈ ಪಂಚ ಮಹಾಪಾತಕಗಳು ಶಮನವಾಗುತ್ತದೆ.

೫. ಪಂಚಕೋಶಗಳನ್ನು ಪಂಚಾಕ್ಷರಿ ಜಪದಿಂದ ದಾಟಿಹೋಗಬಹುದು. ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ ಮತ್ತು ಆನಂದಮಯಗಳೆಂಬ ಐದು ಕೋಶಗಳನ್ನು ದಾಟಿಕೊಂಡು ಶಿವ ಭಕ್ತನು ಬ್ರಹ್ಮ ಜ್ಞಾನಿಯಾಗಿ ಶಿವ ಸಾಯುಜ್ಯವನ್ನೇ ಹೊಂದುತ್ತಾನೆ.

ಹೀಗೆ ಶಿವನಿಗೆ ಪ್ರಿಯವಾದ, ನಿತ್ಯ ಸತ್ಯವಾದ ಶಿವಪಂಚಾಕ್ಷರಿ ಮಂತ್ರದಿಂದ ಸರ್ವ ಮಾನವರನ್ನು ಸದಾ ಕಾಲ ಉದ್ಧರಿಸಿ ಸುಖ ಸಂಪತ್ತನ್ನು ನೀಡುವ ಈ ಪಂಚಾಕ್ಷರಿ ಮಂತ್ರದ ಮಹತ್ವವನ್ನು ಈ ರಗಳೆಯಲ್ಲಿ ತಿಳಿಸಿ ತನ್ನ ಒಡೆಯನಾದ ಆ ಹಂಪೆಯರಸ ವಿರೂಪಾಕ್ಷಸ್ವಾಮಿಯ ದಯೆಯನ್ನು ಬೇಡುತ್ತಾ ಅವನಿಗೆ ವಂದಿಸಿದ್ದಾನೆ.

## ೬.೩. <u>ರುದ್ರಾಕ್ಷಿಯ ರಗಳೆ:–</u>

ಒಂದಾನೊಂದು ಕಾಲದಲ್ಲಿ ರುದ್ರನು ಅಗಣಿತ ದಿವ್ಯ ಸಂವತ್ಸರಗಳ ಕಾಲ ಧ್ಯಾನ ತತ್ಪರನಾಗಿದ್ದನು. ಆತನು ತನ್ನ ತಪಸ್ಸು ಸಾಕೆಂದು ಕಣ್ಣುಗಳನ್ನು ತೆರೆಯಲಾಗಿ, ಆತನ ನೇತ್ರಗಳಿಂದ ಬಂದ ಸ್ವಲ್ಪ ಬಾಷ್ಪಗಳು ಗೌಡ, ಮಧುರ, ಅಯೋಧ್ಯ, ಕಾಶಿ, ಮುಂತಾದ ಕ್ಷೇತ್ರಗಳಲ್ಲಿ

ವಲಯ, ಸಹ್ಯಾದ್ರಿ ಪರ್ವತಗಳ ಮೇಲೆ ಬಿದ್ದು ಕಾಲಾನಂತರ ಅವು ರುದ್ರಾಕ್ಷಿಗಳಾಗಿ ಪರಿಣಮಿಸಿದವು. ರುದ್ರನ ಅಕ್ಷಭಾಗದಿಂದ ಬಂದುದಲ್ಲದವೇ; ರುದ್ರ (ದುಃಖಗಳನ್ನು) ಕ್ಷಯ (ನಾಶ ಮಾಡುವ ಗುಣ) ಮಾಡುವುದರಿಂದ ಇವುಗಳಿಗೆ ರುದ್ರಾಕ್ಷಿ ಎಂಬ ಹೆಸರು ಸಾರ್ಥಕವಾಗಿದೆ. ಈ ರುದ್ರಾಕ್ಷಿಯು ನಾಲ್ಕು ವರ್ಣಗಳಿಗೂ ಸೇರಿದ ಭಕ್ತರಿಗೆ ಧಾರಣಯೋಗ್ಯವಾಗಿರುವುದರ ಜೊತೆ, ಜಪ ಮಾಡಲು, ಧಾರಣೆಗೂ ಸೂಕ್ತ ಫಲದಾಯಕವಾದುದಾಗಿದೆ.

ಭವನ ಸದ್ಭಕ್ತಿಗೆ ಶಿರೋಮಣಿಯಂತಿರುವ, ನೆನೆಸಿದ್ದನ್ನು ನೀಡುವ ಚಿಂತಾಮಣಿಯೂ ಆಗಿರುವ ಈ ರುದ್ರಾಕ್ಷಿಗಳು ಸದಾಶಿವನ ರಕ್ಷೆಯನ್ನು ಧರಿಸಿದವನಿಗೆ ನೀಡುವಂತಹ ಸ್ಪರ್ಶಮಣಿಗಳವು. ಏಕಮುಖಿಯಿಂದ ಒಟ್ಟು ೧೪ ಬಗೆಯ ರುದ್ರಾಕ್ಷಿಗಳು ಇರುವುವು. ಒಂದೊಂದು ಬಗೆಯ ರುದ್ರಾಕ್ಷಿಗಳು ಒಂದೊಂದು ಸ್ವರೂಪದ ಪಾಪವನ್ನು ನಳಸಿ ವಿವಿಧ ಪುಣ್ಯ, ಫಲವನ್ನು ನೀಡುವಂತಹವು. ಹೀಗೆ ರುದ್ರಾಕ್ಷಿಯ ಮಹಿಮೆಯನ್ನು ಬಣ್ಣಿಸಿರುವ ಹರಿಹರನು ಹಂಪೆಯ ವಿರೂಪಾಕ್ಷನನ್ನು ಸ್ತುತಿಸಿದ್ದಾನೆ.

## ೬೪. ಹಂಪೆಯರಸನ ರಗಳೆ :-

ಹರಿಹರನು ತನ್ನ ಆರಾಧ್ಯದೈವನಾದ ಹಂಪೆಯ ವಿರೂಪಾಕ್ಷ ಸ್ವಾಮಿಯನ್ನು ಅರ್ಥಪೂರ್ಣವಾಗಿ ಮತ್ತು ವೈವಿಧ್ಯಮಯ ವರ್ಣನೆಗಳಿಂದ ವರ್ಣಿಸಿರುವ ಬಗೆಯನ್ನು ಇಲ್ಲಿ ನಾವು ಗಮನಿಸುತ್ತೇವೆ.

ತನ್ನ ತಂದೆ–ತಾಯಿ, ಬಂಧು–ಬಳಗ, ಸಕಲವೂ ಹಂಪೆಯ ಅರಸನೆಂದೂ, ತನ್ನ ಕಣ್ಣು, ಮೈ ಮನ ನಿನ್ನನ್ನು ನೋಡಿದಾಗಲೇ ತಣಿಯುವುದು. ನಿನ್ನನ್ನು ವಿವಿಧ ಹೂಗಳಿಂದ ಅಲಂಕರಿಸಿ, ಪೂಜಿಸಿ, ಸ್ತುತಿಸಿದಾಗಲೇ ಮನಸ್ಸಿಗೆ ಆನಂದ ದೊರಕುವುದು ಎಂದು ಶಿವನನ್ನು ಶ್ಲಾಘಿಸಿದ್ದಾನೆ. ಆದಿ–ಅಂತ್ಯವಿರದವನು, ಅಭಯನಾದ ಈ ಹಂಪೆಯರಸನು ಇಡೀ ಭೂಮಂಡಲಕ್ಕೆ ಗುರುವೂ ಹೌದು, ದಾನನಿಧಿ, ಮಾನನಿಧಿಯಾಗಿದ್ದಾನೆ. ವೇದದೂರ, ನಾದಸಾರನಾದ ಈ ಗಿರಿಜಾರಮಣನ ಸ್ತುತಿ ಎಲ್ಲರಿಗೂ ಶುಭವನ್ನುಂಟು ಮಾಡಲಿ ಎಂದು ಬೇಡಿದ್ದಾನೆ. ಹಂಪೆಯರಸನಾದ ವಿರೂಪಾಕ್ಷ ಸ್ವಾಮಿಯನ್ನು ಆರಾಧಿಸಿ, ಸ್ತುತಿಸಿ ಅನುಭವಿಸುವ ಭಕ್ತಿಸುಖವನ್ನು ವೈಭವೋಪೇತನಾಗಿ ಇಲ್ಲಿ ವರ್ಣಿಸಿ ಅಭಯವನ್ನು ಬೇಡಿದ್ದಾನೆ.

## ೬೫. ಲಿಂಗಾರ್ಚನೆ ರಗಳೆ :-

ಹಂಪೆಯ ವಿರೂಪಾಕ್ಷ ಸ್ವಾಮಿಯ ಅರ್ಚನೆಯ ಸಂದರ್ಭದಲ್ಲಿ ಶಿವನಿಗೆ ವಿವಿಧ ಹೂ ಅಕ್ಷತೆಗಳ ಜೊತೆಗೆ ಅವನ ಸಹಸ್ರಮನಾಮಗಳನ್ನು ವರ್ಣಿಸಿರುವ ಈ ರಗಳೆ ಶಿವಪೂಜೆಯ ಸಂದರ್ಭದಲ್ಲಿ ಹುಟ್ಟಿದುದು ಹರಿಹರನ ಗುಣಸ್ತೋತ್ರದ ರಗಳೆ, ಹಂಪೆಯ ರಗಳೆ, ಜಯಾರಗಳೆ, ಲಿಂಗಾರ್ಚನೆಯ ರಗಳೆ, ಪಂಪಾಕ್ಷೇತ್ರ ರಗಳೆ, ಮಹಿಮಾ ರಗಳೆ, ಪ್ರಾರ್ಥಾನಾ ರಗಳೆಗಳು ಎಲ್ಲವೂ ಶಿವಸ್ತೋತ್ರ ಪರವಾಗಿವೆ. ಶಿವಭಕ್ತಿ ಮಹಿಮೆಗಳನ್ನು ಸ್ತುತಿಸುವ ಶಿವನ ಭಾವ ಸ್ವರೂಪವನ್ನು ಕುರಿತು ಹಾಡಿಹೊಗಳುವ, ಶಿವನ ಲೀಲಾಪವಾಡಗಳನ್ನು ವೈವಿಧ್ಯಮಯವಾಗಿ ವರ್ಣಿಸುವ ಹಾಗು ಹಂಪೆಯ ಕ್ಷೇತ್ರ ಮಹಿಮೆಯೊಂದಿಗೆ ವಿರೂಪಾಕ್ಷನ ಮಹತ್ವವನ್ನು ಸಾರುವ ಈ ಎಲ್ಲಾ ರಗಳೆಗಳು ಓದುಗರಲ್ಲಿ ಭಕ್ತಿ-ಭಾವ ದೀಪ್ತತೆಯನ್ನು ಉಂಟುಮಾಡುತ್ತದೆ. ತಾವೂ ಶಿವಭಕ್ತರಾಗಲು ಪ್ರೇರಿಪಿಸುವಂತಹ ಶಿವ ಭಕ್ತಿಮಹಿಮಾ ರಗಳೆಗಳ ಸಾಲಿನಲ್ಲಿ ಬರುವ ಈ ಎಲ್ಲಾ ರಗಳೆಗಳಲ್ಲಿ ಶಿವಭಕ್ತನು ತನ್ನ ಜಗದೊಡೆಯ ಶಿವನನ್ನು ಸ್ತುತಿಸಿ, ಅರ್ಚಿಸಿ, ಪೂಜಿಸುವ ಎಲ್ಲಾ ರಗಳೆಗಳಲ್ಲಿ ಹಂಪೆಯ ವಿರೂಪಾಕ್ಷ ಸ್ವಾಮಿಯನ್ನು ಮನಃದಣಿಯುವಂತೆ, ತೃಪ್ತಿಯಿಂದ ಪೂಜಿಸಿ ಅರ್ಚಿಸುವ ಭಕ್ತಿಯ ಪ್ರಭೆಯನ್ನು ಬೆಳಗಿಸಿದ್ದಾನೆ. "ಹರಿಹರ ದೇವ ಬಸವಾದಿಗಳಿಗೆ ಬಹಳ ಸಮೀಪದವನು, ಅದೇ ಮನೋಧರ್ಮದವನು. ಅವನು ಮನಸ್ಸು ಮಾಡಿದ್ದರೆ ಹನ್ನೆರಡನೇ ಶತಮಾನದ ಆಂದೋಲನದ ವಾಸ್ತವ ಚಿತ್ರವನ್ನೇ ನಮ್ಮ ಮುಂದೆ ಬಿಚ್ಚಿಡಬಹುದಾಗಿತ್ತು. ಭಕ್ತಿಯ ಒಂದು ಅಂಶವನ್ನೇ ಪ್ರಧಾನವಾಗಿ ಪರಿಗಣಿಸಿ ಉಳಿದೆಲ್ಲವೂ ಪ್ರಾಸಂಗಿಕವೆಂದುಕೊಂಡು ರಗಳೆಗಳನ್ನು ರಚಿಸಿದ್ದರಿಂದ ಚರಿತ್ರೆಯ,ಜೊತೆಗೆ ಶರಣ ಜಗತ್ತಿಗೆ ದೊರೆಯಬಹುದಾಗಿದ್ದ ಅಮೂಲ್ಯವಾದ ಇತಿಹಾಸ ಸಿಕ್ಕದೇ ಹೋಯಿತು. ಇಷ್ಟಾದರೂ ಕನ್ನಡ ಸಾಹಿತ್ಯದಲ್ಲಿ ಚರಿತ್ರೆಯಂತೆ ಹಿರಿಯ ತಲೆಮಾರನ್ನು ಕುರಿತು ಕಾವ್ಯವನ್ನು ರಚಿಸಿದ ಮೊದಲ ಕವಿ ಹರಿಹರದೇವನೇ! ದೇವಾದಿದೇವತೆಗಳು ಮಾತ್ರವಲ್ಲ, ನಮ್ಮ ನಡುವಿನ ಭಕ್ತರೂ ಕೂಡ ಕತೆಯ ನಾಯಕರಾಗಬಲ್ಲರು ಎಂಬುದನ್ನು ರಚಿಸಿ ತೋರಿಸಿದವನು ಹರಿಹರದೇವ."[೨೨] ಶ್ರೀ ಸಾಮಾನ್ಯರನ್ನು ಕಥಾನಾಯಕರ ಪಟ್ಟಕ್ಕೇರಿಸಿದ ಹರಿಹರನ ಕವಿತ್ವ ಮತ್ತು ವ್ಯಕ್ತಿತ್ವ ಹಿರಿಮೆಯುತವಾದುದು. ಅವನ ಕಾವ್ಯ ಪರಂಪರೆ ಭಕ್ತಿನಿಷ್ಠೆಯ ಜೊತೆಗೆ ಕಾಯಕ, ಮಹತ್ವ, ಜಾತ್ಯಾತೀತತೆ, ಸಮಾನತೆ, ಪ್ರತಿಭಟನೆಗೆ ಸಂಕೇತವಾಗಿ ನಿಲ್ಲುತ್ತವೆ.

---

ಅಡಿಟಿಪ್ಪಣಿಗಳು :- ೨೨. ಕನ್ನಡ ಸಾಹಿತ್ಯ ಚಾರಿತ್ರಿಕ ಬೆಳವಣಿಗೆ – ಡಾ.ಸಿ.ವೀರಣ್ಣ, ನವ ಕರ್ನಾಟಕ ಪ್ರಕಾಶನ, ಪು.ಸಂ. ೩೩೨

## (೨) ಶಿವ ಮತ್ತು ಭಕ್ತರ ಸಂಬಂಧಗಳ ಭಾವಗಳ ವಿಶ್ಲೇಷಣೆ :-

ಶಿವನಿಗೆ ತನ್ನನ್ನು ಅರ್ಪಿಸಿಕೊಳ್ಳುವುದೇ ಶಿವಭಕ್ತಿ. ಆದರೆ ಸರ್ವಸಮರ್ಪಣಭಾವ ಒಮ್ಮೆಗೇ ಬರುವುದಿಲ್ಲ. ಅದಕ್ಕೆ ನಿರಂತರ ಸಾಧನೆ, ನಿರಂತರ ಸ್ಮರಣೆ ಅತ್ಯಗತ್ಯ. ಶಿವಭಕ್ತನು ಶಿವ ದೀಕ್ಷೆಯನ್ನು ಪಡೆದುಕೊಂಡು ಶಿವಭಕ್ತಿಯ ಪಥದಲ್ಲಿ ನಡೆದಿದ್ದಾನೆ ಎಂದರೆ ಶಿವ ಮತ್ತು ಭಕ್ತರ ನಡುವೆ ಸಂಬಂಧವೇರ್ಪಟ್ಟಿದೆ ಎಂಬುದರ ಸೂಚಕ. ಆಗ ಶಿವಭಕ್ತನು ಬೆಳಸಿಕೊಂಡಿರುವ ಗ್ರಹಣ ಸಾಮರ್ಥ್ಯಕ್ಕನುಗುಣವಾಗಿ, ಆಧ್ಯಾತ್ಮಿಕಶಕ್ತಿಗಳು ಯಾಂತ್ರಿಕವಾಗಿ ಅವನಲ್ಲಿ ಹರಿಯತೊಡಗುತ್ತವೆ. ಶಿವಭಕ್ತನು ಮೋಕ್ಷವನ್ನು ಪಡೆಯುವವರೆಗೂ ಒಂದು ಭದ್ರವಾದ ಸಂಬಂಧವಿರಿಸಿರುತ್ತಾರೆ. ಅನಂತರ ಶಿವಗಣ ಪದವಿಯನ್ನು ಗಳಿಸಿಕೊಂಡು ಕೈಲಾಸದಲ್ಲಿ ಪ್ರೀತಿಯಿಂದ ಸಕಲವನ್ನು ಶಿವನ ವರಪ್ರಸಾದವೆಂದು ಪರಿಗಣಿಸಿ ಸಂತೃಪ್ತರಾಗಿರುತ್ತಾರೆ. ಶಿವಭಕ್ತನು ಶಿವನಿಂದ, ಶಿವನಲ್ಲಿ ಮತ್ತು ಶಿವನಿಗಾಗಿಯೇ ಜೀವಿಸುವುದರಿಂದ ಆ ಒಂದು ಚೈತನ್ಯ ಶಕ್ತಿ ಅವರಲ್ಲಿ ಸುಳದಾಡುತ್ತಿರುತ್ತದೆ. ಇದೇ ಅವರ ಭಕ್ತಿಗೆ ಸ್ಫೂರ್ತಿ ನೀಡುವುದು ಎಂಬುದು ಹರಿಹರನ ಎಲ್ಲಾ ರಗಳೆಗಳಂದ ನಮಗೆ ತಿಳದುಬರುತ್ತಿದೆ. ಮನುಷ್ಯನು ತನ್ನ ಇಚ್ಛೆಗೆ ತಕ್ಕಂತೆ ವರ್ತಿಸದೆ ಶಿವಶಕ್ತಿಯ ಪ್ರೇರಣೆಗೆ ಒಳಗಾಗಿ ಭಕ್ತನ ನೋಟವೆಲ್ಲವೂ ಶಿವ, ಹೇಳುವುದು-ಕೇಳುವುದು-ದರ್ಶನ ಮಾಡುವುದು-ಬಾಳುವುದು - ಬಯಸುವುದು ಎಲ್ಲವೂ ಶಿವನೇ ಆಗಿ ಭಾವ-ಕ್ರಿಯೆಗಳಲ್ಲಿಯೂ ಶಿವತತ್ವವೇ ಅಡಗಿರುವ ಸಂದೇಶವನ್ನು ಹರಿಹರ ಸಾರುತ್ತಿದ್ದಾನೆ. ಭಕ್ತಿ-ನಿಷ್ಠೆ-ತಾದಾತ್ಮ್ಯ-ಸಮರ್ಪಣಾ ಮನೋಭಾವವನ್ನು ನಮ್ಮ ನಿತ್ಯಜೀವನ ಮತ್ತು ಭಾವದಲ್ಲಿ ಅಳವಡಿಸಿಕೊಂಡು ಸದಾಶಿವನ ಭಕ್ತರಾಗಿರಬೇಕು ಎಂಬ ಆದರ್ಶವೂ ಇಲ್ಲಿ ವ್ಯಕ್ತವಾಗುತ್ತಿದೆ.

### ೩.೮)ಶಾಂತಭಾವ :-

ಶಿವಭಕ್ತರು ಶಾಂತಸ್ವರೂಪದವರು. ಮುಗ್ಧತೆ, ಪ್ರೀತಿ ಮತ್ತು ನಿಷ್ಠೆ ಅವರಲ್ಲಿ ಮನೆಮಾಡಿರುತ್ತದೆ. ಮನಸ್ಸನ್ನು ಬೇರೆಕಡೆ ಹರಿಯ ಬಿಡದೆ ಶಿವನಲ್ಲಿ ಕೇಂದ್ರೀಕರಿಸುವ ಮೂಲಕ ಭಕ್ತಿಸ್ಥಾನದಲ್ಲಿ ತೊಡಗಿ ಶಾಂತಿ ಮತ್ತು ಏಕಾಗ್ರತೆಯಿಂದ ಮುನ್ನಡೆದು ಸಫಲತೆಯನ್ನು ಸಾಧಿಸುತ್ತಾರೆ. ಸಮರ್ಥ ರಾಮದಾಸರು ಒಂದೆಡೆ ಹೀಗೆ ಹೇಳದ್ದಾರೆ "ಚಂಚಲವನ್ನು ಭಜಿಸುವವನು ಚಪಲನಾಗುತ್ತಾನೆ. ನಿಶ್ಚಲವನ್ನು ಧ್ಯಾನಿಸುವವನು ಅಚಲನಾಗುತ್ತಾನೆ" ಶಾಂತತೆಯನ್ನು ಎಲ್ಲರೂ ಬಯಸುತ್ತಾರೆ. ಶಿವನ ಸಾಕ್ಷಾತ್ಕಾರವೇ ಗುರಿಯಾಗಿದ್ದ ಪಕ್ಷದಲ್ಲಿ ಶಾಂತಿಯು ಸಹಜವಾಗಿಯೇ ಬರುತ್ತದೆ. ಇದರಿಂದ ಸಮಾಜದ ಜನರು ತಮ್ಮ ನಡುವೆ ಹಿಂಸಾಚಾರವನ್ನು ತ್ಯಜಿಸಿ ಶಾಂತಿಯನ್ನು

ಪರಿಪಾಲಿಸಿ ಧ್ಯಾನಕ್ರಿಯೆಯನ್ನು ಶ್ರದ್ಧಾಪೂರ್ವಕ, ಪ್ರಜ್ಞಾಪೂರ್ವಕವಾಗಿ ಬೆಳಸಿಕೊಳ್ಳುವುದಕ್ಕೆ ಶಿವಭಕ್ತಿಯ ಕಥೆಗಳು ನೆರವಾಗುತ್ತದೆ. ಇದರಂತೆ ಹರಿಹರನು ತನ್ನ ಕೃತಿಗಳಲ್ಲಿ ಯಾರು ಶಾಂತರಾಗಿ, ಸಮಚಿತ್ತರಾಗಿ ಕಾರ್ಯಸಾಧಿಸುವವನಿಗೆ ಗೆಲುವು ನಿಶ್ಚಯವೆಂಬುದನ್ನು ತಿಳಿಸಿದ್ದಾನೆ.
ಉದಾಹರಣೆ:- ತಿರುನೀಲಕಂಠನ ರಗಳೆ, ಇಳೆಯಾಂಡಗುಡಿಮಾರ, ಅಮರನೀತಿ, ತಿರುಕುರುಂಪೆತೊಂಡರ ಮತ್ತು ಭೋಗಣ್ಣನ ರಗಳೆ ಇತ್ಯಾದಿ

"ನುಡಿದಂತೆ ನಡೆದರೆ ಇದೇ ಜನ್ಮ ಕಡೆ" ಎಂಬ ಮಾತಿನ ತಿರುಳು ತಿರುನೀಲಕಂಠನ ರಗಳೆಯಲ್ಲಿ ಸ್ಪಷ್ಟವಾಗಿ ನಿರೂಪಿತವಾಗಿದೆ. ಶಿವನಿಗಾಗಿ ಎಲ್ಲ ಕಷ್ಟ ನಿಷ್ಠೂರಗಳನ್ನು ಸಹಿಸಬೇಕೆಂಬ ದೃಷ್ಟಿಯನ್ನು ಹರಿಹರನು ಈ ರಗಳೆಯಲ್ಲಿ ಚಿತ್ತರಿಸಿದ್ದಾನೆ. ಜೀವನದಲ್ಲಿಯ ಅಕಾರಣ ನಿಂದೆಯನ್ನು ಸಹಿಸಬೇಕು. ಈಶಭಕ್ತಿಯನ್ನು ನಂಬಬೇಕು. ಪರಮಾತ್ಮನಿಗಾಗಿ ಏನೆಲ್ಲವನ್ನೂ ಸಹಿಸಿ ಚಿತ್ತದ ನಿಶ್ಚಲತೆಯನ್ನು ಕಾಯ್ದುಕೊಂಡರೆ ದೈವೀಕರುಣೆ ತಾನೇ ತಾನಾಗಿ ಹರಿದು ಬರುತ್ತದೆಂಬುದನ್ನು ಹರಿಹರನು ಈ ರಗಳೆಯಲ್ಲಿ ತೋರಿಸಿದ್ದಾನೆ."೨೩ ಸಮಷ್ಟಿ ಜೀವನದ ಆಂತರಿಕ ಅಭ್ಯುದಯಕ್ಕೆ ಅರಿವು-ಆಚಾರ-ಅನುಭಾವಗಳು ಅಗತ್ಯ, ಮಾನವೀಯತೆಯನ್ನು ಹುಟ್ಟುಹಾಕಲು, ಸೃಜನಶೀಲತೆಯನ್ನು ಪಲ್ಲವಿಸಲು ಇವುಗಳು ಮುಖ್ಯ ಕಾರಣವಾಗಿದೆ. ಹರಿಹರನ ರಗಳೆಗಳಲ್ಲಿನ ಶಿವಭಕ್ತರು ಸರಳ ನಡೆನುಡಿಗಳಿಂದ, ಶಾಂತ ಮನೋಭಾವದಿಂದ, ಶಿಸ್ತಿನ ಸಂಘಟನೆಯಿಂದ, ಎತ್ತರದ ಆಲೋಚನೆಗಳಿಂದ, ಸ್ಪಷ್ಟ ನಿಲುವುಗಳಿಂದ, ಸಂಯಮದ ನಿರ್ಣಯಗಳಿಂದ, ನಿಸ್ವಾರ್ಥ ತ್ಯಾಗಗಳ ಸಂಬಂಧದಿಂದ ವಿಶಿಷ್ಟ ವ್ಯಕ್ತಿತ್ವ ಪಡೆದ ಮಹಾವ್ಯಕ್ತಿಗಳಾಗಿ ನಿಲ್ಲುತ್ತಾರೆ. ಬದುಕಿಗೆ ಅನಿವಾರ್ಯವಾದ ಕಾಯಕಗಳಲ್ಲಿ ಅವರ ವ್ಯಕ್ತಿತ್ವ ಬೆಳೆದುನಿಂತು, ಅದು ಅವರ ನಡೆ-ನುಡಿಗಳಲ್ಲಿ ಝುಳಪಿಸುವಂತೆ ಮಾಡಿದೆ. ಹೀಗೆ ಬದುಕಿನ ಹೊಸದಿಕ್ಕುಗಳನ್ನು ಅಂದಿನ ಜನಸಮುದಾಯಕ್ಕೆ ಪರಿಚಯಿಸುತ್ತಾರೆ.

**೩.೫) <u>ಧೃತಿ ಭಾವ :-</u>**

ಧೃತಿ ಎಂದರೆ ಧೈರ್ಯ ಮನೋಭಾವ, ಧರ್ಮಮಾರ್ಗದಲ್ಲಿ ಸ್ಥಿರವಾಗಿ ನೆಲೆನಿಲ್ಲಲ್ಲು ಅವಶ್ಯಕವಿರುವ ಧಾರಣಶಕ್ತಿಯೇ ಧೃತಿ. ಹರಿಹರನ ರಗಳೆಗಳಲ್ಲಿನ ಶಿವಭಕ್ತರು ಎಂತಹ ಕಠಿಣ ಪ್ರಸಂಗದಲ್ಲಿಯೂ ವಿಚಲಿತನಾಗದಿರುವ ಧೃಡತೆಯನ್ನು ಹೊಂದಿರುವವರಾಗಿದ್ದಾರೆ. ಮನುಷ್ಯ ನಿರ್ಮಿತವಾಗಲಿ ಅಥವಾ ದೈವಯೋಗದಿಂದ ಎಂತಹ ಕಷ್ಟಗಳು ಎದುರಾದರೂ ದೈವಶಕ್ತಿ ಬಲ

ಅಡಿಟಿಪ್ಪಣಿಗಳು : ೨೩. ಹರಿಹರನ ರಗಳೆಯಲ್ಲಿ ಜೀವನ ದರ್ಶನ - ಸ.ಸ.ಮಾಳವಾಡ, ಪು.ಸಂ.೩೯

ಮತ್ತು ಇಚ್ಛಾಶಕ್ತಿ ಬಲದಿಂದ ಎದುರಿಸುವ ಶಿವಶರಣರು ಕೊನೆಯಲ್ಲಿ ಕೀರ್ತಿಸಂಪಾದಿಸುತ್ತಾರೆ. ನಿಶ್ಚಲ ಮತ್ತು ಸ್ಥಿರವಾದ ಮನೋಭಾವದಿಂದ ಆಧ್ಯಾತ್ಮಿಕ ಕ್ಷೇತ್ರದಲ್ಲಿ ಯಶಸ್ಸು ಸಾಧಿಸಿದ ಯಶೋಗಾಥೆಗಳೇ ಇಲ್ಲಿನ ಶಿವಭಕ್ತ ಸಾಧಕರ ಜೀವನ. ಆದರೆ ಅದಕ್ಕೆ ಏಕಾಗ್ರಚಿತ್ತ, ಸಂಯಮ, ಪ್ರಯತ್ನಶೀಲ ಮತ್ತು ಶಿವಭಕ್ತಿ ಅವಶ್ಯಕ. ಉದಾ: ತಾಯಿಯ ಬಳಿಯಿಂದ ಒಂದು ರುಚಿಯಾದ ಮಾವಿನಹಣ್ಣನ್ನು ಮಗು ಪಡೆದು ತಿಂದು, ಸಂತೋಷಹೊಂದಿ ಅದು ಉತ್ಪತ್ತಿಯಾಗುವ ಬಗೆಯನ್ನು ಕೇಳಿ ಪಡೆದುಕೊಳ್ಳುತ್ತಾನೆ. ಮಾವಿನಗೊರಟು ನೆಟ್ಟರೆ ಮಾವಿನಮರ ಉಂಟಾಗಿ ಅದರಿಂದ ಹಣ್ಣು ಬಿಡುವುದು ಎಂಬ ವಿಷಯವನ್ನು ತಿಳಿದ ಹುಡುಗನು ಸಂತೋಷದಿಂದ ಮಾವಿನಗೊರಟನ್ನು ಮಣ್ಣಿನಲ್ಲಿ ನೆಟ್ಟು, ನೀರು ಹಾಕಿ ಪೋಷಿಸಿ ಸಂಜೆಯ ವೇಳೆಯಾದರೂ ಏಕೆ ಗಿಡವಾಗಲಿಲ್ಲ, ಮರವಾಗಲಿಲ್ಲವೆಂದು ಬಗೆದು ತಾಯಿಯ ಬಳಿ ಕೇಳುತ್ತಾನೆ. ಅದಕ್ಕೆ ಇನ್ನೂ ಸಮಯ ಬೇಕಾಗುತ್ತದೆ ಎಂದು ಉತ್ತರಿಸಿದ ತಾಯಿಯ ಮಾತಿನಂತೆ ರಾತ್ರಿಯವರೆಗೂ ಕಾದು ಕೊನೆಗೆ ಮರವಾಗಿ ಫಲನೀಡದ ಆ ಬೀಜ ಇನ್ಯಾತಕೆ ಎಂದು ಅಸಹನೆಯಿಂದ ಕಿತ್ತೆಸೆದ. ಫಲವೆನ್ನುವುದು ಪರಿಶ್ರಮದಿಂದ ಮಾತ್ರ ಸಾಧ್ಯ ಎಂಬ ಅರಿವು ಇಲ್ಲದ ಹುಡುಗ ಇಲ್ಲಿ ಹುಡುಗಾಡಿಕೆಯ ಸ್ವರೂಪದವನು ಮತ್ತು ನಂಬಿಕೆಯನ್ನು ಕಳೆದುಕೊಂಡ ನಾಸ್ತಿಕ ಸ್ವರೂಪದವನಂತೆ. ಅವನು ಜೀವನದಲ್ಲಿ ಓರ್ವ ಅನನುಭವಿಯೂ ಹೌದು. ಅದೇ ರೀತಿ ಭಕ್ತಿಯೆಂಬ ಬೀಜ ಒಡೆದು ಓರ್ವ ಮಹಾನ್ ಶಿವಭಕ್ತ, ಧಾರ್ಮಿಕ ಸಾಧಕನಾಗಬೇಕಾದರೆ ಅದು ನಿರಂತರ ಭಕ್ತಿಯ ಪರಿಶ್ರಮದ ಫಲದಿಂದ ಮಾತ್ರ ಸಾಧ್ಯ ಎಂಬುದು ನಮಗೆ ಹರಿಹರನ ರಗಳೆಗಳಿಂದ ವೇದ್ಯವಾಗುತ್ತದೆ.

ಚಿರಂತನ ಸುಖದ ಲಾಭ ಅಂದರೆ ಕೈಲಾಸದಲ್ಲಿ ಗಣಪದವಿಯನ್ನು ತನ್ನ ಭಕ್ತಿಯ ಮೂಲಕ ಗಳಿಸಿಕೊಳ್ಳುವ ಶಿವಭಕ್ತರು ಶಾಂತ ಮನಸ್ಥಿತಿಯಿಂದ, ಮುಗ್ಧ ಭಕ್ತಿ-ಭಾವದಿಂದ, ಮಧುರ ಭಾವನೆಯಿಂದ ಧೈರ್ಯ ಮನೋಭಾವದಲ್ಲಿ ಶಿವಭಕ್ತಿಯಲ್ಲೇ ಲೀನರಾಗಿರುತ್ತಾರೆ ಅವರ ಶರೀರ, ಮನಸ್ಸು ಬುದ್ಧಿ ಮತ್ತು ಚಿತ್ತಶಕ್ತಿಯಲ್ಲಿ ಭಕ್ತಿಯೊಂದೇ ಗಾಢವಾಗಿ ಬೇರೂರಿರುವ ಪ್ರಬಲ ನಂಬಿಕೆ. ಯಾರಲ್ಲೇ ಆಗಲಿ ಅಪಾರ ಧೈರ್ಯ ಇಲ್ಲದಿದ್ದರೆ ವರ್ಷಗಟ್ಟಲೆ ಒಂದೇ ಪ್ರಯತ್ನದಲ್ಲಿ ತೊಡಗಲಾರ ಆದ್ದರಿಂದ ಧೈರ್ಯ ಎಂಬುದು ಮುಖ್ಯ ಇಡೀ ಜಗತ್ತಿಗೆ, ಅನಂತ ಕಾಲಕ್ಕೇ ಸವಾಲು ಹಾಕುವ ಈ ಸಾಮರ್ಥ್ಯ ಅಸಾಧಾರಣ ಧೈರ್ಯದಿಂದ ಮಾತ್ರ ಸಾಧ್ಯ. ಆದರ ಈ ಧೈರ್ಯ ಸಂಪಾದನೆಗೆ ಮನುಷ್ಯನಿಗೆ ತನ್ನಲ್ಲಿ ಮೊದಲು ಆತ್ಮವಿಶ್ವಾಸ ಬೇಕು. ಈ ಆತ್ಮವಿಶ್ವಾಸವು ಅವನಿಗೆ

ಶಿವನೆಂಬುವವನು ಜಗತ್ತಿನಲ್ಲಿ ಇದ್ದಾನೆ. ಅವನು ನನ್ನ ಹೃದಯದಲ್ಲೇ ಇದ್ದಾನೆ. ತನು-ಮನ-ಧನ-ಪ್ರಾಣಗಳ ಪಣವಿಟ್ಟಿದ್ದರೂ ಅವನನ್ನು ಸೇರಲು ಭಕ್ತಿಯಲ್ಲೇ ಲೀನನಾಗುತ್ತಾನೆ. ಮನುಷ್ಯನ ಚಿತ್ತವು ಪರಮಾತ್ಮನಲ್ಲಿ ಲೀನವಾದರೆ ಸಮಾಜದ ಹಂಗನ್ನು ತೊರೆದು ತನ್ನ ಭಕ್ತಿಯ ನಿಶ್ಚಲತೆಯನ್ನು ತೋರುವಷ್ಟು ಧೃತಿಭಾವ ಅವನಲ್ಲಿ ಮೂಡುತ್ತದೆ. ಇಂತಹ ಶ್ರದ್ಧೆ, ಏಕಾಗ್ರತೆ, ಧೃತಿಭಾವ ಇರುವವನು ಮಾತ್ರ ಶಿವಸಾಯುಜ್ಯವನ್ನು ಪಡೆಯಲು ಸಾಧ್ಯ ಎಂಬುದನ್ನು ಹರಿಹರ ತನ್ನ ರಗಳೆಗಳಲ್ಲಿ ವಿಷದ ಪಡಿಸಿದ್ದಾನೆ.

ಉದಾಹರಣೆ: ಇಹಃ ಪಗೆಯಾಂಡರನ ರಗಳೆ, ನಿಂಬಿಯಕ್ಕ, ಬಾಹೂರ ಬೊಮ್ಮಿತಂದೆ, ತೆಲುಗು ಜೊಮ್ಮಯ್ಯನ, ರುದ್ರಪಶುಪತಿ, ಶಂಕರ ದಾಸಿಮಯ್ಯ, ಧಕ್ಷಾಧ್ವರ, ಮಹಾದೇವಿಯಕ್ಕನ, ಸಿರಿಯಾಳ, ಹೆರೂರು ಹೆಣ್ಣು, ಅತಿಭಕ್ತ, ಕಣ್ಣಪ್ಪ, ಏಕಂತರಾಮಿ ತಂದೆ, ಮಾರುಡಿಗೆ ನಾಚಿತಂದೆ, ಉದ್ಭಟಯ್ಯ, ನಂಬಿಯಣ್ಣ, ರೇವಣ ಸಿದ್ಧೇಶ್ವರ, ಹಲಾಯುಧ, ಮೆರಮಿಂಡದೇವ, ಹಾವಿನಹಾಳ ಕಲ್ಲಯ್ಯ, ಮಲಯರಾಜ, ಬಾಣ, ಬಸವರಾಜದೇವ ಮತ್ತು ಇತರೆ ರಗಳೆಗಳಲ್ಲಿ ಶಿವಭಕ್ತರಲ್ಲಿ ಇರುವ ನಿಶ್ಚಲಭಕ್ತಿ, ಧೃಢವಾದ ಸಂಕಲ್ಪ ಅವರನ್ನು ಬಹಳ ಎತ್ತರಕ್ಕೆ ಕೊಂಡ್ಯೊಯ್ಯುತ್ತದೆ ಎಂಬುದನ್ನು ಸಾಬೀತು ಪಡಿಸುತ್ತದೆ. ಶಿವಭಕ್ತರಲ್ಲಿರುವ ಧೃತಿಯ ಭಾವ ಯಾವುದರ ಸಮರ್ಪಣಾ ಭಾವಕ್ಕೂ ಅವರನ್ನು ಮುಂದಿರಿಸಿರುತ್ತದೆ. ಹಿಂಜರಿಕೆ, ಅಧೈರ್ಯ, ಅಪನಂಬಿಕೆ, ಅನಿಶ್ಚಿತತೆ, ಅಧೃಢತೆಗಳೆಂಬ ಅಪಮೌಲ್ಯಗಳು ಶಿವಭಕ್ತರಲ್ಲಿ ಸುಳಿಯಲಾರವು. ಏಕೆಂದರೆ ಶಿವಭಕ್ತರು ಪ್ರಮುಖವಾಗಿ ಆತ್ಮಶೋಧನೆಯ ಮಾರ್ಗವನ್ನು ಬೆಳೆಸಿಕೊಂಡಿರುತ್ತಾರೆ. ಮನುಷ್ಯರಲ್ಲಿರುವ ಅಜ್ಞಾನ, ಮೌಢ್ಯಾಂಧವ, ಗರ್ವ, ಸ್ವಾರ್ಥ, ದುರಾಭಿಮಾನ, ಸಂಕುಚಿತ ಮನೋಭಾವ, ದ್ವೇಷ, ಅಸೂಯೆ, ಮಾತ್ಸರ್ಯವೆಂಬ ದುರ್ಗುಣಗಳು ಆತ್ಮಶೋಧನೆಯಿಂದ ದೂರವಾಗುತ್ತವೆ. ವ್ಯಕ್ತಿಗತವಾಗಿ ಬೆಳೆಸಿಕೊಂಡ ಆತ್ಮಶೋಧನೆ ಸಾರ್ವತ್ರಿಕಗೊಳಿಸಿಕೊಂಡರೆ ಸಮಾಜದಲ್ಲಿ ಹಿಂಸೆ, ಅಸಮಾನತೆ, ಸಂಘರ್ಷವು ತಲೆದೋರದೆ ಹೊಸಬೆಳಕು ಕಾಣುವಂತಾಗುತ್ತದೆ.

## ೩.೭) <u>ಮಧುರ ಭಾವ :-</u>

ಪ್ರೀತಿಯಿದ್ದೆಡೆ ನಂಬಿಕೆಯಿರುತ್ತದೆ ಮತ್ತು ನಂಬಿಕೆಯಿದ್ದೆಡೆ ಪ್ರೀತಿಯೂ ಇರುತ್ತದೆ. ಆದ್ದರಿಂದ ನಂಬಿಕೆ ಸಹಿತವಾಗಿ ಪ್ರೀತಿಸಬೇಕು. ಶಿವ ಮತ್ತು ಭಕ್ತರ ನಡುವೆ ಪ್ರೀತಿಯೂ ಇದೆ, ನಂಬಿಕೆಯೂ ಇದೆ. ಶಿವಭಕ್ತರು ಶಿವನನ್ನು ಪ್ರೀತಿಸುವಾಗ ತನ್ನ ವ್ಯಕ್ತಿತ್ವವನ್ನು ಕಳೆದುಕೊಳ್ಳುತ್ತಾನೆ, ಅಂದರೆ ತನ್ನನ್ನೇ ತಾನು ಮರೆತುಹೋಗುತ್ತಾನೆ, ಇದನ್ನೇ ಭಕ್ತನ ನಿಜವಾದ ಪ್ರೀತಿ ಎನ್ನುವುದು.

ಹೀಗೆ ಶಿವನನ್ನು ಕುರಿತು ಸತತವಾಗಿ ಚಿಂತಿಸುವುದರಿಂದ ಅವನಲ್ಲಿ ಪ್ರೀತಿ ಮತ್ತು ಆಸಕ್ತಿ ಹುಟ್ಟುತ್ತದೆ. ತನ್ನೆಲ್ಲಾ ಪ್ರೀತಿಯನ್ನು ಶಿವನಿಗೆ ಅರ್ಪಿಸುವುದರಿಂದ ತನ್ನ ಲೌಕಿಕ ಜಗತ್ತಿನ ದ್ವೇಷ-ಅಸೂಯೆ-ಮೋಸ-ವಂಚನೆಯಂತಹ ಕಾರ್ಯಗಳಿಂದ ಬಹಳ ದೂರ ಉಳಿಯುವನು. ಶಿವನನ್ನು ಭಕ್ತನು ಬೇರೆ-ಬೇರೆ ಭಾವನೆಗಳಿಂದ ಪ್ರೀತಿಸುತ್ತಾನೆ. ಅವುಗಳಲ್ಲಿ ಪ್ರಮುಖವಾಗಿ ಪಿತೃಭಾವ, ಮಾತೃಭಾವ, ಸಖ್ಯಭಾವ, ಮಧುರಭಾವ, ಪ್ರೇಮಭಾವ ಮತ್ತು ದಾಸ್ಯಭಾವ. ಹರಿಹರನ ರಗಳೆಗಳಲ್ಲಿ ಈ ಎಲ್ಲಾ ಭಾವಗಳನ್ನು ಕಾಣುತ್ತೇವೆ, ಆದರೆ ಎಲ್ಲಾ ಭಾವಗಳ ಹಿಂದಿರುವುದು ಈ ಮಧುರ ಭಾವವೇ, ಇದೇ ಪ್ರಧಾನವಾದುದು. ಎಲ್ಲಿಯವರೆಗೂ ಭಕ್ತ ಶಿವನನ್ನು ಪ್ರೇಮಿಸುತ್ತಾನೋ ಅಲ್ಲಿಯವರೆಗೂ ಶಿವನು ಭಕ್ತರನ್ನು ಪ್ರೀತಿಸುತ್ತಾನೆ. ಇದರಂತೆ ಶಾಶ್ವತ ಶಿವಭಕ್ತಿಯನ್ನು ಮೆರೆದ ವಚನಕಾರರು ಶರಣಸತಿ-ಲಿಂಗಪತಿ ಎಂಬ ಭಾವದಿಂದ ಮುನ್ನಡೆದು ಶಿವನನ್ನು ಒಲಿಸಿಕೊಳ್ಳುವ ಪರಿಯನ್ನು ನೋಡುವ ಭಕ್ತನಿಗೆ ತಾನೇ ಪ್ರೇಮಿಯಾಗಿ ಶಾಶ್ವತ ಪ್ರೇಮವನ್ನು ನೀಡುತ್ತಾನೆ ಮತ್ತು ತನ್ನ ಕೈಲಾಸದಲ್ಲಿ ಗಣಪದವಿಯನ್ನು ಕೊಟ್ಟು ಹರಸುತ್ತಾನೆ.

ಉದಾಹರಣೆ: ಮಹಾದೇವಿಯಕ್ಕನ ರಗಳೆ, ಅಮ್ಮವ್ವೆ, ಪುಷ್ಪ, ಬಾಹೂರ ಬೊಮ್ಮಿತಂದೆ, ಕಣ್ಣಪ್ಪ, ಶಂಕರ ದಾಸಿಮಯ್ಯ, ಗುಂಡಯ್ಯ, ಕೆಂಬಾವಿ ಬೋಗಣ್ಣ, ಲಿಂಗಾರ್ಚನೆ ಮತ್ತು ಪಂಪಾಕ್ಷೇತ್ರದ ರಗಳೆಗಳಲ್ಲಿ ಭಕ್ತನು ಶಿವನನ್ನು ಮೊದಲಿಗೆ ಕಾಣುವುದೇ ಮಧುರ ಭಾವದಿಂದ ಎಂಬುದು ಪ್ರಧಾನ ಸತ್ಯ. ಭಕ್ತನು ಶಿವನನ್ನು ಎಷ್ಟು ಪ್ರೇಮಿಸುತ್ತಾನೋ ಅಷ್ಟೇ ಪ್ರೀತಿ-ವಾತ್ಸಲ್ಯವನ್ನು ಶಿವನೂ ತನ್ನ ಭಕ್ತರ ಮೇಲೆ ತೋರುವುದಲ್ಲದೆ ಅವನನ್ನು ತನ್ನ ಸಾಮೀಪ್ಯದಲ್ಲೇ ಇರಿಸಿಕೊಂಡು ಅವನೊಂದಿಗೆ ಅವಿನಾಭಾವ ಸಂಬಂಧವನ್ನು ಸದಾ ಹೊಂದಿರುತ್ತಾನೆ.

ಹರಿಹರನು ತನ್ನ ರಗಳೆಗಳಲ್ಲಿ ಶಿವಭಕ್ತಿಯನ್ನು ಮೆರೆಯುತ್ತಾ ಜನತೆಯ ಕವಿಯಾಗಿ ಜನರನ್ನು ವಿದ್ಯಾವಂತರು, ಭಕ್ತಸಮೂಹವನ್ನಾಗಿ ಮಾಡಲು ಹೊರಟಿರುವ ಆತನ ಕಾವ್ಯಶಕ್ತಿ ಲೋಕಶಿಕ್ಷಣದ ಕಾರ್ಯವೇ ಸರಿ. ಧರ್ಮಕ್ಕೆ ಮತ್ತು ಭಕ್ತಿಗೆ ಮಿತಿಯೆಂಬುದು, ವರ್ಗ-ವರ್ಣ, ಲಿಂಗಗಳಿಂದಲಾಗಲೀ ಇಲ್ಲ ಎಂಬುದನ್ನು ಸಾರಿದ ಹರಿಹರನು ಭಕ್ತಿಸಾಗರದಲ್ಲಿ ಯಾರೂ ಬೇಕಾದರೂ ಮುಳುಗೇಳಬಹುದು ಎಂಬ ಸಾರ್ವತ್ರಿಕ ಸತ್ಯವನ್ನು ಪ್ರಚಾರ ಪಡಿಸುತ್ತಾನೆ. ಇದೇ "ಶಿವ ಲೋಕ ಸತ್ಯ". ಶಿವನನ್ನು ಅರಿಯಲು ಸ್ವಭಕ್ತಿ, ಸ್ವ-ಅಭಿಯಾನ, ಆತ್ಮ ನಿಷ್ಠೆ, ಏಕಾಗ್ರತೆ, ಹೃದಯ ವೈಶಾಲ್ಯ, ಮಾನವೀಯ ಮೌಲ್ಯ ಮುಂತಾದ ಬದುಕಿನ ಪ್ರಾಮಾಣಿಕ ಆದರ್ಶಗಳು ಮುಖ್ಯವೇ ಹೊರತು ಬೇರೆ ಅಲ್ಲ ಎಂದು ತಿಳಿಸಿದ ಅವನು ಲೋಕಕ್ಕೆ ಶಿಕ್ಷಣ ಬೋಧನೆಯನ್ನು

ಮಾಡಿದ ಗುರುವಾದ. ಶಿವಶಕ್ತಿ, ಶಿವಶರಣರ ಸ್ತುತಿ, ಭಕ್ತರ ಭಕ್ತಿ-ಭಾವ ಪ್ರಪಂಚವನ್ನು ನವೀನ ಭಾವನೆಗಳಲ್ಲಿ ಬೆರೆಸುತ್ತಾ ಮಾನವ-ದೇವರ ಸಮ್ಮಿಲನದ ಭಾವನೆಗಳನ್ನು ಸೂಕ್ಷ್ಮವಾಗಿ ತನ್ನ ರಗಳೆಗಳಲ್ಲಿ ಚಿತ್ತರಿಸಿದ್ದಾನೆ.

ಶಿವಭಕ್ತ ಸಂಪನ್ನನ ಮನಸ್ಸು, ಭಕ್ತಿ-ಭಾವ, ಆದರ್ಶ ಮೌಲ್ಯ ಅವನಿಗೆ ಶಿವನ ಪ್ರಸಾದ, ಒಲುಮೆ, ಸ್ಥಾನವನ್ನು ಕ್ರಮಬದ್ಧವಾಗಿ ತನ್ನ ಎಲ್ಲಾ ರಗಳೆಗಳಲ್ಲೂ ಚಿತ್ತರಿಸಿರುವ ಹರಿಹರನು, ಶಿವಭಕ್ತನಲ್ಲದ ಸಾಮಾನ್ಯ ಭವಿಯ ಚಿತ್ರಣವನ್ನು ಮಾಡಿಕೊಟ್ಟಿದ್ದಾನೆ. ಒಂದೇ ಕಥೆಗಳಲ್ಲಿ ಭಕ್ತ-ಭವಿಯರ ವ್ಯತ್ಯಾಸಗಳನ್ನು ತಿಳಿಸಿಕೊಡುತ್ತಾ ಯಾವುದು ಪರಿಪೂರ್ಣ ಎಂಬುದನ್ನು ಹೆಚ್ಚು ತ್ರಾಸದಾಯಕವಲ್ಲದೆ, ಜನಸಾಮಾನ್ಯರೇ ಗುರುತಿಸಿಕೊಳ್ಳಲು ಅನುವು ಮಾಡಿಕೊಡುವಂತಹ ಪವಾಡ ಸದೃಶ ಕಥೆಗಳನ್ನು ತಿಳಿಸಿರುವುದರಿಂದ ಜನಸಾಮಾನ್ಯರ ಆಯ್ಕೆ ಭಕ್ತ ಪ್ರಪಂಚದ ಭಕ್ತಿ ಮಾರ್ಗವನ್ನೇ ಆಯ್ದುಕೊಳ್ಳುತ್ತದೆಯೇ ಹೊರತು, ಸೌಕರ್ಯ, ಮೋಕ್ಷ, ದೇವರ ಪ್ರೀತಿ-ವಾತ್ಸಲ್ಯ, ಕರುಣೆ ತ್ಯಾಗದ ಕರ್ಮದ ಬದುಕಿನ ಭವಿಗಳ ಮಾರ್ಗವನ್ನಲ್ಲ ಎಂಬುದು ಅಧ್ಯಯನದಿಂದ ಅರ್ಥಮಾಡಿಕೊಳ್ಳಲು ಸಾಧ್ಯವಿದೆ. ಹೀಗೆ ಹರಿಹರನು ಒಂದು ವಿಚಾರವನ್ನು ತನ್ನ ಕಾಲಮಾನದಲ್ಲಿ ಪ್ರತಿಪಾದಿಸಿ, ಪದೇಪದೇ ಉದಾಹರಿಸಿ ಭಕ್ತಿಯನ್ನು ಗೋಪುರದ ಹಾಗೆ ಕಟ್ಟುವಂತಹ ಕೆಲಸವನ್ನು ಎಡೆಬಿಡದೆ ಮಾಡಿದಂತಿದ್ದಾನೆ. ಭಗವದ್ಭಕ್ತಿಯನ್ನು ಬೆಳಸಿಕೊಂಡ ಭಕ್ತನು ಆತನ ದರ್ಶನಕ್ಕೆ ಹಾತೊರೆದು, ಪ್ರೀತಿಯಿಂದ, ಆದರದಿಂದ, ಅವನ ಧ್ಯಾನದಲ್ಲೇ ಮುಳುಗುತ್ತಾನೆ. ಆ ಭಕ್ತಿಕಾರ್ಯದಲ್ಲಿ ಅನಿರ್ವಚನೀಯವಾದ ಭಗವದಾನಂದವನ್ನು, ಸಂತಸದ ಸವಿಯನ್ನು ಅನುಭವಿಸುವ ಅವನಿಗೆ ಶಿವನೇ ಪ್ರಪಂಚ. ಹೀಗೆ ಭಕ್ತಿಯ ಸುಳಿಯಲ್ಲಿ ಸಿಕ್ಕಿ ಅವನ ನಿತ್ಯದ ಕಾರ್ಯವೇ ಶಿವನೇಮವಾಗಿ ಬಿಡುತ್ತದೆ. ಇಲ್ಲಿ ಒಂದು ಮುಖ್ಯವಾದ ಅಂಶವನ್ನು ಗಮನಿಸಬಹುದು, ಯಾವ ವಿಚಾರದಲ್ಲಿ ನಮಗೆ ಉತ್ಸುಕತೆ ಉಂಟಾಗುತ್ತದೆ, ಯಾವ ಕಾರ್ಯದಲ್ಲಿ ನಮ್ಮ ಮನಸ್ಸಿಗೆ ಆನಂದದ ಸವಿ ಹತ್ತುತ್ತದೆ, ಯಾವುದರಲ್ಲಿ ಅಭಿರುಚಿ ಒಡಮೂಡುತ್ತದೆ, ಅದು ನಮ್ಮ ಚಿತ್ತವನ್ನು ಬಲವಾಗಿ ಆಕರ್ಷಿಸಿ ಬಿಡುತ್ತದೆ. ಆ ಸೆಳೆತಕ್ಕೆ, ತಿರುಗಣಿಗೆ ಸಿಕ್ಕಿಬಿದ್ದೆವೊ ಅದರಿಂದ ಪಾರಾಗೆವು ಎಂಬಷ್ಟು ಒಳಹೊಕ್ಕು ಬಿಡುತ್ತೇವೆ, ತಲ್ಲೀನರಾಗಿಬಿಡುತ್ತೇವೆ. ಇದಕ್ಕೆ ಹರಿಹರನ ಶಿವಶರಣರ ರಗಳೆಗಳ ಕಥಾನಾಯಕರುಗಳೇ ಸಾಕ್ಷಿ ಎಂಬಂತೆ ಪ್ರತಿಯೊಬ್ಬರೂ ಹರಭಕ್ತಿಯ ನಿಷ್ಠೆಯನ್ನು, ಒಲವನ್ನು ಹೊಂದಿರುವ ಅನನ್ಯತೆಯನ್ನು ರಗಳೆಗಳಲ್ಲಿ ಕಾಣಬಹುದು. ಅಲ್ಲದೆ ಹರಿಹರನ ರಗಳೆಗಳ ಅಧ್ಯಯನದಿಂದ ಕಥನಕಲೆ, ವರ್ಣನಾ ವೈಖರಿ, ಭಕ್ತಿಯ ಆವೇಶ, ಅರ್ಚನಾಕ್ರಮಗಳು,

ಶಿವಕರುಣೆಗೆ, ಕೃಪೆಗೆ ಪಾತ್ರರಾಗುವ ಭಕ್ತರ ಕಥೆಗಳು, ಪರಮೇಶ್ವರನ ದರ್ಶನಲಾಭ, ಕೈಲಾಸಪ್ರವೇಶ, ಜಂಗಮರ ಸೇವೆ, ಭಕ್ತ ಪರಾಯಣತೆ, ಶಿವನೇಮ ಹೀಗೆ ಸಕಲವನ್ನೂ ಭಕ್ತರ ಮನ-ಹೃದಯಕ್ಕೆ ಹೋಗುವಂತೆ ಸ್ಪಷ್ಟವಾಗಿ ಕಾಣಿಸಿದ್ದಾನೆ. ನೀರು ಹರಿಯುವಂತೆ ಸೌಂದರ್ಯಗೊಳಿಸಿದ್ದಾನೆ. ಹೀಗೆ ಹರಿಹರನ ರಗಳೆಗಳ ಸಮಗ್ರ ಅಧ್ಯಯನದಿಂದ ಹೊಸ ತಾತ್ವಿಕ ನೆಲೆಗಟ್ಟಿನಲ್ಲಿ ಶಿವ ಮತ್ತು ಭಕ್ತರ ನಡುವಿನ ಭಾವನಾತ್ಮಕ ಸಂಬಂಧದ ನೆಲೆಗಳನ್ನು ಎಳೆ-ಎಳೆಯಾಗಿ ಈ ಮೇಲಿನಂತೆ ವಿಶ್ಲೇಷಿಸಬಹುದು. ಇಲ್ಲಿ ಶಿವಭಕ್ತರ ಮನಸ್ಸಿನ ಒಳನೋಟವನ್ನು ಶಿವದರ್ಶನದ ಸಾತ್ವಿಕ ಅಂಶಗಳು ಭಕ್ತರಲ್ಲಿ ಎಂತಹ ಭಾವಾವೇಶವನ್ನು ಸದೃಶಗೊಳಿಸುತ್ತವೆ ಎಂಬ ಅಂಶಗಳು ಅಧ್ಯಯನದಲ್ಲಿ ಗಮನಾರ್ಹವೆನಿಸಿದೆ.

ಹರಿಹರನ ಕಥಾನಾಯಕರೆಲ್ಲರೂ ಶಿವನನ್ನು ನಂಬಿ, ನೆಚ್ಚಿ ಬದುಕಿ ಬಾಳಿದವರೇ. 'ತಾಳಿದವನು ಬಾಳಿಯಾನು' ಎಂಬ ಗಾದೆಮಾತಿನಂತೆ ಇವರೆಲ್ಲರೂ ನಂಬಿಕೆ, ಪ್ರೀತಿ, ವಿಶ್ವಾಸ ಮತ್ತು ಭಕ್ತಿಯನ್ನು ಪರಶಿವನಲ್ಲಿ ಇಟ್ಟವರು. ಶಿವಭಕ್ತರ ರಕ್ತ ಸಂಚಾರದಲ್ಲೂ, ಯೋಚನೆ-ಚಿಂತನೆಯಲ್ಲೂ ಇರುವುದು ಒಂದೇ, ಅದು ಶಿವಭಕ್ತಿ. ಶಿವಭಕ್ತರು

- ಜೀವನದ ವೃತ್ತಿಯನ್ನೇ ಆಧ್ಯಾತ್ಮದ ಹಾದಿ ಮಾಡಿಕೊಂಡವರಿದ್ದಾರೆ.
- ಭೂಲೋಕದಲ್ಲೇ ದೇವಲೋಕವನ್ನು ಸೃಷ್ಟಿಸಿದ ಮಹಿಮಾನ್ವಿತ ಶಿವಶರಣ, ಶರಣೆಯರೂ ಇದ್ದಾರೆ.
- ಮುಗ್ಧರು, ನಿಷ್ಠರು, ಶಾಂತ ಪ್ರಿಯರು, ಧೃತಿವಂತರು, ಉಗ್ರವ್ರತ ನಿಷ್ಠರೂ ಇದ್ದಾರೆ.
- ದೈವಿ ಶಕ್ತಿಯನ್ನು ಪ್ರೇರೇಪಿಸಿಕೊಳ್ಳಲು ತಮ್ಮ ತಮ್ಮಲ್ಲೇ ಸ್ಪರ್ಧೆ ನಡೆಸಿ ಕೈಲಾಸವನ್ನೇರಿದ ಎಲ್ಲಾ ಶಿವಭಕ್ತರೂ ಇದ್ದಾರೆ.
- ಇವರೆಲ್ಲರೂ ಶಿವನನ್ನು ಪ್ರೇಮಿಸುವರು, ಸತ್ಕರಿಸುವವರೇ ಆಗಿದ್ದಾರೆ. ಹೀಗೆ ಈ ಶಿವಭಕ್ತರೆಲ್ಲರೂ ಮಾನವೀಯ ಭಾವನೆಗಳ ಮಹೋನ್ನತಿಕರಣ ಸಾಧಿಸುವುದರ ಅವಶ್ಯಕತೆಯನ್ನು ಹರಿಹರ ತನ್ನ ಕೃತಿಯಲ್ಲಿ ಮಾರ್ಮಿಕವಾಗಿ ತಿಳಿಸಿದ್ದಾನೆ. ಅವು
- ಶಿವಭಕ್ತಿ, ಶಿವಪೂಜೆ (ಲಿಂಗ-ಪ್ರಾರ್ಥನೆ, ಪೂಜೆ), ಕ್ರಿಯಾ ಮಾರ್ಗ ಶಿವಪೂಜೆ

- ಧ್ಯಾನಾಸಕ್ತಿ, ಶಿಸ್ತು, ಸಂಯಮ, ಜೀವನೋತ್ಸಾಹ, ಹೋರಾಟ

- ಪ್ರಾಣಾಯಾಮ, ಕಾಯಕ ಮಹತ್ವ, ವಿಶಾಲ ಮನಸ್ಸು ಬೆಳೆಸುವ ಜೀವನ ಪ್ರೀತಿಯನ್ನು ಭಕ್ತಿಯ ಜೊತೆ ಕಲಸುವ ಸಮಾನತೆಯ ಸಮಾಜವನ್ನು ಕಟ್ಟಿನಿಲ್ಲಿಸುವ ಪರಿಯನ್ನು ಹರಿಹರ ಅಭಿವ್ಯಕ್ತಿಸಿದ್ದಾನೆ.

- ಜಾತೀಯತೆ-ಭ್ರಷ್ಟತೆ-ಮೌಢ್ಯತೆಯಿಂದ ಕೂಡಿದ ಸಮಾಜಕ್ಕೆ ವಿರೋಧಿಯಾಗಿ ಜನಪರ ಸಮಾಜವನ್ನು ಕಟ್ಟುವ ಪ್ರಾಮಾಣಿಕ ಪ್ರಯತ್ನವನ್ನು ರಗಳೆಗಳಲ್ಲಿ ಕಾಣಬಹುದು. ಸ್ವಾಭಿಮಾನಿಯಾದ ಶಿವಭಕ್ತನಿಗೆ ಯಾರ ಹಂಗಿಗೂ ಒಳಗಾಗದೆ ಶಿವಭಕ್ತಿಯಲ್ಲೇ ಲೀನವಾಗಿರುವ ಆ ಭಕ್ತರ ಬದುಕೇ ಇದಕ್ಕೆ ಸಾಕ್ಷಿಯಾಗಿದೆ.

- ಶಕ್ತಿವಿಶಿಷ್ಟ ಶಿವನನ್ನು ಇಷ್ಟಲಿಂಗದ ಮುಖಾಂತರವಾಗಿ ತನ್ನ ಸ್ನೇಹಿತನಂತೆಯೋ, ಪ್ರೇಮಿಯಂತೆಯೋ, ತಂದೆಯಂತೆಯೋ ಇಲ್ಲವೆ ಒಡೆಯನಂತೆಯೋ ಪೂಜಿಸಿ ಸ್ತುತಿಸಿ ಅವನೊಳಗೆ ಬೆರೆಯುವ ಶಿವ ಭಕ್ತರು ಶಿವನೊಂದಿಗೆ ಸಮನ್ವಯತೆಯನ್ನು ಸಾಧಿಸಿದ್ದಾರೆ. ಆದ್ದರಿಂದ ಅಲ್ಲಿನ ಶಿವ ಭಕ್ತರು ಹುಟ್ಟಿದ್ದು ಭೂಮಿಯಲ್ಲಿ ಆದರೆ ಸೇರುವುದು ಕೈಲಾಸ, ಇಲ್ಲವೆ ಕೈಲಾಸದಲ್ಲಿ ಹುಟ್ಟಿ ಭೂಲೋಕಕ್ಕೆ ಆಗಮಿಸಿ ಮತ್ತೆ ಕೈಲಾಸವನ್ನೇ ಕೂಡಿ ಇಹ-ಪರದ ಸಮನ್ವಯತೆಯನ್ನು ಮೆರೆದಿದ್ದಾರೆ. ಕೈಲಾಸದಲ್ಲಿ ಗಣಪದವಿಯನ್ನು ಗಳಿಸಿ ಭಕ್ತರು ತಮ್ಮ ಇಷ್ಟದೈವವಾದ ಶಿವನೊಂದಿಗಿರುವ ಈ ಸುಂದರ ಕಥೆಗಳನ್ನು ಬರೆದಿರುವ ಹರಿಹರನ ರಚನಾ ಸಾಮರ್ಥ್ಯ ಮತ್ತು ಅವನ ಭಕ್ತಿಯ ಪರಾಕಾಷ್ಠೆ ಅಮೋಘವಾದುದು.

ಹರಿಹರನು ಭಕ್ತಿ-ಅನುಭಾವದ ಮಹತ್ವಾಕಾಂಕ್ಷೆಯಿಂದ, ಬೃಹತ್ತಾದ ಕಾವ್ಯ ಯೋಜನೆಯೊಂದನ್ನು ಹಾಕಿಕೊಂಡು ದೇಸಿ ಛಂದಸ್ಸಿನಲ್ಲಿ ನಿರ್ವಹಿಸಿದ್ದಾನೆ ಎಂಬುದು ರಗಳೆಗಳ ಅಧ್ಯಯನದಿಂದ ವೇದ್ಯವಾಗುತ್ತದೆ.

ಜನಪದ ಸಂಪ್ರದಾಯ, ಭಕ್ತಿ, ಸರಳತೆ, ನಂಬುಗೆಗಳು, ಪವಾಡಗಳು, ಸಂಸ್ಕೃತಿ, ಸಂಸ್ಕಾರದಂತಹ ಪರಿಕಲ್ಪನೆಗಳು ರಗಳೆಗಳಲ್ಲಿ ಎದ್ದು ಕಾಣುತ್ತದೆ. ಇವು ಹರಿಹರನು ಮಾನವ ಜೀವನದ ಬಗೆಗೆ ನಿರೂಪಿಸುವ ಉದಾತ್ತ ದೃಷ್ಟಿಕೋನವೆನಿಸಿವೆ. ಇದು ಬಾಳಿಗೊಂದು ಅಗತ್ಯವಾದ ದೈವೀನೆಲೆ, ಸಾಧನೆಯ ಅವಶ್ಯಕತೆಯನ್ನು ತಿಳಿಸಿಕೊಡುತ್ತದೆ. ಅಲ್ಲದೆ ನಿಶ್ಚಿಂತ ಬದುಕು,

ಜೀವನಾನಂದವನ್ನು ಒದಗಿಸಿಕೊಡುತ್ತದೆ. ರಗಳೆಗಳು ಕಾವ್ಯಪ್ರೇಮಿಗಳಿಗೆ ಆನಂದವನ್ನು ಸಾಮಾನ್ಯ ದೈವದತ್ತ ಸಂದೇಶವನ್ನು ತಿಳಿಸುತ್ತದೆ. ನಂಬಿಕೆಟ್ಟವರಿಲ್ಲ ಎಂಬ ಗಾದೆಮಾತಿನ ಸಾರವನ್ನು ಅಭಿವ್ಯಕ್ತಿಸಿಕೊಡುತ್ತದೆ.

ಹರಿಹರನ ರಗಳೆಗಳು ಸಾಮಾಜಿಕ ಅಭಿವೃದ್ಧಿ, ವ್ಯಕ್ತಿಗತ ನೀತಿ, ಬೆಳವಣಿಗೆ ಮತ್ತು ಸಾಮಾನ್ಯರು ಭಕ್ತರಾಗಿ ಆತ್ಮೋನ್ನತಿ ಗಳಿಸುವ ಆಧ್ಯಾತ್ಮಿಕ ಪ್ರತೀತಿಯನ್ನು ತಿಳಿಸಿಕೊಡುತ್ತದೆ. ರಗಳೆಗಳ ಮೂಲಕ ಹೊರಹೊಮ್ಮುವ ದರ್ಶನವು ಪ್ರಮುಖವಾಗಿ ದೈವಸಂಕಲ್ಪವನ್ನು ಅರಿಕೆ ಮಾಡಿಕೊಡುತ್ತದೆ, ಅಲ್ಲದೆ ಭಕ್ತನು ದೈವ ಪ್ರೇಮ, ಆತ್ಮೀಯತೆ, ವಾತ್ಸಲ್ಯ ಮತ್ತು ದಾಸತನದ ಪರಿಯನ್ನು ಶಿವನಲ್ಲಿ ಹೊಂದಲು ಉತ್ಸುಕನಾಗಿರುತ್ತಾನೆ.

ಹರಿಹರನ ರಗಳೆಗಳು ಕಾವ್ಯದೃಷ್ಟಿ, ವಸ್ತು, ಭಾಷೆ, ರೂಪ, ಶೈಲಿ, ಅರ್ಥಪೂರ್ಣ ಕಥೆಗಳ ಮೂಲಕ ಉದಾತ್ತ ಸಂದೇಶವನ್ನು ಒಳಗೊಂಡಿದ್ದು, ಸಾಹಿತ್ಯಾಸಕ್ತರಲ್ಲಿ ನವೀನ ಚಿಂತನೆಯನ್ನು ಮೂಡಿಸುತ್ತದೆ. ಶಿವ ಪಾರಮ್ಯತೆ ಮತ್ತು ಭಕ್ತ ಶ್ರೇಷ್ಠತೆಯನ್ನು ಈ ರಗಳೆಗಳು ಸಾರುತ್ತವೆ.

ಹರಿಹರನ ರಗಳೆಗಳಲ್ಲಿ ಶಿವಭಕ್ತರು ತನ್ನ ಜೀವನವನ್ನು ಶಿವನಿಗೆ ಸಮರ್ಪಣೆ ಮಾಡಿರುತ್ತಾರೆ. ಆದ್ದರಿಂದ ಅವರು ಜೀವನ್ಮುಕ್ತರಾಗಿರುತ್ತಾರೆ. ಇದರಿಂದ ಶಿವನು ಈ ಭಕ್ತರ ಮೂಲಕ ಕಾರ್ಯಪ್ರವೃತ್ತನಾಗುತ್ತಾನೆ. ಭಕ್ತರು ತನ್ನ ವೈಯಕ್ತಿಕ ಅಹಂಕಾರ, ಸ್ವಾರ್ಥ, ದುರಭಿಮಾನ, ದ್ವೇಷವನ್ನು ತ್ಯಜಿಸಿರುತ್ತಾನೆ. ಅವನು ಸದಾ ದೇವರಲ್ಲಿ ಜೀವಿಸುತ್ತಾನೆ ಮತ್ತು ಶಿವನು ಇವನಲ್ಲಿ ವಾಸಿಸುತ್ತಾನೆ. ಹಾಗಾಗಿ ಈ ಶಿವಭಕ್ತರು ಕೀರ್ತಿ, ಹಣ, ಪದವಿ, ಆಸೆ ಮೊದಲಾದ ಐಹಿಕ ಭೋಗಗಳಿಂದ ದೂರವಿರುತ್ತಾನೆ. ಅಲ್ಲದೆ ತನ್ನ ಆಂತರಿಕ ಚೈತನ್ಯದಲ್ಲಿ ಆಧ್ಯಾತ್ಮಿಕತೆಯ ಆಕರವನ್ನು ಕಂಡುಕೊಳ್ಳುತ್ತಾನೆ ಮತ್ತು ಯಾವುದೇ ಸಮಯದಲ್ಲೂ ತೃಪ್ತನಾಗಿರುತ್ತಾನೆ. ಯಾವ ರೀತಿಯ ಬದಲಾವಣೆಗಳು ಇವನ ಜೀವನದಲ್ಲಿ ಉಂಟಾದರೂ ಅದರಿಂದ ಅವನು ವಿಚಲಿತನಾಗುವುದಿಲ್ಲ. ಏಕೆಂದರೆ ಶಿವಭಕ್ತನಲ್ಲಿ ನಿಷ್ಠೆ ಮತ್ತು ನಿಶ್ಚಲತೆಯಿಂದ ಪರಿಶ್ರಮ ಭರಿತನಾಗಿರುತ್ತಾನೆ. ಮನದಲ್ಲಿರುವ ಎಲ್ಲಾ ಕಲ್ಮಶಗಳನ್ನು ತೊಡೆದು ಹಾಕಿರುತ್ತಾನೆ. ನಿರ್ಮಲ ಮನಸ್ಸು ಮತ್ತು ಕೇಂದ್ರೀಕೃತ ಬುದ್ಧಿಯಿಂದ ಶಿವನ ದರ್ಶನ ಮತ್ತು ಅಮರತ್ವವಾದ ಕೈಲಾಸದಲ್ಲಿ ಗಣಪದವಿ ಪಡೆದು ಸಾಧಕನಾಗುತ್ತಾನೆ. ಅವನ ಈ ಆಧ್ಯಾತ್ಮಿಕ ಪ್ರಗತಿಗೆ ನಿರುತ್ಸಾಹ,

ಸೋಮಾರಿತನ, ಎಚ್ಚರಗೇಡಿತನ ಶತ್ರುಗಳಂತಿದ್ದರೆ ಶ್ರದ್ಧೆ, ನಿಷ್ಠೆ, ಕಾಯಕ, ಮೌಲ್ಯಾದರ್ಶಗಳು, ಭಕ್ತಿ-ಧ್ಯಾನ, ಜಾಗೃತಿ, ತ್ಯಾಗ, ದಾನ-ಧರ್ಮಗಳು ಮಿತ್ರರಂತೆ ಕಾರ್ಯನಿರ್ವಹಿಸುತ್ತವೆ.

ಹರಿಹರನ ರಗಳೆಗಳಲ್ಲಿ ಶಿವಭಕ್ತರ ಪವಿತ್ರ ಹಾದಿಯ ಮೊದಲ ಮೆಟ್ಟಿಲೇ ಭಕ್ತಿ. ಅಲ್ಲಿ ಭಕ್ತಿ ಎಂದರೆ "ಭಗವಂತ ಮತ್ತು ಭಕ್ತನ ನಡುವಿನ ಸಂಬಂಧ, ಪರಮಾತ್ಮನ ಮೇಲೆ ಭಕ್ತನಿಗೆ ಇರುವ ಪ್ರೇಮ, ಅನುರಾಗ. ಮೋಕ್ಷಕ್ಕಾಗಿ ಭಗವಂತನ ಅನುಗ್ರಹ ಪಡೆಯುವ ಸಾಧನ"೨೪ ಎಂದಾಗುತ್ತದೆ.

**<u>ಹರಿಹರನ ರಗಳೆಗಳಲ್ಲಿ ಭಕ್ತಿಯ ಸ್ವರೂಪ :-</u>**

೧) ಭಕ್ತಿಯ ಮಾರ್ಗ ವೈವಿಧ್ಯಮಯವಾದುದು. ಅದಕ್ಕಾಗಿ ಮೌಲ್ಯಾದರ್ಶ ಪರಿಪಾಲನೆ ಅಗತ್ಯ.

೨) ಭಕ್ತನು ದೇಹ, ಮನಸ್ಸು ಮತ್ತು ಆತ್ಮವನ್ನು ತನ್ನೊಳಗಿರುವ ಶಿವನಿಗೆ ಅರ್ಪಿಸುವುದು.

೩) ಭಕ್ತನ ಕಾಯಕ/ಕಾರ್ಯ ಮತ್ತು ಅದರ ಫಲವನ್ನು ಶಿವನಿಗೆ ಅರ್ಪಿಸುವುದು. ಲಿಂಗ-ಜಾತಿ-ವರ್ಗ ಬೇಧವಿಲ್ಲದೆ ಸಮಾನ ಧರ್ಮದಿಂದ ಶಿವನನ್ನು ಒಲಿಸಿಕೊಳ್ಳುವುದು.

೪) ಮೋಹದಿಂದ ಬಿಡುಗಡೆ ಹೊಂದಿ ಶಾಶ್ವತ ಶಾಂತಿ ಪಡೆಯುವುದು.

೫) ಶಿವಭಕ್ತರ, ಶಿವಶರಣರ ಸಂಗ ಮತ್ತು ಸೇವೆ ಮಾಡುವ ಮೂಲಕ ಸ್ಫೂರ್ತಿಯ ಬದುಕಿಗೆ ಪ್ರೇರಣೆ. ಆಚಾರ-ವಿಚಾರ, ಆಹಾರಗಳ ನಿರ್ಬಂಧವಿಲ್ಲ.

ಉದಾ: ಶ್ವಪಚಯ್ಯ, ಸೋಮಾಸಿಮಾರ, ಕಣ್ಣಪ್ಪ, ಅತಿಭಕ್ತ, ತೆಲುಗು ಬೊಮ್ಮಯ್ಯರಂತಹ ಮಾಂಸಹಾರಿಗಳು.

೬) ಶಿವನನ್ನು ಒಲಿಸಿಕೊಳ್ಳುವಲ್ಲಿ ಸ್ವಾತಂತ್ರ್ಯದ ಅರಿವು ಮತ್ತು ಅತೃಪ್ತಿಯ ತುಡಿತವಿರುತ್ತದೆ.

೭) ಲೌಕಿಕ ಪ್ರಪಂಚದಲ್ಲಿದ್ದುಕೊಂಡೇ ಶಿವನನ್ನು ಅರಿಯುವುದು. ಶಿವನನ್ನು ತನ್ನ ಮಿತ್ರ-ಬಂಧು-ಒಡೆಯನೆಂದು ತಿಳಿಯುವ ಸಂಬಂಧ. ಆಗ ಶಿವ-ಭಕ್ತ ಒಂದೇ ಎಂಬ ಅನಿಸಿಕೆ ಬೆಳೆಸಿಕೊಳ್ಳುವುದು.

೮) ಶಿವಭಕ್ತನ ಸೌಮ್ಯತೆ, ಉಗ್ರನಿಷ್ಠೆ, ಪ್ರೀತಿ, ಶಾಂತ, ನಮ್ರತೆ-ವಿನಯತೆ, ಧೃತಿ, ಪ್ರೇಮ, ಮಾಧುರ್ಯ ಮತ್ತು ಹರ್ಷಭಾವದ ಮೂಲಕ ಶಿವನನ್ನು ಅರಿಯುವ ಕ್ರಮ.

೯) ತಮ್ಮ ನಿಜ ಮೌಲ್ಯಗಳಿಗೆ ಬದ್ಧರಾಗಿ ಬಾಳ್ವೆ ನಡೆಸಿದ್ದಾರೆ. ನಿಶ್ಚಲ ಮನಸ್ಸಿನ ಏಕಾಗ್ರತೆ, ಧೃಡ ಸಂಕಲ್ಪ, ತ್ಯಾಗದ ಮೂಲಕ ಅಮರತ್ವ ಅಂದರೆ ಶಿವಸಾಯುಜ್ಯ ಗಳಿಸುವುದು. ಶಿವನಿಂದ ಕೈಲಾಸ ಪ್ರವೇಶ, ಗಣಪದವಿ ಪಡೆದು ಆನಂದ ಭರಿತನಾಗುತ್ತಾನೆ.

---

**ಅಡಿಟಿಪ್ಪಣಿಗಳು** : ೨೪. ಮಹಾಕವಿ ಹರಿಹರನ ಪುರಾತನ ಶರಣರು – ಡಿ.ನಾಗೇಂದ್ರಪ್ಪ, ಪ್ರಸ್ತಾವನೆ (೨೦)

೧೦) ಶಿವನು ತನ್ನ ಸಾನಿಧ್ಯದಲ್ಲಿರುವ ಭಕ್ತರ ಅವಗುಣ ಕಂಡುಬಂದಲ್ಲಿ ಅವರನ್ನು ಭೂಲೋಕಕ್ಕೆ ಕಳಿಸಿ ಶುದ್ಧಿಯನ್ನಾಗಿಸಿ ಮತ್ತೆ ತನ್ನ ಬಳಿ ಕರೆದುಕೊಂಡು ಹರಸುತ್ತಾನೆ.

೧೧) ದರ್ಶನದ ಸಮಾನತೆ, ಭಕ್ತನ ಜೀವನದ ಹಿನ್ನೆಲೆಯಾಗುತ್ತದೆ. ಅಲ್ಲದೆ ಈ ದೃಷ್ಟಿಕೋನ ಅವನ ಹೊರಗಿನ ಜೀವನವನ್ನು ಪ್ರಕಾಶಿಸುತ್ತದೆ.

೧೨) ಶಿವಭಕ್ತನು ತನ್ನ ಜೀವನದ ಸರ್ವಸ್ವವನ್ನು ಶಿವನಿಗೆ ಮೀಸಲಿಡುತ್ತಾನೆ. ಯಾವುದೇ ಪರಿಸ್ಥಿತಿಯಲ್ಲೂ ಸರ್ವತ್ಯಾಗಕ್ಕೂ ಸಿದ್ಧನಾಗಿರುತ್ತಾನೆಯೇ ಹೊರತು ಸ್ವಾರ್ಥಿಯಾಗುವುದಿಲ್ಲ. ಭಕ್ತನಿಗೆ ಶಿವಭಕ್ತಿಯೆಂಬುದು ತನ್ನ ಉಸಿರಾಟದಷ್ಟೇ ಮುಖ್ಯವಾದುದು, ಅದೊಂದು ಜೀವನಕ್ರಮ.

೧೩) ಯಾವ ಕಾರ್ಯದಲ್ಲೂ ಹಿಂಜರಿಕೆ, ಸಾವು-ನೋವು ಅವನ ಭಕ್ತಿಯ ಸಾಧನೆಗೆ ಅಡ್ಡಿಯಾಗದು. ಏಕೆಂದರೆ ಅವನ ಸರ್ವಕಾರ್ಯಕ್ಕೂ ಶಿವನ ಪ್ರೇರಣೆಯಿದ್ದರೂ ಅದು ಅವನ ಅರಿವಿಗೆ ಬರದೆ ನಿಷ್ಠೆ, ಶ್ರದ್ಧೆಯಿಂದ ತನಗೆ ಎದುರಾದ ಪರಿಸ್ಥಿತಿಯನ್ನು ಎದುರಿಸುತ್ತಾನೆ. ಇದರಿಂದ ಕೆಲವೊಮ್ಮೆ ಜನರ ಹೊಗಳಿಕೆ/ತೆಗಳಿಕೆಗೂ ಒಳಗಾದರೂ ಅವನಿಗೆ ಅದರ ಯೋಚನೆಯ ಅರಿವಿಲ್ಲ. ಆಗ ಭಕ್ತನು ಮನುಷ್ಯರೂಪದ ಶಿವನೇ ಆಗುತ್ತಾನೆ. ಶಿವನು ಭಕ್ತನ ಹೃದಯದಲ್ಲಿ ತಾನು ನೆಲೆಸಿರುವ ಸತ್ಯವನ್ನು ಪ್ರಕಟಮಾಡುತ್ತಾನೆ. ಭಕ್ತನೇ ಶಿವ, ಶಿವನೇ ಭಕ್ತನೆಂದಾಗುತ್ತಾನೆ.

೧೪) ಸರ್ವವ್ಯಾಪಿಯಾದ ಶಿವನು ಇಲ್ಲಿ ಸಾಗರವಿದ್ದಂತೆ. ಹಲವಾರು ನದಿಗಳು ಹರಿದು ಸಾಗರವನ್ನು ಸೇರುವಂತೆ ಶಿವಭಕ್ತರು ತಮ್ಮ ಶುದ್ಧ ನಡೆ-ನುಡಿ-ಕಾರ್ಯಸಿದ್ಧಿಯಿಂದ ಸಾಗರವೆಂಬ ಶಿವನಲ್ಲಿ ಬಂದು ಸೇರುತ್ತಾರೆ. ಸಾಗರದೊಳಗೆ ನದಿಗಳು ಅಂತರ್ಗತವಾಗುವಂತೆ ಶಿವನಲ್ಲಿ ಒಂದಾಗುತ್ತಾರೆ. ಸಾಗರದಿಂದ ಹೊರಹೋದ ನೀರಹನಿಗಳು ನದಿಸೇರಿ ಮತ್ತೆ ಬಂದು ಸಾಗರವನ್ನೇ ಸೇರುವಂತೆ ಕೈಲಾಸದಿಂದ - ಭೂಲೋಕಕ್ಕೆ ಹೋಗಿ ತಮ್ಮ ಕಾರ್ಯಮುಗಿಸಿ ಸಾಗರವನ್ನು ಸೇರುವಂತೆ ಶಿವನ ಸಾನಿಧ್ಯದಲ್ಲಿ ಮಿಳಿತರಾಗುತ್ತಾರೆ. ಒಟ್ಟಾರೆ ಶಿವಭಕ್ತರು ದೈವಾನುಸಂಧಾನದಲ್ಲಿ ಕಾಲ ಕಳೆಯುತ್ತಾರೆ. ಅವರ ಚಿತ್ತಶುದ್ಧಿ, ಕಾಯಕನಿಷ್ಠೆ, ಮೌಲ್ಯಾದರ್ಶಗಳ ಪರಿಪಾಲನೆಯಿಂದ ಆಧ್ಯಾತ್ಮ ಜೀವಿ, ಸಾಧಕರೆನಿಸಿಕೊಳ್ಳುತ್ತಾರೆ.

೧೫) ಭಕ್ತ -ಭಗವಂತ ಎಂಬುದು ಭಿನ್ನವಾದುದಲ್ಲ, ಅದು ದೇಹ ಮತ್ತು ಅಂಗಗಳಿದ್ದಂತೆ. ಭಕ್ತನಲ್ಲಿ ಭಗವಂತನ(ಶಿವ) ಅವತರಣೆಯಾದಾಗ ಸಂಭ್ರಮಿಸುತ್ತಾನೆ. ಇವರಿಬ್ಬರ ಈ ವಾತ್ಸಲ್ಯ ಭಕ್ತಿ ಪ್ರೇಮರೂಪಕ್ಕೆ ತಿರುಗಿ ಶಿವನ ರೂಪ, ಪೂಜೆ, ಸ್ಮರಣೆ, ಧ್ಯಾನ, ದಾಸ್ಯ, ವಾತ್ಸಲ್ಯ, ಸ್ನೇಹ, ನಿವೇದನೆ, ತನ್ಮಯಗಳಲ್ಲಿ ಆಸಕ್ತಿ ಬೆಳೆಸಿಕೊಳ್ಳುತ್ತಾರೆ. ಶಿವನೊಡನೆ ಸಂಬಂಧ ಹೊಂದಿ

ಭಾವರೂಪಿಗಳಾಗಿರುತ್ತಾರೆ ಎಂದು ಹರಿಹರ ತನ್ನ ರಗಳೆಗಳ ಹಲವು ಕಥೆಗಳಲ್ಲಿ ಸಾದರಪಡಿಸಿದ್ದಾನೆ. ಹೀಗೆ ಹಲವಾರು ಕಥೆಗಳನ್ನು ಒಂದೇ ಮಾದರಿಯಲ್ಲಿ ಹೇಳಿದ್ದಾನೆ. ಕಾರಣ ಜನರಲ್ಲಿ ವೀರಶೈವ ಧರ್ಮಾಸಕ್ತಿ, ಭಕ್ತಿ-ಭಾವ ಬೆಳೆಸಿ ತನ್ನ ಧರ್ಮವನ್ನು ಮುಂಚೂಣಿಗೆ ತರುವ ಉದ್ದೇಶವಿದ್ದಂತೆ ತೋರುತ್ತದೆ. ಸಾಮಾಜಿಕ ದರ್ಶನವಾಗಿಯೂ ಬಿಂಬಿತವಾಗುತ್ತದೆ. ಇಲ್ಲಿನ ಸರಳ, ಸುಲಭ ಆಚರಣೆಯ ಅರಿವು ಜನರಲ್ಲಿ ಮೂಡಿಸಿ ವೀರಶೈವ ಧರ್ಮದ ಪ್ರಚಾರ ಕಾರ್ಯವನ್ನು ನಿಷ್ಠಾವಂತನಾಗಿ ಬೋಧಿಸಿದ್ದಾನೆ. ಸಾಹಿತ್ಯಾಸಕ್ತಿಯ ಕಾರಣದಿಂದ ಹರಿಹರನ ರಗಳೆಗಳ ಅಭ್ಯಾಸ ಮಾಡುವ ಪದ್ಧತಿ ಒಂದೆಡೆಯಿದ್ದರೆ, ಆಸಕ್ತಿ-ಕುತೂಹಲದಿಂದ ಅದರ ಕಥೆಗಳನ್ನು ತರಗತಿ, ಗೋಷ್ಠಿ, ಸಭೆ ಸಮಾರಂಭಗಳಲ್ಲಿ ಹೇಳುವ ಸಂದರ್ಭವಿದೆ.

# ಅಧ್ಯಾಯ : ೪

## ರಗಳೆಗಳಲ್ಲಿ ಹೊಸದೃಷ್ಟಿ

ಕನ್ನಡ ಸಾಹಿತ್ಯದಲ್ಲಿ ೧೨ನೇ ಶತಮಾನದ ಶಿವಶರಣರ ಶಿವಭಕ್ತಿ, ಕಾಯಕನಿಷ್ಠೆ, ಇಷ್ಟಲಿಂಗಪೂಜೆ, ದಾಸೋಹ ಪದ್ಧತಿ, ಅತಿಥಿ ಸತ್ಕಾರ, ಸರ್ವಸಮಾನತೆ ಮುಂತಾದ ಮೌಲ್ಯಗಳನ್ನು ತನ್ನ ರಗಳೆ ಸಾಹಿತ್ಯದಲ್ಲಿ ನೂತನ ಸಂಪ್ರದಾಯದ ರೀತಿಯಲ್ಲಿ ಅಳವಡಿಸಿಕೊಂಡ ಹರಿಹರ ಮತ್ತು ಅವನ ಸಾಹಿತ್ಯ ಜನಮನಗಳನ್ನು ಮೆಚ್ಚಿಸಿದಂತವು.

ಹರಿಹರನ ಕಾವ್ಯಾಭ್ಯಾಸದಿಂದ ಯಾರಿಗಾದರೂ ಆಧ್ಯಾತ್ಮಿಕ ಸಾಧನೆ ಮಾಡಬೇಕೆಂಬ ಹಂಬಲ ಗಟ್ಟಿಗೊಳ್ಳುತ್ತದೆ. ಲೌಕಿಕ ಪ್ರಪಂಚದಿಂದ ಪಾರಲೌಕಿಕ ಪ್ರಪಂಚದೆಡೆಗೆ ಮನಸ್ಸು ತುಡಿಯುವಂತೆ ಮಾಡುತ್ತದೆ. ಹಲವಾರು ಸಣ್ಣ ಸಣ್ಣ ಹಳ್ಳಗಳನ್ನು ತೋಡಿ ಅಲ್ಲಿ ನೀರನ್ನು ಪಡೆಯಬೇಕೆಂಬ ಹಂಬಲವನ್ನು ಬಿಟ್ಟು ಒಂದೇ ಸ್ಥಳದಲ್ಲಿ ಆಳವಾಗಿ ಹಳ್ಳವನ್ನು ತೋಡಿದಾಗ ಮಾತ್ರ ನೀರಿನ ಚಿಲುಮೆ ದೊರೆಯುತ್ತದೆ ಎಂಬ ಬದುಕಿನ ಸತ್ಯವನ್ನು ಇದು ತಿಳಿಸುತ್ತದೆ. ಅಂದರೆ ಒಂದೇ ದೇವರನ್ನು (ಶಿವ) ಆಳವಾಗಿ ಅರಿತಾಗ ಮಾತ್ರ ನಿಶ್ಚಲವಾದ ಭಕ್ತಿ ಬೆಳೆಯಲು ಸಾಧ್ಯವಾಗುತ್ತದೆ.

ಶಿವಶರಣರು ಜೀವನದಲ್ಲಿ ಕೈಗೊಂಡ ವೃತ್ತಿಗಳನ್ನು ಆಧ್ಯಾತ್ಮಿಕ ಸಾಧನೆಗೆ ಅಳವಡಿಸಿಕೊಳ್ಳಲು ದಾರಿದೀಪವಾಗುತ್ತದೆ. ಜೀವನದಲ್ಲಿ ಸುಳ್ಳು, ವಂಚನೆ, ಮೋಹ ಅಹಂಕಾರ, ಅನ್ಯಾಯದಿಂದ ಏನನ್ನೂ ಸಂಪಾದಿಸಲು ಸಾಧ್ಯವಿಲ್ಲ. ಅವೆಲ್ಲ ಅಲ್ಪಸುಖವೆಂಬ ಅರಿವು ಮೂಡಿಸುತ್ತದೆ. ಸತ್ಯ, ನ್ಯಾಯ, ದಾನ-ಧರ್ಮ, ತ್ಯಾಗ ಮತ್ತು ಆದರ್ಶಗಳನ್ನು ನಿತ್ಯಜೀವನದಲ್ಲಿ ಅಳವಡಿಸಿಕೊಂಡರೆ ಅವೇ ನಮ್ಮನ್ನು, ನಮ್ಮ ಕುಟುಂಬವನ್ನು ಹಾಗು ನಾವು ವಾಸಮಾಡುವ ಪ್ರದೇಶವನ್ನು ಕಾಪಾಡುತ್ತದೆ. ಅಂತಹ ಆದರ್ಶ ಮೌಲ್ಯಗಳೇ ಶಿವಭಕ್ತಿ ಎಂದು ಹಲವು ಕಥೆಗಳ ನಿದರ್ಶನದೊಂದಿಗೆ ಸಾರಿರುವ ಹರಿಹರ ಎಲ್ಲರನ್ನೂ ಶಿವಭಕ್ತರನ್ನಾಗಿ ಮಾರ್ಪಡಿಸಿ ಶಿವಪುರವನ್ನೇ ಸೃಷ್ಟಿಸಿದ್ದಾನೆ.

"ಹನ್ನೆರಡನೆಯ ಶತಮಾನ ಕರ್ನಾಟಕದಲ್ಲಿ ಹೊನ್ನಿನಕ್ಷರಗಳಲ್ಲಿ ಬರೆದಿಡುವಂಥದ್ದಾಗಿದೆ. ಈ ಕ್ರಾಂತಿಯು ವೀರಶೈವ ಮತಕ್ಕಷ್ಟೇ ಸಂಬಂಧಿಸಿದುದಲ್ಲ. ಕರ್ನಾಟಕದಲ್ಲಿ ಎಲ್ಲ ಮತಗಳ ಜೀವಾಳವನ್ನು ತಗುಲಿದುದು ಅದು ಮತ ಮಾತ್ರಕ್ಕೆ ಸಂಬಂಧಪಟ್ಟ ಕ್ರಾಂತಿಯಲ್ಲ. ಜನಸಾಮಾನ್ಯರಿಗೆ ಸಂಬಂಧಪಟ್ಟ ಸರ್ವವಿಷಯಗಳಿಗೂ ತಗುಲಿದ ಕ್ರಾಂತಿ ಸರ್ವತೋಮುಖವಾದದ್ದು. ಅದು ಭಾವನಾತರಂಗದಲ್ಲಿಯೇ ನಿಂತು ಮುಂದೆ ಬುಡಮೇಲಾದ ಕ್ರಾಂತಿಯಲ್ಲ; ಕಾರ್ಯರಂಗಕ್ಕಿಳಿದು ಕಳೆಗೊಂಡು ಕಡೆತನಕ ಕಾಲೂರಿನಿಂತ ಕಾರ್ಯಗಳಿಂದ ಕೂಡಿದ ಕ್ರಾಂತಿ"೧ ಹೀಗೆ ಹರಿಹರನು ೧೨ನೇ ಶತಮಾನದಲ್ಲಿ ಸಾಹಿತ್ಯವನ್ನು ಜನತೆಯೆಡೆಗೆ ತಂದ ಶರಣರ ಕ್ರಾಂತಿ ಜೀವನವನ್ನು ಮುಂದುವರಿಸಿದ್ದಾನೆ. ಆದ್ದರಿಂದ ಹರಿಹರನನ್ನು "ಕ್ರಾಂತಿಕವಿ" ಎಂದಿರುವ ವಿಮರ್ಶಕರ ಅಭಿಪ್ರಾಯ ಒಪ್ಪುವಂತದ್ದು.

ಹರಿಹರನ ರಗಳೆಗಳು ಸಾಹಿತ್ಯ ಚರಿತ್ರೆಯಲ್ಲಿ ಜೀವಕಳೆಯನ್ನು ತುಂಬಿಕೊಳ್ಳಲು ಅವು ತಾಳಿರುವ ಹೊಸದೃಷ್ಟಿಕೋನದ ನೆಲೆಗಳೇ ಕಾರಣವಾಗಿದೆ. ಅವು,

**೧. ಕಥಾನಾಯಕರ ಸಾಮಾಜಿಕ ಮೌಲ್ಯಗಳು**

**೨. ಶಿವ-ಭಕ್ತರನ್ನು ಪರೀಕ್ಷಿಸುವ ರೀತಿ**

**೩. ಪವಾಡ ಸಾದೃಶ್ಯತೆಯ ಪರಿ**

**೪. ಶಿವತತ್ವ ಪ್ರತಿಪಾದನೆ**

**೫. ಭಕ್ತನ ಆದರ್ಶ ಮತ್ತು ಜೀವನ ದರ್ಶನ**

**೬. ಲೋಕಾನುಭವ – ಶಿವಾನುಭವ**

ಈ ಎಲ್ಲಾ ಅಂಶಗಳನ್ನು ಒಳಗೊಂಡಿರುವ ಹರಿಹರನ ರಗಳೆಗಳು, ಪಂಪಾದಿಗಳು ರಚಿಸಿದ್ದ ಧಾರ್ಮಿಕ, ಲೌಕಿಕ ಪರಂಪರೆಗಿಂತ ಭಿನ್ನವಾದ ನೆಲೆಗಳಿಂದ, ನವೀನ ಮಾದರಿಯಲ್ಲಿ ರಚಿತವಾಗಿದೆ. ಆದ್ದರಿಂದ ರಗಳೆಗಳ ಕಂಪು, ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಒಂದು ಮೈಲಿಗಲ್ಲಾಗಿ ನಿಲ್ಲುತ್ತವೆ ಎಂಬುದು ಸತ್ಯ. ವಚನಸಾಹಿತ್ಯದ ಪರಂಪರೆಯನ್ನು ಮುಂದುವರಿಸುವ ಈ ಭಕ್ತಿ ಸಾಹಿತ್ಯ, ಜನಮಾನಸದಲ್ಲಿ ಬೇರೂರುವಂತೆ ಮಾಡಿದೆ.

---

ಅಡಿಟಿಪ್ಪಣಿಗಳು : ೧. ಹರಿಹರದೇವ – ಎಸ್.ಬಸವರಾಧ್ಯ, ಪು.ಸಂ. ೨೧೩

## ೪.೧ : ಕಥಾನಾಯಕರ ಸಾಮಾಜಿಕ ಮೌಲ್ಯಗಳ ವಿಶ್ಲೇಷಣೆ :-

ಆರಂಭದಿಂದಲೂ ಕನ್ನಡ ಕಾವ್ಯಗಳ ಕಥಾನಾಯಕರು, ರಾಜರು, ಧೀಮಂತರು, ವೀರರು ಹೀಗೆ ಖ್ಯಾತಿವೆತ್ತವರೇ ಆಗಿರುತ್ತಿದ್ದರು. ಪಂಪ, ರನ್ನರ ಕಾವ್ಯಗಳಲ್ಲಿ ಕ್ರಮವಾಗಿ ಅರ್ಜುನ, ಭೀಮ, ಕೃಷ್ಣರೇ ಮೊದಲಾದವರು ಕಥಾನಾಯಕರಾದರೆ ಸಮೀಕರಣವಾಗಿ ೨ನೇ ಅರಿಕೇಸರಿ, ಇರಿವಬೆಡಂಗ ಸತ್ಯಾಶ್ರಯ ರಾಜರುಗಳು ನಾಯಕರಂತೆ ಚಿತ್ರಿತರಾಗುತ್ತಿದ್ದರು. ಧಾರ್ಮಿಕ ಕಾವ್ಯಗಳಲ್ಲಿ ಜೈನರಾದ ವೃಷಭನಾಥ, ಅಜಿತನಾಥ, ಶಾಂತಿನಾಥ ಮೊದಲಾದ ತೀರ್ಥಂಕರರು ನಾಯಕ ಸ್ಥಾನವನ್ನು ಅಲಂಕರಿಸುತ್ತಿರುತ್ತಿದ್ದರು. ಪಂಡಿತವರ್ಗ ಮತ್ತು ರಾಜರ ಆಸ್ಥಾನದ ನಡುವೆಯೇ ಇದ್ದ ಸಾಹಿತ್ಯ ಪರಂಪರೆ ಹರಿಹರನ ಕಾಲಕ್ಕೆ ಬೀದಿಬೀದಿಯಲ್ಲಿ ಸುತ್ತಾಡಿ ಯಾರಲ್ಲಿ ಶಿವಭಕ್ತಿ, ಮೌಲ್ಯಾದರ್ಶ ಎಂಬ ಅರ್ಹತೆಗಳಿವೆಯೋ ಅವರಿಗೆ ಮಾತ್ರ ನಾಯಕಪಾತ್ರ ಒಲಿಯಿತು. ಹೀಗೆ ಹರಿಹರನ ರಗಳೆಗಳಲ್ಲಿ ನಾಯಕಪಟ್ಟ ಪಡೆದುಕೊಳ್ಳುವುದು ಸುಲಭವಾಗಿದ್ದು, ಅವರು ಶಿವಭಕ್ತರಾಗಿದ್ದರೆ ಸಾಕಾಗಿತ್ತು. ಅವರ ಜಾತಿ, ಲಿಂಗ, ವಯಸ್ಸು, ಅಂತಸ್ಥಿಕೆ, ಕೌಟುಂಬಿಕ ಹಿನ್ನೆಲೆ, ಶಿಕ್ಷಣ ಮುಂತಾದ ಯಾವುದೇ ಅರ್ಹತೆಗಳು ಮುಖ್ಯವೆನಿಸುವುದಿಲ್ಲ. ಶಿವಭಕ್ತರಲ್ಲದವರು ಭವಿಗಳಾಗುತ್ತಾರೆ. ಭವಿಗಳು ಶಿವಭಕ್ತರ ಎದುರು ಸೋತವರಾಗಿ, ಶರಣಧರ್ಮವನ್ನು ಅನುಸರಿಸಲು ಮುಂದಾಗುತ್ತಾರೆ. ಕೆಲವೊಮ್ಮೆ ಶಿವಭಕ್ತರನ್ನು ವಿರೋಧಿಸಿದ ಜೈನ, ವೈಷ್ಣವ ಧರ್ಮೀಯರೇ ಶಿವಭಕ್ತರಿಂದ ತಕ್ಕ ಶಿಕ್ಷೆಯನ್ನು ಅನುಭವಿಸುವಂತಾಗಿ, ಸೋತು ಶೈವಧರ್ಮವನ್ನು ಸೇರುತ್ತಾರೆ. ಊರಿಗೆ ಊರೇ ಶಿವಪುರವಾಗುತ್ತದೆ. ಇದಕ್ಕೆ ಕಾರಣ ಕಥಾನಾಯಕನ ಭಾವಪೂರ್ಣ ಶಿವಭಕ್ತಿಯ ಆಚರಣೆಯೊಂದಿಗೆ ಅವನ ಮೌಲ್ಯದರ್ಶವೇ ಹೊರತು ಬೇರೆಯದಲ್ಲ.

ಹರಿಹರನ ರಗಳೆಗಳಲ್ಲಿ ಭಕ್ತಿ ಎನ್ನುವಂತದ್ದು ಭಾವದ ವಿಷಯವಾಗಿದೆ. ಈ ಭಾವದಲ್ಲಿ ಪ್ರೇಮಭಾವ ತುಂಬಿಕೊಂಡು ಅದನ್ನು ಉತ್ಕಟವಾಗಿ ಅನುಭವಿಸುವಂತಹದ್ದು ಕಾಣುತ್ತದೆ. ಎಲ್ಲಾ ರಗಳೆಗಳಲ್ಲಿ ಶಿವ-ಭಕ್ತರ ನಡುವೆ ಪ್ರೇಮವೆಂಬ ಭಾವನಾತ್ಮಕ ಸಂಬಂಧವನ್ನು ಕಟ್ಟಿಕೊಡುತ್ತಾನೆ. ಅದರೊಂದಿಗೆ ಶಿವಭಕ್ತರು ಶಿವಸ್ವರೂಪಿಗಳೂ ಆಗಿರುತ್ತಾರೆ ಎಂದು ಹರಿಹರ ಸಾರಿದ್ದಾನೆ. ಹರಿಹರನ ಕಥಾಪಾತ್ರಗಳು ಭಕ್ತಿಯ ಭಾಗವಾಗಿ ಬರುವ ಸ್ವಾವಲಂಭಿ ಜೀವನವನ್ನು ಬದುಕುವ ಭಕ್ತರು ಎಂಥ ಕಡಿಮೆ ಸ್ಥಾನದವರಾಗಿದ್ದರೂ ತೊಂದರೆಯಿಲ್ಲ, ವೃತ್ತಿಯಲ್ಲಿ ತಾದಾತ್ಮ್ಯ ಸಾಧಿಸುತ್ತಾ ಭಕ್ತಿಯನ್ನು ಏಕೀಕರಣಗೊಳಿಸಿಕೊಂಡಿದ್ದರೆ ಸಾಕು, ಅವರು ಅದೆಲ್ಲವನ್ನು ಶಿವಶರಣನಿಗಾಗಿ ಇಲ್ಲವೆ ಶಿವನಿಗಾಗಿ ಸಮರ್ಪಣ ಮನೋಭಾವದಿಂದ ಅರ್ಪಿಸುವ ಗುಣ ಹೊಂದಿರುತ್ತಾರೆ.

## ಕಥಾನಾಯಕರು ಮತ್ತು ಅವರ ಸಾಮಾಜಿಕ ಮೌಲ್ಯಗಳು :-

### (೧) ಕಾಯಕ ನಿಷ್ಠೆ :-

ಕ್ರಿ.ಶ.೧೨ ಮತ್ತು ೧೩ನೇ ಶತಮಾನದಲ್ಲಿ ಶಿವಶರಣರು ಸಮಾಜಕ್ಕೆ ಹೊರೆಯಾಗಬಾರದೆಂಬ ನಿಲುವು ತಾಳಿ, ದುಡಿದೇ ಜೀವನವನ್ನು ನಡೆಸುವವರಾಗಿದ್ದರು. ಅವರ ಪಾಲಿಗೆ ದುಡಿಮೆಯೇ ದೇವರಾಗಿತ್ತು. ತಾವು ಮಾಡುವ ಕಾಯಕವನ್ನು ಹೀನವೆಂದು ಪರಿಗಣಿಸದೇ ಅದನ್ನೇ ಆಧ್ಯಾತ್ಮಿಕ ಸಾಧನೆಯನ್ನಾಗಿ ಪರಿವರ್ತಿಸಿಕೊಂಡು ಶಿವಭಕ್ತಿ ಮೆರೆದರು. ವೃತ್ತಿಯಲ್ಲೇ ಧಾರ್ಮಿಕ ಭಕ್ತಿಯನ್ನು ಸಾಧಿಸುವುದರ ಜೊತೆಗೆ ಆರ್ಥಿಕ ಸಮಾನತೆಯ ಕಡೆಗೆ ಓಗೊಟ್ಟರು. ಶುದ್ಧ ಆರೋಗ್ಯ ಪೂರ್ಣ ಸಮಾಜದ ನಿರ್ಮಾಣಕ್ಕೆ ಇಂತಹ ಕಾಯಕನಿಷ್ಠೆಯು ಅವಶ್ಯಕವಾದುದು.

ರೈತನಾಗಿದ್ದ ಇಳೆಯಾಂಡ ಗುಡಿಮಾರ, ಮಡಿವಾಳನಾಗಿದ್ದ ತಿರುಕುರುಂಪೆ ತೊಂಡರ, ಮೀನು ಹಿಡಿಯುವವನಾಗಿದ್ದ ಅತಿಭಕ್ತ, ಮಡಿಕೆ ಮಾಡುವವನಾಗಿದ್ದ ಕುಂಬಾರ ಗುಂಡಯ್ಯ, ಬೇಡರ ಕಣ್ಣಪ್ಪ, ಗೋಪಾಲಕ ಆನಾಯನಾರ, ಅಂತರಂಗ-ಬಹಿರಂಗ ಶತ್ರುಗಳನ್ನು ಎದುರಿಸುವುದನ್ನೇ ಉದ್ಯೋಗವನ್ನಾಗಿ ಮಾಡಿಕೊಂಡಿದ್ದ ಸೇದಿರಾಜ, ಅಶ್ವಪಾಲಕ ಮಾದಾರ ಚೆನ್ನಯ್ಯ, ಮಂತ್ರಿ ಬಸವಣ್ಣ ಮತ್ತು ಜ್ಞಾನಕ್ರಿಯೆಯನ್ನೇ ಉದ್ಯೋಗವನ್ನಾಗಿಸಿಕೊಂಡಿದ್ದ ಅಲ್ಲಮಪ್ರಭುಗಳೇ ಮೊದಲಾದ ಶಿವಶರಣರ ಕಾಯಕನಿಷ್ಠೆಯ ಅಂಶಗಳು ರಗಳೆಗಳಲ್ಲಿ ಆಧ್ಯಾತ್ಮಿಕ ಸಾಧನೆಗೆ ಹೇಗೆ ವೃತ್ತಿಗಳು ಕಾರಣವಾಗಿವೆ ಎಂಬುದನ್ನು ಸ್ಪಷ್ಟವಾಗಿ ಹರಿಹರನು ಅಭಿವ್ಯಕ್ತಿಸಿದ್ದಾನೆ. ಇನ್ನು ಕೆಲವು ಶಿವಭಕ್ತರು ಉದ್ಯೋಗವನ್ನು ಮಾಡದೆ ಹೋದರೂ ಶಿವಭಕ್ತರ ಸೇವೆಯನ್ನೇ ನಿಷ್ಠೆಯಿಂದ ಮಾಡುವವರ, ಶಿವಭಕ್ತರ ಕಥೆಯನ್ನು ಹರಿಹರ ತಿಳಿಸಿದ್ದಾನೆ.
ಉದಾ: ಅಮರನೀತಿ, ಪಾಂಡ್ಯಮಹಾದೇವಿ, ಎಡೆಗೆಳೆಯರ, ಕಳಚೆಂಗ ಪೆರುಮಾಳ, ಬಾಹೂರ ಬೊಮ್ಮಿತಂದೆ, ಮೂರ್ಖನಾಯನಾರರೇ ಮೊದಲಾದವರು. ಇವರುಗಳೆಲ್ಲಾ ತಮ್ಮ ಬಳಿ ಇರುವ ಸಂಪತ್ತನ್ನು ವಿನಿಯೋಗಿಸಿ ಶಿವ, ಶಿವಭಕ್ತರ ಸೇವೆ, ಪೂಜಾ ಕೈಂಕರ್ಯಗಳನ್ನು ನೆರವೇರಿಸಿ ಆಧ್ಯಾತ್ಮ ಸಾಧಕರಾದವರು. ಆದರೆ ಹರಿಹರನು ಇವರ ಉದ್ಯೋಗನಿಷ್ಠೆಯ ಕಡೆಗೆ ಒತ್ತನ್ನು ನೀಡದೆ ಅವರ ಸೇವಾಕಾರ್ಯ, ದಾನ-ಧರ್ಮದ ವಿಚಾರಗಳನ್ನೇ ತಿಳಿಸಿ, ಆ ಮೂಲಕವೇ ಅವರು ಶಿವಸಾಯುಜ್ಯವನ್ನು ಸಂಪಾದಿಸಿರುವುದರ ಕಥೆಯನ್ನು ತಿಳಿಸಿದ್ದಾನೆ. ಇಲ್ಲಿ ಕವಿ ಶಿವಭಕ್ತರ ನಿಶ್ಚಲ ಮನಸ್ಸಿನ ಭಕ್ತಿ ಮತ್ತು ಸೇವಾಕಾರ್ಯದ ಮನೋಭಾವವನ್ನು ಅಭಿವ್ಯಕ್ತಿಸಿದ್ದಾನೆ. ಆದರೆ ಇಲ್ಲಿ ಕಠಿಣ ಪರಿಶ್ರಮದ ಕೆಲಸ/ಉದ್ಯೋಗದ ಯಾವುದೇ ವಿವರಗಳು ಇಲ್ಲ. ಒಂದೊಂದು ರಗಳೆಯು

ಕಾಯಕನಿಷ್ಠೆಯ ಮಹತ್ವವನ್ನು ಸಾರಿದರೆ, ಮತ್ತೊಂದಷ್ಟು ರಗಳೆಗಳು ಶಿವಭಕ್ತಿ, ಪೂಜೆ, ನೇಮ-ನಿಷ್ಠೆ ಮತ್ತು ಶಿವಭಕ್ತರ ಸೇವೆಯ ಮಹಿಮೆಯನ್ನು ಕುರಿತು ತಿಳಿಸುತ್ತವೆ.

ಕಾಯಕ ನಿಷ್ಠೆಗೆ ತದ್ವಿರುದ್ಧವಾದ ಅಂಶಗಳನ್ನು ಕೆಲವು ರಗಳೆಗಳಲ್ಲಿ ಗುರುತಿಸಬಹುದು. ಹಾವಿನ ಹಾಳ ಕಲ್ಲಯ್ಯ ರಗಳೆಯಲ್ಲಿ ಅಕ್ಕಸಾಲಿಗ ವೃತ್ತಿಯನ್ನು ನಿರ್ವಹಿಸುತ್ತಿದ್ದ ಅವನ ತಂದೆಯು ಉದ್ಯೋಗ ಮಾಡಬೇಕೆಂದು ಮಗನಿಗೆ ತಿಳಿಯಹೇಳಿದನು. ಆದರೆ ತಂದೆಯ ಮಾತಿಗೆ ವಿರುದ್ಧವಾಗಿ ಕಲ್ಲಯ್ಯ ಉದ್ಯೋಗ ಮಾಡದೆ ಶಿವಪೂಜೆಯಲ್ಲಿಯೇ ತಲ್ಲೀನನಾಗಿದ್ದನು. ಇದರಿಂದ ಕುಪಿತನಾದ ತಂದೆಯು ಮಗ ಕಲ್ಲಯ್ಯನನ್ನು ಬಡಿದಾಗ ಆಕ್ರೋಶದಿಂದ ತಂದೆಯನ್ನೇ ಥಳಿಸಿ, ಜಗತ್ತಿನ ಒಡೆಯ ತಂದೆ ಶಿವನಿರಬೇಕಾದರೆ ನನ್ನನ್ನು ಬಡಿಯಲು ಇವನು ಯಾರು? ಎಂದು ಕೋಪದಿಂದ ತನ್ನನ್ನೇ ತಾನು ಇರಿದುಕೊಂಡನು. ಹೊಟ್ಟೆಯಲ್ಲಿದ್ದ ಕರಳುಗಳನ್ನೆಲ್ಲಾ ಎಳೆದುಕೊಂಡು ಶಿವಲಿಂಗಕ್ಕೆ ಸುತ್ತಿ, ಉದ್ಯೋಗ ಮಾಡಬೇಕೆಂದು ಬಡಿದ ತಂದೆಗೆ ಬೈದುಕೊಳ್ಳುತ್ತಾ ಶಿವನನ್ನೇ ಸ್ತುತಿಸಿ ಮೂರ್ಛೆಹೊಂದಿದನು. ಈ ಸ್ಥಿತಿಯನ್ನು ಗಮನಿಸಿದಾಗ ಕಾಯಕ ಮಹತ್ವದ ಅರಿವನ್ನು ಇಲ್ಲಿ ನಿರ್ಲಕ್ಷಿಸಿರುವುದಕ್ಕೆ ಸಾಕ್ಷಿಯಿದೆ. ವೃತ್ತಿಗಿಂತ ಭಕ್ತಿಯೇ ಮೇಲುಗೈ ಸಾಧಿಸಿದೆ. ಕೆಂಭಾವಿ ಭೋಗಣ್ಣನಾಗಲಿ, ಏಕಾಂತ ರಾಮಿತಂದೆ, ಓಹಿಲಯ್ಯ, ಉದ್ಭಟದೇವ, ಹಲಾಯುಧ, ಮಲಯರಾಜ, ಮಲುಹಣ ಇವರೇ ಮೊದಲಾದ ಶಿವಭಕ್ತರ ಭಕ್ತಿಯ ನೆಲೆಗಳೇ ವಿಭಿನ್ನವಲಯದ್ದು. ಇವರು ಯಾರು, ಯಾವ ಕಾಯಕವನ್ನು ಮಾಡುತ್ತಾರೆ ಎಂಬ ಸುಳಿವನ್ನೂ ನೀಡುವುದಿಲ್ಲ. ದಾನ-ಧರ್ಮ ಮಾಡುವುದಕ್ಕೆ ಅವಶ್ಯವಾದ ಹಣದ ಮೂಲ ಎಲ್ಲಿಯದು ಎಂಬಂಶವೂ ಪ್ರಶ್ನೆಯಾಗಿಯೇ ಉಳಿಯುತ್ತದೆ. ತಂಡೇಶ ಪಿಳ್ಳೆಯ ತಂದೆ ಮಗನಿಗೆ ಊರಿನ ಗೋವುಗಳನ್ನು ಮೇಯಿಸುವ ಕಾಯಕಕ್ಕೆ ನಿಯೋಜಿಸುತ್ತಾನೆ. ಆದರೆ ಅವನ ಗುಪ್ತ ಶಿವಭಕ್ತಿಯನ್ನು ಪ್ರಕಟಮಾಡಿದ್ದಕ್ಕೆ ತಂದೆಯನ್ನು ಬಡಿದು ಸಾಯಿಸಿದ ಪ್ರಸಂಗವನ್ನು ಗಮನಿಸಿದಾಗ ಕೆಲವು ಶಿವಭಕ್ತರ ಪಾಲಿಗೆ ಉದ್ಯೋಗ ಅಮುಖ್ಯವಾಗುವುದನ್ನು ಗುರುತಿಸಬಹುದು. ನಿಂಬಿಯಕ್ಕ ಮಾಡುವ ಕಾಯಕಸೇವೆ, ಕಥೆಯ ದೃಷ್ಟಿಯಿಂದ ಕೇಳುವುದೇ ಮುಜುಗರವೆನಿಸುತ್ತದೆ. ವಾಸ್ತವ ಜೀವನದಲ್ಲಿ ಅದರ ಸತ್ಯಾಸತ್ಯತೆಗಳನ್ನು ಪರಿಶೀಲಿಸ ಹೊರಟಾಗ ಅವಳು ವೇಶ್ಯೆಯೆನಿಸಿಕೊಂಡು, ಅದು ಅನೈತಿಕತೆ ಆಗುತ್ತದೆ. ಹೀಗೆ ಕೆಲವು ಶಿವಭಕ್ತರಲ್ಲಿ ಕಾಯಕನಿಷ್ಠೆಯೇ ಆಧ್ಯಾತ್ಮಿಕ ಸಾಧನೆಗೆ ದಾರಿಯಾದರೆ, ಮತ್ತೆ ಕೆಲವರು ಶಿವನಪೂಜೆ, ಭಕ್ತರ, ಶರಣರ ಸೇವೆಯಲ್ಲಿಯೇ ಮುಳುಗಿರುವುದನ್ನು ಗುರುತಿಸಬಹುದು. ಪ್ರಸ್ತುತ ಸಮಾಜದಲ್ಲಿಯೇ ದೇವರ ಹೆಸರಿನಲ್ಲಿ ಹಣ ಸಂಪಾದಿಸುವ,

ಮನೆಮನೆಗೆ ಭಿಕ್ಷೆಗೆ ಬರುವ ಸಾಧು ಸನ್ಯಾಸಿಗಳು, ಹಿಮಾಲಯಪರ್ವತ, ವನಗಳಲ್ಲಿ ವಾಸಿಸುವ ಭಕ್ತರಾಗಿ, ತಪಸ್ವಿಗಳಾಗಿ, ಅಘೋರಿಗಳಾಗಿರುವವರನ್ನು ನಾವು ನೆನೆಯಬಹುದು. ಅವರು ತಮ್ಮ ಜೀವನದ ಹಾದಿಯನ್ನು ಧಾರ್ಮಿಕ ಭಕ್ತಿವಲಯಕ್ಕೆ ಸೀಮಿತಗೊಳಿಸಿಕೊಂಡಿರುತ್ತಾರೆ.

(೨) <u>ದಾನ-ಧರ್ಮ-ತ್ಯಾಗ :-</u>

ಹರಿಹರನ ರಗಳೆಗಳ ಮತ್ತೊಂದು ಪ್ರಮುಖವಾದ ಸಾಮಾಜಿಕ ಮೌಲ್ಯವೆಂದರೆ ದಾನ-ಧರ್ಮ-ತ್ಯಾಗ. ಇವು ಒಂದು ಮಾನವೀಯ ಮೌಲ್ಯವೆನಿಸಿಕೊಳ್ಳುತ್ತದೆ. ಉಳ್ಳವರು ಇಲ್ಲದವರಿಗೆ ನೀಡುವ ದಾನ-ಧರ್ಮ-ತ್ಯಾಗಗಳು ಅವರ ಬದುಕನ್ನು ಹಸನಾಗಿಸಲು ಸಾಧ್ಯವಾಗುತ್ತದೆ. ಬಡತನದ ಸಮಸ್ಯೆ ನಿವಾರಣೆಯಾಗಿ ಆರ್ಥಿಕ ಸಮಾನತೆಗೆ ಒತ್ತು ನೀಡಿದಂತಾಗುತ್ತದೆ. ಉದಾ: ಇಹಃ ಪಗೆಂಡರ, ಇಳೆಯಾಂಡ ಗುಡಿಮಾರ, ಅಮರನೀತಿ, ಸಿರಿಯಾಳ, ಬಸವಣ್ಣ, ಮನುನೀತಿ ಚೋಳ, ಮಾನಕಂಜರರೇ ಮೊದಲಾದ ಮಹಾಶಿವಭಕ್ತರು ಸಮಾಜದಲ್ಲಿ ಬಡಜನರು, ಶಿವಭಕ್ತರಿಗೆ ಹೇರಳವಾಗಿ ದವಸ-ಧಾನ್ಯ, ವಸ್ತ್ರ, ಹಣ-ಸಂಪತ್ತು ಉದಾರ ಮನೋಭಾವದಿಂದ ನೀಡಿ ಸಮಾಜೋದ್ಧಾರದ ಕಾರ್ಯಗಳಿಗೆ ಪ್ರೇರಿತರಾಗಿದ್ದರು. ಆದರೆ ಮತ್ತೆ ಕೆಲವು ಶಿವಭಕ್ತರಲ್ಲಿ ಈ ರೀತಿಯ ಗುಣಗಳಿರುವುದು ಹರಿಹರ ಗುರುತಿಸಿಲ್ಲ. ಅದರಲ್ಲೂ ಪ್ರಮುಖವಾಗಿ ತಂದೆ ಸಂಪಾದಿಸಿದ ಹಣವನ್ನು ತನ್ನ ಸುಖಕ್ಕೆ ಮಾತ್ರ ಮೀಸಲಾಗಿಸಿಕೊಂಡು, ಹಣ ತೀರಿಹೋದಾಗ ಪ್ರೇಯಸಿಯ ಮಾತಿನಂತೆ ಶಿವನ ಒಲುಮೆಯನ್ನು ಬೆಳೆಸಿಕೊಂಡ ಮಲುಹಣನ ಚರಿತ್ರೆ ದಾನ-ಧರ್ಮದಂತಹ ಮೌಲ್ಯವನ್ನು ಮೆರೆದಿರುವುದಿಲ್ಲ. ತಿರುನೀಲಕಂಠ, ಉದ್ಭಟದೇವ, ಮಲಯರಾಜ ಮೊದಲಾದ ರಗಳೆಗಳಲ್ಲಿ ದಾನ-ಧರ್ಮದ ವಿಷಯಗಳು ಪ್ರಸ್ತಾಪವಾಗಿರುವುದಿಲ್ಲ. ಜೀವನದಲ್ಲಿ ಕೈಗೊಳ್ಳುವ ವೃತ್ತಿಗಳನ್ನು ಆಧ್ಯಾತ್ಮಿಕಕ್ಕೆ ಅಳವಡಿಸಿಕೊಳ್ಳುವ ಕೌಶಲ್ಯ ಶಿವಭಕ್ತರದು. ಜೀವನ ವೃತ್ತಿಗಳಿಂದ ಗಳಿಸಿದ ಸಂಪಾದನೆ ಇಲ್ಲವೆ ತನ್ನ ಬಳಿ ಇರುವ ಸಂಪತ್ತಿನಿಂದ ದಾನ-ಧರ್ಮದಂತಹ ಕಾರ್ಯಗಳನ್ನು ಮುಕ್ತ ಮನಸ್ಸಿನಿಂದ ಮಾಡುತ್ತಿದ್ದರು. ಈ ಮಾನವೀಯ ಗುಣಗಳನ್ನು ಪರಮಾತ್ಮನ ಸಾಕ್ಷಾತ್ಕಾರದ ಸಾಧನಗಳನ್ನಾಗಿ ಬಳಸಿಕೊಂಡ ಶಿವಭಕ್ತರ ಪ್ರಪಂಚವನ್ನು ತನ್ನ ರಗಳೆಗಳಲ್ಲಿ ಹರಿಹರನು ಕಟ್ಟಿಕೊಟ್ಟಿದ್ದಾನೆ. ಇಳೆಯಾಂಡ ಗುಡಿಮಾರ, ಅಮರನೀತಿ, ಸಿರಿಯಾಳ, ಮನುನೀತಿ ಚೋಳ, ನಿಡುಮಾರ ದೇವ, ಚೇರಮನಾರರ ರಗಳೆಗಳಲ್ಲಿ ಧರ್ಮನಿಷ್ಠ ಮನೋಭಾವಗಳು ಎದ್ದುತೋರುತ್ತದೆ.

## (೩) <u>ಜೀವನದ ಆದರ್ಶಗಳು :-</u>

ಮಾನವರು ಜೀವನದಲ್ಲಿ ಸಾಧನೆಮಾಡಿ ಸಾಫಲ್ಯವನ್ನು ಪಡೆಯುವ ಸಲುವಾಗಿ ಇಡೀ ತನ್ನ ಪರಿಸರವನ್ನೇ ಶಿವಮಯಗೊಳಿಸುವ ಹರಿಹರ, ಭಕ್ತಿಯ ಏಕಾಂತ ಜೀವನವನ್ನೇ ಕಾವ್ಯದ ವಸ್ತುವನ್ನಾಗಿ ಮಾಡಿಕೊಂಡಿದ್ದಾನೆ. ರಗಳೆಯ ಕೊನೆಯಲ್ಲಿ ಈ ಶಿವಭಕ್ತನ ಅತಿಭಕ್ತಿಗೆ ಭವಬಂಧನದಿಂದ ದೂರವಾದ ಮೋಕ್ಷಪದವಿಯನ್ನು ನೀಡಿ, ಯಶಸ್ಸು ಕೋರಿ ಹರಸಿರುವಂತೆ ನನಗೂ ಕೃಪೆದೋರು ಹಂಪೆಯ ವಿರೂಪಾಕ್ಷದೇವನೆ ಎಂದು ಬೇಡುವ ಆ ಸಾಲುಗಳಲ್ಲಿ ಹರಿಹರನ ವಿನಮ್ರ ಸ್ವರೂಪದ ಭಯ-ಭಕ್ತಿ ಎದ್ದು ತೋರುತ್ತದೆ. ಆದ್ದರಿಂದ ಹರಿಹರನ ಕುರಿತು ಡಾ|| ಜಿ.ಎಸ್. ಶಿವರುದ್ರಪ್ಪ ಹೇಳಿರುವ ಮಾತುಗಳು ಅರ್ಥಪೂರ್ಣವೆನಿಸಿದೆ. ಹರಿಹರನ ರಗಳೆಗಳು ಮುಖ್ಯವಾಗಿ ಭಕ್ತಿಜೀವನ ಅಂತರಂಗದ ಕೈಪಿಡಿಗಳು, ಅವನ ದರ್ಶನಕ್ಕೆ ನಿದರ್ಶನವಾಗಿ ಒಡ್ಡಿದ ಕಥಾಪ್ರತಿಮೆಗಳು ವಚನಕಾರರ ಜೀವನ ಹಾಗು ಮೌಲ್ಯಗಳಿಗೆ ಬರೆದ ಭಾಷ್ಯಗಳಾಗಿವೆ.೨ ಹೀಗೆ ಹರಿಹರನಿಗೆ ಇಷ್ಟು ಸವಿಸ್ತಾರವಾದ ಜೀವನಶ್ರದ್ಧೆ ಬೆಳೆಯಲು ಪ್ರಮುಖವಾಗಿ ಆತನ ಕೌಟುಂಬಿಕ ಹಿನ್ನೆಲೆ, ಗುರುಕುಲ ವಿದ್ಯಾಭ್ಯಾಸ, ಶೈವ-ವೀರಶೈವ ಮತ ಸಂಪ್ರದಾಯಗಳು, ತಮಿಳುನಾಡಿನ ಅರವತ್ತಮೂರು ಪುರಾತನರು, ವಚನ ಸಾಹಿತ್ಯದ ಕಾಲದಲ್ಲಿ ಶಿವಶರಣರ ನೇರ ನಡೆ-ನುಡಿ, ಧರ್ಮಶ್ರದ್ಧೆ, ಕಾಯಕತತ್ವ, ಶಿವಾನುಭವ ಹಾಗು ಕ್ರಾಂತಿ ಮನೋಭಾವ ಭಾರತದಲ್ಲಿದ್ದ ಶಿವಭಕ್ತರು ಮತ್ತು ವೈಯಕ್ತಿಕ ಜೀವನಾನುಭವ, ಶಿವಭಕ್ತಿ, ಧರ್ಮಶ್ರದ್ಧೆ ಮೌಲ್ಯಗಳೇ ಕಾರಣವಿರಬಹುದು.

ಸತ್ಯ, ಮನಃಶುದ್ಧಿ, ನಿಷ್ಠೆ, ನ್ಯಾಯ ನೀತಿಗಳೆಂಬ ಮೌಲ್ಯ ಆದರ್ಶಗಳನ್ನು ಕಥೆಯ ಮೂಲಕ ಪ್ರತಿಷ್ಠಾಪನೆಯನ್ನು ಹರಿಹರ ಮಾಡಿದಂತಿದ್ದಾನೆ. ಏಕಾಂತರಾಮಯ್ಯ, ಕುಲಚ್ಚೆರೆ, ಮೊನೆಯಿಡುವರ, ಮೆರೆಮಿಂಡದೇವ, ಇಹಃ ಪಗೆಯಾಂಡರ, ಸೇದಿರಾಜ, ಕಲಿಕಾಮದೇವರ, ಶಂಕರದಾಸಿಮಯ್ಯ ಮೊದಲಾದ ರಗಳೆಗಳಲ್ಲಿ ಸಂಘರ್ಷಗಳು ಹೋರಾಟದ ಹೆಸರಿನಲ್ಲಿ ಮೂಡಿಬಂದಿದ್ದರೂ, ಶಿವಶರಣರು ತಮ್ಮ ಜೀವನದ ಆದರ್ಶಗಳಿಗೆ ಬದ್ಧರಾಗಿಯೇ ನಡೆದಿರುವುದು ವಿಶೇಷವಾಗಿದೆ. "ಭಕ್ತಿ, ನಿಷ್ಠೆ, ಸಮರ್ಪಣೆ – ಇವುಗಳು ದೈವೀ ಜೀವನದ ಸಾಧನೆಗಳೆಂಬ ಮಾತು ಸ್ಪಷ್ಟವಿದೆ. ಆದರೆ ಜೀವನದ ವ್ಯವಹಾರ ಬೇರೆ; ಆಧ್ಯಾತ್ಮದ ಹಾದಿ ಬೇರೆ ಎಂಬ ವಿಭಾಜಕ ದೃಷ್ಟಿಯು ಸಾಮಾನ್ಯವಾಗಿ ಮಾನವರಲ್ಲಿ ಕಂಡುಬರುತ್ತಿದೆ. ಇದಲ್ಲದೆ ಜೀವನದ ವ್ಯವಹಾರವು ಆಧ್ಯಾತ್ಮದ ಸಾಧನೆಗೆ ತೊಡಕಾಗುವುದೆಂದು ತಿಳಿದು ಜೀವನದಿಂದ ವಿರಕ್ತಿ ಪಡೆಯುವ

---

ಅಡಿಟಿಪ್ಪಣಿಗಳು : ೨. ಹರಿಹರ ಕವಿಯ ಜೀವನದರ್ಶನ – ಡಾ|| ಬಿ.ಬಿ.ಹೆಂಡಿ, ಪು.ಸಂ. ೩೪,

ಆಧ್ಯಾತ್ಮದ ಸಾಧನೆಗೆ ತೊಡಕಾಗುವುದೆಂದು ತಿಳಿದು ಜೀವನದಿಂದ ವಿರಕ್ತಿ ಪಡೆಯುವ ಹವಣಿಕೆಯಾದರೂ ಇರುತ್ತದೆ. ಹರಿಹರನ ಶಿವಗಣ ಪ್ರಪಂಚದಲ್ಲಿ ಇಂತಹ ದೃಷ್ಟಿಗಳಿಗೆ ಅವಕಾಶವಿಲ್ಲ, ದಿನಚರಿಯ ವ್ಯವಹಾರದೊಂದಿಗೆ ದೈವೀ ಜೀವನವನ್ನು ಸಾಧಿಸಬೇಕೆಂಬ ದೃಷ್ಟಿಯನ್ನು ಹರಿಹರನು ನಿರೂಪಿಸಿದ್ದಾನೆ”೩ ಇಂಥ ಮೌಲ್ಯದರ್ಶನಗಳನ್ನೊಳಗೊಂಡ ಭಕ್ತಿ ಸೂತ್ರವು ಸುತ್ತಣ ಜೀವನವನ್ನು ಅರ್ಥೈಸುವ ಸಾಧನವನ್ನು ಹರಿಹರನು ತನ್ನ ರಗಳೆಗಳಲ್ಲಿ ದರ್ಶನವನ್ನಾಗಿಸಿದ್ದಾನೆ.

ಹರಿಹರ ಕವಿಯನ್ನು ಕನ್ನಡ ಸಾಹಿತ್ಯದ ಎಲ್ಲಾ ಕವಿಗಳಿಗಿಂತ ವಿಭಿನ್ನಗೊಳಿಸಿರುವುದು ಕವಿಯ ಜೀವನಾದರ್ಶ ಮತ್ತು ಅವರ ಕೃತಿಗಳಿಂದ ಅಲ್ಲಿ ವ್ಯಕ್ತವಾಗುವ ಜೀವನ ಆದರ್ಶ ಮತ್ತು ದರ್ಶನಗಳು ಎಲ್ಲಾ ಕಾಲಕ್ಕೂ ಮೌಲ್ಯಗಳಾಗಿ ನಿಲ್ಲುವ ಸಾಮರ್ಥ್ಯವನ್ನು ಹೊಂದಿರುವಂಥವು. ಅಲ್ಲದೆ ಸಮಾಜಕ್ಕೆ “ಬದುಕು” ಎಂಬುದನ್ನು ದೇವರು ಕೊಟ್ಟ ವರ, ಅದನ್ನು ಭಕ್ತಿ-ಭಾವದಲ್ಲಿ ಮುಳುಗಿಸಬೇಕು ಎಂಬುದು ವೇದ್ಯವಾಗುತ್ತದೆ. ಬದುಕನ್ನು ಕಲೆ ಮತ್ತು ನಂಬಿಕೆಯಾಗಿ ತಿಳಿದು ಅರ್ಥಪೂರ್ಣವಾಗಿ ಜೀವಿಸುವುದು ಮನವನ ಚಾತುರ್ಯವೆನಿಸುತ್ತದೆ. ಎಷ್ಟು ವರ್ಷ ಬದುಕಿದ ಎನ್ನುವುದಕ್ಕಿಂತಲೂ ಹೇಗೆ ಬದುಕಿದ ಎನ್ನುವುದೇ ಬಾಳುವೆಯಲ್ಲಿರುವ ಸಾರ್ಥಕ್ಯ, ಅದನ್ನು ಭಕ್ತಿ-ಭಾವದಿಂದ, ಧರ್ಮಯುತವಾಗಿ, ಆದರ್ಶ ಅನುಕರಣೀಯವಾಗಿ ಕೈಗೊಳ್ಳುವುದರಲ್ಲೇ ಮಾನವ ಜೀವಿತದ ಪರಮೋನ್ನತಿ ಅಡಗಿರುವುದು ಎಂದೆನಿಸುತ್ತದೆ.

ಸಾವಿರಾರು ವರ್ಷಗಳು ಸಂದರೂ ಈ ಭೂಮಿಯಲ್ಲಿ ಎಷ್ಟೋ ಜನರು ಜನಿಸುತ್ತಾರೆ, ಜೀವಿಸುತ್ತಾರೆ, ನಂತರ ಮೃತಿ ಹೊಂದುತ್ತಾರೆ. ಆದರೆ ಹುಟ್ಟಿದ ಎಲ್ಲರೂ ಸ್ಮರಣೀಯರಾಗುವುದಿಲ್ಲ. ಹುಟ್ಟು-ಸಾವುಗಳೆಂಬ ಈ ಪ್ರಕ್ರಿಯೆಯು ನಿರಂತರವಾಗಿದ್ದರೂ ಎಲ್ಲೋ ಅಲ್ಲೊಬ್ಬರು, ಇಲ್ಲೊಬ್ಬರು ಮಾತ್ರ ಸ್ಮರಣೀಯರಾಗುತ್ತಾರೆ. ಹುಟ್ಟುವವರೆಲ್ಲರೂ ರಾಜರಾಗಿಯೇ ಶ್ರೀಮಂತರಾಗಿಯೇ ಹುಟ್ಟುವುದಿಲ್ಲ. ಬದಲಿಗೆ ಬಂದ ಸ್ಥಿತಿಯಲ್ಲೇ ಬದುಕನ್ನು ಸ್ವೀಕರಿಸುತ್ತಾ ಕಲೆ, ಕೃಷಿ, ಉದ್ಯೋಗ, ವ್ಯಾಪಾರ, ಧಾರ್ಮಿಕ, ಸಮಾಜ ಸೇವೆ ಹೀಗೆ ವೈವಿಧ್ಯಮಯ ಕಸುಬಿನಲ್ಲಿ ನಿರತರಾಗಿ ಸಂತೃಪ್ತಿಯಾದಾಗಲೇ ಬದುಕಿಗೆ ಒಂದು ಅರ್ಥ. ಇದೇ ತತ್ವವನ್ನೇ ಅಂದು ವಚನಕಾರರು ಸಾರಿದ್ದು, ಬದುಕನ್ನು ಕರುಣಿಸಿದಂತಹ ಶಿವನನ್ನು ಸದಾ ನೆನೆಯುತ್ತಾ, ಸಮರ್ಪಣಾ ಮನೋಭಾವದಿಂದ ಯಾರು ದುಡಿಯುತ್ತಾರೋ ಅವರೇ ಶ್ರೇಷ್ಠರು.

---

ಅಡಿಟಿಪ್ಪಣಿಗಳು : ೩. ಹರಿಹರನ ರಗಳೆಗಳಲ್ಲಿ ಜೀವನದರ್ಶನ – ಪ್ರೊ.ಸ.ಸ.ಮಾಳವಾಡ, ಪು.ಸಂ. ೬೩, ೬೭

ಬಸವಣ್ಣನವರ "ಕಾಯಕವೇ ಕೈಲಾಸ" ಎಂಬ ವೃತ್ತಿನಿಷ್ಠೆಯ ತತ್ವವನ್ನು ನಂಬಿ, ಜೀವನದ ಆದರ್ಶಗಳನ್ನು ಮೈಗೂಡಿಸಿಕೊಂಡಿದ್ದಾರೆ.

ದುಡಿದು ಗಳಿಸಿದ ಸಂಪಾದನೆಯಲ್ಲಿ ದೀನದಲಿತರ ಕಣ್ಣೀರೊರೆಸುವ, ಬದುಕನ್ನು ಹಸನುಗೊಳಸುವ, ಬದುಕುವ ಮತ್ತು ಬದುಕಲು ಅವಕಾಶವನ್ನೀಯಬೇಕೆಂಬ ತತ್ವ ಬಾಳಿಗೆ ಇಳಿಯುತ್ತದೆ. ಆಗ ಮಾತ್ರ ಬದುಕು ಒಂದು ಸುಂದರ ಕಲೆಯಾಗುತ್ತದೆ. ಸಾರ್ಥಕ ಬದುಕಾಗುತ್ತದೆ ಎಂಬ ಸಾರ್ಥಕದ ಬದುಕಿನ ಸಾರವನ್ನು ಹರಿಹರ ಶಿವಭಕ್ತರ ಕಥೆಗಳ ಮೂಲಕ ಸಾದರಪಡಿಸಿದ್ದಾನೆ. ಇಂಥ ಜೀವನಾದರ್ಶನಗಳನ್ನು ಒಳಗೊಂಡಿರುವ ಶಿವಭಕ್ತರ ಭಕ್ತಿಯುತವಾದ ಜೀವನ ದರ್ಶನವನ್ನು ಹರಿಹರ ತನ್ನ ಕೃತಿಗಳಲ್ಲಿ ಎತ್ತಿಹಿಡಿದಿದ್ದಾನೆ. ಅಲ್ಲದೆ "ಬಸವಣ್ಣನವರ ವಚನಗಳು ಭಕ್ತಿ, ಕಾಯಕ, ದಾಸೋಹಗಳನ್ನು ಬಿಂಬಿಸುತ್ತವೆ. ಇಂಥ ಭಕ್ತಿಯನ್ನು ಹರಿಹರ ಆಚರಿಸಿದ ಮತ್ತು ಅಂತ ಭಕ್ತಿಯುಳ್ಳ ಪುರಾತನರ, ಶರಣರ ಚರಿತ್ರೆಗಳನ್ನು ರಚಿಸಿದ. ಸ್ವತಃ ತಾನೇ ಭಕ್ತನಾದುದರಿಂದ ತನ್ನ ಕಾವ್ಯಗಳಲ್ಲಿ ಅತ್ಯಂತ ತಾದಾತ್ಮ್ಯನಾಗುವುದರಿಂದ ಆ ಕಾವ್ಯಗಳು ಓದುಗರ ಅಂತರಂಗದ ಕದಗಳನ್ನು ತೆರೆಯುತ್ತವೆ. ಸಾಮರಸ್ಯದ ಸುಖವನ್ನು ನೀಡುತ್ತವೆ."[೪] ಹರಿಹರನ ರಗಳೆಗಳು ಮಾನವನ ಭಕ್ತಿಪಾಶದಿಂದ ಶಿವನನ್ನು ಸೆರೆ ಹಿಡಿಯುತ್ತದೆ. ಶಿವನನ್ನು ಬಿಟ್ಟು ಅಗಲಾರದಷ್ಟು ಭಕ್ತನ ಮನಸ್ಸು ಗಟ್ಟಿಯಾಗುತ್ತದೆ.

## (೪) <u>ವರ್ಗ-ವರ್ಣ-ಸ್ತ್ರೀ ಬೇಧ ನಿರಾಕರಣೆ :-</u>

ಆದಿಕಾಲದಿಂದಲೂ ಮನುಷ್ಯರಿಂದ ನಿರ್ಮಾಣಗೊಂಡಿರುವ ಅಸಮಾನತೆಯನ್ನು ಹರಿಹರ ಕವಿ, ೧೨ನೇ ಶತಮಾನದ ವಚನಕಾರರ ಆಶಯದಂತೆ ಅದನ್ನು ನಿರಾಕರಿಸುವ ಮತ್ತು ಹೋರಾಟ ಮನೋಭಾವದ ಮೂಲಕ ಗೆದ್ದುನಿಲ್ಲುವ ಮನೋಧೈರ್ಯ ಅಚ್ಚುಕಟ್ಟಾಗಿ ಮೂಡಿದೆ. "ಪುರಾತನ ಶರಣರ ಚರಿತ್ರೆಗಳನ್ನು ಕಾವ್ಯಗೊಳಿಸುವುದೆಂದರೆ ಅವರ ಮೌಲ್ಯಗಳನ್ನು ಕಾವ್ಯಗೊಳಿಸುವುದಾಗಿದೆ. ಈ ಕೆಲಸವನ್ನು ಸಾಧಿಸುವುದಕ್ಕಾಗಿ ಹರಿಹರ ವಚನಮೌಲ್ಯಗಳಾದ ವರ್ಗಬೇಧ, ವರ್ಣಬೇಧ ಮತ್ತು ಲಿಂಗಬೇಧ ನಿರಾಕರಣೆಗಳಿಗೆ ತನ್ನ ಕೃತಿಗಳನ್ನು ನೆಲೆಯಾಗಿಸಿದನು. ವೈದಿಕರ ಈ ಬೇಧ ಮೌಲ್ಯಗಳನ್ನು ಕಟ್ಟುವ ಬಗ್ಗೆ ರಗಳೆಗಳಲ್ಲಿ ಅನನ್ಯರೀತಿಯಲ್ಲಿ ಮೂಡಿದೆ."[೫] ಎಂಬ ಡಾ॥ಎಂ.ಎಂ.ಕಲಬುರ್ಗಿರವರ ಹೇಳಿಕೆಯು ಒಪ್ಪುವಂತದ್ದು.

---

ಅಡಿಟಿಪ್ಪಣಿಗಳು : ೪. ಹರಿಹರನ ರಗಳೆಗಳು - ಡಾ॥ಎಂ.ಎಂ.ಕಲಬುರ್ಗಿ, ಪು.ಸಂ. (ಪೀಠಿಕೆ)

ಅಡಿಟಿಪ್ಪಣಿಗಳು : ೫. ಹರಿಹರನ ರಗಳೆಗಳು - ಡಾ॥ ಎಂ.ಎಂ.ಕಲಬುರ್ಗಿ, ಪು.ಸಂ. (ಪೀಠಿಕೆ)

ಈ ಸಮಾಜದಲ್ಲಿ ಜನರ ನಡುವೆ ಬೇಧವೆಂಬುದು ಹುಟ್ಟಿ ಒಬ್ಬರು ಮತ್ತೊಬ್ಬರನ್ನು ಕೀಳಾಗಿ ಕಾಣುವುದಕ್ಕೆ ಧರ್ಮದ ಹೆಸರಿನಲ್ಲಿ ಹುಟ್ಟಿರುವ ಅಸಮಾನತೆಗಳೇ ಕಾರಣ

೧. ಮೇಲ್ಜಾತಿ – ಕೆಳಜಾತಿ

೨. ಶ್ರೀಮಂತ ವರ್ಗ – ಬಡವರ್ಗ

೩. ಪುರುಷವರ್ಗ – ಸ್ತ್ರೀ ವರ್ಗ

ಇಲ್ಲಿ ಮೇಲ್ಜಾತಿವಲಯ, ಶ್ರೀಮಂತ ಮತ್ತು ಪುರುಷ ವರ್ಗವು ತಮ್ಮಷ್ಟಕ್ಕೆ ತಾವು ಉತ್ತಮರು, ಶ್ರೇಷ್ಠರೆನಿಸಿಕೊಂಡು, ಕೆಳಜಾತಿ, ಬಡವವರ್ಗ, ಸ್ತ್ರೀವಲಯವನ್ನು ಶೋಷಣೆಗೊಳಪಡಿಸಿ ಅವರನ್ನು ಅಧಮರೆನಿಸಿಬಿಟ್ಟಿದ್ದಾರೆ.

ಈ ಬಗೆಯ ಅಸಮಾನತೆಯನ್ನು ನಿರಾಕರಿಸುವ ಉದ್ದೇಶದಿಂದ

೧) ವರ್ಣಬೇಧ

೨) ವರ್ಗಬೇಧ

೩) ಲಿಂಗಬೇಧ

ವೆಂಬ ಪ್ರತಿಪಾದನೆಯನ್ನು ಹರಿಹರ ತನ್ನ ರಗಳೆಗಳಲ್ಲಿ ಗುರುತಿಸಿದ್ದಾನೆ. ಈ ಅಂಶಗಳನ್ನು ಡಾ||ಎಂ.ಎಂ. ಕಲಬುರ್ಗಿ ಮತ್ತು ಡಾ||ಗುರುಪಾದ ಮರಿಗುದ್ದಿ ತಮ್ಮ ಕೃತಿಗಳಲ್ಲಿ ತಿಳಿಸಿದ್ದಾರೆ.

(೧)ವರ್ಣಬೇಧ ನಿರಸನ ರಗಳೆಗಳು

(೨)ವರ್ಗಬೇಧ ನಿರಸನ ರಗಳೆಗಳು

(೩)ಲಿಂಗಬೇಧ ನಿರಸನ ರಗಳೆಗಳು

ವೆಂಬ ಕೃತಿಗಳನ್ನು ಡಾ|| ಗುರುಪಾದ ಮರಿಗುದ್ದಿರವರು ಪ್ರಕಟಿಸಿರುತ್ತಾರೆ. ಹರಿಹರನ ರಗಳೆಗಳಲ್ಲಿ ಕಾಣುವ ಬೇಧ ನಿರಸನವು ಬಹುದೊಡ್ಡ ಕ್ರಾಂತಿಯ ನೆಲೆಯಲ್ಲಿ ವ್ಯಕ್ತವಾಗಿರುವ ಅಂಶಗಳನ್ನು ಈ ಮೇಲಿನ ಕೃತಿಯಲ್ಲಿ ವಿಶ್ಲೇಷಿಸಿದ್ದಾರೆ. ಸಮಾಜದಲ್ಲಿ ಕಡೆಗಣಿಸಲ್ಪಟ್ಟಿರುವವರು ಶಿವಭಕ್ತರಾಗಿದ್ದರೆ ಸಾಕು, ಅವರು ಕಥಾನಾಯಕ/ನಾಯಕಿರಾಗಿ, ಭಕ್ತಿ–ಭಾವದಿಂದ ಕೂಡಿ ಧರ್ಮ ಹಾಗು ನ್ಯಾಯಯುತ ಬದುಕನ್ನು ಬಾಳ ಎಲ್ಲರಿಗೂ ಮಾದರಿಯಾಗಿ ಆದರ್ಶಪ್ರಾಯರಾಗಬಹುದು. ಇದು ಸಾಹಿತ್ಯ ಕ್ಷೇತ್ರದಲ್ಲ ನಡೆದ ಅಭೂತಪೂರ್ವ ಬದಲಾವಣೆ ಎನಿಸಿಕೊಂಡಿದೆ. ವನಕಕಾರರಿಂದ ಪ್ರಭಾವಹೊಂದಿ ಶಿವಶರಣರ ಚರಿತ್ರೆಯನ್ನು ಹೊಸ ಶೈಲಿಯಲ್ಲಿ ರಚಿಸಿರುವ ಹರಿಹರನ ಸಾಹಿತ್ಯ

ಜೀವನಾದರ್ಶವಾಗಿದೆ. ವರ್ಣ-ವರ್ಗ-ಸ್ತ್ರೀ ಬೇಧ ನಿರಾಕರಣೆಯಿಂದಾಗಿ ಸಮಾಜದಲ್ಲಿ ಸಮಾನತೆಯೆಂಬ ಹೊಸಬೆಳಕು ಎಲ್ಲೆಡೆ ಮೂಡಿ ಧಾರ್ಮಿಕ ಸಾಮಾಜಿಕ ಸ್ವಾತಂತ್ರ್ಯಕ್ಕೆ ಅವಕಾಶವಿತ್ತು.

ಇಲ್ಲಿ ಹೊಸ ಸಮಾಜದ ನಿರ್ಮಾಣಕ್ಕೆ ರಗಳೆಗಳಲ್ಲಿ ಪ್ರತಿಪಾದನೆಯಾಗಿದ್ದ ಇಂತಹ ಮೌಲ್ಯಗಳ ಅಗತ್ಯವಿದೆ. ಕೆಳವರ್ಗ, ಕೆಳಜಾತಿ ಮತ್ತು ಸ್ತ್ರೀ ಪರವಾದ ಸಂವೇದನೆಯು ಒಂದು ಸಮಾಜದ ಅಭಿವೃದ್ಧಿಯ ಆರೋಗ್ಯಕರ ಬೆಳವಣಿಗೆಯಾಗಿದೆ.

ಉದಾ : ಅಕ್ಕಮಹಾದೇವಿ, ಕಾರಿಕಾಲಮ್ಮೆ, ವೈಜಕವ್ವೆ, ನಿಂಬಿಯಕ್ಕ, ಕೊಡಗೂಸು, ಹೆರೂರು ಹೆಣ್ಣು, ಮಾದಾರ ಚೆನ್ನಯ್ಯ, ಇಳೆಯಾಂಡ ಗುಡಿಮಾರ, ಬೋಗಣ್ಣ, ಬೇಡರ ಕಣ್ಣಪ್ಪ, ಅರಿವಾಳ್ತಾಂಡರ ಮೊದಲಾದ ರಗಳೆಗಳಲ್ಲಿ ನಿರ್ಲಕ್ಷ ಸಮಾಜದ ಪರವಾದ ಧನಿ ಮೂಡಿದೆ.

## (ಋ) ರಾಜ/ಯಾಜಮಾನ್ಯರೆಂಬ ಸಂಸ್ಕೃತಿಯ ನಿರಾಕರಣೆ :-

ಹರಿಹರನ ರಗಳೆಗಳಲ್ಲಿ ರಾಜ-ಯಾಜಮಾನ್ಯರೆಂಬ ಪ್ರಬಲರ ನಿರಾಕರಣೆ ಕಂಡುಬರುತ್ತದೆ. ಇಹಃ ಪರೆಯಾಂಡರ, ಪಾಂಡ್ಯ ಮಹಾದೇವಿ, ಮಾದಾರ ಚೆನ್ನಯ್ಯ, ಬೋಗಣ್ಣ ಮೊದಲಾದ ರಗಳೆಗಳಲ್ಲಿ ರಾಜರ ಪ್ರಸ್ತಾಪವಿದ್ದರೂ, ಅವರ ಸಂಪತ್ತು, ಅಧಿಕಾರದ ಬಲದಿಂದ ಅವರಿಗೆ ನಾಯಕಪಟ್ಟ ಒದಗಿಬರುವುದಿಲ್ಲ. ಬದಲಿಗೆ ಅಲ್ಲೆಲ್ಲ ನಿಷ್ಠಾವಂತ ಶಿವಭಕ್ತರೇ ನಾಯಕಪಟ್ಟಕ್ಕೇರುವುದು. ಅವರು ಹೊಂದಿರುವ ಭಕ್ತಿಯೇ ಅವರ ಪ್ರಧಾನ ಆಸ್ತಿ. ಶಿವಭಕ್ತರು ತಮ್ಮ ದಾನ-ಧರ್ಮ-ವೃತ್ತಿನಿಷ್ಠೆ-ಆದರ್ಶಗಳನ್ನೊಳಗೊಂಡ ಶಿವಭಕ್ತಿಯಿಂದ ಶಿವನನ್ನು ಮೆಚ್ಚಿಸಿ ಕೈಲಾಸದಲ್ಲಿ ಗಣಪದವಿ ಪಡೆಯುತ್ತಾರೆ.

ಹರಿಹರನ ರಗಳೆಗಳಲ್ಲಿ ವ್ಯಕ್ತವಾಗಿರುವ ಕೌಟುಂಬಿಕ ವ್ಯವಸ್ಥೆಯಲ್ಲಿ ಗಂಡ ಹೆಂಡತಿಯ ನಡುವೆ ಸಮಾನತೆ ಇದೆ. ಸತಿ-ಪತಿಗಳೀರ್ವರೂ ಒಂದಾಗಿ ನಡೆಸುವ ಭಕ್ತಿಗೆ ಶಿವಮೆಚ್ಚಿ ಕೈಲಾಸದಲ್ಲಿ ಗಣಪದವಿಯನ್ನೀಯುತ್ತಾನೆ.

ಉದಾ : ಇಳೆಯಾಂಡ ಗುಡಿಮಾರನ ಕುಟುಂಬ, ಅಮರನೀತಿ ಕುಟುಂಬ, ಭಕ್ತಸಿರಿಯಾಳ, ಬಸವಣ್ಣ ದಂಪತಿಗಳು, ಓಹಿಲಯ್ಯ, ಕಲ್ಲಯ್ಯನ ತಂದೆ-ತಾಯಿ, ಮಹಾದೇವಿಯಕ್ಕನ ತಂದೆ-ತಾಯಿ, ಶಿವಭಕ್ತ-ಶಿವಭಕ್ತೆಯರು, ಜಡೆಯ ನಾಯನಾರ್-ಯಸ್ಯಜ್ಞಾನದೇವಿ, ಮಲುಹಣ-ಮಲುಹಣಿ

ಇಲ್ಲಿನ ದಂಪತಿಗಳ ನಡುವೆ ತಾರತಮ್ಯವೆಂಬುದಿಲ್ಲ. ಏನಿದ್ದರೂ ಪರಸ್ಪರ ನಂಬಿಕೆ, ಪ್ರೀತಿ ವಿಶ್ವಾಸ, ಹೊಂದಾಣಿಕೆ, ಸಮನ್ವಯತೆಯಿಂದ ಕೂಡಿದ ಬದುಕಾಗಿರುತ್ತದೆ. ಇಬ್ಬರೂ ಒಂದುಗೂಡಿ ನಡೆಸುವ ಶಿವಭಕ್ತಿಗೆ ಶಿವನು ಒಲಿಯುವುದು ಬಹುಪಾಲು ಕಥೆಗಳಲ್ಲಿ ಗೋಚರವಾಗುವ ಅಂಶವಾಗಿದೆ. ದಾಂಪತ್ಯದಲ್ಲಿ ಸಮಾನತೆ–ಸಮನ್ವಯತೆ ಇರಬೇಕಾದರೆ ಅವರ ಮನೋಭಾವ, ಅಭಿರುಚಿ, ಕಲೆ, ಕಾರ್ಯ, ಆಚರಣೆ, ಧರ್ಮ, ದೇವರು, ನಂಬಿಕೆ ಎಲ್ಲದರಲ್ಲೂ ಐಕ್ಯತೆ ಇದ್ದಾಗ ಮಾತ್ರ ಸಾಧ್ಯವಾಗುತ್ತದೆ. ಇಲ್ಲದಿದ್ದರೆ ಅದು ಅಕ್ಕಮಹಾದೇವಿ, ವೈಜಕವ್ವೆ, ಹೆರೂರು ಹೆಣ್ಣು, ಕಾರಿಕಾಲಮ್ಮೆ ಮೊದಲಾದ ರಗಳೆಗಳಲ್ಲಿ ಮನಸ್ಸು, ಆಚರಣೆ, ಧರ್ಮಪಾಲನೆಯಲ್ಲಿ ದಂಪತಿಗಳ ನಡುವೆ ಇದ್ದ ವಿಭಿನ್ನತೆಯಿಂದ ಸಮನ್ವಯತೆ ಸಾಧ್ಯವಾಗುವುದಿಲ್ಲ. ಇಲ್ಲಿ ಭಕ್ತಿ ಕೇಂದ್ರಿತ ನೆಲೆಯಿಂದ ಸ್ತ್ರೀಯರೇ ಪ್ರಬಲೆಯರೆನಿಸಿಕೊಂಡಿದ್ದಾರೆ. ಸ್ತ್ರೀಕೇಂದ್ರಿತ ಮತ್ತು ಸ್ತ್ರೀಸಂವೇದಿ ನೆಲೆಯಲ್ಲಿ ಚರ್ಚಿತವಾಗುವ ಈ ರಗಳೆಗಳಲ್ಲಿ ಶಿವಶರಣೆಯರ ಮೇಲುಗೈ ಇದೆ. ಇವರು ಭವಿಗಳಾದ ತಮ್ಮ ಪತಿಗಳನ್ನು ತಿರಸ್ಕರಿಸಿ, ಭಕ್ತಿ ಕೇಂದ್ರಿತರಾಗಿ ಧಾರ್ಮಿಕ ಸ್ವಾತಂತ್ರ್ಯಪಡೆದು ಸಮಾಜದಲ್ಲಿ ಸಬಲೆಯರೆನಿಸಿಕೊಂಡಿದ್ದಾರೆ. ಪುರುಷ ಸಮಾಜದ ದಬ್ಬಾಳಿಕೆಯನ್ನು ತಮ್ಮ ಮನೋನಿಷ್ಠೆಯಿಂದ ಎದುರಿಸಿದ ಧೃತಿವಂತರೆನಿಸಿದ್ದಾರೆ.

ಹರಿಹರನ ಬದುಕಿನಲ್ಲಿ ಶಿವನ ಮೇಲಿನ ಅಪಾರ ನಂಬಿಕೆಯು ಮತ್ತು ಸಮಾಜದಲ್ಲಿ ಭಕ್ತಿ ಕೇಂದ್ರಿತ ಶಿವಶರಣರ ಕಥೆಗಳ ಪ್ರೇರಣೆಯಿಂದ ಅವನ ಬದುಕಿನ ಸರ್ವಸ್ವವೂ ಶಿವಮಯವೇ ಆಯಿತೆನ್ನಬಹುದು. ಹೀಗೆ ಭಕ್ತನು ಭಗವಂತನ ಮೇಲೆ ಅಪಾರ ನಂಬಿಕೆಯನ್ನಿಟ್ಟುಕೊಂಡು ಆರಾಧಿಸುವ ಸಾಧನವೇ ಭಕ್ತಿ. ಭಕ್ತನು ಮೌಲ್ಯ, ಆದರ್ಶ, ನಿಷ್ಠೆ ಮತ್ತು ಭಕ್ತಿಯಿಂದ ಶಿವನ ಸ್ವರೂಪವನ್ನು ಅರಿಯಲು ಪ್ರೇಮ, ಸ್ನೇಹ, ವಾತ್ಸಲ್ಯ ಮತ್ತು ದಾಸ್ಯತನದ ನೆಲೆಗಳಿಂದ ಮುನ್ನಡೆಯುತ್ತಾನೆ. ಅಲ್ಲಿ ಶಿವಭಕ್ತನು ಶಾಂತಸ್ವರೂಪಿಯೂ, ಧೈರ್ಯವಂತನಾಗಿಯೂ, ಮಧುರ ತನದಿಂದ ಅಲ್ಲದೆ ಕೆಲವೊಮ್ಮೆ ಉಗ್ರನಿಷ್ಠನಾಗಿ ಮತ್ತು ಸತಿ–ಪತಿ ಭಾವದಿಂದ ಶಿವ–ಭಕ್ತರ ಬಾಂಧವ್ಯ ಅನ್ಯೋನ್ಯತೆಯಿಂದ ಕೂಡಿರುತ್ತದೆ. ಈ ನಂಟಿಗೆ ಶಿವನು ಭಕ್ತರ ಮೇಲಿಟ್ಟಿರುವ ಪ್ರೀತಿ ಎಷ್ಟು ಅಪಾರವಾದುದೋ ಅಷ್ಟೇ ಪ್ರೇಮ ಮತ್ತು ವಿಶ್ವಾಸವನ್ನು ಭಕ್ತನು ಶಿವನ ಮೇಲಿಟ್ಟಿರುತ್ತಾನೆ. ಹೀಗೆ ಶಿವಭಕ್ತರ ಭಕ್ತಿ ಮತ್ತು ಜೀವನಾದರ್ಶಗಳು ಸರ್ವಕಾಲಕ್ಕೂ ಸಲ್ಲುವ ಸಾಮಾಜಿಕ ಮೌಲ್ಯಗಳಾಗಿವೆ. ಇಂಥ ಮೌಲ್ಯಾದರ್ಶಗಳಿಗೆ ಬದ್ಧರಾಗಿ ಬದುಕುವ ಶಿವಭಕ್ತರ ಕಥೆಗಳು ಸಮಾಜಕ್ಕೆ ಆದರ್ಶಪ್ರಾಯವಾಗಿದೆ.

## ಕಥಾನಾಯಕರ ವೈಶಿಷ್ಟ್ಯಗಳು :-

- ಶಿವಶರಣರು ನಿಸ್ಸೀಮ ಭಕ್ತರಾಗಿರುತ್ತಾರೆ.
- ಶಿವಶರಣರೆಲ್ಲಾ ಶಿವನ ಒಲುಮೆಗಾಗಿ ಭಕ್ತಿಯಿಂದ ಸರ್ವಸಮರ್ಪಣಾ ಭಾವದಿಂದ ಕೂಡಿರುತ್ತಾರೆ.
- ಶಿವಶರಣರ ಜೀವಿತಕಾಲದಲ್ಲಿ ನಾಡಿನ ಸಮಕಾಲೀನ ಸಮಾಜದಲ್ಲಿ ಮನೆಮಾಡಿಕೊಂಡಿದ್ದ ಲೋಪದೋಷಗಳು ಕಂಡುಬರುತ್ತದೆ. ಶೈವ, ವೈಷ್ಣವ, ಜೈನ, ವೈದಿಕ ಧರ್ಮಗಳ ನಡುವೆ ಸಂಘರ್ಷವಿರುವುದು ಗೋಚರಿಸುತ್ತದೆ. ಇದರ ಮಧ್ಯೆ ಶೈವಧರ್ಮ ತನ್ನ ಪ್ರಖರತೆ ಕಾಪಾಡಿಕೊಳ್ಳಲು ಅನ್ಯಧರ್ಮಗಳ ನಡುವೆ ಹೋರಾಟಮಾಡಿರುವ ವೀರ ಭಕ್ತನಾಯಕರನ್ನು ರಗಳೆಗಳಲ್ಲಿ ಗುರುತಿಸಬಹುದು.

  ಉದಾ : ಏಕಾಂತ ರಾಮಿತಂದೆ, ತೆಲುಗು ಜೊಮ್ಮಯ್ಯ, ಹೆರೂರು ಹೆಣ್ಣು, ವೈಜಕವ್ವೆ, ವಾಗೀಶ್ವರ, ಮಾರುಡಿಗೆ ನಾಚಿತಂದೆ, ಬಸವಣ್ಣ ಮೊದಲಾದ ಶಿವಭಕ್ತರು.
- ವೃತ್ತಿಯಲ್ಲಿ ಆಧ್ಯಾತ್ಮಿಕ ಸಾಧನೆಯ ಅರ್ಥವನ್ನು ಹುಡುಕುವ ನೆಲೆಯ ಕಡೆಗೆ ಶಿವಭಕ್ತರು ಕಥಾನಾಯಕರಾಗಿ ವಿಜೃಂಭಿಸಿದ್ದಾರೆ.
- ಶಿವಭಕ್ತನ ಭಕ್ತಿಯ ಮುಂದೆ ಕುಲ-ವೃತ್ತಿ-ಲಿಂಗ ಬೇಧಗಳು ಕಾಣಿಸುವುದಿಲ್ಲ. ಏನಿದ್ದರೂ ಅವರವರ ಮನೋನಿಷ್ಠೆಯೇ ಮುಖ್ಯವೆನಿಸುತ್ತದೆ. ಅಂತರಂಗ ಶುದ್ಧಿಭರಿತವಾದ ನೇಮಕ್ಕೆ ಒತ್ತು ಕೊಟ್ಟಿದ್ದಾರೆ.
- ಶಿವನನ್ನು ಅರಿಯಲು ಹೋಗುವ ಭಕ್ತರು ಒಂದೇ ಪದ್ಧತಿಯಡಿಯಲ್ಲಿ ಹೋಗುವ ಅವಶ್ಯಕತೆ ಇಲ್ಲ. ಅದು ಭಕ್ತನ ಸ್ವಇಚ್ಛೆಯಾಗಿರುತ್ತದೆ. ಆ ಭಕ್ತನ ಅನುಭಾವ ಸಾರ್ಥಕತೆಯ ಫಲವನ್ನು ವಿವರಿಸಿದ್ದಾನೆ. ಸಮಾಜದ ಸಹೃದಯರೆಲ್ಲಾ ಆ ಭಕ್ತರ ಜೀವನದ ಯಶೋಗಾಥೆಯನ್ನು ತಿರುಗಿ ನೋಡುವಂತೆ ಅದನ್ನು ಅನುಸರಿಸಲು ಪ್ರೇರೇಪಣೆಯನ್ನು ಹರಿಹರ ತನ್ನ ರಗಳೆಗಳಲ್ಲಿ ನೀಡಿದ್ದಾನೆ.

೪.೨ ಶಿವನು ತನ್ನ ಭಕ್ತರಿಗೆ ತಂದೊಡ್ಡುವ ಪರೀಕ್ಷೆಯ ಸ್ವರೂಪ :-

ಹರಿಹರನ ಪಾಲಿಗೆ 'ಶಿವ' ಎಂದರೆ ಶಾಂತ, ಮಂಗಳ, ನಿತ್ಯಾನಂದ, ಸ್ವಸ್ಥ, ಶಾಶ್ವತ ಎಂದೆಲ್ಲಾ ನಾವೂ ಅವನ ಕೃತಿಗಳ ಮೂಲಕ ಅರ್ಥೈಸಿಕೊಳ್ಳಬಹುದು. ನಿರಾಡಂಬರನಾಗಿರುವ ಶಿವನು ಸರ್ವಸಮರ್ಥನೂ ಹಾಗೂ ಜಗದ್ದೋದ್ಧಾರನೂ ಹೌದು. ಅವನನ್ನು ಒಲಿಸಿಕೊಳ್ಳುವುದಕ್ಕೆ ಮುಖ್ಯವಾಗಿ ಬೇಕಾದದ್ದು ಭಕ್ತಿಯೊಂದೇ. ಭಕ್ತಿಯಿಂದ ಏನನ್ನು ಸಮರ್ಪಿಸಿದರೂ ಶಿವನು ಒಲಿದು ಸಂತುಷ್ಟನಾಗಿ ಬಿಡುತ್ತಾನೆ. ಪರಿಪೂರ್ಣ ಮನಸ್ಸಿನ ಶಿವಭಕ್ತರ ಕೂಗಿಗೆ ಓಗೊಡುವ ಶಿವನು ಅವರನ್ನು ಪ್ರೀತಿಸಿ, ಸದಾ ತನ್ನ ಬಳಿಯಲ್ಲಿಯೇ ಇರಿಸಿಕೊಳ್ಳಲು ಹಂಬಲಿಸುತ್ತಾನೆ. ಶಿವಸಾಯುಜ್ಯವನ್ನು ಗಳಿಸುವುದೇ ಭಕ್ತನ ಧ್ಯೇಯವಾಗಿರುತ್ತದೆ.

ಹರಿಹರನ ರಗಳೆಗಳ ಕಥಾವಸ್ತು ಸಾಮಾನ್ಯವಾಗಿ ಎರಡು ರೀತಿಯದ್ದು :-

(೧) ಭೂಲೋಕದಲ್ಲಿ ಹುಟ್ಟಿದ ಮನುಜರು ಶಿವಭಕ್ತಿಯನ್ನು ಮೆರೆದು ಕೈಲಾಸದಲ್ಲಿ ಗಣಪದವಿಯನ್ನು ಪಡೆದು ಶ್ರೇಷ್ಠ ಭಕ್ತರಾಗುವುದು.

(೨) ಶಿವಲೋಕದಲ್ಲಿನ ಶಿವಗಣಗಳು ಯಾವುದೋ ತಪ್ಪೊಂದನ್ನು ಮಾಡಿ ಮತ್ತೆ ಭೂಲೋಕದಲ್ಲಿ ಹುಟ್ಟಿ ಭಕ್ತಿಯನ್ನು ಮೆರೆದು ಕೈಲಾಸ ಸೇರಿ ಶಿವಸಾಯುಜ್ಯವನ್ನು ಗಳಿಸುವುದು.

ಈ ಹಿನ್ನೆಲೆಯಲ್ಲಿ ಹೆಚ್ಚು ಕಡಿಮೆ ಎಲ್ಲಾ ರಗಳೆಗಳಲ್ಲಿ ಶಿವನು ವೃದ್ಧನ ವೇಷದಲ್ಲಿ ಆಗಮಿಸಿ ಭಕ್ತರ ನಿಜಮೌಲ್ಯ-ಆದರ್ಶಗಳನ್ನು ಪರೀಕ್ಷಿಸುವ ವಿಧಾನವು ಒಂದು ಕಥೆಗಿಂತ ಮತ್ತೊಂದು ಕಥೆಯಲ್ಲಿ ವಿಭಿನ್ನವಾಗಿಯೂ, ವೈವಿಧ್ಯಪೂರ್ಣವೂ ಆಗಿದೆ. ಈ ಪರೀಕ್ಷೆಯ ಸಂದರ್ಭದಲ್ಲಿ ಪೇಚಿಗೆ ಸಿಲುಕುವ ಭಕ್ತನ ತೊಳಲಾಟ, ಪೀಕಲಾಟಗಳ ನಡುವೆಯೂ ಎತ್ತಿತೋರಿಸುವ ಭಕ್ತನ ಅಧಮ್ಯ ಭಕ್ತಿಯ ಮುಂದೆ ಶಿವನೇ ಸೋತು, ಭಕ್ತನು ಗೆಲ್ಲುತ್ತಾನೆ. ಕೈಲಾಸ ಸೇರಿ ಗಣಪದವಿಯನ್ನು ಪಡೆಯುತ್ತಾನೆ. ಈ ಪರೀಕ್ಷೆಯ ಸ್ವರೂಪವನ್ನು ಜೇಡರದಾಸಿಮಯ್ಯನು ಹೀಗೆ ತಿಳಿಸುತ್ತಾನೆ.

ಹರ ತನ್ನ ತಿರಿವಂತೆ ಮಾಡುವ
ಒರೆದು ನೋಡುವ ಸುವರ್ಣದ ಚಿನ್ನದಂತೆ
ಅರೆದು ನೋಡುವ ಚಂದನದಂತೆ
ಅರಿದು ನೋಡುವ ಕಬ್ಬಿನ ಕೋಲಿನಂತೆ
ಬೆದರದೆ ಬೆಚ್ಚದೆ ಇದ್ದಡೆ
ಕರವಿಡಿದೆತ್ತಿಕೊಂಬ ನಮ್ಮ ರಾಮನಾಥ (ವಚನ ಸಾಹಿತ್ಯ ಸಂಪುಟ)

ಹರಿಹರ ತನ್ನ ಕಾವ್ಯಗಳಲ್ಲಿ ಬಳಸಿಕೊಂಡಿರುವ ಶಿವನು "ಪೌರಾಣಿಕ ಕಲ್ಪನೆಯ ಶಿವನು". ಈ ಮೂಲಕ ಹರಿಹರನು ಲೌಕಿಕ-ಆಧ್ಯಾತ್ಮಿಕ ಶಕ್ತಿಯ ಪ್ರತಿಪಾದನೆಯೊಂದಿಗೆ, ಜನರಲ್ಲಿ ಸತ್ಯ, ಶಾಂತಿ, ಪ್ರೀತಿ, ನೀತಿ, ದಯೆ, ಧರ್ಮ, ಅಹಿಂಸೆ, ಸ್ನೇಹಪರತೆ ಎಂಬ ಸದ್ಗುಣಗಳನ್ನು ತರುವ ಪ್ರಯತ್ನವನ್ನು ಹೊಂದಿದಂತೆ ತೋರುತ್ತದೆ. ಅದರಂತೆ ಹರಿಹರನು ತನ್ನ ರಗಳೆಗಳಲ್ಲಿ ಶಿವನನ್ನು ತ್ಯಾಗಮಯಿ, ಪ್ರೇಮಮಯಿ, ಕರುಣಾಮಯಿ ಇದೇ ಮೊದಲಾದಂತೆ ಚಿತ್ರಿಸಿದ್ದಾನೆ. ಹಾಗಿದ್ದರೆ ಹರಿಹರನ ಶಿವನು ಶುಭವೇ ಸರಿ! ಮಂಗಳ, ಅಭ್ಯುದಯ, ಒಳಿತು ಇದೇ ಮೊದಲಾದ ಚೈತನ್ಯಶೀಲತೆಗಳ ಆಗರವೆಂದೆನಿಸುತ್ತಾನೆ.

ಹರಿಹರನು ತನ್ನ ರಗಳೆಗಳಲ್ಲಿ ಶಿವನನ್ನು ಸತ್ಯ, ಧರ್ಮ, ಶಕ್ತಿ ಎಂಬ ಸತ್ವಗಳಿಗೆ ಆಧಾರವಾಗಿಟ್ಟುಕೊಂಡು ಮೇಲುಸ್ಥರದಲ್ಲಿ ಕೂಡಿಸಿ, ಭಕ್ತನನ್ನು ಕೆಳಸ್ಥರದಲ್ಲಿರಿಸುತ್ತಿದ್ದನು. ಶಿವನನ್ನು ಆರಾಧಿಸಿ ಶಿವಭಕ್ತಿಯನ್ನು ಪಡೆದುಕೊಳ್ಳುವಲ್ಲಿ ಭಕ್ತನ ನಿಜಭಕ್ತಿ ಪ್ರಕಟವಾದ ಮೇಲೆ ಕೈಲಾಸಕ್ಕೆ ಕರೆದೊಯ್ಯುವ ಶಿವನ ಹೃದಯ, ಭಕ್ತಿಯ ಪರಾಕಾಷ್ಠೆಯ ಮುಂದೆ ಲೌಕಿಕ ಸುಖವೆಲ್ಲಾ ನಶ್ವರ. ಶಿವಭಕ್ತಿಯೊಂದೇ ಶಾಶ್ವತ ಎಂದು ಸಾರುವ ಮೂಲಕ ಜನರಲ್ಲಿ ಕಣ್ಮರೆಯಾಗಿದ್ದ ಶಿವಭಕ್ತಿಯನ್ನು ಒಪ್ಪಿಸುವಂತಹ ಪ್ರಯತ್ನವನ್ನು ಹರಿಹರನು ಮಾಡಿರಬಹುದು.

ಹರಿಹರನ ರಗಳೆಗಳಲ್ಲಿ ಶಿವನು ಮಾರುವೇಷದಲ್ಲಿ ಬಂದು ತನ್ನ ಭಕ್ತರ ಪರೀಕ್ಷೆ ನಡೆಸುತ್ತಿದ್ದ ನಿಜ, ಆದರೆ ಈ ಸಂದರ್ಭದಲ್ಲಿ ಕೆಲವು ಪ್ರಶ್ನೆಗಳು ಮನಸ್ಸಿನಲ್ಲಿ ಉದ್ಭವಿಸುತ್ತದೆ. ಈ ಹಿನ್ನೆಲೆಯಿಂದ ಹರಿಹರನ ಎಲ್ಲಾ ರಗಳೆಗಳಲ್ಲಿ "ಶಿವ ಮತ್ತು ಭಕ್ತರ" ಸಂಬಂಧದ ವಿವಿಧ ನೆಲೆಗಳಿಂದ ನೋಡುವ ಸಲುವಾಗಿ ಅಧ್ಯಯನಕ್ಕೆ ಪೂರಕವಾಗಿ ಈ ಕೆಳಕಂಡ ವಿಷಯಗಳನ್ನು ಹೀಗೆ ವಿಶ್ಲೇಷಣೆ ಮಾಡಬಹುದು.

(೧) ಪರೀಕ್ಷೆ – ಕಾರಣ, ಪರಿಣಾಮ, ಅವಶ್ಯಕತೆ

(೧) ಹರಿಹರನ ರಗಳೆಗಳಲ್ಲಿ ಶಿವನು ಮಾರುವೇಷದಲ್ಲಿ ಬಂದು ತನ್ನ ಭಕ್ತರ ಪರೀಕ್ಷೆ ನಡೆಸುತ್ತಿದ್ದ ನಿಜ. ಆದರೆ ಈ ಸಂದರ್ಭದಲ್ಲಿ ಕೆಲವು ಪ್ರಶ್ನೆಗಳು ಮನಸ್ಸಿನಲ್ಲಿ ಉದ್ಭವಿಸುತ್ತದೆ. ಪರೀಕ್ಷೆ ಎಂದರೇನು? ಶಿವನು ಭಕ್ತರ ಪರೀಕ್ಷೆ ನಡೆಸಲು ಕಾರಣಗಳೇನಿರಬಹುದು ಪರೀಕ್ಷೆ ಏಕೆ ಪ್ರಸ್ತುತವೆನಿಸಿತ್ತು. ಹಾಗೆ ಪರೀಕ್ಷಿಸುತ್ತಿದ್ದ ಶಿವನು ಭೂಮಿಯ ಮೇಲಿದ್ದ ಎಲ್ಲರನ್ನೂ

ಪರೀಕ್ಷಿಸುತ್ತಿದ್ದನೆ? ಪರೀಕ್ಷೆಯ ಅವಶ್ಯಕತೆ ಎಷ್ಟು? ಪರೀಕ್ಷೆಯ ಪರಿಣಾಮ ಏನಿರಬಹುದು? ಅದರ ಫಲಿತಾಂಶವು ಸಾಮಾನ್ಯ ಜನರ ಮೇಲೆ ಪ್ರಭಾವ ಬೀರಿರಬಹುದೆ? ಹರಿಹರನು ರಗಳೆ ಛಂದಸ್ಸಿನಲ್ಲಿ ಒಂದೇ ಮಾದರಿಯಲ್ಲಿ ವಿವಿಧ ಕಥೆಗಳನ್ನು ಏಕೆ ಬಣ್ಣಿಸಿರಬಹುದು. ಈ ಮೊದಲಾದ ಪ್ರಶ್ನೆಗಳಲ್ಲಿ ರಗಳೆಗಳಲ್ಲಿನ ಕಥೆಗಳ ಆಧಾರದ ಮೇಲೆ ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ.

"ಪರೀಕ್ಷೆ" ಎಂದರೆ ಶೋಧಿಸುವುದು, ಉಜ್ಜಿನೋಡುವುದು, ವಿಚಾರಣೆ ಮಾಡುವುದು ಎಂದೆಲ್ಲ ಅರ್ಥಗಳಿವೆ. ಶಿವಭಕ್ತರಲ್ಲಿನ ಮೌಲ್ಯಾದರ್ಶಗಳನ್ನು ಶಿವನು ಮಾರುವೇಷದಲ್ಲಿ ಶೋಧಿಸಿ ಸತ್ಯಾಸತ್ಯತೆಗಳನ್ನು ತಿಳಿದು ಅವರ ಶಿವಭಕ್ತಿಯನ್ನು ಲೋಕಕ್ಕೆ ಸಾರಿ, ಗಣಪದವಿಯನ್ನು ನೀಡಲು ಕೈಲಾಸಕ್ಕೆ ಪುಷ್ಪಕವಿಮಾನದಲ್ಲಿ ಕರೆದೊಯ್ಯುತ್ತಿದ್ದನು. ಪ್ರತಿಯೊಬ್ಬ ಶಿವಭಕ್ತರನ್ನು ಶಿವನು ಪರೀಕ್ಷಿಸಲು ಒಂದೊಂದು ಮಾನದಂಡಗಳನ್ನು ಮಾಪನವನ್ನಾಗಿ ಇಟ್ಟುಕೊಂಡು ಕಥೆಯನ್ನು ಸ್ವಾರಸ್ಯಕರವಾಗಿ ಹರಿಹರನು ಹೆಣೆಯುತ್ತಿದ್ದನು. ಜನಸಾಮಾನ್ಯರು ತಮ್ಮ ಜೀವಿತಾವಧಿಯಲ್ಲಿ ಶಿವಭಕ್ತಿಯನ್ನು ಭಾವಪೂರ್ಣವಾಗಿ ಬೆಳೆಸಿಕೊಂಡು ಅದನ್ನೇ ಶಿವನ ನೇಮ/ವ್ರತಾಚರಣೆಯನ್ನು ಅನುಸರಿಸುವ ಮನೋಗುಣದವರಾಗಿರುತ್ತಾರೆ. ತಮ್ಮ ಪ್ರಾಣ ಹೋದರೂ ಸರಿಯೇ ವ್ರತ ನೇಮಕ್ಕೆ ಮಾತ್ರ ಭಂಗ ತಂದುಕೊಳ್ಳುತ್ತಿರಲಿಲ್ಲ. ಇಲ್ಲಿ ಶಿವನು ಯಾರು ಇಂಥ ನೇಮವನ್ನು ಆಚರಿಸುತ್ತಾರೋ ಅಂತಹ ಶಿವಭಕ್ತರ ನಿಶ್ಚಲ ಭಕ್ತಿಯನ್ನು ಪರೀಕ್ಷೆಯ ನೆಪದಲ್ಲಿ ಕದಡುವ ಪ್ರಯತ್ನ ಮಾಡುತ್ತಾನೆ. ಇಲ್ಲಿ ಚಿನ್ನದ ವ್ಯಾಪಾರಿ ಚಿನ್ನದ ಪರಿಶುದ್ಧತೆಯನ್ನು ಪರೀಕ್ಷಿಸಲು ಹೇಗೆ ಚಿನ್ನವನ್ನು ಉಜ್ಜಿ-ಉಜ್ಜಿ, ತೀಡಿನೋಡಿ, ಅನಂತರ ಅದು ಪರಿಶುದ್ಧವಾದ ಚಿನ್ನ ಎಂದು ನಂಬುವನೋ ಹಾಗೆ ಶಿವನು ಭಕ್ತರ ಪರಿಶುದ್ಧತೆಯನ್ನು ಮಾರುವೇಷದಲ್ಲಿ ಬಂದು ಭಕ್ತರನ್ನು ಪರೀಕ್ಷಿಸಿಯೇ ಜಗತ್ತಿಗೆ ಅವರನ್ನು ಪ್ರಚುರಪಡಿಸಿ ಬೆಳಕಿನಂತಹ ಕಾಂತಿಯನ್ನು ಅವರ ವ್ಯಕ್ತಿತ್ವಕ್ಕೆ ನೀಡಿ, ಗಣಪದವಿಯೆಂಬ ಶ್ರೇಷ್ಠ ಪದವಿಯನ್ನು ಅವನ ಮುಡಿಗೇರಿಸುತ್ತಿದ್ದನು. ಈ ರೀತಿಯಲ್ಲಿ ಕೈಲಾಸ ಪ್ರವೇಶ ಪಡೆದ ಭಕ್ತನು ತನ್ನ ನಡವಳಿಕೆಯಲ್ಲಾಗಲಿ, ಕಾರ್ಯದಲ್ಲಾಗಲಿ ಪ್ರಮಾದವನ್ನು ಉಂಟುಮಾಡಿದರೆ, ಮೀನ-ಮೇಷವೆಣಿಸದೆ ಆ ತಕ್ಷಣವೇ ಅವನನ್ನು ಭೂಲೋಕಕ್ಕೆ ಹಿಂತಿರುಗಿಸಿ, ಅಲ್ಲಿ ಮನುಷ್ಯ ಜನ್ಮದಲ್ಲಿ ಮತ್ತೊಮ್ಮೆ ಹುಟ್ಟಿ, ಶಿವಭಕ್ತಿಯನ್ನು ಮೆರೆದು ಕೈಲಾಸಕ್ಕೆ ಮರಳಿ ಗಣಪದವಿಯನ್ನು ಪಡೆಯುವುದು ರಗಳೆಗಳಲ್ಲಿ ಸಾಮಾನ್ಯವಾಗಿ ಕಾಣಬರುವ ಕಥಾಚೌಕಟ್ಟು. ಸರ್ವವನ್ನು ಸಮರ್ಪಿಸುವ ಶಿವಶರಣನನ್ನು ತನ್ನ ಭಕ್ತನನ್ನಾಗಿ ಶಿವನು ಸ್ವೀಕರಿಸುತ್ತಾನೆ. ಅವನು ಪರೀಕ್ಷಿಸುವ ವಿಧಾನ ವೈವಿಧ್ಯತೆಯಿಂದ ಕೂಡಿದೆ. ಶಿವನು ಭಕ್ತರ ಭಕ್ತಿಯ ಮುಂದೆ ಸೋಲುತ್ತಾನೆಯೇ

ಹೊರತು, ಭಕ್ತ ಶಿವನ ಮುಂದೆ ಸೋಲುವ ಚಿತ್ರಣ ಯಾವ ರಗಳೆಯಲ್ಲೂ ಮೂಡಿ ಬಂದಿರುವುದಿಲ್ಲ. ಇದನ್ನು ಬಸವಣ್ಣನವರು ತಮ್ಮ ವಚನದಲ್ಲಿ ಹೀಗೆ ಗುರುತಿಸುತ್ತಾರೆ.

ನಚ್ಚಿದನೆಂದರೆ, ಮೆಚ್ಚಿದೆನೆಂದರೆ, ಸಲೆಮಾರುವೋದೇನೆಂದರೆ
ತನುವನಲ್ಲಾಡಿಸಿ ನೋಡುವೆ ನೀನು
ಮನವನಲ್ಲಾಡಿಸಿ ನೋಡುವೆ ನೀನು
ಧನವನಲ್ಲಾಡಿಸಿ ನೋಡುವೆ ನೀನು
ಇದಕ್ಕೆಲ್ಲ ಅಂಜದಿದ್ದರೆ ಭಕ್ತ ಕಂಪಿತ ಭಕ್ತ ನಮ್ಮ ಕೂಡಲಸಂಗಮದೇವ

(ವಚನ ಸಾಹಿತ್ಯ ಸಂಪುಟ)

ಹರಿಹರನ ರಗಳೆಗಳಲ್ಲಿ ಶಿವನು ತನ್ನ ಭಕ್ತರನ್ನು ಪರೀಕ್ಷಿಸುವ ಬಗೆಯನ್ನು ೩ ರೀತಿಯಲ್ಲಿ ವಿಂಗಡಿಸಿಕೊಂಡು ಅರ್ಥೈಸಿ ನೋಡುವ ಸಾಧ್ಯತೆ ಇದೆ. ಅವು...

(೧) ಆತ್ಮ ಪರೀಕ್ಷೆ

(೨) ಧರ್ಮ ಪರೀಕ್ಷೆ

(೩) ಸಮಾಜ ಪರೀಕ್ಷೆ

ಶಿವಭಕ್ತನನ್ನು ಶಿವನು ಪರೀಕ್ಷಿಸುವುದು ಹಿಂಸೆಯಿಂದಾಗಲಿ, ಕೋಪದಿಂದಾಗಲಿ ಅಲ್ಲ, ಅವನ ಭಕ್ತಿ ಸತ್ವಯುತ ಮತ್ತು ನಿಜವಾದುದಾದರೆ ಅವನಿಗೆ ಮುಕ್ತಿ ನೀಡಿ, ಅವನ ಕೀರ್ತಿಯನ್ನು ಲೋಕದಲ್ಲಿ ಬೆಳಗಿಸುವುದಕ್ಕೆ ಮತ್ತು ಆದರ್ಶವನ್ನು ಸಾರುವುದಕ್ಕೆ ಮಾತ್ರ. ಅಂತಹ ಅರ್ಹಭಕ್ತರನ್ನೇ ಶಿವನು ಆರಿಸಿಕೊಳ್ಳುತ್ತಾನೆ. ಸತ್ಯದ ಹಾದಿಯಲ್ಲಿ ಬೆಳೆದ ಭಕ್ತನ ಭಕ್ತಿಪಥ ಶ್ರೇಷ್ಠವಾದುದು.

(೧) **ಆತ್ಮ ಪರೀಕ್ಷೆ :-**

ಮನುಷ್ಯನಾಗಿ ಹುಟ್ಟಿದ ಮೇಲೆ, ಸಂಬಂಧಗಳು ಹಾಗೂ ಸಮಾಜದ ಮಧ್ಯೆ ಬದುಕುವ ಜೀವಿಗೆ ಹಲವು ಕಷ್ಟ, ನಷ್ಟ ಸೋಲು-ಗೆಲುವು, ಸುಖದುಃಖದ ಸವಿಯನ್ನು ಅನುಭವಿಸಿಯೇ ಬಾಳಬೇಕಾಗುತ್ತದೆ. ಸುಖ ಬಂದಾಗ ಹಿಗ್ಗುವುದು ದುಃಖ ಬಂದಾಗ ಕುಗ್ಗುವುದು ಮನುಷ್ಯ ಸಹಜಗುಣ. ಇದಕ್ಕೆ ಕಾರಣ ಮನುಷ್ಯನ ಮನಸ್ಸು. ಆ ಮನಸ್ಸನ್ನು ಎತ್ತಲೋ ಸುಳಿಯಲು ಬಿಡದೆ

ಶಿವಧ್ಯಾನ, ಶಿವ ಚಿಂತನೆಯ ಕಡೆಗೆ ತಿರುಗಿಸಿ ತನ್ನ ವ್ಯಕ್ತಿತ್ವವನ್ನು ಶುದ್ಧವಾಗಿಟ್ಟುಕೊಳ್ಳುವುದು ಮಹತ್ಕಾರ್ಯ ಅದು ಆತ್ಮ ಸಾಧನೆ. ಇಲ್ಲಿನ ಶಿವಶರಣರು ಶಿವನನ್ನು ಒಲಿಸಿಕೊಳ್ಳುವುದಕ್ಕೆ ಏಕವಿಧಾನವನ್ನು ಅನುಸರಿಸಿಲ್ಲ. ತಮಗಿಷ್ಟ ಬಂದ ನೇಮವನ್ನೋ, ಆದರ್ಶವನ್ನೋ, ನಿಷ್ಠೆಯನ್ನೋ ಅನುಸರಿಸಿದ್ದಾರೆ. ಒಟ್ಟಿನಲ್ಲಿ ಆತ್ಮಶುದ್ಧಿಯಿಂದ ಆಧ್ಯಾತ್ಮಿಕ ಸಿದ್ಧಿಯನ್ನು ಸಂಪಾದಿಸುವ ಮಾದರಿಯನ್ನು ಇಲ್ಲಿ ಕಾಣುತ್ತೇವೆ. ಶಿವನ ಅನುಗ್ರಹಕ್ಕಾಗಿ ಎಷ್ಟೇ ಕಷ್ಟವಾದರೂ ಸರಿ, ಎಂತಹ ತ್ಯಾಗವಾದರೂ ಸರಿ ಸಂತೋಷದಿಂದ ಸಮರ್ಪಣಾ ಮನೋಭಾವದಿಂದ ಕಾರ್ಯಶೀಲರಾಗುವ ಶಿವಶರಣರ ಆದರ್ಶ ಸರ್ವಕಾಲಕ್ಕೂ ಸಲ್ಲುವಂತದ್ದು.

ಮೋಕ್ಷಕ್ಕೆ ಹಂಬಲಿಸುವ ಶಿವಭಕ್ತರು ಪರಶಿವನನ್ನು ತನ್ನ ಒಡೆಯನೆಂದು ನಂಬಿ ಅವನ ಧ್ಯಾನವನ್ನು ಆಳವಾಗಿ ಮನಸ್ಸಿನಲ್ಲಿ ಬೆಂಬಿಡದೆ ಕಾಯುತ್ತಾನೆ ಎಂಬ ನಂಬಿಕೆ ಶರಣರಲ್ಲಿ ಗಟ್ಟಿಯಾಗುತ್ತದೆ. ಮನೋವೈಜ್ಞಾನಿಕ ಸಮೀಕ್ಷೆಯ ಪ್ರಕಾರ "ಪರೀಕ್ಷೆ" ಎಂದರೆ ನಾನೂ ಏಕೆ ಸ್ಪರ್ಧಿಯಾಗಿ ಭಾಗವಹಿಸಬಾರದು? ನನ್ನ ಪರೀಕ್ಷೆಯನ್ನು ಶಿವನು ಮಾಡುವ ಹಾಗಿದ್ದರೆ ನಾನೂ ಸಹ ರಗಳೆಗಳ ಕಥೆಯಲ್ಲಿ ಕಾಣುವ ಶಿವಭಕ್ತರಂತೆ ಶಿವನನ್ನು ಬಿಟ್ಟು ಅನ್ಯದೇವರ ಗೋಜಿಗೆ ಹೋಗದೆ, ಶಿವನೇ ಪರಮದೈವ ಎಂದು ನಂಬುವವನಾಗುತ್ತೇನೆ – ಎಂಬ ಮನಸ್ಸು ಮತ್ತಷ್ಟೂ ಗಟ್ಟಿಯಾಗುವ ಸಾಧ್ಯತೆ ಇರುತ್ತದೆ. ಹಾಗೆಯೇ ಕ್ರೀಡೆಯನ್ನು ನೋಡಿ ಆಸ್ವಾದಿಸುವ ಮನಸ್ಸು ನಾನೂ ಅದರ ಸ್ಪರ್ಧಿಯಾಗಬೇಕು ಎಂದು ಆಕಾಂಕ್ಷೆ ಪಡುವುದು ಸಹಜವೇ ಸರಿ. ಅದರಂತೆ ಶಿವ ತನ್ನ ಭಕ್ತರನ್ನು ಪರೀಕ್ಷೆ ನಡೆಸುತ್ತಾನೆ. ಭಕ್ತರೊಂದಿಗೆ ಆತ್ಮೀಯ ಸಲುಗೆಯ ಸಂಬಂಧವಿರಿಸಿಕೊಳ್ಳುತ್ತಾನೆ. ಆತನ ನಿಜಭಕ್ತಿಯನ್ನು ಪರೀಕ್ಷಿಸಿ ಕೈಲಾಸದ ಗಣಪದವಿಯನ್ನು ನೀಡುತ್ತಾನೆ ಎಂಬ ಮೌಲ್ಯಗಳುಳ್ಳ ರಗಳೆಗಳ ಕಥೆಯು ಜನರ ಮನಸ್ಸಿನ ಮೇಲೆ ಪ್ರಭಾವ ಬೀರುತ್ತದೆ. ಇದರಿಂದ ಸಾಮಾನ್ಯ ಜನರು ತಾನೂ ಶಿವನನ್ನು ಏಕೆ ಒಲಿಸಿಕೊಳ್ಳಬಾರದು? ನನ್ನಲ್ಲಿಯೂ ಸಹ ನಿಜಭಕ್ತಿ ಇದೆ ಎಂಬ ಛಲದಿಂದ ಶಿವನನ್ನು ಆರಾಧಿಸುವ ಪಂಥವು ಬೆಳೆಯುವುದಕ್ಕೆ ಸಾಧ್ಯವಾಗುತ್ತದೆ.

ಶಿವನನ್ನು ಆರಾಧಿಸುವುದಕ್ಕೆ ಕರಾರುವಕ್ಕಾದ ನೀತಿನಿಯಮ ಪರಿಪಾಲನೆ, ತಪ್ಪಿ ನಡೆದರೆ ಶಿಕ್ಷೆ, ಇವೇ ಮೊದಲಾದ ಕಠಿಣ ಆಚರಣೆಯಾಗಲಿ, ತಾರತಮ್ಯ ಬೇಧವಾಗಲಿ ಇರಲಿಲ್ಲ. ಆದ್ದರಿಂದ ಎಲ್ಲಾ ವರ್ಗದವರಿಗೂ ಈ ಮಾರ್ಗ ಸರಳ ಹಾಗೂ ಬಹು ಉಪಯುಕ್ತ ಎನಿಸಿರಬಹುದು.

ಹರಿಹರನ ರಗಳೆಗಳು ಜನಸಾಮಾನ್ಯರಲ್ಲಿ ವಿವಿಧ ರೀತಿಯಲ್ಲಿ ಪರಿಣಾಮ ಪ್ರಭಾವ ಬೀರಿರಲು ಅವಕಾಶವಿರಬಹುದು. ಪ್ರತಿಯೊಬ್ಬ ಶಿವಭಕ್ತನ ವ್ಯಕ್ತಿತ್ವ ಶುದ್ಧಿ, ಆತ್ಮಶುದ್ಧಿಗೆ ಸಂಬಂಧಿಸಿದುದು. ಶಿವಭಕ್ತನು ಧರ್ಮಮಾರ್ಗದಲ್ಲಿ ನಡೆದು ಕಾಯಕವೇ ಕೈಲಾಸ ಎಂಬ ಬಸವಣ್ಣನ ತತ್ವದಡಿಯಲ್ಲಿಯೇ ಸಾಗಿ ಶಿವನೊಲುಮೆ ಸಂಪಾದಿಸಿ ಕೈಲಾಸದ ಗಣಪದವಿಯ ಸಂಪಾದಿಸುವುದಾಗಿದೆ.

## (೨) ಧರ್ಮಪರೀಕ್ಷೆ :-

ಶಿವಭಕ್ತರ ಕಥೆಯ ಮೂಲಕ ಶಿವಸಾಯುಜ್ಯವನ್ನು ಹೊಂದುವುದು, ಗಣಪದವಿಯನ್ನು ಪಡೆಯುವಂತಹ, ಏಕದೇವೋಪಾಸನೆ ಆಚರಣೆಯ ಈ ಕಥಾವಿಧಿಗಳು ಭಕ್ತರನ್ನು "ದೇವರು ಸೂತ್ರಧಾರಿ, ನಾವೆಲ್ಲ ಪಾತ್ರಧಾರಿಗಳು, ಅವನ ಗರಿಷ್ಠ ಸೇವೆಯೇ ನಮ್ಮ ಜೀವನದ ಪರಮಗುರಿ" ಹಾಗೂ "ಶಿವನು ನಮಗೆ ಏನಾದರೂ ಕೊಟ್ಟರೂ, ಸರಿ ಕೊಡದಿದ್ದರೂ ಸಹ ಭಕ್ತಿಯನ್ನು ರೂಢಿಸಿಕೊಂಡು ಅವನ ಒಲುಮೆಯನ್ನು ಗಳಿಸುವುದೇ ನಮ್ಮ ಭಾಗ್ಯ" – ಈ ರೀತಿಯ ಮನೋಚಿಂತನೆಗಳಿಗೆ ಕಾರಣ ಮಾಡಿಕೊಡಬಹುದು. ಹರಿಹರನ ರಗಳೆಗಳು ಜನರಲ್ಲಿ ಭಕ್ತಿಯ ಹಿತಾಸಕ್ತಿ ಮತ್ತು ಧಾರ್ಮಿಕ ಪ್ರಗತಿ ಎರಡನ್ನು ಸಮತೋಲವಾಗಿ ಬೆಳೆಸುವಂತಹ ಪ್ರಯತ್ನವನ್ನು ಇಲ್ಲಿ ಮಾಡಿದ್ದಾನೆ ಎಂದೆನಿಸುತ್ತದೆ.

'ಧರ್ಮ' ಎಂದರೆ ಸಮಾಜದಲ್ಲಿ ಬಾಳುತ್ತಿರುವ ವ್ಯಕ್ತಿಯು ತಾನು ನಂಬಿ ಅನುಸರಿಸುತ್ತಿರುವ ಸತ್ಯ, ದಯೆ, ದಾನ, ಮಾನವೀಯತೆ, ನೀತಿ, ಔದಾರ್ಯ, ನೇಮಗಳೇ ಧರ್ಮ ಮಾರ್ಗ. ಪ್ರಮುಖವಾಗಿ ಜೀವನದಲ್ಲಿ ೨ ಮಾರ್ಗಗಳಿರುತ್ತವೆ. ಒಂದು ಧರ್ಮಮಾರ್ಗವಾದರೆ ಮತ್ತೊಂದು ಅಧರ್ಮ ಮಾರ್ಗವಾಗುತ್ತದೆ. ಧರ್ಮಮಾರ್ಗದ ಪಥದಲ್ಲಿ ನಡೆಯುವವನಿಗೆ ಪರಮೇಶ್ವರನ ರಕ್ಷಣೆಯಿರುತ್ತದೆ. ಅಧರ್ಮ ಮಾರ್ಗದಲ್ಲಿ ನಡೆಯುವವನಿಗೆ ದೇವರ ರಕ್ಷಣೆ ಇರದು. "ಮಾಡಿದುಣ್ಣೋ ಮಹಾರಾಯ" ಎಂಬ ಗಾದೆಮಾತಿನಂತೆ ತನ್ನ ಕರ್ಮದ ಫಲಗಳನ್ನು ತಾನೇ ಅನುಭವಿಸಬೇಕು ಎಂಬ ಜೀವನಾನುಭವದ ಅಂಶಗಳು ಸಮಾಜದ ಜನರ ಮೇಲೆ ಪ್ರಭಾವ ಬೀರುತ್ತದೆ. ಅದರಂತೆ ರಗಳೆಗಳಲ್ಲಿನ ಶಿವಭಕ್ತರು ನೇಮದಂತೆ ಧರ್ಮಮಾರ್ಗದಲ್ಲಿ ನಡೆಯುವವರಾಗಿದ್ದರು. "ಧರ್ಮೋ ರಕ್ಷತಿ ರಕ್ಷಿತಃ" ಎಂಬಂತೆ ಧರ್ಮವನ್ನು ನಾನು ರಕ್ಷಿಸಿದರೆ ಆ ಧರ್ಮ ನನ್ನನ್ನು ರಕ್ಷಿಸುತ್ತದೆ' ಎಂಬ ನುಡಿಯ ಆಶಯ ಇಲ್ಲಿ ವ್ಯಕ್ತವಾಗುತ್ತದೆ. ಪ್ರತಿಯೊಬ್ಬರ

ಪಾಲಿಗೆ ಅವರು ನಂಬಿ ಪಾಲಿಸುತ್ತಿದ್ದ ಧರ್ಮವೇ ದೇವರಾಗುತ್ತದೆ ಎಂದು ನಂಬಿದ್ದರು. "ನೀಡು ಶಿವ, ನೀಡದಿರು ಶಿವಾ.. ಬಾಗುವುದು ನನ್ನ ಕಾಯ.. ನಾನೇಕೆ ಅಂಜಲಿ, ನೀನೆನ್ನ ಅಂಬಲಿ" ಎಂಬ ಹಾಡಿನ ಸ್ವರೂಪದಂತೆ ಶಿವನೇ ಅವರ ಭರವಸೆಯ ಬದುಕಾಗಿತ್ತು. ಶಿವನನ್ನು ಬಿಟ್ಟರೆ ಬೇರೆನೂ ಬೇಕಾಗಿರಲಿಲ್ಲ. ಹೀಗೆ ಶಿವಭಕ್ತರ ಪಾಲಿನ ಈ ಧರ್ಮವನ್ನು ಶಿವನು ಬಂದು ಪರೀಕ್ಷಿಸಿ, ಜಯಸಿದವರಿಗೆ ಗಣಪದವಿಯನ್ನು ನೀಡುತ್ತಿದ್ದನು. ಈ ಕಥೆಗಳ ಹಿನ್ನೆಲೆಯಿಂದ ನೋಡಿದಾಗ ಶಿವಭಕ್ತರ ಆದರ್ಶ, ಮೌಲ್ಯಗಳೇ ದೇವರಾಗುತ್ತದೆ. ಅವರ ಪಥ ಧರ್ಮಮಾರ್ಗವಾಗುತ್ತದೆ. ಅಂದಿನ ಜನಸಾಮಾನ್ಯರ ಬದುಕಿನ ಒತ್ತಡದ ಮಧ್ಯೆ ಸತ್ಯದ ಮುಖವಾಡ ಹೊತ್ತ ಜನರ ನಡುವೆ ಅಸತ್ಯ, ಅಧರ್ಮವೆಂಬ ಕರ್ಮಾಚರಣೆಯನ್ನು ದೂರತಳ್ಳಿ "ಸತ್ಯ ಮತ್ತು ಧರ್ಮಮಾರ್ಗ"ದ ಪ್ರತಿಷ್ಠಾಪನೆಯನ್ನು ಹರಿಹರನು ರಗಳೆಗಳಲ್ಲಿ ಮಾಡಿದ್ದಾನೆ ಎಂದೆನಿಸುತ್ತದೆ.

**(೩) <u>ಸಮಾಜ ಪರೀಕ್ಷೆ :-</u>**

ಹರಿಹರನ ರಗಳೆಗಳಲ್ಲಿ ವ್ಯಕ್ತವಾಗುವ ಶಿವನ ಪವಾಡ ಸದೃಶ ಘಟನೆಗಳು ಜನ ಸಾಮಾನ್ಯರ ಹೃದಯವನ್ನು ಮಿಡಿಯುತ್ತವೆ. ಸಮಾಜದ ಜನರ ಆಚಾರ-ವಿಚಾರ, ಸಂಸ್ಕಾರ-ಸಂಸ್ಕೃತಿ, ಮೌಢ್ಯಗಳ ಮಧ್ಯೆ ಸಕಾರಾತ್ಮಕ ಶಕ್ತಿಯ ಪ್ರಚೋದನೆಯಿಂದ ಪವಾಡಗಳು ರೂಪತಳೆಯುತ್ತವೆ. ಹೀಗೆ ಎಲ್ಲೋ ತಾನು ಕೇಳಿದ ಶಿವಭಕ್ತರ ಪವಾಡಗಳನ್ನು, ಮೌಖಿಕ ಪರಂಪರೆಯ ಕಥೆಗಳನ್ನು, ತಮಿಳು ಭಾಷೆಯಲ್ಲಿದ್ದ ಶಿವಭಕ್ತರ ಕಥೆಗಳನ್ನು ಗ್ರಹಿಸಿ ಹರಿಹರನು ಒಂದೇ ಮಾದರಿಯ ರಗಳೆಗಳನ್ನು ಕಟ್ಟಿದ್ದಾನೆ. ಪವಾಡಗಳ ಹಿನ್ನೆಲೆಯಿಂದ ಹೊರನಿಂತು ನೋಡಿದರೆ ಶಿವಭಕ್ತರು ನಿಷ್ಠೆಯಿಂದ ಬದುಕಿ ಏಕದೇವೋಪಾಸನೆಯನ್ನು ಕ್ರಾಂತಿಯಂತೆ ಮಾಡಿ, ಶಿವಭಕ್ತರಲ್ಲದವರನ್ನು, ಶಿವಭಕ್ತರನ್ನಾಗಿ ಪರಿವರ್ತಿಸಲು ಯತ್ನಿಸಿದ್ದಾರೆನಿಸುತ್ತದೆ.

ಉದಾ : ರಗಳೆಗಳ ಕಥೆಗಳಲ್ಲಿ ಕಾಣುವ ಕೆಲವು ಅಂಶಗಳು ಸಮಾಜವನ್ನು ಪ್ರೇರೇಪಿಸುತ್ತದೆ. ಕೋಳೂರ ಕೊಡಗೂಸು ರಗಳೆಯ ಕಥೆಯಲ್ಲಿ ಕೊಡಗೂಸನ್ನು ಶಿವನು ಕೈಲಾಸಕ್ಕೆ ಕರೆದೊಯ್ಯುತ್ತಿರುವಾಗ ಇಡೀ ಊರಿಗೆ ಊರೇ ಸಂಭ್ರಮಿಸಿ, ಆ ದೃಶ್ಯವನ್ನು ನೋಡಿ ತಮ್ಮ ಮಕ್ಕಳಿಗೂ ಕೊಡಗೂಸು ಮಾದರಿಯಲ್ಲಿ ಶಿವಭಕ್ತಿಯನ್ನು ಬೆಳೆಸಿಕೊಳ್ಳಲು ಉತ್ತೇಜಿಸುವ ಸಾಧ್ಯತೆ ಹೆಚ್ಚು. ಇದರಿಂದ "ಬೆಳೆಯುವ ಸಿರಿ ಮೊಳಕೆಯಲ್ಲೇ" ಎಂಬ ಗಾದೆಮಾತಿನಂತೆ ಪ್ರಾರಂಭದಿಂದಲೂ ಬೆಳೆಸಿಕೊಂಡ ಶಿವಭಕ್ತಿ ಬೇರೂರಲು ಸಾಧ್ಯವಾಗಿ ಸದ್ಗುಣ ಸಂಪನ್ನರಾಗಲು ನೆರವಾಗುತ್ತದೆ.

ತಿರುನೀಲಕಂಠ ದೇವರ ರಗಳೆಯಲ್ಲಿ ಮುತ್ತೈದೆ-ತಿರುನೀಲಕಂಠ ದಂಪತಿಗಳ ವಿಷಯದಲ್ಲಿ ಆಣೆಯನ್ನು ವ್ರತವಾಗಿ ಪಾಲಿಸುತ್ತಿದ್ದ ಅವರ ಪಾಲಿಗೆ ಪರೀಕ್ಷೆಯ ಸಮಯ ಒದಗಿ ಬಂದಾಗ ಅವರಿಬ್ಬರ ಭಕ್ತಿಯ ಸಲುವಾಗಿ ಶಿವ-ಪಾರ್ವತಿ ಪ್ರತ್ಯಕ್ಷವಾದಾಗ ಊರಿನಲ್ಲಿರುವವರೆಲ್ಲರಿಗೂ ದರ್ಶನ ಪ್ರಾಪ್ತವಾಯಿತು. ಇದರಿಂದ ಸಮಸ್ತ ಜನಸಮೂಹಕ್ಕೂ ಶಿವನಭಕ್ತಿ, ಪರೀಕ್ಷೆಯ ಬಗೆಗೆ ಒಂದು ಪೂರ್ಣ ನಂಬಿಕೆ ಉಂಟಾಗಿ ತಾವೂ ಶಿವಭಕ್ತರಾಗುವ ಹಂಬಲ ಉಂಟಾಗುತ್ತದೆ.

ಉದಾ: (೧) ಓಹಿಲಯ್ಯ ಒಬ್ಬನೇ ದೇಹಸಹಿತ ಕೈಲಾಸಕ್ಕೆ ಹೋದರೆ, ಅದನ್ನು ಲೇವಡಿ ಮಾಡಿ ಹೆಂಡತಿಯ ಮಾತಿಗೆ ಒಳಗಾಗಿ ಇಡೀ ಊರನ್ನೇ ಕೈಲಾಸಕ್ಕೆ ಕರೆದೊಯ್ದ ಉದ್ಭಟಯ್ಯನ ಭಕ್ತಿ ವಿಶೇಷವೆನಿಸಿದರೆ, ನವಪುರವನ್ನೇ ಕೈಲಾಸಕ್ಕೆ ಕರೆದೊಯ್ದ ಹಲಾಯುಧನ ಭಕ್ತಿ ಗಮನಾರ್ಹವಾದುದು. ಇಡೀ ದೇಶವನ್ನೇ ಕೈಲಾಸಕ್ಕೇರಿಸಿದ ಮಲಯರಾಜನ ಭಕ್ತಿ ಶ್ರೇಷ್ಠವಾದುದು. ಕಥೆಗಳಲ್ಲಿ ಪವಾಡಗಳಂತೆ ಸುಳಿದುಹೋದರೂ ಸಮಾಜದ ಜನರು ಇಂತಹ ಧಾರ್ಮಿಕ ಕ್ಷೇತ್ರಗಳಿಗೆ ಪ್ರೇರಿತರಾಗುತ್ತಾರೆ.

(೨) ಜೈನ ದೇವಾಲಯಗಳನ್ನು ನಾಶಮಾಡಿ ಶಿವಾಲಯಗಳನ್ನು ನಿರ್ಮಿಸಿ ಅಲ್ಲಿ ಶಿವಲಿಂಗಗಳ ಪ್ರತಿಷ್ಠಾಪನೆ ಮಾಡುವುದು. ಆ ಊರಿನಲ್ಲಿರುವ ಎಲ್ಲಾ ಜಾತಿ ಧರ್ಮದವರನ್ನು ಉಪಾಯಾಂತರದಿಂದ ಶಿವಭಕ್ತರನ್ನಾಗಿ ಮಾಡಿ ಊರಿಗೆ ಊರನ್ನೇ ಶಿವಪುರವನ್ನಾಗಿ ಮಾಡುವ ಬಗೆ ರಗಳೆಗಳಲ್ಲಿ ಹೆಚ್ಚಾಗಿ ಕಾಣಸಿಗುತ್ತದೆ. ಶಿವನೇ ಖುದ್ದಾಗಿ ಭೂಲೋಕಕ್ಕೆ ಆಗಮಿಸಿ ಶಿವಭಕ್ತರನ್ನು ಪರೀಕ್ಷಿಸಿ, ಆರಿಸಿ ಮೆಚ್ಚಿದವರನ್ನು ಕೈಲಾಸಕ್ಕೆ ಕರೆದುಕೊಂಡು ಹೋಗುವುದು. ಇದರಿಂದ ಶಿವಭಕ್ತರಲ್ಲಿ ರಾಜಸೇವೆಗಿಂತ ಶಿವಪೂಜೆ ಮತ್ತು ಶರಣರ ಸೇವೆಯೇ ಪ್ರಧಾನ ಎಂಬುದನ್ನು ಖಚಿತವಾಗಿ ಹೇಳಿದ ಹರಿಹರನ ಮಾತುಗಳು ಜನಸಾಮಾನ್ಯರ ಕಿವಿ ಅರಳಿಸಿರಬೇಕು. ರಾಜರು ಜನಸಾಮಾನ್ಯರ ಮೇಲೆ ತಮ್ಮ ದರ್ಪ ದೌಲತ್ತುಗಳನ್ನು ತೋರುತ್ತಿದ್ದ ಹಾಗೆ ಪುರುಷರು ಸ್ತ್ರೀಯರ ಮೇಲೂ, ಶ್ರೀಮಂತ ಬಡವರೊಂದಿಗಿನ ನಡುವಿನ ವ್ಯತ್ಯಾಸಗಳಿಂದ ಬಿಡುಗಡೆ ಹೊಂದಿ ಹೊರಬರಲು ಹರಿಹರನ ಈ ಭಕ್ತಿ ಮಾರ್ಗ ಬಹಳ ಸುಲಭವೆಂದೆನಿಸಿತು. ಆದ್ದರಿಂದ ಸಾಮಾನ್ಯ ಜನವರ್ಗಕ್ಕೆ ಅರಸ ಮತ್ತು ಅವನ ಸಂಪತ್ತು, ವೈಭೋಗದ ಜೀವನಕ್ಕಿಂತ ಶಿವಭಕ್ತಿ-ಶರಣಸೇವೆಯೇ ಶ್ರೇಷ್ಠವೆನಿಸಿ, ಶಿವತತ್ವ, ಭಕ್ತಿ, ಜಿಜ್ಞಾಸೆ ಸಭೆಗಳಲ್ಲಿ ಎಲ್ಲರೂ ಒಟ್ಟಿಗೆ ಸೇರಿ, ಶಿವನನ್ನು ಆರಾಧಿಸಿ ಇಹ ಜನ್ಮವನ್ನು ಸಾರ್ಥಕ ಹಾಗೂ ಪಾವಿತ್ರ್ಯ ಮಾಡಿಕೊಳ್ಳಬೇಕೆಂಬ ಆಶಯಗಳಿರಬಹುದು. ಹೀಗೆ ಅಧಿಕಾರಶಾಹಿತ್ವದ ಎದುರು ಸಮಾಜವನ್ನು ಸೆಟೆದು ನಿಲ್ಲಿಸುವ ಕಾರ್ಯವನ್ನು ಮಾಡಿದ ಹರಿಹರನು ಶಿವಭಕ್ತಿಯನ್ನು ಗಳಿಸುತ್ತಲೇ ಶಿವ ಮತ್ತು ಶಿವಭಕ್ತರನ್ನೊಳಗೊಂಡ ಸಮಾಜವೆಂಬ ಶಿವಪುರವನ್ನು

ಮುಖಾಮುಖಿಗೊಳಿಸುತ್ತಲೇ ಬಂದಿದ್ದಾನೆ. ಬಸವಣ್ಣನವರ "ದಯೆಯೇ ಧರ್ಮದ ಮೂಲವಯ್ಯ" ಎಂಬ ಮಾತಿನ ಆಶಯವನ್ನು ಸ್ಥಾಪಿಸುವಂತಹ ಪ್ರಯತ್ನದೊಂದಿಗೆ ಶಿವಭಕ್ತಿಯನ್ನು ಹುಟ್ಟುಹಾಕಿದ್ದಾನೆ. ಶಿವನು ಶಿವಭಕ್ತರ ಜೀವನದಲ್ಲಿ ಮೆರೆಯುವ ಪವಾಡಗಳು ಸಕಾರಾತ್ಮಕ ಮನೋಭಾವ ಪ್ರಗತಿಪರ ನಿಲುವು, ಹೋರಾಟದಂತಹ ಗುಣಗಳನ್ನು ಅಭಿವೃದ್ಧಿಪಡಿಸುವ ಜೊತೆಗೆ ಇಂತಹ ಪವಾಡದ ಸಂಗತಿಗಳನ್ನು ತಿಳಿಸಿಯಾದರೂ ಜನಸಾಮಾನ್ಯರನ್ನು ಶಿವಭಕ್ತಿಯತ್ತ ಸೆಳೆಯುವ ತಂತ್ರಗಾರಿಕೆ ಮುಂತಾದ ಪ್ರಯತ್ನಗಳನ್ನು ಕಾಣಬಹುದು. ಶಿವನು-ಭಕ್ತನ ಭಕ್ತಿಗೆ ಸೋಲುವ ಪರಿ ಮತ್ತು ಮನಸ್ಸೂರೆಗೊಳ್ಳುವಂತಹ ಭಕ್ತಿ ಅದನ್ನು ಮೆಚ್ಚುವ ಶಿವನು ಭಕ್ತನೊಂದಿಗೆ ಎಂತಹ ಒಡನಾಟ ಸಂಬಂಧವನ್ನು ಹೊಂದುತ್ತಾನೆ. ಆ ಆತ್ಮೀಯ ಸಂಬಂಧವು ಬೇರ್ಪಡಿಸಲಾಗದ ಬಾಂಧವ್ಯವಾಗಿ, ಹಚ್ಚಹಸಿರಾಗಿ ಉಳಿಯುವುದು. ಇವುಗಳಿಂದ ಸಮಾಜ ಸದಾ ಪ್ರೇರೇಪಣೆ ಹೊಂದಿ ಶಿವಭಕ್ತರಾಗುತ್ತಾ ಹೋದಂತೆ ಇನ್ನೊಂದೆಡೆ ಆ ಶಿವಭಕ್ತಿಯು ಜನಸಾಮಾನ್ಯರನ್ನು ಆಕರ್ಷಿಸುತ್ತಾ ಹೋಗುತ್ತದೆ. ಇದರಿಂದ ಸಮಾಜದಲ್ಲಿ ಭಕ್ತಿ, ಆದರ್ಶ, ಮೌಲ್ಯಗಳು ನೆಲೆಯೂರಲು ಸಾಧ್ಯವಾಗುತ್ತದೆ.

ಹರಿಹರನ ರಗಳೆಗಳಲ್ಲಿ ಶಿವನು ತನ್ನ ಭಕ್ತರನ್ನು ಪರೀಕ್ಷೆಗೆ ಒಳಪಡಿಸುತ್ತಿದ್ದ ನಿಜ. ಹಾಗೆ ಪರೀಕ್ಷಿಸುತ್ತಿದ್ದ ಶಿವನು ಭೂಲೋಕದ ಎಲ್ಲರನ್ನೂ ಪರೀಕ್ಷಿಸುತ್ತಿರಲಿಲ್ಲ. ಯಾರು ಶಿವಭಕ್ತಿಯನ್ನು ನೇಮವಾಗಿ, ಎಡೆಬಿಡದೆ ಆಚರಿಸುತ್ತಿದ್ದರೋ ಅಂತಹ ಭಕ್ತ ಮಹಾಶಯರನ್ನು ಮಾತ್ರ ಪರೀಕ್ಷಿಸಿ ಅವರ ಭಕ್ತಿಯ ಪ್ರಖರತೆಯನ್ನು ಲೋಕಕ್ಕೆ ಸಾರುವಂತೆ ಮಾಡುತ್ತಿದ್ದ. ಇಂತಹ ಪರೀಕ್ಷೆಗಳ ಮಾದರಿಯ ಸ್ವರೂಪದ ಕಥೆಗಳ ರಚನೆ ಅಂದಿನ ಕಾಲಕ್ಕೆ ಏಕೆ ಅವಶ್ಯಕತೆ ಇತ್ತು ಎಂದು ಕಾವ್ಯ ಸಂದರ್ಭದ ಹಿನ್ನೆಲೆಯಿಂದ ನೋಡುವುದಾದರೆ, ಪ್ರಾರಂಭದಿಂದಲೂ ಮನುಷ್ಯ ಕುಲವು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಎಂಬ ನಾಲ್ಕು ಪಂಗಡಗಳು ಬೆಳೆದು ಬಂದಿವೆ. ಇಲ್ಲಿ ಬ್ರಾಹ್ಮಣನಿಗೆ ಮಾತ್ರ ದೇವತಾರಾಧನೆ ಮೀಸಲಾಗಿತ್ತು. ಶೂದ್ರರನ್ನು ಕೀಳು ಎಂದು ಕಡೆಗಣಿಸಿದ್ದರು. ಮಾರಿ-ಮಸಣಿ ಗುಡಿಯಾಚೆಗಿನ ಮಾರಿದೇವತೆಗಳಿಗೆ ಪೂಜಿಸಲು ಮೀಸಲಾಗಿತ್ತು. ಹೀಗೆ ಸಮಾಜದಲ್ಲಿ ವರ್ಣಕುಲ ಬೇಧ, ವರ್ಗಬೇಧ ಮೊದಲಾದ ಅಸಮಾನತೆಗಳು ತಲೆ ಎತ್ತಿ ನಿಂತಿದ್ದವು. ಉಳ್ಳವರು ಸಮಾಜದ ಎಲ್ಲಾ ಸೌಲಭ್ಯಗಳನ್ನು ಹೊಂದಿ ಉಳ್ಳವರಾಗಿಯೇ ಉಳಿದು ಸೌಲಭ್ಯಗಳಿಂದ ವಂಚಿತರಾದ ಜನಸಾಮಾನ್ಯರು ಇಲ್ಲದವರಾಗಿಯೇ ಇರುತ್ತಿದ್ದರು. ಇಲ್ಲಿನ ಜನ ಸಾಮಾನ್ಯರಿಗೆ ಇದರಿಂದ ಬೇಸತ್ತು ತಿಳುವಳಿಕೆ ಶೂನ್ಯರೇ ಆಗಿದ್ದರು. ಇಂತಹ ಸಂದರ್ಭದಲ್ಲಿ ಹರಿಹರನ

ಸಾಹಿತ್ಯವು ಸಮಾಜಕ್ಕೆ ತಿಳುವಳಿಕೆಯ ಶಕ್ತಿಯನ್ನು ನೀಡುವ ಜೊತೆಗೆ ಶಿವಭಕ್ತಿಯ ಸಾಗರದಲ್ಲಿ ಯಾರು ಬೇಕಾದರೂ ಮುಳುಗೇಳಬಹುದು ಎಂಬ ಸಾರ್ವತ್ರಿಕ ಸತ್ಯವನ್ನು ವ್ಯಕ್ತಪಡಿಸಿದನು. ಇದರಿಂದ ಹರಿಹರ ಅಂದಿನ ಜನಸಾಮಾನ್ಯರ ಜೀವನವನ್ನು ಕಟ್ಟುತ್ತಾ, ಶಿವಭಕ್ತಿ ಪರಂಪರೆಯನ್ನು ಮೆರೆಯುತ್ತ ಜನತೆಯ ಕವಿಯಾಗಿದ್ದಾನೆ. ಶಿವಲೋಕ ಸತ್ಯವನ್ನು ಅರಿಯುವಂತಹ ಮಾರ್ಗದರ್ಶನವನ್ನು ಸಮಾಜಕ್ಕೆ ತನ್ನ ರಗಳೆಗಳ ಮೂಲಕ ನೀಡಿರುವ ಹರಿಹರ ಒಬ್ಬ ಗುರುವಾಗಿದ್ದಾನೆ ಎನ್ನಬಹುದು.

ಹರಿಹರನು ಶಿವಭಕ್ತಿಯನ್ನು ಸಾಧಿಸಲು ಆ ಭಕ್ತನಿಗೆ ಮುಖ್ಯವಾಗಿ ಅಂತರಂಗ ಶುದ್ಧಿ, ಸ್ವಭಕ್ತಿ, ಸತ್ಯ, ಛಲ, ಹಂಬಲ, ಸ್ವಾಭಿಮಾನ, ಆತ್ಮನಿಷ್ಠೆ, ಏಕಚಿತ್ತತೆ, ಹೃದಯವೈಶಾಲ್ಯ, ಕಾಯಕ ನಿಷ್ಠೆ, ಪ್ರೀತಿ ವಾತ್ಸಲ್ಯ ಮತ್ತು ಮಾನವೀಯ ಮೌಲ್ಯ ಮೊದಲಾದ ಪ್ರಾಮಾಣಿಕ ಆದರ್ಶವೇ ಹೊರತು ಕೇವಲ ಬಹಿರಂಗ ಪೂಜೆಯ ಕ್ರಮವಲ್ಲ ಎಂದು ತನ್ನ ರಗಳೆಗಳಲ್ಲಿ ಸಂದೇಶವನ್ನು ತಿಳಿಸಿ ಬೋಧನೆಯನ್ನು ಮಾಡಿದ್ದಾನೆ. ಈ ಮೇಲಿನ ಗುಣಗಳು ಅಂದಿನ ಜನಸಾಮಾನ್ಯರಲ್ಲಿ ಇಲ್ಲದೆ ಹೋಗಿರಬಹುದು. ಆದ್ದರಿಂದ ಅವುಗಳನ್ನು ಶಿವಭಕ್ತಿಯ ಜೊತೆಗೆ ಪ್ರತಿಷ್ಠಾಪನೆಗೈಯ್ಯುವ ಹರಿಹರನ ಈ ಪ್ರಾಮಾಣಿಕ ಪ್ರಯತ್ನ ಅವನನ್ನು ಸರ್ವಕಾಲಕ್ಕೂ ಒಬ್ಬ ನೀತಿವಂತ ಮಾರ್ಗದರ್ಶಕ ಹಾಗೂ ಗುರುವಿನ ಸ್ಥಾನದಲ್ಲಿ ನಿಲ್ಲಿಸುತ್ತದೆ. ಇವನು ತನ್ನ ರಗಳೆಗಳಲ್ಲಿ ಶಿವನನ್ನು ತಂದೆಯ ಸ್ಥಾನದಲ್ಲಿ ಕೂಡಿಸಿ ಮನುಷ್ಯರೆಲ್ಲರೂ ಅವನ ಮಕ್ಕಳೆಂಬಂತೆ ಸಂಬಂಧವನ್ನು ಬೆಸೆದಿದ್ದಾನೆ. ತಂದೆಯು ತನ್ನ ಮಕ್ಕಳಿಗೆ ಪ್ರೀತಿ ಬಾಂಧವ್ಯವನ್ನು ತೋರುವಂತೆ ಇಲ್ಲಿಯ ಶಿವನು ಮನುಜರೆಲ್ಲರ ಮೇಲೆ ಕೃಪೆಯನ್ನು ತೋರುತ್ತಾನೆ. ಶಿವಕೃಪೆಯ ಸಿದ್ಧಿಗಾಗಿ ಮನುಷ್ಯನು ತನ್ನ ಅರಿಷಡ್ವರ್ಗಗಳನ್ನು ತೊರೆದು ಭಯ ಭಕ್ತಿಯಿಂದ ಶಿವನನ್ನು ಧ್ಯಾನಿಸಿ ಭೇದ-ಭಾವವನ್ನು ಮನಸ್ಸಿನಿಂದ ದೂರಮಾಡಿಕೊಂಡು ದೀನ ಜನರ ಸೇವೆಯಲ್ಲಿ ಮತ್ತು ತನ್ನ ಕಾಯಕದಲ್ಲಿ ನಿಷ್ಠೆಯನ್ನು ತೋರುವ ಸಾಧನೆಯಾಗಿದೆ.

ಅಸಂಖ್ಯ ಜೀವಿಗಳ ಪೈಕಿ ಮಾನವ ಜೀವಿಯು ಬಹುಶ್ರೇಷ್ಠವಾದ್ದದ್ದೆಂದು ತಿಳಿಯಲಾಗಿದ್ದು, ಅಂತಹ ಶ್ರೇಷ್ಠ ಜನ್ಮದ ಸಾರ್ಥಕದಲ್ಲಿಯೇ ಮನುಷ್ಯತ್ವದ ಸಾರ್ಥಕ್ಯವಿದೆ. ಬುದ್ಧಿಜೀವಿಯಾದ ಮಾನವ ತನ್ನ ಜೀವನದ ಔನ್ನತ್ಯವನ್ನು ಅರಿತು, ಪರೋಪಕಾರಿಯಾಗಿ ವರ್ತಿಸಿದರೆ, ಅದೇ ಅವನು ಸಮಾಜಕ್ಕಾಗಿ ಮಾಡುವ ದೊಡ್ಡ ಉಪಕಾರ ಎನಿಸುತ್ತದೆ. ಬರಿಯ ತನ್ನ ಸ್ವಾರ್ಥವೊಂದನ್ನೇ

ನೋಡುತ್ತಾ ಇತರರನ್ನು ಕಡೆಗಣಿಸಿ ಅವರ ನಿಷ್ಠುರಕ್ಕೆ ಗುರಿಯಾಗಿರುವುದರಲ್ಲಿ ಯಾವುದೇ ಅರ್ಥವಿಲ್ಲ. ಈ ಹುಸಿ ಭ್ರಮೆಯನ್ನು ದೂರಮಾಡಿಕೊಂಡು "ಜನಸೇವೆಯೇ ಜನಾರ್ಧನ ಸೇವೆ" ಎಂಬ ಗಾದೆ ಮಾತಿನಂತೆ ಶಿವನನ್ನು ಈ ಪರಿಯಲ್ಲಿ ಒಲಿಸಿಕೊಳ್ಳುವ ಸಾಧ್ಯತೆಗಳನ್ನು ಹರಿಹರ ಸಾರಿದ್ದಾನೆ. ಈ ಸಂದರ್ಭದಲ್ಲಿ "ಮಾನವ ಜನ್ಮ ಬಲುದೊಡ್ಡದು ಅದನ್ನು ಹಾನಿಮಾಡಿಕೊಳ್ಳಬೇಡಿರ ಹುಚ್ಚಪ್ಪಗಳಿರ" ಎಂಬ ಪುರಂದರ ದಾಸರ ನುಡಿ ಹಾಗೂ ಸರ್ವಜ್ಞರ "ತನ್ನಂತೆ ಪರರ ಬಗೆವೊಡೆ, ಕೈಲಾಸ ಬಿನ್ನಾಣವಕ್ಕು ನೆರೆಮನೆಯಕ್ಕು ಸರ್ವಜ್ಞ" ಎಂಬ ನುಡಿಯನ್ನು ನೆನಪಿಸುತ್ತವೆ. ಮನುಷ್ಯನಾಗಿ ಹುಟ್ಟಿದ ಮೇಲೆ ಸಾರ್ಥಕ್ಯದ ಬದುಕು ಮತ್ತು ಮೋಕ್ಷ ಪ್ರಾಪ್ತಿಯನ್ನು ಪಡೆಯುವುದೇ ಪುಣ್ಯ, ಭಾಗ್ಯವೇ ಸರಿ ಎಂದು, ಇದು ಶಿವನ ಒಲುಮೆಯಿಂದ ಮಾತ್ರ ಸಾಧ್ಯ ಎಂದು ನಂಬಿದ್ದರು. ಅದಕ್ಕಾಗಿ "ಈಶ ಸೇವೆಯೇ ದೇಶ ಸೇವೆ" ಎಂಬ ಆದರ್ಶಕ್ಕೆ ತಕ್ಕ ತ್ಯಾಗ, ಮೌಲ್ಯಗಳನ್ನು ಬೆಳೆಸಿಕೊಂಡಿರುವಂತಹ ಪರಿ ಇಲ್ಲಿ ವ್ಯಕ್ತವಾಗುತ್ತದೆ.

ಹರಿಹರನ ರಗಳೆಗಳಲ್ಲಿ ಬದುಕು ಒಂದು ಕಲೆಯಾಗಿ ಚಿತ್ರಿತವಾಗಿದೆ. ಸ್ವಾರಸ್ಯ ಬದುಕಿನಲ್ಲಿ ಸಂತಸ-ದುಃಖ ಎನ್ನುವುದು ನಿಶ್ಚಿತ, ಅದನ್ನು ಒಂದು ಕಲೆಯಾಗಿ, ಆದರ್ಶವಾಗಿ ಅನುಕರಣೀಯವಾಗಿ ಕೈಗೊಳ್ಳುವುದರಲ್ಲೇ ನಿಜವಾದ ಅರ್ಥವಡಗಿದೆ. ಮಾನವ ಜೀವಿತದ ಪರಮೋನ್ನತಿ "ಯೋಗ, ಕರ್ಮಸು ಕೌಶಲಂ" ಎಂಬ ಗೀತಾಚಾರ್ಯರ ಮಾತಿನಂತೆ ಶ್ರದ್ಧಾಪೂರ್ವಕ ಕೈಗೊಂಡ ಕಾರ್ಯವು ಸುಗಮವಾಗುತ್ತದೆ. ಮಾದರಿಯಾಗುತ್ತದೆ. ಕೌಶಲದಿಂದ ಪೂರೈಸಿದ ಕೆಲಸವು ತನಗೂ ಇತರರಿಗೂ ಆನಂದದಾಯಕವಾಗಿರುತ್ತದೆ. ಎಷ್ಟೋ ಬಗೆಯ ಕಲೆಗಳಿವೆ, ವಾದನ ಕಲೆ, ಸಂಗೀತ ಕಲೆ, ಶಿಲ್ಪಕಲೆ, ನಾಟ್ಯಕಲೆ ಹೀಗೆ ವೈವಿಧ್ಯಪೂರ್ಣವಾದ ಕಲಾಭ್ಯಾಸಿಗಳಾದವರು ಅನೇಕರಿರುತ್ತಾರೆ. ಈ ಕಲೆಗಳನ್ನೇ ಭಕ್ತಿಯ ಮಾಧ್ಯಮವಾಗಿಟ್ಟುಕೊಂಡು ಶಿವನಿಗೆ ಅರ್ಪಿಸಿ, ಬದುಕನ್ನು ಉತ್ತುಂಗಕ್ಕೇರಿಸಿಕೊಂಡಿರುವುದನ್ನು ಹಲವು ರಗಳೆಗಳಲ್ಲಿ ಗುರುತಿಸಬಹುದು.
ಉದಾಃ ಮಲುಹಣನ ರಗಳೆ, ಆನಾಯನಾರರ ರಗಳೆ, ತಿರುನೀಲಕಂಠ ಪಾಣರು, ಕುಂಬಾರ ಗುಂಡಯ್ಯ, ಭೃಂಗೀಶ್ವರ ರಗಳೆಗಳು.

ಒಟ್ಟಿನಲ್ಲಿ ಬದುಕನ್ನು ಕರುಣಿಸಿದವರು ಸರ್ವಶಕ್ತನಾದ ಶಿವನು, ಅವನನ್ನು ಸದಾ ನೆನೆಯುತ್ತಾ "ಕಾಯಕದಲ್ಲೇ ಕೈಲಾಸ" ವನ್ನು ಕಾಣುವ, ದೀನದಲಿತರ ಕಣ್ಣೀರೊರೆಸುವ,

ಬದುಕನ್ನು ಹಸನುಗೊಳಿಸುವ, ಬದುಕುವ, ಬದುಕಗೊಡುವ ತತ್ತ್ವ ಬಾಳಿಗಿಳಿದಾಗಲೇ ಬದುಕು ಒಂದು ಕಲೆಯಾಗುತ್ತದೆ, ಬದುಕಬೇಕಾಗುತ್ತದೆ ಎಂಬ ನೀತಿಯೋಪದೇಶವನ್ನು ತನ್ನ ಸಾಹಿತ್ಯ ಕೃಷಿಯ ಮೂಲಕ ಸಾಧಿಸಿರುವ ಹರಿಹರನು ಒಬ್ಬ ಕಲೆಗಾರನಾಗಿದ್ದಾನೆ. ಪರೀಕ್ಷೆಯಲ್ಲಿ ನಪಾಸಾದೆ ಎಂಬ ಕಾರಣಕ್ಕೆ ಆತ್ಮಹತ್ಯೆಯ ದಾರಿ ಹಿಡಿಯುವ ಇಂದಿನ ಮಕ್ಕಳು ಈ ಶಿವಕಥೆಗಳನ್ನು ಓದಿದರೆ, ಶಿವನ ಪರೀಕ್ಷೆಯ ಎದುರು ದಿಟ್ಟ ಹೋರಾಟ ಮಾಡಿ, ಭಕ್ತಿಯ ಛಲದಿಂದ ಗೆದ್ದು ನಿಲ್ಲುವ ಶಿವಭಕ್ತರ ಆದರ್ಶವನ್ನು ಕಲಿಯಬೇಕಾಗುತ್ತದೆ. ಏನೇ ಕಷ್ಟ ಬಂದರೂ, ಮೆಟ್ಟಿ ನಿಲ್ಲುವವನಿಗೆ ಜಯ ಖಚಿತವಾಗಿ ದೊರೆಯುತ್ತದೆ. ಅದಕ್ಕೆ ಅಂತರಂಗ ಶುದ್ಧಿ ಮತ್ತು ಮನೋಧೈರ್ಯ ಅವಶ್ಯಕವಾದದ್ದು ಎಂಬ ಸತ್ಯವನ್ನು ರಗಳೆಗಳು ಹೊರಹಾಕುತ್ತವೆ. ಜೀವನದಲ್ಲಿ ಪರೀಕ್ಷೆಗಳು ಎದುರಾದಾಗ ಪಲಾಯನವಾದಿಯಾದರೆ ಅವನು ಹೇಡಿಯಾಗುತ್ತಾನೆ. ಬದಲಿಗೆ ತನ್ನ ಶಕ್ತಿಯುಕ್ತಿಯಿಂದ ಎದುರಿಸುವವನಿಗೆ ಶಿವನ ಅನುಗ್ರಹವಿರುತ್ತದೆ ಎಂಬ ನೀತಿಯನ್ನು ಸಾರುವ ಈ ಕಥೆಗಳು ಸರ್ವಕಾಲಕ್ಕೂ ಭೂಷಣಪ್ರಾಯವಾಗಿವೆ ಎಂದೆನಿಸುತ್ತದೆ.

### ೪.೩ : <u>ಪವಾಡ ಸಾದೃಶ್ಯತೆಯ ಪರಿ :-</u>

ಹರಿಹರನ ರಗಳೆಗಳಲ್ಲಿ ಸಂದರ್ಭೋಚಿತವಾಗಿ ಮೂಡುವ ಕೆಲವು ಪವಾಡಗಳು ಅನುರೂಪವಾಗಿ ಮತ್ತು ಅರ್ಥಬದ್ಧವಾಗಿರುತ್ತದೆ. ಇದು ಕಥೆಗೆ ಹೊಸ ಸ್ಫೂರ್ತಿಯನ್ನೇ ತಂದುಕೊಡುತ್ತದೆ. ಆದರೆ ಅನಗತ್ಯವಾಗಿ ಬರುವ ಕೆಲವು ಪವಾಡಗಳು ಊಹೆಗೂ ಮೀರಿದುದಾಗಿದ್ದು, ಕೇವಲ ಕಲ್ಪನೆಯಿಂದ ಕೂಡಿದುದು ಎಂದೆನಿಸುತ್ತದೆ. ಪವಾಡ ಎಂದರೆ ವಿಸ್ಮಯವಾದ ಘಟನೆ, ಅತಿಮಾನುಷ ಕಾರ್ಯ, ಅಗೋಚರ ಶಕ್ತಿಯ ನೆರವಿನಿಂದ ನಂಬಲು ಅಸಾಧ್ಯವಾದಂತಹ ಅನುಭವಗಳಾಗಿವೆ. ಶಿವಭಕ್ತನಾದ ಹರಿಹರ ತನ್ನ ಸಾಹಿತ್ಯ ಕೃಷಿಯ ಮೂಲಕ ಅವನೇ ಪವಾಡ ಪುರುಷನಂತಾಗಿದ್ದಾನೆ ಎಂದರೆ ತಪ್ಪಾಗಲಾರದು.

ಪ್ರಸ್ತುತ ಸಮಾಜದಲ್ಲಿ ಧಾರ್ಮಿಕ ಆಚರಣೆಗಳು, ಉತ್ಸವಗಳು, ಪೂಜಾಕಾರ್ಯ, ಎಷ್ಟೇ ಭಯ ಭಕ್ತಿಯಿಂದ ನಡೆದರೂ ಎಲ್ಲೂ ಯಾವ ಮೂಲೆಯಲ್ಲೂ ದೇವರು ಪ್ರತ್ಯಕ್ಷನಾಗಿದ್ದಾನೆ ಎಂಬ ಮಾತು ಮಾತ್ರ ಕೇಳದು. ಅಲ್ಲೊಮ್ಮೆ ಇಲ್ಲೊಮ್ಮೆ ಗಣೇಶ, ಸಾಯಿಬಾಬಾ ಹಾಲು ಕುಡಿದ ಎನ್ನುವ ಪವಾಡಗಳು ಜನಮಾನಸದ ಮೇಲೆ ಹಲವು ರೀತಿಯ ಪರಿಣಾಮ ಬೀರಿದರೂ, ಆ ಸತ್ಯದಲ್ಲಿ ಮಾತ್ರ ತಿರುಳಿಲ್ಲ. ಹೀಗಿರುವಾಗ ಶಿವನೇ ಸಾಕ್ಷಾತ್ ಭೂಲೋಕಕ್ಕೆ ಆಗಮಿಸಿ ಶಿವಭಕ್ತರ ಪರೀಕ್ಷೆ

ನಡೆಸಿ ಕೈಲಾಸಕ್ಕೆ ಕರೆದೊಯ್ಯುತ್ತಾನೆ ಎಂಬುದೇ ಒಂದು ಮಹಾನ್ ಪವಾಡವಾಗಿದೆ. ಶಿವನು ತನ್ನ ಭಕ್ತರನ್ನು ಪರೀಕ್ಷಿಸುವ ವಿಧ ಮತ್ತು ಅವರು ಜಯಿಸಿರುವ ಅಂಶಗಳಲ್ಲೂ ಪವಾಡಗಳು ಬೆರತಿವೆ. ಕೆಲವೊಂದು ನಂಬಲು ಯೋಗ್ಯವಂತಿದ್ದರೆ ಮತ್ತೆ ಕೆಲವು, ಇದು ಸಾಧ್ಯವೇ? ಎಂಬ ಪ್ರಶ್ನೆಯು ನಮ್ಮಲ್ಲಿ ಉದ್ಭವಿಸುವಂತಿದೆ. ಏನೇ ಇದ್ದರೂ ಭಕ್ತಿಯ ವಿಷಯ ಬಂದಾಗ ನಂಬಿಕೆ ಹೇಗೆ ಮುಖ್ಯವೆನಿಸಿಕೊಳ್ಳುತ್ತದೆಯೋ ಪವಾಡಗಳೂ ಅವಶ್ಯವೆನಿಸುತ್ತದೆ. ಪವಾಡಗಳು ನಡೆಯದಿದ್ದರೆ ಭಕ್ತನಿಗೆ ತನ್ನ ನಂಬಿದ ದೇವರುಗಳ ಬಗ್ಗೆ ಅನುಮಾನ ಹುಟ್ಟಬಹುದು. ಯಾವ ದೇವರ ಹೆಸರಿನಲ್ಲಿ ಹೆಚ್ಚು ಪವಾಡಗಳು ಸೃಷ್ಟಿಯಾಗಿರುತ್ತದೆಯೋ ಆ ಕ್ಷೇತ್ರದಲ್ಲಿ ಆಗಮಿಸುವ ಭಕ್ತರ ಸಂಖ್ಯೆ ಅಧಿಕವಾಗಿಯೇ ಇರುತ್ತದೆ. ಇದರಂತೆ ಹರಿಹರನು ತನ್ನ ರಗಳೆಗಳಲ್ಲಿ ಪವಾಡಗಳನ್ನು ಮೆತ್ತಿದ್ದಾನೆ. ಅದು ಆಕರ್ಷಕ ಶಕ್ತಿಯಂತೆ ಮೂಡಿ ಬಂದು ಇಂದಿಗೂ ಆ ಕಥೆಗಳನ್ನು ಕೇಳದಾಗ ಕೆಲವರಲ್ಲಿ ಆಸಕ್ತಿ, ಉನ್ಮಾದ, ನಂಬಿಕೆ ಬೆಳೆಯಲು ಕಾರಣವಾಗಬಹುದು.

ತಿರುನೀಲಕಂಠರು ಶಿವನಾಣೆಯ ವ್ರತದ ಪರಿಪಾಲನೆಯಲ್ಲಿ ಮತ್ತು ಅಮರನೀತಿಯ ದಾನಧರ್ಮ ವ್ರತಾಚರಣೆಯ ಸಂದರ್ಭದಲ್ಲಿ ಜೋಪಾನವಾಗಿ ಎತ್ತಿಡಲು ನೀಡಿದ್ದ ತಟ್ಟೆ ಮತ್ತು ಕೌಪೀನಗಳು ಮಾಯವಾಗುತ್ತದೆ. ಯಾವುದೇ ವಸ್ತು ಇದ್ದಕ್ಕಿದ್ದಂತೆ ಮಾಯವಾಗಲು ಸಾಧ್ಯವಿಲ್ಲ. ಅಲ್ಲಿ ಶಿವನೊಡ್ಡಿದ ಪರೀಕ್ಷೆಗೆ ಪವಾಡವೊಂದು ನಡೆದಿರುತ್ತದೆ. ಕೊನೆಯಲ್ಲಿ ವಿಜೇತರಾದ ಅವರಿಬ್ಬರನ್ನು ಕೈಲಾಸಕ್ಕೆ ಕುಟುಂಬ ಸಮೇತ ಕರೆದೊಯ್ಯುತ್ತಾನೆ. ಆದರೆ ೬೦ರ ಪ್ರಾಯದಲ್ಲಿದ್ದ ತಿರುನೀಲಕಂಠ ದಂಪತಿಗಳಿಗೆ ಮತ್ತು ೧೬ರ ಪ್ರಾಯ ಬರುವಂತೆ ಮಾಡಿ ಲೌಕಿಕ ಸುಖ ಪಡೆಯಲು ಅನುವು ಮಾಡಿ ಹರಸುವುದು ಶಿವನ ಪವಾಡವೇ ಸರಿ.

ಕಣ್ಣಪ್ಪನು ರಕ್ತ ಸೋರುತ್ತಿರುವ ಲಿಂಗದ ಕಣ್ಣುಗಳಿಗೆ ತನ್ನ ಎರಡೂ ಕಣ್ಣುಗಳನ್ನು ಮೀನಾಮೇಷ ಎಣಿಸದೆ ನೀಡುತ್ತಾನೆ. ಅಲ್ಲಿ ಶಿವನು ತಕ್ಷಣ ಪ್ರತ್ಯಕ್ಷನಾಗಿ ಮತ್ತೆ ಕಣ್ಣುಬರಿಸಿ, ಹರಸಿ ಕೈಲಾಸಕ್ಕೆ ಕರೆದೊಯ್ಯುವ ಪ್ರಸಂಗ ಗಮನಾರ್ಹವಾದುದು. ಈ ಸಮರ್ಪಣಾ ಭಾವದ ಮುಗ್ಧಭಕ್ತಿಗೆ ಶಿವನೊಲಿಯುವ ಪರಿ ವಿಶೇಷವಾದ ಪವಾಡದಂತೆ ಮೂಡಿದೆ. ಅಂತೆಯೇ ಅರಿವಾಳ್ತಾಂಡರ, ಶಿವನ ನೈವೇದ್ಯಕ್ಕಾಗಿ ತನ್ನ ತಲೆಯನ್ನು ಕತ್ತರಿಸಿಕೊಂಡ ಅವನ ಉಗ್ರನಿಷ್ಠ ಭಕ್ತಿಗೆ ಶಿವನೊಲಿದು ಅನುಗ್ರಹಿಸುವುದು. ಇಳೆಯಾಂಡ ಗುಡಿಮಾರನ ಮಗ ಹಾವಿನ ಕಡಿತಕ್ಕೊಳಗಾಗಿ ಸತ್ತಿರುತ್ತಾನೆ. ಆದರೆ ಪಂಕ್ತಿ ಊಟ ಬಯಸಿ ಮಗನನ್ನು ಕರೆಯಲು ಒತ್ತಾಯಿಸಿದಾಗ ಸತ್ತ ಮಗ,

ಎದ್ದೋಡಿ ಬರುವುದು ಪವಾಡವೇ ಆಗಿದೆ. ಭಕ್ತ ಸಿರಿಯಾಳನು ಅತಿಥಿ ಸತ್ಕಾರಕ್ಕೆ ತನ್ನ ಮಗನನ್ನೇ ಕಡಿದು, ಆಹಾರ ತಯಾರಿಸಿ ನೀಡುವನು. ಶಿವನ ಬಯಕೆಯಂತೆ ಪಂಕ್ತಿ ಊಟಕ್ಕಾಗಿ ಮಗನನ್ನು ಕರೆದಾಗ ಎದ್ದೋಡಿ ಬಂದ ಕಥೆಯೂ ಪವಾಡದ ಮತ್ತೊಂದು ಮುಖವಾಗಿದೆ. ಬಸವಣ್ಣನ ಹೆಸರಲ್ಲಿ ಮೂಡುವ ಹಲವು ಪವಾಡಗಳು ಅರ್ಥಬದ್ಧವಾಗಿಯೂ ಜನಸಾಮಾನ್ಯರನ್ನು ವಿಸ್ಮಿತಗೊಳಿಸುವಂತೆಯೂ ಮೂಡಿದೆ. ಶಿವಭಕ್ತರೆಲ್ಲಾ ಸೇರಿ ಏಕಾಂತರಾಮಿ ತಂದೆಯ ತಲೆ ಕಡಿದು ನಿತ್ಯ ಶಿವಕ್ಷೇತ್ರಗಳಲ್ಲಿ ಪ್ರಾರ್ಥನೆ ಸಲ್ಲಿಸಿದ ಬಳಿಕ ಏಳು ದಿನಗಳಾದ ಮೇಲೆ ಮತ್ತೆ ದೇಹ-ತಲೆಗಳು ಒಂದಾಗುವ ಪವಾಡ ಸ್ವಲ್ಪ ಔಪಚಾರಿಕತೆಯಿಂದ ಕೂಡಿದೆ. ಮತ ವರ್ಗ ಸಂಘರ್ಷಗಳ ನಡುವೆ ಇಂತಹ ಪವಾಡಗಳು ಅವಶ್ಯಕತೆಯೇನೋ ಎಂಬಂತೆ ಮೂಡಿದೆ. ವಾಗೀಶ್ವರರು, ನಂಬಿಯಣ್ಣ, ರೇವಣ್ಣಸಿದ್ಧರು, ವೀರಭದ್ರರಂತಹವರು ದೈವತ್ವ ಸ್ಥಾನವನ್ನು ಗಳಿಸಿರುವಂತಹವರಾಗಿದ್ದಾರೆ. ಆದ್ದರಿಂದ ಇವರು ಪವಾಡಗಳ ಸರಮಾಲೆಯನ್ನೇ ಮೆರೆದಿದ್ದಾರೆ. ಕಲಿಕಂಪರನು ತನ್ನ ಮನೆಯ ಆಳು ಎಂಬ ಕಾರಣಕ್ಕೆ ಶಿವಭಕ್ತನ ಪಾದಸೇವೆ ಮಾಡದಿದ್ದರಿಂದ ಅವಳ ಕೈ ಕತ್ತರಿಸಿ ಉಗ್ರನಿಷ್ಠೆ ಭಕ್ತಿಯನ್ನು ಮೆರೆದನು. ಕೊನೆಗೆ ಶಿವನ ಅನುಗ್ರಹಕ್ಕೆ ಪಾತ್ರರಾಗಿ ಅವಳ ಕೈಯನ್ನು ಪಡೆದು ಕೈಲಾಸಕ್ಕೇರಿದ ಪರಿಯೂ ಪವಾಡವನ್ನೇ ಸೂಚಿಸುತ್ತದೆ. ಪರೀಕ್ಷೆಯ ನೆಪದಲ್ಲಿ ಅತಿಭಕ್ತರಿಗೆ ಹಲವು ದಿನಗಳವರೆಗೆ ನವರತ್ನದಿಂದ ಕೂಡಿದ ಶ್ರೇಷ್ಠ ಮೀನು ದೊರೆಯುವುದು. ಆದರೂ ಅದರ ವ್ಯಾಮೋಹಕ್ಕೆ ಮೀನುಗಳೇ ಸಿಗದಂತಾದ, ಕೊನೆಗೆ ಪಕ್ಕಾಗದ ಅವನ ಗಟ್ಟಿಮನಸ್ಸಿನಿಂದ ಶ್ರೇಷ್ಠಭಕ್ತನೆನಿಸಿ ಗಣಪದವಿಯನ್ನು ಪಡೆದನು. ನಮಿನಂದಿ ನೀರಿನಿಂದ ದೀಪವುರಿಸಿ ಶಿವನ ಮೆಚ್ಚುಗೆಗೆ ಪಾತ್ರವಾದ ಕಥೆ ಪವಾಡದ ಮತ್ತೊಂದು ಸಂಕೇತವಾಯಿತು. ವಾಗೀಶರು ಜೈನರ ಹಾವಳಿಯನ್ನು ಎದುರಿಸುವಲ್ಲಿ ಮೆರೆದ ಪವಾಡಗಳು ವೈವಿಧ್ಯಮಯವಾದುದು. ದಾಸೋಹದ ಸಂದರ್ಭದಲ್ಲಿ ಅಪ್ಪೂತಿ ಅಡಿಯರ ಮಗನು ಹಾವಿನ ಕಡಿತಕ್ಕೊಳಗಾಗಿ ಪ್ರಾಣಬಿಟ್ಟಿದ್ದನು. ಅವನನ್ನು ಬದುಕಿಸಿ ಶಿವಭಕ್ತ ವಾಗೀಶನು ಶಿವಮಹಿಮೆಯನ್ನು ಮೆರೆದನು.

ಕೈಲಾಸಕ್ಕೆ ಹೋಗುವಾಗ ಶರಣರು ನಡೆದ ಮಾರ್ಗವನ್ನು ತುಳಿಯಲು ಹೆದರಿ ತಲೆಕೆಳಗಾಗಿ ನಡೆದು ಕೈಲಾಸಕ್ಕೆ ಸೇರಿ ಸೈ ಎನಿಸಿಕೊಂಡು ಕಾರಿಕಾಲಮ್ಮೆಯ ಅಪ್ಪಟ ಶಿವಭಕ್ತಿಯ ಜೊತೆಗೆ ಪವಾಡವೂ ಬೆರೆತಿದೆ. ಅದರಂತೆ ಹೆರೂರು ಹೆಣ್ಣು ಭವಿಯನ್ನು ಮದುವೆ ಮಾಡಿಕೊಳ್ಳಲು ಒಲ್ಲೆ ಎಂದು ಎಷ್ಟೇ ಬೇಡಿದರೂ ಮನೆಯವರ ಬಲವಂತಕ್ಕೆ ಸಂಬಂಧಿ ಜೈನರನ್ನು ಮದುವೆಯಾಗಿ ಕೊನೆಗೆ ಶಿವಲಿಂಗದ ಅಪ್ಪುಗೆಯಿಂದ ಗಂಡಾಗಿ ಪರಿವರ್ತಿತಳಾದಳು. ಇಲ್ಲಿ ಅವಳ ನಿಶ್ಚಲ

ಭಕ್ತಿಯೊಡನೆ ಭವಿಯ ಜೊತೆಗೆ ಬಾಳೆನು, ಎಂಬ ಛಲ ಎಷ್ಟು ಹಿರಿದಾದುದು. ಹೆಣ್ಣಾದವಳು ಗಂಡಾಗಿ ಪರಿವರ್ತಿತವಾದ ಪವಾಡ ಎಲ್ಲರಿಗೂ ಆಶ್ಚರ್ಯ ಉಂಟುಮಾಡಿತು.

ಭಕ್ತ ಬೋಗಣ್ಣನ ಹಿಂದೆ ಲಿಂಗಗಳು ನಡೆದು ಹೋದುದು ಮತ್ತು ರಾಜನು ಪರಿವಾರದೊಂದಿಗೆ ಬಂದು ಅವನ ಬಳಿ ಕ್ಷಮೆ ಕೇಳಿದಾಗ ಮತ್ತೆ ಅವೆಲ್ಲಾ ಬಂದು ಪೀಠವೇರಿ ಕುಳಿತುದೇ ಒಂದು ಪವಾಡ ಸದೃಶ ಘಟನೆ. ಈ ಕಥೆಯಲ್ಲಿ ಭಕ್ತನ ಕಷ್ಟಸುಖಗಳೆರಡರಲ್ಲೂ ಶಿವನು ಪಾಲುದಾರನಂತೆ ನಡೆದುಕೊಳ್ಳುವ ಪರಿ ವಿಶೇಷವಾದುದು. ಮಕ್ಕಳಿಲ್ಲದ ಶಿವದಂಪತಿಗಳು ಶಿವನಲ್ಲಿ ಮೊರೆಯಿಟ್ಟಾಗ ವರವಾಗಿ ಅವರು ಬಯಸಿದ ಮಕ್ಕಳು ಹುಟ್ಟಿ, ಬೆಳೆದು ಶಿವಭಕ್ತರಾಗುವ ಹಲವು ಕಥೆಗಳು ಪವಾಡವಾಗಿ ಮೂಡಿವೆ. ಹಾವಿನಹಾಳ ಕಲ್ಲಯ್ಯನು ತನ್ನ ಹೊಟ್ಟೆಯನ್ನು ಸೀಳಿಕೊಂಡು, ಕರುಳನ್ನು ಲಿಂಗಕ್ಕೆ ಸುತ್ತಿ ಪ್ರಜ್ಞೆತಪ್ಪಿ ಬಿದ್ದರೂ ಶಿವನ ದಯೆಯಿಂದ ಉಳಿಯುವುದು, ಅವನು ನಾಯಿಯ ಬಾಯಿಯಲ್ಲಿ ವೇದ ಮಂತ್ರ ಪಠಣ ಮಾಡಿಸುವುದು, ಕಲ್ಲಯ್ಯನಿಗೆ ವಿಷದ ಹಾವು ಕಚ್ಚಿ ಹಾವೇ ಸತ್ತುಹೋಗುವುದು ಇವೆಲ್ಲ ಪವಾಡಗಳೇ ಸರಿ.

ಒಬ್ಬ ಭಕ್ತ ಜೋಳದ ರಾಶಿಯಿಂದ ಓಂಕಾರದ ನಾದವನ್ನು ಹೇಳಿಸಿದರೆ, ಮತ್ತೊಬ್ಬ ಭಕ್ತ ಕಬ್ಬಿನ ರಾಶಿಯ ಜಲ್ಲೆಯನ್ನು ಶಿವನ ಒಪ್ಪಿಗೆ ಪಡೆದು ನಂದಿ ತಿನ್ನುವಂತೆ ಮಾಡಿದುದು ಭಕ್ತಿವೆತ್ತ ಪವಾಡಗಳಾಗಿವೆ. ಉದ್ಭಟಯ್ಯ–ಹಲಾಯುಧ–ಮಲಯರಾಜ ಒಬ್ಬರಿಗೊಬ್ಬರು ಭಕ್ತಿಯಲ್ಲಿ ಸ್ಪರ್ಧೆಯನ್ನು ತಾಳುವಂತೆ ಪುರ–ನವಪುರ–ದೇಶದಲ್ಲಿನ ಜನರೊಂದಿಗೆ ಕೈಲಾಸಕ್ಕೆ ಹೋಗುವುದು. ಆ ಪುರ–ದೇಶಾದಿಗಳನ್ನೇ ಕೈಲಾಸಕ್ಕೆ ಶಿವನು ಎತ್ತುವುದು, ಇವೆಲ್ಲಾ ಪವಾಡ ಸದೃಶ ಘಟನೆಗಳನ್ನು ತಿಳಿಸುತ್ತದೆ. ತತ್ಸಮಾನ ಶಿವಭಕ್ತಿಯ ಶಕ್ತಿ ಮತ್ತು ಮಹಿಮೆಗಳನ್ನು ಸಾರುತ್ತದೆ. ಪೂಶಲಾರನೆಂಬ ಭಕ್ತ ಶ್ರೇಷ್ಠನು ದೇಹವನ್ನೇ ದೇವಾಲಯವಾಗಿ ಭಾವಿಸಿ ಅಲ್ಲೇ ಶಿವಾಲಯ ನಿರ್ಮಿಸಿಕೊಂಡು ಪೂಜಿಸುವನು. ರಾಜನು ಬಂದು ಪ್ರಶ್ನಿಸಿದಾಗ ತನ್ನ ಎದೆಬಗೆದು ಆಲಯದೊಳಗಿನ ಶಿವನನ್ನು ತೋರಿದ ಅವನ ಭಕ್ತಿ ಪವಾಡಯುತವಾದುದು.

ಈ ಮೇಲಿನ ಎಲ್ಲಾ ರಗಳೆಗಳಲ್ಲಿ ಭಕ್ತಿಯಷ್ಟೇ ಪವಾಡಗಳು ಪ್ರಧಾನವಾದ ಸ್ಥಾನವನ್ನು ಗಿಟ್ಟಿಸಿಕೊಂಡಿದೆ. ಪವಾಡಗಳು ಕಥೆಗೆ ಸ್ವಾರಸ್ಯದ ಜೊತೆಗೆ ಔಚಿತ್ಯವನ್ನು ತಂದುಕೊಡುತ್ತದೆ. ಆದರೆ ಕೆಲವೊಮ್ಮೆ ನೀರಸ ಮತ್ತು ವೈಪರೀತ್ಯದಿಂದ ಕೂಡಿದ ಪವಾಡಗಳು ಸತ್ಯಕ್ಕೆ

ದೂರವೆನಿಸುತ್ತದೆ. ಇಂದಿನ ಟಿ.ವಿ., ಪತ್ರಿಕೆ ಮಾಧ್ಯಮಗಳು ದೇವರ ಕುರಿತು ಕೆಲವು ಪವಾಡ ಸದೃಶ ಘಟನೆಗಳನ್ನು ತೋರಿಸಿದಾಗ ಕುತೂಹಲ ಕೆರಳಸಿಕೊಂಡು ಜನರು ಆ ದೇವಾಲಯಗಳಿಗೆ ಮುಗಿಬೀಳುತ್ತಾರೆ.

ಉದಾ : ಗಣೇಶ ಹಾಲು ಕುಡಿದುದು, ಬಾಬಾ ಕಣ್ಣು ಬಿಟ್ಟ ಪ್ರಸಂಗ, ಕೆಲವು ದೇವರುಗಳ ಪೂಜೆಯಿಂದ ಕಲ್ಯಾಣ, ಸಂತಾನ ಭಾಗ್ಯ, ವಿದೇಶಯೋಗ, ಅಧಿಕಾರಯೋಗ ಮುಂತಾದ ವಿಚಾರಗಳನ್ನು, ದೇವಾಲಯ ದರ್ಶನ, ಭಕ್ತರ ಸಂದರ್ಶನದ ಮೂಲಕ ತಿಳಿಯಪಡಿಸುವ ಕಾರ್ಯಕ್ರಮಗಳು ಧರ್ಮ-ದೇವರು ಪ್ರಚಾರದ ಸಂಕೇತದಂತೆ ಮೂಡುತ್ತದೆ. ಇಂತಹ ಪವಾಡ ಸದೃಶ ಘಟನೆಗಳಿಂದ, ಅದನ್ನು ಅಪಾರವಾದ ಆಸಕ್ತಿಯಿಂದ ಕೇಳುವ ಜನವರ್ಗವೂ ಹುಟ್ಟಲು ಸಾಧ್ಯವಾಗುತ್ತದೆ. ಇಂತಹ ವೈವಿಧ್ಯಮಯವಾದ ಪವಾಡಗಳಿಗೆ ಜನರು ಬೆರಗಾಗಿ ಕುತೂಹಲ ಬೆಳಸಿಕೊಂಡು ಭಕ್ತಿಯನ್ನು ರೂಢಿಸಿಕೊಳ್ಳಬೇಕೆಂಬ ಹಂಬಲ ಗಟ್ಟಿಯಾಗುತ್ತದೆ. ಜೀವನದ ಎಲ್ಲಾ ವಿಷಯಗಳ ಬಗ್ಗೆ ಭರವಸೆ ಮೂಡಿಸುತ್ತದೆ. ದೇವರು-ಧರ್ಮದ ಬಗ್ಗೆ ಜನಸಾಮಾನ್ಯರಿಗೂ ಒಲವು ಮೂಡುತ್ತದೆ. ಧಾರ್ಮಿಕ ನಂಬಿಕೆಗಳು ಜನಮಾನಸದಲ್ಲಿ ಬೆಳೆಯುತ್ತದೆ. ಅಂತೆಯೇ ಹರಿಹರನ ರಗಳೆಗಳಲ್ಲಿ ಅನ್ಯಮತಗಳಾದ ಜೈನ, ವೈಷ್ಣವರನ್ನು ಶೈವರು ತಮ್ಮ ದೈವಶಕ್ತಿಯ ಪವಾಡಗಳಿಂದ ಸೋಲಿಸಿದ ಸ್ವರೂಪದ ಕಥೆಗಳು ಸಮಾಜದಲ್ಲಿ ಬಿಂಬಿತವಾದಾಗ ಅನ್ಯಧರ್ಮೀಯರು ಸೋತು, ಶೈವಧರ್ಮಕ್ಕೆ ಆಕರ್ಷಿತರಾಗಲು ಸಾಧ್ಯವಾಗುತ್ತದೆ. ವೀರಶೈವ ಧರ್ಮದ ಅಭಿವೃದ್ಧಿಗೆ ಪೂರಕವಾಗಿ ಜನರನ್ನು ಸೆಳೆಯುವುದಕ್ಕೆ ಶಿವಭಕ್ತರ ಪವಾಡಗಳು ಕಾರಣವಾಗಬಹುದು.

ಇಂಥ ಪವಾಡಗಳು ಬೆರೆತಾಗ ಭಕ್ತಿ ಗಾಢವಾಗಿ ಬೆಳೆದು ಶಿವ ಮತ್ತು ಭಕ್ತರ ಸಂಬಂಧ ಮತ್ತಷ್ಟೂ ಹದಗೊಳ್ಳುತ್ತದೆ.

### ೪.೪ <u>ಶಿವತತ್ವ ಸ್ವರೂಪ :-</u>

ಹರಿಹರನ ರಗಳೆಗಳಲ್ಲಿ ಭಕ್ತರ ಅಧಿದೈವವಾಗಿ, ಕವಿಯ ಆರಾಧ್ಯದೈವವಾಗಿ ಹಂಪೆಯ ವಿರೂಪಾಕ್ಷ (ಶಿವ) ಬರುತ್ತಾನೆ. ರಗಳೆಯ ಆರಂಭದಲ್ಲಿ ಕೊನೆಯಲ್ಲಿ ವಿರೂಪಾಕ್ಷ ಸ್ತುತಿ ಬಂದೇ ಬರುವುದು ಸಾಮಾನ್ಯ. ಆದರೆ ಅನೇಕ ಎಡೆಗಳಲ್ಲಿ ಕವಿ ಪಾರ್ವತಿಯನ್ನು ಗೌರವದ ಪೂಜನೀಯವಾದ ದೇವಿಯಾಗಿಸಿದ್ದಾನೆ. ಶಿವನು ತನ್ನ ಭಕ್ತರ ಅಗ್ಗಳಿಕೆಯನ್ನು ಆಕೆಯ ಎದುರಿನಲ್ಲಿ ಬಣ್ಣಿಸಿ ನಂತರ ಗಣಪದವಿಯನ್ನು ನೀಡುತ್ತಾನೆ.

"ಹರಿಹರನ ದರ್ಶನ ಭಕ್ತಿಕೇಂದ್ರಿತವಾದದ್ದು. ಏಕದೇವ ಮೌಲ್ಯವನ್ನು ಎತ್ತಿಹಿಡಿಯುವುದು. ಆ ದೇವನು ಸಾಕಾರನೂ, ನಿರಾಕಾರನೂ ಎಂದು ನಂಬುವುದು, ಜೀವ ದೇವಗಳಲ್ಲಿ ಭಾವ ಸರಿಗಮವನ್ನು ಅನುಭವಿಸುವುದು ಈ ಭಕ್ತಿಯ ಸ್ವರೂಪವಾಗಿದೆ." ೬ ಈ ಭಕ್ತಿ ಸಾಧನೆಯ ವೈಯಕ್ತಿಕತೆಯೇ ಭಕ್ತನ ನಡತೆ. ಶರಣಸತಿಯಾಗಿ, ಲಿಂಗಪತಿಯಾಗಿ ಜಂಗಮ ಮಾನವ ಸೇವೆಯನ್ನು ಮಾಡಬೇಕು. ಶಿವತತ್ವದ ಬಹಿಃರೂಪಗಳಾದ ಗುರು-ಲಿಂಗ-ಜಂಗಮಕ್ಕೆ ತನ್ನ ತನು-ಮನ-ಧನವನ್ನು ಏಕೋಭಾವದಿಂದ ಕಾಯಾ-ವಾಚಾ-ಮನಸಾ ಅರ್ಪಿಸಿದವನಿಗೆ ಶಿವನ ಸಾಯುಜ್ಯ ಲಭಿತವಾಗುತ್ತದೆ. ಭಕ್ತಿ ಎಂಬುದು ವೇಷವಲ್ಲ, ಜ್ಞಾನ ಹೀನವಲ್ಲ, ಬದಲಿಗೆ ಅದು ಅರಿವಿನ ಆಚರಣೆ, ಸತ್ಯಶುದ್ಧ ಕಾಯಕ ಹೊಂದಿ ಬದುಕಿ, ನಡೆ-ನುಡಿ ಸಮನ್ವಯವನ್ನು ಪಾಲಿಸಬೇಕು.

ಹರಹರನು ತನ್ನ ರಗಳೆಗಳಲ್ಲಿ ಭಕ್ತರನ್ನು ಪರಿಚಯಿಸಿರುವಂತೆ ಭವಿಯನ್ನು ಚಿತ್ರಿಸಿದ್ದಾನೆ. ಭಕ್ತ ಮಾರ್ಗದಲ್ಲಿರುವವರೆಗೆ ದೊರಕುವ ಶಿವನೊಲುಮೆ, ಮೋಕ್ಷದ ವಿವರಗಳನ್ನು ತಿಳಿಸಿರುವಂತೆ ಭವಿಯಾದವನ ಕಷ್ಟಕಾರ್ಪಣ್ಯ, ದುಃಖ ಜೀವನವನ್ನು ವಿವರವಾಗಿ ತಿಳಿಸಿದ್ದಾನೆ. ಇವುಗಳನ್ನು ಪವಾಡ ಸದೃಶ ಘಟನೆಗಳ ಮೂಲಕ ಚಿತ್ತರಿಸಿರುವ ಹರಿಹರನ ಪರಿಣಾಮಕಾರಿ ಭಾವಶೈಲಿಗೆ ಜನಸಾಮಾನ್ಯರು ತಲೆಬಾಗಿ, ಭಕ್ತ ಪ್ರಪಂಚದ ಪುಣ್ಯ ಮಾರ್ಗವನ್ನು ಆಯ್ದುಕೊಳ್ಳುತ್ತಾರೆಯೇ ಹೊರತು ಕರ್ಮಫಲವನ್ನು ಒದಗಿಸುವ ಭವಿ ಮಾರ್ಗವನ್ನಲ್ಲ. ಹರಿಹರನು ತನ್ನ ಕಾಲದೇಶಮಾನದಲ್ಲಿ ನಿಂತು ಭಕ್ತಿಯೆಂಬ ನೆರಳನ್ನು ನೀಡಬೇಕೆಂಬ ಒತ್ತಾಸೆ ಅವನಲ್ಲಿ ಎದ್ದು ಕಾಣುತ್ತಿದೆ. ಪದೇ ಪದೇ ಶಿವಭಕ್ತಿಯ ಸ್ವರೂಪವನ್ನೇ ತನ್ನ ಸಾಹಿತ್ಯದಲ್ಲಿ ಚಿತ್ತರಿಸಿರುವ ಅವನು ಜನಸಾಮಾನ್ಯರು ಭಗವದ್ಭಕ್ತಿಯನ್ನು ಬೆಳೆಸಿಕೊಂಡು ಶಿವನದರ್ಶನಕ್ಕೆ ಹಾತೊರೆಯಲಿ ಎಂಬ ಹಂಬಲ ಅವನದಾಗಿದೆ. ಭಕ್ತಿಯ ಸೆಳೆತಕ್ಕೆ ಸುಕಾರ್ಯವೇ ಶಿವನೇಮವಾಗುತ್ತದೆ. ಅಲ್ಲಿನ ಶಿವನೂ ಅಷ್ಟೇ ಮೃದು, ಸರಳ ಸ್ವಭಾವದ ಭಾವಜೀವಿಯಾಗಿರುತ್ತಾನೆ. ಆದ್ದರಿಂದ ಭಕ್ತನ ಹೃದಯದ ತುಂಬ ಶಕ್ತಿ, ಅವನ, ಮನಸ್ಸಿನ ತುಂಬ ಶಿವನ ಒಲುಮೆ ಬೆಳೆಯುತ್ತದೆ. ನಮಗೆ ಯಾವುದರ ಬಗ್ಗೆ ಒಲವು ಪ್ರಧಾನವಾಗಿರುತ್ತದೆಯೋ ಅದನ್ನೇ ಅಭಿರುಚಿಯಾಗಿ ಬೆಳೆಸಿಕೊಳ್ಳುವ ಹಾಗೆ ಹರಿಹರನ ರಗಳೆಗಳ ಕಥಾನಾಯಕರು ಇದಕ್ಕೆ ಸಾಕ್ಷಿ ಎಂಬಂತೆ ಪ್ರತಿಯೊಬ್ಬ ಭಕ್ತರು ಹರಭಕ್ತಿಯ ನಿಷ್ಠೆಯನ್ನು, ಒಲವನ್ನು,

---

ಅಡಿಟಿಪ್ಪಣಿಗಳು : ೬. ಹರಿಹರನ ರಗಳೆಗಳು -ಸಂ. ಡಾ||ಎಂ.ಎಂ.ಕಲಬುರ್ಗಿ, ಪೀಠಿಕೆ XXI

ಅನನ್ಯತೆಯನ್ನು ಮೆರೆದಿರುವುದನ್ನು ನೋಡಬಹುದು. ಭವಿಗಳನ್ನು ಭಕ್ತರನ್ನಾಗಿ ಮಾಡುವ ಉದ್ದೇಶವು ಇಲ್ಲಿ ಎದ್ದುಕಾಣುತ್ತದೆ.

ಶಿವ ತನ್ನ ಕೈಲಾಸದಲ್ಲಿ ತನ್ನೊಂದಿಗೆ ಇರಬೇಕಾದ ಗಣಸಮೂಹವನ್ನು ತಾನೇ ನೇರವಾಗಿ ಭೂಲೋಕಕ್ಕೆ ಅನ್ಯವೇಷದಲ್ಲಿ ಆಗಮಿಸಿ ಆರಿಸಿಕೊಳ್ಳುತ್ತಿದ್ದನು. ಕೊನೆಯ ಹಂತದಲ್ಲಿ ಸತ್ಯವಂತ ಭಕ್ತನ ನಿಜಭಕ್ತಿಯನ್ನು ಒಪ್ಪುತ್ತಿದ್ದ. ಯಾವುದೇ ಕಾರಣಕ್ಕೂ ಮಧ್ಯವರ್ತಿಗಳನ್ನು ಕಳಿಸುತ್ತಿರಲಿಲ್ಲ. ಏಕೆಂದರೆ 'ದೇವರು ವರಕೊಟ್ಟರೂ ಪೂಜಾರಿ ವರಕೊಡುವುದಿಲ್ಲ' ಎಂಬ ಗಾದೆ ಮಾತು ಸರ್ವಕಾಲಕ್ಕೂ ಸಲ್ಲುವಂತಹ ವಿಷಯವೇ ಸರಿ. ಒಂದು ಸಂಬಂಧ ಗಟ್ಟಿಗೊಳ್ಳಬೇಕಾದರೆ ನೇರ ಸಂಪರ್ಕದ ಅವಶ್ಯಕತೆ ಇದೆ. ಅಲ್ಲದೆ ತನಗೆ ರುಚಿಸುವುದನ್ನು ತಾನೇ ಆರಿಸಿಕೊಂಡರೆ ಅದು ಸರ್ವಶ್ರೇಷ್ಟವೆನಿಸುತ್ತದೆ. ಇಲ್ಲಿ ಶಿವ ಮತ್ತು ಭಕ್ತ ಸಂಬಂಧ ಸಲುಗೆಯಿಂದ ಕೂಡಿದೆ. ಭಕ್ತರ ನಿಜಭಕ್ತಿಗೆ ಒಂದಲ್ಲ ಒಂದು ಸಾರಿಯಾದರೂ ಶಿವನ ಸಾಕ್ಷಾತ್ಕಾರ, ಉಡುಗೊರೆ ಇದೆ, ಎಂದರೆ ಭಕ್ತ ನೇಮದ ಭಕ್ತಿಯ ದಿಕ್ಕಿನ ಮೂಲಕ ಕಾತುರದಿಂದ ಸಾಗುತ್ತಾನೆ. ಈ ನಿಟ್ಟಿನಲ್ಲೇ ಹರಿಹರ ಭಕ್ತಿಯ ಪ್ರತಿಪಾದನೆ ಅಥವಾ ಸ್ಥಾಪನೆ ಮಾಡುವ ಉದ್ದೇಶಹೊಂದಿದ್ದಾನೆ ಎಂದೆನಿಸುತ್ತದೆ.

ಶಿವ ಭಕ್ತರ ಸಂಬಂಧ ಆತ್ಮೀಯತೆಯಿಂದ ಕೂಡಿದೆ. ಭಕ್ತರನ್ನು ದೂರವಿಟ್ಟು ನೋಡುವ ಆಳುವ ವರ್ಗವಾಗಿ ಶಿವಕಾಣಿಸುವುದಿಲ್ಲ. ಬದಲಿಗೆ ಆತನ ಬಂಧುವಾಗಿ, ಹಿತೈಷಿಯಾಗಿ ಭಕ್ತನ ರಕ್ಷಕನಾಗಿ ಶಿವಕಾಣಿಸುತ್ತಾನೆ. ಒಂದು ಧರ್ಮವನ್ನು ಪ್ರಚುರಪಡಿಸುವುದು ಮತ್ತು ಭಕ್ತರ ಸಂಖ್ಯೆಯ ಅಭಿವೃದ್ಧಿಗೆ ಇವೆಲ್ಲವೂ ಪೋಷಕವಾಗಿದೆ.

ಒಂದು ಧರ್ಮದ ಬೆಳವಣಿಗೆಗೆ ಏನೆಲ್ಲಾ ಲಕ್ಷಣಗಳು ಅಗತ್ಯವೋ ಅವೆಲ್ಲವೂ ಹರಿಹರನ ರಗಳೆಗಳಲ್ಲಿ ಸಮೃದ್ಧವಾಗಿತ್ತು. ಧರ್ಮಾಚರಣೆಯೂ ಸುಲಭವಾಗಿತ್ತು. ಹರಿಹರನ ಈ ರಗಳೆಗಳ ಸೃಷ್ಟಿ, ಜನರ ಹಿತಾಸಕ್ತಿ ಮತ್ತು ಧಾರ್ಮಿಕ ಪ್ರಗತಿ ಎರಡನ್ನು ಸಮತೋಲನವಾಗಿ ಬೆಳೆಸುವಂತಹ ಪ್ರಯತ್ನವನ್ನು ಇಲ್ಲಿ ಮಾಡಿದೆ ಎಂದೆನಿಸುತ್ತದೆ. ಇದು ಮನಸ್ಸಿನ ಧನಾತ್ಮಕ ಚಿಂತನೆಯ ಧನಾತ್ಮಕ ಪ್ರಗತಿಯಾಗಿದೆ. "ಮಾವಿನ ಬೀಜವನ್ನು ಬಿತ್ತಿ, ಮಾವಿನ ಫಲವನ್ನೇ ಪಡೆಯುವ" ಸಫಲ ಪ್ರಯತ್ನವನ್ನು ಈ ನಿಟ್ಟಿನಲ್ಲಿ ಹರಿಹರ ಶ್ರೀಸಾಮಾನ್ಯರನ್ನು ಶಿವಭಕ್ತರನ್ನಾಗಿ ಮಾಡುವಂತಹ ಕಾರ್ಯವೈಖರಿ ಗಮನಾರ್ಹ.

ಹರಿಹರನ ರಗಳೆಗಳಲ್ಲಿ ಭಕ್ತರ ಹುಟ್ಟು ಯಾವುದೋ ಕಾರಣ ನಿಮಿತ್ತ ಆಗಿರುತ್ತದೆ ಎಂಬ ನಿಲುವು ಒಂದೆಡೆಯಾದರೆ, ಮತ್ತೊಂದೆಡೆ ಮೌಲ್ಯಗಳನ್ನು ನೇಮವಾಗಿ ಅನುಸರಿಸುವ ಭಕ್ತ ಸಮೂಹ – ಈ ಬಗೆಯ ನಿಲುವುಗಳು ಸಮಾಜದ ಇತರ ಜನರನ್ನು ಉತ್ತಮ ಮಾರ್ಗದಲ್ಲಿ ನಡೆಸುತ್ತದೆ.

ಉದಾ : ಪುಣ್ಯಕೋಟಿಯ ಕಥೆಯನ್ನು ಕೇಳುವ ಮಕ್ಕಳು "ಸತ್ಯವನ್ನೇ ಆಡಬೇಕು – ಸತ್ಯ ಮೇವ ಜಯತೆ" ಎಂಬ ನಿಲುವಿಗೆ ಬರುವಂತೆ ಶಿವಭಕ್ತರ ಕಥೆಗಳನ್ನು ಜನರು ಆದರ್ಶಮಯವಾಗಿ ಪರಿಪಾಲಿಸುವುದರ ಮೂಲಕ ಆದರ್ಶಮಯ ಸಮಾಜದ ನಿರ್ಮಾಣ ಸಾಧ್ಯ. ಅನ್ಯರನ್ನು ಹೊಡೆದು ಬಡಿದು, ಶಿಕ್ಷಿಸಿ ಬುದ್ಧಿ ಕಲಿಸುವುದರ ಬದಲು ನಯವಾಗಿ, ಅಲೌಕಿಕ ಶಕ್ತಿಯ ಸತ್ವವನ್ನು ನವೀನ ಮಾದರಿಯಲ್ಲಿ ಪರಿಚಯ ಮಾಡಿಸುವುದರ ಮೂಲಕ, ಒಂದು ಸಮಾಜವನ್ನು ನಿಯಂತ್ರಣಕ್ಕೆ ತರುವ ಉದ್ದೇಶವಿದ್ದಿರಬಹುದು. ಇಂತಹ ಕಾರ್ಯಸಿದ್ಧಿಯನ್ನು ಒಂದು ಧರ್ಮ ಬೋಧಕನಂತೆ ಹರಿಹರ ಮಾಡಿದ್ದಾನೆ. ವೀರಶೈವ ಧರ್ಮ ಪ್ರಬುದ್ಧ ಸ್ಥಾನವನ್ನು ಪಡೆಯುವಲ್ಲಿ ಈ ಬಗೆಯ ತಂತ್ರಶೀಲತೆ ನೆರವಾದೀತು. ಇಂತಹ ಕಾರ್ಯ ಆ ಕಾಲದ ರಾಜಕೀಯ – ಧಾರ್ಮಿಕ ಒತ್ತಡದಿಂದಲೂ ಆಗಿರುವ ಅವಕಾಶವಿರಬಹುದು. ಅಸತ್ಯ, ಅಧರ್ಮವೆಂಬ ಕರ್ಮಾಚರಣೆಯನ್ನು ದೂರತಳ್ಳಿ "ಸತ್ಯ, ಧರ್ಮ" ಮಾರ್ಗದ ಪ್ರತಿಷ್ಠಾಪನೆಗೆ" ಒಂದು ಪರಿಪಕ್ವವಾದ ಧರ್ಮದ ಅಸ್ತಿತ್ವ ಮತ್ತು ಪಾಲನೆಯ ಅವಶ್ಯಕತೆ ಇದ್ದಂತೆ ತೋರುತ್ತದೆ. ಅದರಂತೆ ಹರಿಹರನ ಈ ಪ್ರಯೋಗವು ವೀರಶೈವ ಧರ್ಮ ಇನ್ನಷ್ಟು ಉಚ್ಛ್ರಾಯ ಸ್ಥಿತಿಗೆ ತಲುಪಲು ಸಾಧ್ಯವಾಗಿರಬಹುದು.

ಸಾಮಾನ್ಯವಾಗಿ ದೇವರನ್ನು ಹುಡುಕಿಕೊಂಡು ಭಕ್ತರು ಪರಿತಪಿಸುವುದು, ಅಲೆದಾಡುತ್ತಾ, ಮೋಕ್ಷ ಗುರಿಸಾಧನೆಗೆ ವಿವಿಧ ಸಂಪ್ರದಾಯ, ಆಚರಣೆಯನ್ನು ಅನುಸರಿಸುವುದು ಸಹಜ. ಆದರೆ ಕೈಲಾಸದಿಂದ ಶಿವನೇ ತನ್ನ ಭಕ್ತರನ್ನು ಹುಡುಕಿಕೊಂಡು ಬರುವ ನವೀನ ಮಾದರಿಯ ಈ ಪರಿ ಶ್ರೀಸಾಮಾನ್ಯನಿಗೆ ವಿಸ್ಮಯವೇ ಸರಿ. ಹೆಚ್ಚು ಅನುಕೂಲವಾಗುವಂತೆ ತೋರುವ ಈ ವೀರಶೈವ ಧರ್ಮದ ಆಚರಣೆಗಳು ಬೇಗನೆ ಜನಮನ್ನಣೆಗಳಿಸಲು ಸಾಧ್ಯವಾಯಿತು. "ದೇವರು ಮತ್ತು ಭಕ್ತ"ನ ಸ್ಥಾನಪಲ್ಲಟವಾಯಿತು. ಇದು ಒಂದು ಕ್ರಾಂತಿಕಾರಿ ವಿಷಯವೇ ಸರಿ. ಇಂತಹ ಶಿವಭಕ್ತರ ಕಥೆಗಳು ಶ್ರೀ ಸಾಮಾನ್ಯರನ್ನು ಆಕರ್ಷಿಸಿರಬಹುದು. ಈ ಮೂಲಕ ಒಂದು ಧರ್ಮ ಮುಂಚೂಣಿಗೆ ಬರಲು ಕವಿಯ ಇಂತಹ ಪ್ರಯೋಗಶೀಲತೆಯ ತಂತ್ರ ಹೆಚ್ಚು

ಕಾರ್ಯವೆಸಗುತ್ತದೆ. ಮನುಚೋಳನ ಕಥೆಯಲ್ಲಿ ಧರ್ಮಪಾಲನೆಯೇ ಅವನ ಕರ್ತವ್ಯವಾಗಿತ್ತು. ಕೊನೆಗೆ ಆ ಧರ್ಮವೇ ಅವನಿಗೆ ಶಿವಸಾಯುಜ್ಯವನ್ನು ತಂದುಕೊಡುತ್ತದೆ. ಇಂತಹ ಮೌಲ್ಯಯುತ ಕಥೆಯು ಸಮಾಜದ ಜನರಲ್ಲಿ ಧರ್ಮಪಾಲನೆಗೆ ದಾರಿಮಾಡಿಕೊಡುತ್ತದೆ. ಹಾಗೆಯೇ ಪೂಜಾಪ್ರಧಾನತೆಯನ್ನು ಮೀರಿದ ಮಾದಾರ ಚೆನ್ನಯ್ಯನ ರಗಳೆಯಲ್ಲಿ ಕಾಯಕವೇ ಕೈಲಾಸವೆಂದು, ಕರ್ತವ್ಯ ಪರಿಪಾಲನೆಯೇ ಧರ್ಮವೆಂದು ನಂಬಿದ್ದ ಅವನ ಧರ್ಮಪಾಲನೆಯೇ ಅವನಿಗೆ ಶಿವಕೈವಲ್ಯ ದೊರೆಯುವಂತೆ ಮಾಡುತ್ತದೆ. ಇಲ್ಲಿ ಹರಿಹರನ ಭಕ್ತಿಯ ನೆಲೆ ಮತ್ತು ಸ್ವರೂಪ ಎಂಥದು ಎಂದು ಕಾಣಿಸುತ್ತದೆ. ಮಾದಾರ ಚೆನ್ನಯ್ಯ, ಕುಂಬಾರ ಗುಂಡಯ್ಯ, ಬೇಡರ ಕಣ್ಣಪ್ಪ – ಇವರೆಲ್ಲರೂ ಶಿವನನ್ನು ನಂಬಿ ಕರೆದರು, ಆ ನಂಬಿಕೆಗೆ ಕಿವಿಕೊಟ್ಟ ಶಿವನು ಅವರೊಂದಿಗೆ ಊಟಮಾಡಿದ, ಕುಣಿದ, ಅಪ್ಪಿ ಮುದ್ದಾಡಿದ. ಇವೆಲ್ಲ ಪರಿಶುದ್ಧ ಮನಸ್ಸಿನಿಂದ ಬಂದ ಪರಿಪೂರ್ಣ ಭಕ್ತಿಯಿಂದ ಮಾತ್ರ ಸಾಧ್ಯ. ಆ ಭಕ್ತಿಗೆ ಅಂತಹ ಶಕ್ತಿಯಿದೆ ಎಂಬುದನ್ನು ಹರಿಹರ ತೋರಿಸಿದನು.

"ಕನ್ನಡದಲ್ಲಿ ಕಾವ್ಯವನ್ನು ರಚಿಸುವ ಕವಿಗಳು ತಮ್ಮ ದೃಷ್ಟಿಯಲ್ಲೇ ಜಗತ್ತನ್ನು ನೋಡಲು ಪ್ರಯತ್ನಪಟ್ಟ ಕೆಲವು ಕವಿಗಳುಂಟು, ಆದರೆ ವೀರಶೈವನಾದ ಹರಿಹರನು ಎಲ್ಲರಿಗೂ ಲಿಂಗಕಟ್ಟಿ ಲಿಂಗವಂತರನ್ನಾಗಿ ಮಾಡಬಹುದಾಗಿತ್ತು. ಆದರೆ ಅದನ್ನು ಮಾಡದೇ ಕೇವಲ ನೂತನರನ್ನು, ಅರವತ್ತು ಮೂವರನ್ನು, ಶಿವನನ್ನು ಕುರಿತು ಹೊಗಳುವಲ್ಲಿ ಶೈವರಲ್ಲದವರನ್ನು ತನ್ನ ಕಥೆಗೆ ಆರಿಸಿಕೊಳ್ಳದೇ ಎಲ್ಲವನ್ನೂ ಶೈವಮಯವಾಗಿ ವರ್ಣಿಸಿದ್ದರೆ ಅದು ದೋಷವೆಂದೆನಿಸದು. ಕಾಣಿಸತಕ್ಕ ಎಲ್ಲಾ ವಸ್ತುಗಳು ಹರಿಹರನ ಕಣ್ಣಿಗೆ ಶಿವಮಯವಾಗಿ ಕಾಣುತ್ತವೆ.

ಸರ್ವವೂ ಶಿವಮಯವೆಂದು ತಿಳಿದ ಹರಿಹರನು ಉಳಿದುದರ ಗೊಡವೆಗೆ ಹೋಗಲಾರ" ೭. ಹೀಗೆ ಹರಿಹರನ ತನು ಮನವೆಲ್ಲಾ ಶಿವನ ಚಿಂತನೆಯಿಂದಲೇ ಕೂಡಿತ್ತು. ಶಿವಧರ್ಮ ನಿಷ್ಟರಾಗಿದ್ದವರ ಆದರ್ಶ ಗುಣಗಳನ್ನು ಎತ್ತಿತೋರಿಸುವುದೇ ಅವನ ಧರ್ಮವಾಗಿತ್ತು. ಬೇಡರ ಕಣ್ಣಪ್ಪನ ರಗಳೆಯ ಕೊನೆಯಲ್ಲಿ ಪರಶಿವನು ಭಕ್ತರ ಸುಖವೇ ತನ್ನ ಸುಖ, ಭಕ್ತರ ಮುಖವೇ ನನ್ನ ಮುಖ, ಭಕ್ತರ ಕಾಯವೇ ತನ್ನ ಕಾಯ, ಭಕ್ತರ ಜೀವವೇ ತನ್ನ ಜೀವ ಎಂದು ಗಣಸಂಕುಲಕ್ಕೆ ಹೇಳಿದ ಈ ಮಾತನ್ನು ಗಮನಿಸಿದಾಗ ಭಕ್ತನಾದವನು ಶಿವನದರ್ಶನಕ್ಕೆ ಎಷ್ಟು ಹಾತೊರೆಯುತ್ತಾನೋ, ಅಷ್ಟೇ ಶಿವನು ಭಕ್ತನನ್ನು ನೋಡಲು, ತನ್ನ ಬಳಿ ಸೇರಿಸಿಕೊಳ್ಳಲು ಕಾತುರನಾಗಿರುತ್ತಾನೆ.

---

ಅಡಿಟಿಪ್ಪಣಿಗಳು : ೭. ಹಂಪೆಯ ಹರಿಹರ ದೇವನ ರಗಳೆಗಳು, ಪು.ಸಂ. ೨೨, ಪ್ರಸ್ತಾವನೆಯ ಭಾಗ

ಇಂತಹ ಸಾಧ್ಯತೆಗಳಿರುವ ಒಂದು ಧರ್ಮ ಬಹಳ ಬೇಗನೆ ಪ್ರಚಾರ ಹೊಂದಿ ಮುಂಚೂಣಿಗೆ ಬರಲು ಸಾಧ್ಯ. ಎಸ್.ಎಸ್. ಹಿರೇಮಠರವರು ಹೇಳಿರುವಂತೆ, "ಕನ್ನಡ ಸಾಹಿತ್ಯಕ್ಕೆ ಮೊಟ್ಟ ಮೊದಲು ಇಂಥ ಶೈವೀಯ ಶಾಕ್ ಕೊಟ್ಟ ಕವಿ ಹರಿಹರ. ಇಲ್ಲಿ ಮಡಿಯೇ ಮೈಲಿಗೆ, ಮೈಲಿಗೆಯೇ ನುಡಿ, ಇದು ಶಿಷ್ಟ ಜನಪದ ಪ್ರಪಂಚ. ರಾಜಾಸ್ಥಾನದಲ್ಲಿ ಘನತೆ, ಗಾಂಭೀರ್ಯ, ಪ್ರೌಡಿಮೆ, ಪ್ರತಿಷ್ಠೆಗಳಿಂದ ಮೆರೆದ ಕನ್ನಡ ಸಾಹಿತ್ಯದ ದಿಕ್ಕೇ ಇಲ್ಲಿ ಬದಲಿಹೋಯಿತು. ೧೨ನೇ ಶತಮಾನದ ಶ್ರಮಜೀವಿಗಳ ಚಳುವಳಿಯ ಪರಿಣಾಮ."[೮] ಒಟ್ಟಾರೆ ಹರಿಹರ ರಗಳೆಗಳಲ್ಲಿ ಶಿವಭಕ್ತಿಯ ಶ್ರೇಷ್ಠತೆಯನ್ನು ಹೊಗಳುವ ಮತ್ತು ಶೈವಧರ್ಮವನ್ನು ಎತ್ತಿಹಿಡಿಯುವ ಉದ್ದೇಶವನ್ನು ಹೊಂದಿದ್ದಾನೆ ಎಂಬುದು ಸ್ಪಷ್ಟವಾಗುತ್ತದೆ.

### ೪.೫ ಭಕ್ತನ ಆದರ್ಶ ಮತ್ತು ಜೀವನ ದರ್ಶನ :-

ಭಾರತ ದೇಶದ ಧಾರ್ಮಿಕ ದಾರ್ಶನಿಕ ಸಾಹಿತ್ಯದ ತಿರುಳಾಗಿರುವ ಕಾಶ್ಮೀರಶೈವ, ತಮಿಳುಶೈವ ಮತ್ತು ಕನ್ನಡನಾಡಿನ ಶಿವಶರಣ, ಶಿವಶರಣೆಯರ ಭಕ್ತಿಯ ಆದರ್ಶ ಮತ್ತು ಜೀವನ ದರ್ಶನ ಹದವರಿತ ವಿವೇಚನೆಯನ್ನು ಹರಿಹರ ತನ್ನ ರಗಳೆಗಳಲ್ಲಿ ಅಭಿವ್ಯಕ್ತಿಸಿದ್ದಾನೆ. ಇದಕ್ಕೆ ನಿದರ್ಶನವಾಗಿ ತಿರುನೀಲಕಂಠ, ಇಳೆಯಾಂಡ ಗುಡಿಮಾರ, ಬಸವಣ್ಣ, ಪ್ರಭುದೇವ, ಶಂಕರದಾಸಿಮಯ್ಯ, ರೇವಣಸಿದ್ದೇಶ್ವರ, ಅಕ್ಕಮಹಾದೇವಿ, ತಿರುಕುರುಂಪೆ ತೊಂಡರ ಮೊದಲಾದ ರಗಳೆಗಳಲ್ಲಿ ವ್ಯಕ್ತವಾಗುವ ಈ ಶಿವಭಕ್ತರ ನಿಲುವುಗಳೇ ಅವರವರ ಜೀವನ ದರ್ಶನಕ್ಕೆ ಮೂಲಮಂತ್ರಗಳಾಗಿವೆ. ಇವರು ನಿರಹಂಕಾರಿಗಳಾಗಿ ಶಿವಭಕ್ತಿಯಲ್ಲಿ ತೊಡಗಿ ಆಧ್ಯಾತ್ಮಿಕ ಸಾಧಕರಾಗಿ ಸತ್ಯ, ನ್ಯಾಯನೀತಿ, ದಯೆ, ದಾನ-ಧರ್ಮ, ಸಮಾನತೆ, ಬಂಧುತ್ವ, ಕಾಯಕತತ್ವಗಳನ್ನು ರೂಢಿಸಿಕೊಂಡಿದ್ದರು. ಇಂತಹ ಶಿವಭಕ್ತರ ಬದುಕು ಮತ್ತು ಅವರ ಮಾರ್ಗ ಪ್ರಕಾಶಯುತವಾದುದು. ಏಕೆಂದರೆ ಈ ಶಿವಭಕ್ತರ ಭಕ್ತಿ, ನೇಮ, ಸಮಾಜ ರಚನೆ, ಧಾರ್ಮಿಕ ಆಚರಣೆಗಳನ್ನು ಕುರಿತಾದ ಅನುಭಾವಿಕ ಸಾಧನೆಯು ನೂತನ ಪ್ರಗತಿಪರ ಸಮಾಜ ರಚನೆಯಾಗಲು ಪ್ರೇರಕವಾಗುವಂತಹ ಲೌಕಿಕ ಬದುಕಿನ ಸಾರ್ಥಕತೆಯೂ ಆಗಿದೆ. ಒಟ್ಟಾರೆ ಈ ಎಲ್ಲಾ ಶಿವಭಕ್ತರ ಬಾಳು ಲೌಕಿಕವಾಗಿಯೂ, ಪಾರಲೌಕಿಕವಾಗಿಯೂ ಸಫಲತೆಯನ್ನು ಪಡೆದಿರುವ ಈ ರಗಳೆಗಳ ಕಥೆಯ ಆಶಯ ಸರ್ವಕಾಲಕ್ಕೂ ಸಲ್ಲುವಂತದ್ದು.

---

೮. ಹರಿಹರನ ರಗಳೆಗಳ ಸಾಂಸ್ಕೃತಿಕ ಮುಖಾಮುಖಿ–(ಲೇಖನ ಬಹುಮುಖಿ ಶೈವಧಾರೆಗಳು ಮತ್ತು ಹರಿಹರ) ಎಸ್.ಎಸ್. ಹಿರೇಮಠ – ಪುಟ ಸಂಖ್ಯೆ ೭೩

ಹರಿಹರನ ರಗಳೆಗಳಲ್ಲಿ ಶಿವಭಕ್ತರನ್ನು ಎತ್ತಿಹಿಡಿಯುವ ಮೂಲಕ ಸಮಾಜದ ಜನರ ಮೇಲೆ ಪರಿಣಾಮ ಬೀರುವಂತಹ ಅಂಶಗಳನ್ನು ಬಿಂಬಿಸಿದ್ದಾನೆ. ಇಲ್ಲಿನ ಶಿವಭಕ್ತರು ಶಿವಾನುಭವಿಗಳಂತೆ ಲೋಕಾನುಭವಿಗಳೂ ಆಗಿದ್ದಾರೆ. ಸರಳತೆ, ನಡೆ-ನುಡಿ, ಶುದ್ಧತೆ, ನಂಬಿಕೆ, ಧರ್ಮಾಚರಣೆ, ಕಾಯಕನಿಷ್ಠೆ, ಮಾನವೀಯ ಮೌಲ್ಯ ಮತ್ತು ಅವರ ಆದರ್ಶ ಜೀವನ ವಿಧಾನ ಬಹು ಉತ್ಕೃಷ್ಟತೆಯಿಂದ ಕೂಡಿದೆ. ಅವರ ಭಕ್ತಿಯ ಪರಾಕಾಷ್ಠತೆಯನ್ನು ಗುರುತಿಸುತ್ತಲೇ ಅವರಲ್ಲಿನ ಸಾಮಾಜಿಕ ಕಳಕಳಿಯನ್ನು ಕುರಿತು ಹರಿಹರ ತಿಳಿಸಿದ್ದಾನೆ. ಬಸವಣ್ಣ, ಮಹಾದೇವಿಯಕ್ಕ, ಮಾದಾರಚೆನ್ನಯ್ಯ ನಂತಹ ರಗಳೆಗಳ ಮೂಲಕ ಹರಿಹರ ತಮ್ಮ ಸಮಕಾಲೀನ ಸಮಾಜದಲ್ಲಿ ಮನೆಮಾಡಿಕೊಂಡಿದ್ದ ಧರ್ಮದ ಡಾಂಭಿಕತೆ, ಜಾತಿ ಅಸಮಾನತೆ, ಮೌಢ್ಯ, ಕಂದಾಚಾರ, ಭವಿಗಳ ಅರ್ಥಹೀನ ಬದುಕನ್ನು ತಿದ್ದಿತೀಡಿದ್ದಾನೆ.

"ಮನುಷ್ಯನ ಆಯುಷ್ಯ ತೀರಬಹುದು, ಆದರೆ ಆತನ ನಿಷ್ಠೆ ತೀರಬಾರದು. ಕಾಯವಳಿಯಬಹುದು, ನೇಹವಾರಬಾರದು. ಮಾನವ ಜೀವನವನ್ನು ಕುರಿತು ಹರಿಹರನು ಇಟ್ಟುಕೊಂಡ ದರ್ಶನವಿದು."೬ ಧರ್ಮಶ್ರದ್ಧೆ, ಭಕ್ತಿ, ಜಾಗೃತಿ ಮತ್ತು ಮಾನವೀಯತೆಯನ್ನು ಎಚ್ಚರಗೊಳಿಸುವ ಕಾರ್ಯವನ್ನು ಹರಿಹರ ಮಾಡಿದ್ದಾನೆ. ಭವಿಗಳಾಗಿಯೋ ಇಲ್ಲವೆ ಅನ್ಯಧರ್ಮದ ಪ್ರಭಾವ ಅಥವಾ ಒತ್ತಡಗಳಿಗೆ ಸಿಲುಕಿ ಅಂಧಾನುಕೂಪದಲ್ಲಿ ಬಿದ್ದು ಹರಿದು ಎತ್ತೆತ್ತಲೋ ಸಾಗುತ್ತಿದ್ದ ಜನರ ಮನಕ್ಕೆ ವೀರಶೈವ ಧರ್ಮದ ಶ್ರೇಷ್ಠತೆ ಮತ್ತು ಶಿವಭಕ್ತರ ಭಕ್ತಿಯ ಮಹತ್ವವನ್ನು ಹರಿಹರ ತನ್ನ ರಗಳೆಗಳಲ್ಲಿ ಅಭಿವ್ಯಕ್ತಿಸಿದ್ದಾನೆ.

ನೂರಾರು ಪುರಾತನರ, ಶಿವಭಕ್ತರ, ಶಿವಶರಣರ ಜೀವನದ ಕಥೆಗಳನ್ನು ಆಯ್ದುಕೊಂಡು ಹರಿಹರ ಕವಿ ಅತ್ಯಂತ ಉತ್ಸುಕನಾಗಿ ಕಾವ್ಯ ರಚಿಸಿದ್ದನ್ನು ಕಂಡಾಗ ಆತನಿಗಿರುವ ಭಕ್ತಿಯ ನಿಲುವು ಎದ್ದುಕಾಣುತ್ತದೆ. ಶಿವಭಕ್ತರ ಭಕ್ತಿಯ ಆಧಿಕ್ಯಕ್ಕೆ ಕವಿಯ ಜೀವನಾನುಭವವೇ ಕಾರಣವೆನ್ನುವಂತಿದೆ. ಹರಿಹರನು ಭಕ್ತಿಯಿಂದ ರೋಮಾಂಚಿತಗೊಂಡು ರಚಿಸಿದ ರಗಳೆಗಳ ಪಾತ್ರಗಳೂ ಅಷ್ಟೇ ಶ್ರದ್ಧಾಭಕ್ತಿಯಿಂದ ನಿಶ್ಚಲರಾಗುವಂತೆ ಚಿತ್ರಿಸಿದ್ದಾನೆ. ಕವಿ ಮತ್ತು ಅವನ ಪಾತ್ರಗಳು ಭಕ್ತಿಭಾವದ ರಸದಲ್ಲಿ ತನ್ಮಯರಾಗುತ್ತಾರೆ. ರಗಳೆಗಳು ಸದ್ಭಕ್ತರ ಚಾರಿತ್ರ್ಯಶುದ್ಧಿಯ ತೇಜಸ್ಸನ್ನು ಹೊರಹೊಮ್ಮಿಸುವ ಕಥೆಗಳಾಗಿವೆ. ಹರಿಹರನು 'ರಗಳೆ' ಎಂಬ ಹೊಸ ಪ್ರಕಾರವನ್ನು ಕೃತಿರೂಪದಲ್ಲಿ

---

ಅಡಿಟಿಪ್ಪಣಿಗಳು : ೬. ಹರಿಹರನ ರಗಳೆಗಳಲ್ಲಿ ಜೀವನ ದರ್ಶನ - ಸ.ಸ.ಮಾಳವಾಡ, ಪು.ಸ.೨೫

ಶಿವಶರಣರ ಜೀವನಚರಿತ್ರೆಯನ್ನು ಬರೆದು ಕನ್ನಡದಲ್ಲಿ ಅತ್ಯಂತ ಉತ್ಕೃಷ್ಟ ಕಾವ್ಯಾತ್ಮಕ ಚರಿತ್ರೆಗಳನ್ನು ಸೃಷ್ಟಿಸಿದ್ದಾನೆ. ಅವನ ಕಾವ್ಯರಭಸಕ್ಕೆ ರಗಳೆ ಉತ್ತಮ ಸಂವಹನ ಮಾಧ್ಯಮವಾಗಿದೆ ಎಂಬ ಹಲವು ವಿದ್ವಾಂಸರ ಅಭಿಪ್ರಾಯ ಒಪ್ಪತಕ್ಕಂತದ್ದು. ಹರಿಹರ ಓರ್ವ ಶಿವಭಕ್ತನೂ ಹಾಗೂ ಶಿವಕವಿ. ವೈವಿಧ್ಯಮಯ ಕತೆಗಳಂದ ಕೂಡಿದ ಏಕತೆಯ ಭಕ್ತಿ-ಭಾವ ಮೂಡಿಸುವ ಈ ರಗಳೆಗಳು ಜೀವನ ದರ್ಶನದ ಮೇಲೂ ಬೆಳಕು ಚೆಲ್ಲುವಂತಹುದಾಗಿದೆ.

ಸಾಂಸಾರಿಕ ಹಿನ್ನೆಲೆಯುಳ್ಳ ಹಲವು ಅಪೂರ್ವ ಸಂಗತಿಗಳನ್ನು ತನ್ನ ರಗಳೆಗಳಲ್ಲಿ ಅಚ್ಚುಕಟ್ಟಾಗಿ ತಂದಿದ್ದಾನೆ. ಇಂತಹ ಶಿವಭಕ್ತರ ಆದರ್ಶಗಳು ಜೀವನ ದರ್ಶನಗಳಾಗಿ ನಿಲ್ಲುತ್ತವೆ. ಶಿವನ ಮೇಲೆ ಇಟ್ಟ ಆಣೆಯನ್ನು ಕನಸು-ಮನಸ್ಸಿನಲ್ಲಾಗಲಿ ಒಂದು ಅರೆಗಳಿಗೆಯೂ ಮೀರದೆ ಪರಸ್ಪರ ಮುಟ್ಟದ ಇವರ ನಡೆ-ನುಡಿ, ಆಚಾರ ವಿಚಾರಗಳು ಶುದ್ಧ ಮತ್ತು ಭಕ್ತಿ ತಾದಾತ್ಮ್ಯದಿಂದ ಕೂಡಿದ್ದು ಅದು ಶಿವನಿಗೆ ಮೆಚ್ಚುಗೆಯಾಗಿದ್ದುದು 'ಮುಟ್ಟಿದೊಡೆ ಶಿವನಾಣೆ' ಎಂಬ ನುಡಿ ಅವರ ಬಹಿರಂಗ-ಅಂತರಂಗದಲ್ಲಿ ನಿತ್ಯವೂ ಮಿಡಿದು ಅದಕ್ಕಾಗಿ ಯೌವ್ವನ, ಸುಖ, ಅಭಿಲಾಷೆ, ಬದುಕು, ಪ್ರಾಣವೇ ಆ ಆಣೆಯಲ್ಲಿ ಅಡಗಿಹೋಗಿತ್ತು. ಒಂದೇ ಮನೆಯಲ್ಲಿಯೇ ಇದ್ದರೂ ಅವರ ಶಿವಭಕ್ತಿ, ನೇಮನಿಷ್ಠೆ, ಶರಣಸೇವೆ, ಲಿಂಗಾರ್ಚನೆಗೆ ಅವರ ವೈಮನಸ್ಸುಗಳು ಅಡ್ಡಬರದೆ ಸಲೀಸಾಗಿ ನಡೆದಿತ್ತು. ಶಿವನ ಕಠಿಣ ಪರೀಕ್ಷೆಗೂ ಹೆದರದೆ ತಮ್ಮ ನೇಮನಿಷ್ಠೆ, ಶಿವಭಕ್ತಿಯನ್ನು ಬಿಟ್ಟುಕೊಡದೆ ಆದರ್ಶವನ್ನು ಮೆರೆದು ವಿಜಯಶೀಲರಾಗುವ ಈ ಕಥೆಯು ಜೀವನ ದರ್ಶನವೇ ಆಗಿದೆ. ಶಿವಭಕ್ತನಾದ ಇಳೆಯಾಂಡ ಗುಡಿಮಾರ ಒಕ್ಕಲಿಗ 'ಬಿತ್ತಿ ಬೆಳೆವಂ ಶಿವನ ಸದ್ಭಕ್ತಿ ಸಸಿಗಳಂ' ಎಂಬ ಮನೋನಿಷ್ಠೆಯವನು. ಶರಣ ಜನರಿಗೆ ಬೇಡಿದುದ ಕೊಡುವುದೇ ಅವನ ಕಾಯಕವಾಗಿತ್ತು. ಭಕ್ತ ಜನ ಬರುವುದೂ, ಆತ ಕೊಡುವುದು ಹೆಚ್ಚಾಗಿ ಮನೆ, ತೋಟ, ಸಕಲೈಶ್ವರ್ಯವನ್ನು ದಾನ ಮಾಡಿದರು. ಈಗಿರ ಪ್ರಾಯದಲ್ಲೂ ಶಿವಧ್ಯಾನ ಭಕ್ತಿಯೊಂದೇ ಮಿಗಿಲಾಗಿತ್ತು. ಸಕಲವನ್ನು ಶಿವಶರಣರಿಗೆ ಸಮರ್ಪಿಸಿದ ಈ ದಾನಿ ಕೊಟ್ಟಿದ್ದು ತನಗೆ, ಬಚ್ಚಿಟ್ಟಿದ್ದು ಪರರಿಗೆ ಎಂಬ ಗಾದೆ ಮಾತಿಗೆ ಪ್ರತಿರೂಪಕದಂತಿದ್ದ. ಎಂತಹ ಕ್ಲಿಷ್ಟ ಪರಿಸ್ಥಿತಿಯಲ್ಲೂ ತನ್ನ ದೃಢತೆಯನ್ನು ಬಿಟ್ಟುಕೊಡದ ಅವನ ಮನೋಬಲ ಸರ್ವರಿಗೂ ಆದರ್ಶಪ್ರಾಯವಾದುದು.

"ಕವಿಯ ಈ ಜೀವನ ದರ್ಶನವೆಂಬುದು ಅವನ ಕಣ್ಣಿಗೆ ಕಾಣುವ ಹೊರಪ್ರಪಂಚದ ವಸ್ತು, ಜೀವಿ, ಪ್ರಕೃತಿ, ವ್ಯಾಪಾರಾದಿಗಳು ಮಾತ್ರವಲ್ಲ. ಆ ವಸ್ತು ಸನ್ನಿವೇಶಾದಿಗಳನ್ನು ಕಾರ್ಯಕಾರಣಾದಿ ಸಂಬಂಧದಿಂದ ಅರ್ಥಯಿಸುವ ಕೇವಲ ತರ್ಕಬದ್ಧ ಬೌದ್ಧಿಕ ವ್ಯಾಪಾರವೂ ಅಲ್ಲ ಅಥವಾ ಅವುಗಳ ಸಾನಿಧ್ಯದಲ್ಲಿ ಹೊಮ್ಮುವ ಹರ್ಷವಿಷಯಾದಿ ಭಾವನೆಯ ಉನ್ಮೇಷ ಮಾತ್ರವಲ್ಲ ಈ ಎಲ್ಲಾ ಅಂತಃ ಪ್ರವೃತ್ತಿಗಳ ಸಮಷ್ಟಿಯಿಂದ ಬೋಧಿತವಾಗುವ ಉನ್ನತ ವಿವೇಕ ಈ ದರ್ಶನ ದೀಪ್ತಿಯು ಆತನ ಕಾವ್ಯಗಳಲ್ಲೆಲ್ಲ ಹರಡಿಕೊಂಡಿರುವುದರಿಂದ, ಅವುಗಳ ಅರ್ಥಮೌಲ್ಯವನ್ನು ತೆರೆದು ತೋರಿಸುವಲ್ಲಿ ಮುಖ್ಯಕೀಲಿಯಂತೆ ಕಾರ್ಯ ಮಾಡುತ್ತದೆ. ಈ ದರ್ಶನವು, ಕವಿಯು ತನಗಾಗಿ ನಿರ್ಮಿಸಿಕೊಂಡ ಜೀವನ ಸೂತ್ರವಾಗಿರುವಂತೆ ತನ್ನ ಸುತ್ತಣ ಜೀವನವನ್ನು ಅರ್ಥೈಸುವ ವ್ಯಾಖ್ಯೆಯೂ ಆಗಿರುತ್ತದೆ. ಇದರ ರೂಪುರೇಷೆಯೆಂತಹುದೆಂಬುದನ್ನು ತಿಳಿದುಕೊಳ್ಳಲು ಆತನ ಕೃತಿಗಳು ಅತ್ಯಂತ ವಿಶ್ವಾಸಪೂರ್ಣ ಪ್ರಮಾಣಗಳಾಗಿರುತ್ತವೆ. ಏಕೆಂದರೆ ಕವಿಯ ಭಾವ ಜೀವನದ ಅಭಿವ್ಯಕ್ತಿ ಅಲ್ಲಿರುತ್ತದೆ. ಅವರ ಕಾವ್ಯ ಜೀವನವು ಸಮಗ್ರ ಜೀವನದ್ದೇ ಆದ ಒಂದು ಅವಸ್ಥಾಂತರವಾಗಿರುತ್ತದೆ. ಅಂತೆಯೇ ಅವರ ಜೀವನದರ್ಶನವು ಕಾವ್ಯದಲ್ಲಿ ಎತ್ತಿಹಿಡಿದ ದರ್ಶನಕ್ಕಿಂತ ವಿಭಿನ್ನವಾಗಿರುವುದಿಲ್ಲ."೧೦ ಆತ್ಮೋನ್ನತಿ ಎಂಬುದು ವೈಯಕ್ತಿಕ ಸಾಧನೆಯಾದರೆ ಅಂತಹ ಶಿವಭಕ್ತ ತನ್ನ ಆಧ್ಯಾತ್ಮಿಕ ಬಲದಿಂದ ಲೋಕೋನ್ನತಿಯನ್ನು ಸಾಧಿಸುತ್ತಾನೆ. ಅದೇ ಭಕ್ತನ ಜೀವನಾದರ್ಶವಾಗುತ್ತದೆ.

"ಹರಿಹರ ವಿವಿಧ ಶೈವ ಸಂಪ್ರದಾಯಗಳ ವಿಭಿನ್ನ ಸ್ವರೂಪ ಲಕ್ಷಣಗಳನ್ನರಿತುಕೊಂಡು ಅವುಗಳಿಗೆಲ್ಲಾ ಸರ್ವಸಮ್ಮತವಾದ ಜೀವನದರ್ಶನವನ್ನು ತನಗಾಗಿ ರೂಪಿಸಿಕೊಂಡಿದ್ದನೆನ್ನಬಹುದು ಪಂಪಾವಿರೂಪಾಕ್ಷನಲ್ಲಿಟ್ಟ ಅನನ್ಯ ಭಕ್ತಿ, ಶಿವಶರಣರ ಲೋಕೋತ್ತರ ಜೀವನದ ಮನನ ಹಾಗೂ ಸಂಕೀರ್ತನಗಳನ್ನು ತನ್ನ ಜೀವಿತಕ್ಕೂ, ಕಾವ್ಯಕ್ಕೂ ಧ್ಯೇಯಸೂತ್ರವಾಗಿಟ್ಟುಕೊಂಡ ಆತ ಆ ಉದ್ದೇಶಕ್ಕಾಗಿಯೇ ತನ್ನ ಕವಿತ್ವಶಕ್ತಿಯನ್ನು ಧಾರೆಯೆರೆದ. ಸಮಹಿತ ಚಿತ್ತದಿಂದ ಕಾವ್ಯರಚಿಸುವುದು ಅವನ ಪಾಲಿಗೆ ನಿತ್ಯದ ಶಿವಾರ್ಚನೆಯೇ ಆಗಿದ್ದಿತೆನ್ನಬಹುದು. ಅವನ ಭಾವನೆಯಲ್ಲಿ ಮೂಜಗದಲ್ಲೇ ಸರಿಸಾಟಿಯಿಲ್ಲದ ಪವಿತ್ರಾತ್ಮರು." ೧೧ ಹೌದು, ಭಕ್ತ ಕವಿಯಾದ ಹರಿಹರ ಭಕ್ತಿ, ಮುಕ್ತಿ, ನಂಬಿಕೆಗೆ ಪ್ರಧಾನವುಳ್ಳ ಶಿವಭಕ್ತರ ಕಥೆಗಳನ್ನು ರಚಿಸುವ ಮೂಲಕ ಸಮಾಜಕ್ಕೆ ಅರ್ಥಪೂರ್ಣವಾದ ಕಾಣಿಕೆಯನ್ನು ನೀಡಿದ ಸಂವೇದನಾ ಶೀಲನಾಗಿದ್ದಾನೆ.

---

ಅಡಿಟಿಪ್ಪಣಿಗಳು :- ೧೦. ಹರಿಹರನ ರಗಳೆಗಳಲ್ಲಿ ಜೀವನದರ್ಶನ - ಪ್ರೊ.ಸ.ಸ. ಮಾಳವಾಡ, ಪು.ಸಂ. ೬೩, ೬೭

೧೧. ಹರಿಹರನ ನೂತನ ಪುರಾತನರ ರಗಳೆಗಳು - ಡಾ|| ಎಂ.ಎಸ್. ಸುಂಕಾಪುರ

## ೬.೩ ಲೋಕಾನುಭವ-ಶಿವಾನುಭವ :-

ಹರಿಹರನ ರಗಳೆಗಳಲ್ಲಿ, ಲೋಕಾನುಭವವು ದುಃಖಾನುಭವದಿಂದ ಕೂಡಿದೆ. ಈ ದುಃಖಾನುಭವದಿಂದ ಬಿಡುಗಡೆ ಹೊಂದಿ, ಮೋಕ್ಷ ಸಾಧನೆಗೆ ಶಿವಾನುಭವದಿಂದ ಮಾತ್ರ ಸಾಧ್ಯ ಎಂಬ ಜೀವನ ಸತ್ಯಮಾರ್ಗಗಳನ್ನು ಶಿವಭಕ್ತರ ಕಥೆಗಳಿಂದ ತಿಳಿಯಬಹುದು. ಜೀವನಕ್ಕಾಗಿ ವೃತ್ತಿಗಳನ್ನು ಪಾಲಿಸುತ್ತ ಬಂದ ಶಿವಶರಣರು ಒಂದು ಆದರ್ಶವನ್ನು ರೂಢಿಸಿಕೊಂಡು, ಆ ವೃತ್ತಿಯನ್ನೇ ಆಧ್ಯಾತ್ಮಿಕ ಸಾಧನೆಗಾಗಿ ಅಳವಡಿಕೊಂಡವರು. ಶಿವನಾಮಸ್ಮರಣೆಯ ಮೂಲಕ ಆತ್ಮೋನ್ನತಿಯನ್ನು ಸಾಧಿಸಿಕೊಂಡಿರುವ ಹರಿಹರನ ಕಾವ್ಯ ಪ್ರಪಂಚದಲ್ಲಿ ಶಿವಶರಣರು ಜೀವಂತಿಕೆಯಿಂದ ವ್ಯವಹರಿಸುತ್ತಾ ಶಿವಾನುಭವವನ್ನು ಗಳಿಸುತ್ತಾ ಹೋಗುತ್ತಾರೆ. ಶಿವಭಕ್ತಿ ಸಾಧಕರ ಕಥೆ ಹೇಳುವ ಮೂಲಕ ಸಾಮಾನ್ಯ ಜನರ ಉದ್ಧಾರಕ್ಕಾಗಿ ಹರಿಹರನು ಎಲ್ಲರ ದೃಷ್ಟಿಯನ್ನು ಶಿವಾನುಭವದ ಕಡೆಗೆ ಕೇಂದ್ರೀಕರಿಸುವ ಗುರಿಯನ್ನು ಯಶಸ್ವಿಗೊಳಿಸಿದ್ದಾನೆ. ಇದಕ್ಕೆ ಅವನ ಪ್ರತಿಭೆ ಪಾಂಡಿತ್ಯವೆಷ್ಟು ಕಾರಣವೋ, ಅಷ್ಟೇ ಅವನಲ್ಲಡಗಿರುವ ಶಿವಭಕ್ತಿಯೂ ಕಾರಣವಾಗಿದೆ.

ಹರಿಹರನ ನಂಬುಗೆಯಲ್ಲಿ ಈಶ್ವರನು ಭಕ್ತಾಭಿಮಾನಿ, ಕರಾಣಾಳು ತನ್ನ ಲೀಲಾವಿನೋದಕ್ಕಾಗಿ ಜೀವಿಗಳನ್ನು ಮರ್ತ್ಯಲೋಕದಲ್ಲಿ ಸೃಷ್ಟಿಸಿ ಅವರಿಗೆ ನಾನಾ ಬಂಧನಗಳನ್ನು ಉಂಟುಮಾಡುವವನಾದರೂ ಅವರನ್ನು ಮುಳುಗಗೊಡದೆ ಕೈಹಿಡಿದು ಎತ್ತುವವನೂ ಆಗಿರುವನು. ಭಕ್ತರ ಮೇಲೆ ಆತನ ಕರುಣೆ ಎಷ್ಟೆಂದರೆ ನಂಬಿ ಕರೆದರೆ ಓ ಎನ್ನವವನು; ನೆನದರೆ ಮನದ ಕೊನೆಯಲ್ಲಿ ಬಂದು ನಿಲ್ಲುವಂತಹವನು; ಅವರ ಇಂದ್ರಿಯಾದಿಗಳಲ್ಲಿ ನಿಂದು ವ್ಯವಹರಿಸುವಂತಹನು; ಸವಿಸುಖಗಳನ್ನು ಸವಿಯುವಂತಹವನು. ಲೋಕಾನುಭವದಲ್ಲಿ ದುಃಖಾನುಭವಕ್ಕೆ ಒಳಗಾದವನು ಶಿವಾನುಭವದ ಸವಿಯನ್ನು ಶಿವನಿಂದ ಪಡೆಯುವನು ಎಂಬುದನ್ನು ಹರಿಹರನು ಚಿತ್ರಿಸಿ ಶಿವಭಕ್ತರಾಗಲು ಅವರಲ್ಲಿ ಹಂಬಲವನ್ನು ಸೃಷ್ಟಿಮಾಡಿದ್ದಾನೆ. ಆಧ್ಯಾತ್ಮಿಕ ಶಕ್ತಿ ಮತ್ತು ಆತ್ಮಸಾಧನೆಯನ್ನು ಮಾಡಿರುವ ಶಿವಭಕ್ತರು ಧರ್ಮ, ದೇವರು, ಭಕ್ತಿ, ಮೋಕ್ಷದ ಮಾರ್ಗವನ್ನು ಒಪ್ಪಿಕೊಂಡಿದ್ದಾರೆ.

ಹರಿಹರನ ರಗಳೆಗಳಲ್ಲಿ ಶಿವ ಮತ್ತು ಭಕ್ತರ ಸಂಬಂಧದ ನಡುವೆ ಪಾರದರ್ಶಕತೆ ಇರುತ್ತದೆ ಇಲ್ಲಿನ ಭಕ್ತ ಶಿವನ ಕುರಿತು ಚಿಂತೆ ಮಾಡುತ್ತಿದ್ದರೆ, ಶಿವನು ಭಕ್ತನಲ್ಲಿ ಅವನ ನೇಮ-ನಿಷ್ಠೆ

ಆದರ್ಶಗಳನ್ನು ಮೆಚ್ಚಿ ಪರೀಕ್ಷಿಸುವಲ್ಲಿ ತಲ್ಲೀನನಾಗಿರುತ್ತಾನೆ. ಶಿವನೊಡ್ಡಿದ ಪರೀಕ್ಷೆಯಲ್ಲಿ ಭಕ್ತನು ಗೆದ್ದೊಡನೆ ಶಿವನಿಂದ ಹೊಗಳಿಸಿಕೊಳ್ಳುವ ಪ್ರಸಂಗವೇ ಅಧಿಕ. ಆ ಭಕ್ತನನ್ನು ತನ್ನ ಪುಷ್ಪಕವಿಮಾನದಲ್ಲಿ ಕುಳ್ಳರಿಸಿ, ಕೈಲಾಸಕ್ಕೆ ಕರೆತಂದು ಪಾರ್ವತಿ ಸಮೇತ ನಂದೀಶ, ಗಣಾಧರರಿಗೆ ತನ್ನ ಶಿವಭಕ್ತನ ಮಹಾಕಾರ್ಯವನ್ನು ಪರಿಚಯಿಸಿ, ಗುಣಗಾನ ಮಾಡಿ ಗಣಪದವಿಯನ್ನು ನೀಡಿ, ಇನ್ನು ಮುಂದೆ ಕೈಲಾಸದಲ್ಲಿಯೇ ಇರಿಸಿಕೊಳ್ಳುವ ಪರಿ ವಿಶೇಷವಾದುದು. ಶಿವನು ಭಕ್ತಜನರನ್ನು ಪೋಷಿಸುವಂತಹ ಹೃದಯ ಶ್ರೀಮಂತಿಕೆಯನ್ನು ಶ್ರೋತೃವರ್ಗ ಮೆಚ್ಚಿ ತಮ್ಮ ಚಿತ್ತವೃತ್ತಿಯನ್ನು ಶಿವಾನುಭವದ ಕಡೆಗೆ ಬೆಳೆಸಿಕೊಳ್ಳಲಿ ಎಂಬ ಕವಿಯ ಆಶಯ ಸರ್ವಕಾಲಕ್ಕೂ ಸಲ್ಲುವಂತದ್ದು. ವರ್ತಮಾನ ಕಾಲದಲ್ಲೂ ಈ ಕಥೆಗಳನ್ನು ಕೇಳಿದಾಗ ಮೈನವಿರೇಳುವಂತಹ ಮತ್ತು ಶಿವಭಕ್ತಿಯಲ್ಲಿ ಮುಳುಗೇಳಬೇಕೆಂಬ ಹಂಬಲ ಉಂಟಾಗುತ್ತದೆ. ಶಿವಾನುಭವಕ್ಕೆ ಅಷ್ಟೊಂದು ಶಕ್ತಿ ಇದೆ ಎಂಬುದನ್ನು ನಾವು ಇಂದಿಗೂ ಆಲೋಚಿಸಬೇಕಾದ ವಿಷಯ. "ಹರಿಹರನ ದರ್ಶನ, ಭಕ್ತಿ ಕೇಂದ್ರಿತವಾದುದು. ಏಕದೇವ ಮೌಲ್ಯವನ್ನು ಎತ್ತಿಹಿಡಿಯುವುದು, ಆ ದೇವನು ಸಾಕಾರನೂ ನಿರಾಕಾರನೂ ಎಂದು ನಂಬುವುದು, ಜೀವ-ದೇವಗಳಲ್ಲಿ ಭಾವಸಂಗಮವನ್ನು ಅನುಭವಿಸುವುದು, ಈ ಭಕ್ತಿಯ ಸ್ವರೂಪವಾಗಿದೆ. ಹೀಗಾಗಿ ಕಾಮದಂಥ ಉತ್ಕಟಭಾವವೂ ಇವನಲ್ಲಿ ನಿಷ್ಕಾಮಕ್ಕೆ ತಿರುಗುತ್ತದೆ. ಲೋಕಾನುಭವಗಳೆಲ್ಲಾ ಕೊನೆಯಲ್ಲಿ ಶಿವನುಭವಕ್ಕೆ ಹೊರಳುತ್ತದೆ ಶಿವನನ್ನು "ನಿರಾಕಾರದೊಳ್ ವ್ಯೋಮಾತೀತನೇ, ಸಾಕಾರದೊಳ್ ಭಕ್ತಸನ್ನಿಹಿತನೇ" ಎಂದು ಹೇಳುವ ಅವನ ದರ್ಶನಕ್ಕೆ ನೂರಾರು ನಿದರ್ಶನಗಳು ಸಿಗುತ್ತವೆ." ೧೨ ಅಂದರೆ ಇವನ ನೂರಾರು ರಗಳೆಗಳಲ್ಲಿ ಲೌಕಿಕ ಜೀವನಕ್ಕಿಂತ ಪಾರಲೌಕಿಕ ಜೀವನದ ತುಡಿತವೇ ಹೆಚ್ಚು. ಅದನ್ನು ಶಿವಾನುಭವದ ಮೂಲಕ ಸಾದಿಸುವ ನಿಜವಾದ ಜೀವನದ ಸಾರ್ಥಕತೆಯನ್ನು ದರ್ಶಿಸಿದ್ದಾನೆ.

ಹರಿಹರ ತನ್ನ ಕಾವ್ಯದಲ್ಲಿ ವಿಸ್ತರಿಸಿರುವ ಶಿವಾನುಭವ ಪ್ರಪಂಚವು ವಿಸ್ತಾರವಾದುದು. ಅದನ್ನು ಹೆಚ್ಚುಹೆಚ್ಚಾಗಿ ಅರಿಯುತ್ತಾ ಹೋದಂತೆ ನಮಗೆ ಸಿದ್ಧಿಸುವ ಲೋಕಾನುಭವ ವಿಸ್ತರಿಸುತ್ತಾ ಹೋಗುತ್ತದೆ. ಅಕ್ಕಮಹಾದೇವಿ, ಬಸವರಾಜದೇವರ ರಗಳೆ, ಪ್ರಭುದೇವರ ರಗಳೆ, ನಂಬಿಯಣ್ಣನ ರಗಳೆ ಸೇರಿದಂತೆ ಇನ್ನೂ ಹಲವು ಕಥೆಗಳಲ್ಲಿ ಲೌಕಿಕ ಜಗತ್ತಿನ ದರ್ಶನಕ್ಕಿಂತ ಪಾರಲೌಕಿಕ ಜಗತ್ತಿನ ಶಿವಾನುಭವವೇ ಮುಖ್ಯವೆಂಬುದನ್ನು ಅಚ್ಚುಕಟ್ಟಾಗಿ ರಚಿಸಿರುವ ಹರಿಹರನ ದೃಷ್ಟಿಕೋನ ಭಕ್ತಿ ಕೇಂದ್ರಿತವಾದುದು. ಕೆಲವೊಂದು ಕಥೆಗಳಲ್ಲಿ ವಾಸ್ತವ ಜಗತ್ತಿಗೆ ದೂರವೆನಿಸುವ ಹಾಗೆ

---

ಅಡಿಟಿಪ್ಪಣಿಗಳು : ೧೨. ಹರಿಹರನ ರಗಳೆಗಳು – ಸಂ. ಡಾ॥ಎಂ.ಎಂ. ಕಲಬುರ್ಗಿ, ಪ್ರಸ್ತಾವನೆ, xxii

ಘಟನೆಗಳನ್ನು ಹೆಣೆದಿರುವ ಹರಿಹರನ ಭಕ್ತಿದರ್ಶವನ್ನು ನಕಾರಾತ್ಮಕ ದೃಷ್ಟಿಕೋನದಿಂದ ನೋಡದೆ ಸಕಾರಾತ್ಮಕ ಮನೋಭಾವದಿಂದ ನೋಡಿದಾಗ ಮಾತ್ರ ಭಕ್ತಿಯ ಶಕ್ತಿ ನಮಗೆ ಗೋಚರವಾಗಿ ಕಾವ್ಯದ ಸಂಪೂರ್ಣ ರಸಾನುಭಾವದೀಪ್ತಿ ಉಂಟಾಗುತ್ತದೆ. ಇಲ್ಲಿ ಯಾವ ಕಥೆಯಲ್ಲಿ ನೋಡಿದರೂ ಶಿವನು ಬಂದು ಪರೀಕ್ಷೆ ಮಾಡುವುದು ಖಡ್ಡಾಯವಾಗಿ ಹೋಗಿದೆ.

"ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರಯ್ಯ, ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯ"- ಎಂಬ ವಚನವು ಹರಿಹರನ ಭಕ್ತಿ ನಿದರ್ಶಕ್ಕೆ ಬಹುಚೆನ್ನಾಗಿ ಒಪ್ಪುತ್ತದೆ. ಕನ್ನಡದಲ್ಲಿ ಭಕ್ತಿಸಾಹಿತ್ಯ ಮೊದಲ ಬೆಳೆತೆಗೆದ ಹರಿಹರನು ಎಲ್ಲಾ ಕಾಲದೇಶಗಳಿಗೂ ಸಲ್ಲುವ ಕವಿಯಾಗಿದ್ದಾನೆ"೧೩. ಅಲ್ಲಿದೆ ನಮ್ಮನೆ, ಇಲ್ಲಿ ಬಂದೆ ಸುಮ್ಮನೆ ಎಂಬ ಕೀರ್ತನಕಾರರ ನುಡಿಯ ಹಿತವನ್ನು ಇಲ್ಲಿ ಕಾಣುವ ಶಿವಶರಣರು ಇಹಲೋಕದಲ್ಲಿ ಬಾಡಿಗೆದಾರನಂತೆ ಇದ್ದು, ಸ್ವಂತ ಮನೆಯ ಅಂದರೆ ಕೈಲಾಸ ಪ್ರವೇಶಕ್ಕೆ ಹಾತೊರೆಯುತ್ತಿರುತ್ತಾರೆ. ಇದರ ಸಿದ್ಧಿಗಾಗಿ ನಿಷ್ಠೆ, ಆದರ್ಶದೊಂದಿಗೆ ಶಿವಾನುಭವದಲ್ಲಿ ಮಿಂದಿರುತ್ತಾರೆ. ತೋರಿಕೆಯ ಆಡಂಬರದ ಪೂಜೆಗೆ ಶಿವನೆಂದೂ ಮೆಚ್ಚುವುದಿಲ್ಲ, ಸ್ಥಿರಭಕ್ತಿಗೆ ಮಾತ್ರ ಶಿವನು ಒಲಿದು ಬರುವನು ಎಂದು ಸಾರಿದ್ದಾನೆ. ಶಿವನು ಪರೀಕ್ಷೆಯ ಸಂದರ್ಭದಲ್ಲಿ ಎಷ್ಟೇ ಕುಣಿದು ಕುಪ್ಪಳಿಸಿ, ತಂತ್ರಜಾಲವನ್ನು ಹೂಡಿದರೂ ಸರಿ, ಭಕ್ತನು ಮಾತ್ರ ತನ್ನ ಛಲವನ್ನು ಬಿಟ್ಟುಕೊಡಲಾರ. ಇದು ಆಯಾಯಾ ಕಥೆಗಳಲ್ಲಿ ಬರುವ ಭಕ್ತನು ಕಂಡುಕೊಂಡ ಶಿವಾನುಭವದ ಸಾರ.
ಉದಾ: ಇಳೆಯಾಂಡ ಗುಡಿಮಾರನ ರಗಳೆಯಲ್ಲಿ ಗುಡಿಮಾರನು ಶಿವನ ಸದ್ಭಕ್ತಿ ಎಂಬ ಸಸಿಗಳನ್ನು ಬೆಳಸಿ, ತನ್ನ ಪಾಪಕರ್ಮವೆಂಬ ಕಳೆಯನ್ನು ಕೀಳುವಂತೆ ನಂತರ ಶಿವನನ್ನು ಮೆಚ್ಚಿಸಿ ಗಣಪದವಿಯನ್ನು ಪಡೆಯುವ ಭಕ್ತಿಯೇ ನಿಜವಾದ ಶಿವಾನುಭವ.

"ಧರ್ಮ ಕೆಟ್ಟು ಕರ್ಮವಾದಾಗ 'ಸತ್ಯದ ಸೋಗು' ಸಮಾಜದಲ್ಲಿ ಅಸ್ತಿತ್ವಕ್ಕೆ ಬರುತ್ತದೆ. ಇಂಥ ಕರ್ಮದ ನಿರಾಕರಣೆ ರಗಳೆಗಳಲ್ಲಿ ಉದ್ದಕ್ಕೂ ಎದ್ದು ಕಾಣುತ್ತದೆ. ಬಸವರಾಜದೇವರ ರಗಳೆಯಲ್ಲಿ "ಶಿವಭಕ್ತಿಯುಂ ಕರ್ಮಯುಂ ಎಂದುಂ ಒಂದಾಗಿರವು" ಎಂಬ ಸೂತ್ರ ರೂಪದ ಮಾತನ್ನು ಇಲ್ಲಿ ನೆನೆಯಬಹುದು. ಕಣ್ಣಪ್ಪನ ರಗಳೆಯಲ್ಲಿ ಭಕ್ತಿ–ಕರ್ಮಗಳ ಸಂಘರ್ಷ, ಭಕ್ತಿಯ ಮೇಲುಗೈಗಳನ್ನು ಗಮನಿಸಬಹುದು."೧೪ ಈ ಭಕ್ತಿಯ ಸ್ವರೂಪವೇ ಶಿವಾನುಭವವನ್ನು ಪಡೆಯುವಲ್ಲಿ ಮೂಲ ತಿರುಳು. ಹರಿಹರನ ರಗಳೆಯ ಚರ್ಚೆಯ ಸಂದರ್ಭದಲ್ಲಿ ಈ ಎಲ್ಲಾ

---

ಅಡಿಟಿಪ್ಪಣಿಗಳು : ೧೩. ಹರಿಹರನ ರಗಳೆಗಳು- ಸಾಂಸ್ಕೃತಿಕ ಮುಖಾಮುಖಿ, ಪು.ಸಂ. ೯೮
೧೪. ಹರಿಹರನ ರಗಳೆಗಳು – ಡಾ||ಎಂ.ಎಂ.ಕಲಬುರ್ಗಿ, ಪ್ರಸ್ತಾವನೆ, ಪು..ಸ. .xxi

ವಿಚಾರಗಳಿಗೂ ಒಂದಿಲ್ಲೊಂದು ವಿಧದ ಸಂಬಂಧವಿದೆ. ಏಕೆಂದರೆ "ಹರಿಹರ ಭಕ್ತಕವಿ, ಭಕ್ತನಾಗಿದ್ದುಕೊಂಡೆ ದಿಟ್ಟ ಕ್ರಾಂತಿಕಾರಿ ಮನೋಧರ್ಮವನ್ನು ಬೆಳಸಿಕೊಂಡವನು. ಭಾಷೆ, ಕಾವ್ಯ, ಕಾವ್ಯತಂತ್ರ, ಶೈಲಿಗಳಲ್ಲಿ ಹೊಸಮಾರ್ಗವನ್ನು ಹುಟ್ಟುಹಾಕಿ ಹೊಸಯುಗದ ಹರಿಕಾರನಾಗಿದ್ದಾನೆ. ತನ್ನ ಕಾಲದವರೆಗೆ ನಿರ್ದಿಷ್ಟವಾಗಿ ಪ್ರಯೋಗವಾಗುತ್ತಿದ್ದ ರಳಕುಳಗಳ ತೊಡಕನ್ನು ಬಿಡಿಸಿದ. "ಪಂಪಾದಿ ಜೈನಕವಿಗಳಿಂದ ಕಟ್ಟಲ್ಪಟ್ಟ ಸಂಸ್ಕೃತ ಪ್ರಧಾನ ಕಾವ್ಯಶೈಲಿಯ ಕೋಟೆ ಹರಿಹರಾದಿ ಶೈವರಿಂದ ಕೆಡವಲ್ಪಟ್ಟಿತು" ಎಂದು ಕಲಬುರ್ಗಿಯವರು ಅಭಿಪ್ರಾಯಪಡುತ್ತಾರೆ. ಅಂದರೆ ಹರಿಹರನ ಕಾಲಕ್ಕಾಗಲೆ ಕನ್ನಡ ಸಾಹಿತ್ಯ ಮಾರ್ಗಶೈಲಿಯಿಂದ ದೇಶೀ ಕಡೆಗೆ ತಿರುಗಿತ್ತು. ಈ ಕಾರಣದಿಂದಾಗಿ ಹರಿಹರನನ್ನು ದೇಶೀ ಸಾಹಿತ್ಯದ ಯುಗಪ್ರವರ್ತಕ ಎನ್ನುವುದು ಈತನಿಂದ ಮುಂದೆ ಬಂದ ವೀರಶೈವಕವಿಗಳು ಈತನ ಧೋರಣೆಯನ್ನು ಅನುಸರಿಸಿರುವುದು ಹಾಗೂ ಈತನ ಪ್ರಭಾವಕ್ಕೊಳಗಾಗಿ ಕಾವ್ಯ ರಚಿಸಿರುವುದು ಇದಕ್ಕೆ ಸಾಕ್ಷಿಯಾಗಿರುವುದು"೧೫ ಎಂಬ ಟಿ.ಎಸ್. ವೆಂಕಣ್ಣಯ್ಯನವರ ಅಭಿಪ್ರಾಯ ಗಮನಾರ್ಹವಾದುದು. ಭಕ್ತರು ಶಿವನ ಭಕ್ತಿಗಾಗಿ, ಶಿವನ ಒಲುಮೆಯನ್ನು ಗಳಿಸುವುದಕ್ಕಾಗಿ ಯಾವುದೇ ವ್ರತ, ಆಚರಣೆ ನಿಯಮಕ್ಕಾದರೂ ತಮ್ಮ ಜೀವನದ ಸರ್ವಸ್ವವನ್ನೂ ತ್ಯಾಗ ಮಾಡುತ್ತಾರೆ, ಎಷ್ಟಾದರೂ ಕಷ್ಟವನ್ನು ಸಹಿಸುತ್ತಾರೆ, ಒಟ್ಟಿನಲ್ಲಿ ಆ ಶಿವಶರಣರಿಗೆ ಮುಖ್ಯವಾಗಿ ಬೇಕಾದುದು ಶಿವನ ಒಲುಮೆ, ಅವನ ಅನುಗ್ರಹ ಮತ್ತು ಮೋಕ್ಷ.

ಅಡಿಟಿಪ್ಪಣಿಗಳು : ೧೫. ಹರಿಹರ ಕವಿಯ ಬಸವರಾಜದೇವರ ರಗಳೆ – ಸಂ. ಟಿ.ಎಸ್. ವೆಂಕಣ್ಣಯ್ಯ – ಪೀಠಿಕೆ

# ಅಧ್ಯಾಯ – ೫

## ಶಿವ ಮತ್ತು ಭಕ್ತರ ಸಂಬಂಧದ ಹಿನ್ನೆಲೆಯಲ್ಲಿ ರಗಳೆಗಳ ರಾಚನಿಕ ಸ್ವರೂಪ

### (೫.೧) ಕಥಾವಸ್ತು – ತಂತ್ರ ದೃಷ್ಟಿ :-

ಹರಿಹರ ರಗಳೆಗಳಲ್ಲಿ ಕಥೆಗಳನ್ನು ಕಟ್ಟುವ ಕೆಲಸ ಮಾಡಿದ್ದಾನೆ. ಮಣಿಗಳನ್ನು ಪೋಣಿಸಿ ಒಂದು ಸುಂದರವಾದ ಹಾರವನ್ನು ಹೆಣೆದಿರುವಂತಹ ಅವನ ಚಾತುರ್ಯ ಇಲ್ಲಿ ಗಮನಾರ್ಹ. ಕಥೆಗಳ ಭಾವ ಒಂದೇ ಆಗಿದ್ದರೂ ವಿಭಿನ್ನತೆಯಿಂದ ಕೂಡಿರುತ್ತದೆ. ಬಂಡೆಕಲ್ಲನ್ನು ಕೆತ್ತಿ ಶಿಲೆಯ ರೂಪಕ್ಕೆ ತರುವಂತೆ ಮತ್ತು ಚಿನ್ನವನ್ನು ಕಾಯಿಸಿ ಹದವಾದ ಆಭರಣ ರೂಪಕ್ಕೆ ತರುವಂತೆ ಹರಿಹರನು ಹದವಾದ ಒಂದು ಭಕ್ತಿಲೋಕವನ್ನು ಸಾಹಿತ್ಯದಲ್ಲಿ ಸೃಷ್ಟಿಸಿದ್ದಾನೆ. ಇಲ್ಲಿ ಬಂಡೆ ಮತ್ತು ಬಂಗಾರಕ್ಕೆ ಸಂಸ್ಕಾರ ನೀಡಿದಾಗ ಮಾತ್ರ ಅದು ಶಿಲೆಯಾಗಿ, ಆಭರಣವಾಗಿ ರೂಪುಗೊಳ್ಳುವುದು ಅದರಂತೆ ಶಿವಭಕ್ತರು ಕೆಲವು ಕಟ್ಟುನಿಟ್ಟಿನ ನಿಯಮಗಳೊಂದಿಗೆ ಹಿಡಿದ ವ್ರತವನ್ನು ಜೀವನಪರ್ಯಂತ ಆಚರಿಸಿಕೊಂಡು ಹೋಗುವ ಮೂಲಕ ಭಕ್ತಿಯಲ್ಲಿ ಸಂಸ್ಕಾರವನ್ನು ಮೆರೆಯುತ್ತಾರೆ. ಈ ರೀತಿಯಲ್ಲಿ ಸಿದ್ಧಿಗೈದ ಸಂಸ್ಕಾರವನ್ನು ರೂಪಿಸಿಕೊಂಡ ಶಿವಭಕ್ತರನ್ನು, ಸಂಬಂಧವನ್ನು ಅನುಕ್ರಮವಾಗಿ ಪರಿಚಯಿಸಿದ್ದಾನೆ. ಈ ಮೂಲಕ ಶಿವಭಕ್ತಿಯಲ್ಲಿ ತಾದಾತ್ಮ್ಯ ತಲ್ಲೀನತೆ ಮತ್ತು ಆಸಕ್ತಿಯನ್ನು ಬೆಳಸಿಕೊಳ್ಳಲು ಈ ಕಥೆಗಳನ್ನು ಪ್ರೇರಣಶಕ್ತಿಗಳೆಂಬಂತೆ ರಚಿಸಿದ್ದಾನೆ.

ಶಿವಭಕ್ತಿ ಎನ್ನುವುದು ಗಾಢವಾಗಿರುವುದಷ್ಟೇ ಅಲ್ಲದೆ ಶಿವನು ಯಾವುದೇ ತಾರತಮ್ಯ ಮಾಡದೆ ಎಲ್ಲರನ್ನು ತನ್ನ ಬಂಧುಗಳಂತೆ ಕಾಣುವ ರೀತಿಯಂತೆ ಚಿತ್ರಿಸಿದ್ದಾನೆ. "ಹರಿಹರನು ಬರೆದ ರಗಳೆಗಳಿಗೆ ವಸ್ತುವಾಗಬಲ್ಲ ವ್ಯಕ್ತಿ ಪ್ರಸಿದ್ಧನೇ ಆಗಿರಬೇಕಾಗಿಲ್ಲ; ವಸ್ತುವೂ ಅಷ್ಟೇ; ಬೆಸ್ತ, ಕುಂಬಾರ, ರೈತ, ಬಟ್ಟೆ ವ್ಯಾಪಾರಿ ಇಂಥ ಸಾಮಾಜಿಕ ಸ್ಥಿತಿಗತಿಗಳಿಂದ ಸಾಮಾನ್ಯ ವ್ಯಕ್ತಿಗಳಲ್ಲೂ ಇರುವ ಮಹೋನ್ನತ ಗುಣಗಳನ್ನು ಗುರುತಿಸುವುದು"೧ ಇಲ್ಲಿ ಹರಿಹರನು ತನ್ನ ಕಾವ್ಯಕ್ಕೆ ವಸ್ತು ಆಯ್ಕೆ ಮಾಡಿಕೊಳ್ಳುವಲ್ಲಿ ಸಂಕುಚಿತ ಮನಸ್ಸನ್ನು ಬಿಟ್ಟು, ಹೃದಯ ವೈಶಾಲ್ಯವನ್ನು ತಾಳಿರುವುದರಿಂದಲೇ ಕಥಾನಾಯಕನ ಆಯ್ಕೆಯ ವಿಷಯದಲ್ಲಿ ಬಡವ-ಶ್ರೀಮಂತ, ಗಂಡು-ಹೆಣ್ಣು, ಮೇಲ್ಜಾತಿ-ಕೆಳಜಾತಿ ಎಂಬ ಬೇಧ-ಭಾವ ತಾಳದೆ, ತಿರಸ್ಕೃತ ವರ್ಗವನ್ನು ಪುರಸ್ಕರಿಸಿದ್ದಾನೆ.

---

ಅಡಿಟಿಪ್ಪಣಿಗಳು : ೧. ರಸಿಕಚಕ್ರಿ ಹರಿಹರದೇವ – ಸಂ. ಡಾ|| ಬಿ.ಸಿ.ಜವಳಿ, ಶ್ರೀ. ಶಾಂತರಸ, ಪು.ಸಂ. ೭೪

ಶಿವಭಕ್ತರ ಜೀವನ ಚರಿತ್ರೆಗಳೇ ಕಾವ್ಯದ ವಸ್ತುವಾಗಿದ್ದು ಅಲ್ಲಿ ಪುರಾಣ ಕಲ್ಪನೆಯ ಜೊತೆಗೆ ಪವಾಡದ ಅಂಶಗಳು ವಿಸ್ಮಯವೆಂಬಂತೆ ಮೂಡಿಬಂದಿದೆ. "ಕಥೆಗೆ ಸಹಾಯಕವಾಗಬಲ್ಲ ವಿಷಯಗಳನ್ನು ವರ್ಣಿಸಿ, ಕಥೆಗೆ ಕಳೆತಂದು ಕಥೆಯ ಮೂಲ ಉದ್ದೇಶದ ಕಡೆಗೆ ಕಥೆಯನ್ನು ತೀವ್ರವಾಗಿ ಓಡಿಸುವ ಕಲೆಯಲ್ಲಿ ಹರಿಹರನು ಜಾಣನಾದ ಕವಿಯೆಂದೇ ಆತನಿಗೆ 'ಕನ್ನಡ ಜಾಣ' ನೆಂಬ ಬಿರುದು ಬಂದಿರುತ್ತದೆ."೨ ಹರಿಹರನ ಕಥೆಗಳಲ್ಲಿ ಭಾವನೆಗಳು ಪ್ರಧಾನವಾಗಿ ಕಾಣಿಸಿಕೊಳ್ಳುತ್ತದೆ. ಕಥೆಗಳು ದೀರ್ಘವಾಗಿ ಬಂದಾಗ ಒಂದು ಸ್ಥಲವನ್ನು ರಗಳೆ ಛಂದಸ್ಸಿನಲ್ಲಿ, ಮತ್ತೊಂದು ಸ್ಥಲವನ್ನು ಗದ್ಯದಲ್ಲೂ ಬಳಸಿ ಕಥೆಯ ಓಟ ಹೆಚ್ಚಿಸಿ ಕಥಾಹಂದರವನ್ನು ಸುಲಭವಾಗಿ, ಸರಳವಾಗಿ ಅರ್ಥಮಾಡಿಸುವ ಹರಿಹರನ ಕಥಾಭಿವ್ಯಕ್ತಿ ಮೆಚ್ಚುವಂತದ್ದು.

ಹರಿಹರನು ಶಿವಭಕ್ತಿಯನ್ನು ಕಥೆಗಳ ಮೂಲಕ ಸಾದರಪಡಿಸಿರುವುದರಿಂದ ಅದು ಬಹು ಜನರಿಗೆ ಪ್ರಿಯವಾಗುತ್ತದೆ. ಏಕೆಂದರೆ ಮಕ್ಕಳಿಂದ ವೃದ್ಧರವರೆಗೂ ಆಕರ್ಷಿಸುವಂತಹ ಮಾರ್ಗ ಈ ಕಥಾಕಲಾಪ, ಸುಲಭವಾಗಿ ನೆನಪಿಟ್ಟುಕೊಳ್ಳಲು ಸಾಧ್ಯವಾಗುವ ಈ ಮಾರ್ಗ ಎಲ್ಲರ ಮನೆಮಾತಾಗುವಂತದ್ದು. ಶಿವನಲ್ಲಿ ಶಿವಶರಣರ ಐಕ್ಯತೆಯನ್ನು ಒಂದೇ ಮಾದರಿಯಲ್ಲಿ ಆದರೆ ವಿಭಿನ್ನ ಆಯಾಮಗಳಲ್ಲಿ ತಿಳಿಸಿರುವ ಹರಿಹರನ ರಗಳೆಗಳು ಸುಲಭವಾಗಿ ಎಲ್ಲರಿಗೂ ಗ್ರಾಹ್ಯವಾಗುತ್ತವೆ. ಸಾಮಾನ್ಯರೆಲ್ಲ ಇಲ್ಲಿ ನಾಯಕಪಟ್ಟಕ್ಕೇರಿ ಜೊತೆಗೆ ಶಿವನೊಂದಿಗೆ ಕೈಲಾಸಕ್ಕೆ ಸೇರಿ ಶಿವಗಣಸಮೂಹದಲ್ಲಿ ಕೂಡುವ ಒಂದೊಂದು ಪಾತ್ರಸನ್ನಿವೇಷಗಳ ಅಸಾಧಾರಣ ಪ್ರತಿಭೆಯನ್ನು ಹರಿಹರ ಸೃಷ್ಟಿಸಿದ್ದಾನೆ.

ಹರಿಹರನ ಕಥಾವಸ್ತುವಿನ ಆಯ್ಕೆಯನ್ನು ಕುರಿತಂತೆ ಶ್ರೇಷ್ಠ ಸಾಹಿತಿಗಳು ತಮ್ಮ ಅಭಿಪ್ರಾಯವನ್ನು ಹೀಗೆ ಹೇಳಿರುತ್ತಾರೆ.

೧) <u>ಡಾ|| ಜಿ.ಎಸ್.ಶಿವರುದ್ರಪ್ಪನವರ ಮಾತಿನಲ್ಲಿ ಹೇಳುವುದಾದರೆ,</u>

"ಹರಿಹರನಂಥ ಭಕ್ತಕವಿ ಪ್ರಭುನಿಷ್ಠೆಯನ್ನು ಹಾಗೂ ಆ ನಿಲುವಿನ ಕಾವ್ಯ ವಸ್ತುಗಳನ್ನು ನಿರಾಕರಿಸಿ ಸಮಾಜದ, ಅದರಲ್ಲೂ ಕೆಳಗಿನ ಸಾಮಾಜಿಕ ಹಂತಗಳಿಗೆ ಸೇರಿದ ಸಾಮಾನ್ಯ ಮನುಷ್ಯರನ್ನು ತನ್ನ ಖಂಡ ಕಾವ್ಯಗಳ ಕಥಾನಾಯಕರನ್ನಾಗಿ ಮಾಡಿಕೊಂಡರೂ ಅವನದು ನಮ್ಮ

---

ಅಡಿಟಿಪ್ಪಣಿಗಳು : ೨. ಹಂಪೆಯ ಹರಿಹರ ದೇವನ ರಗಳೆಗಳು, ಪ್ರಸ್ತಾವನೆ, ಪು.ಸಂ. ೫೩.

ಹೊತ್ತಿನ ಸಾಮಾಜಿಕ ನಿಲುವಿಗಿಂತ ಬೇರೆಯಾಗಿ ಮೂಲತಃ ಧರ್ಮನಿಷ್ಠ ನಿಲುವೇ ಆಗಿರುವುದನ್ನು ಗುರುತಿಸಬಹುದು. ಯಾಕೆಂದರೆ ಕೆಳಗಿನ ಹಂತದ ಒಬ್ಬ ಅಗಸ, ಒಬ್ಬ ಕುಂಬಾರ, ಒಬ್ಬ ಬೆಸ್ತ, ಒಬ್ಬ ಒಕ್ಕಲಿಗ, ಒಬ್ಬ ಕೂಲಿಯವ ಆತನ ಕಾವ್ಯದ ಮುಖ್ಯಪಾತ್ರಗಳಾಗುವ ಒಂದು ಅದ್ಭುತ ವಸ್ತು ಬದಲಾವಣೆ ಕಾಣಿಸಿಕೊಂಡರೂ ಅವರು ಯಾರೂ ಅವರವರ ಸಾಮಾಜಿಕ ಸ್ತರದ ವಾಸ್ತವಗಳನ್ನು ಪ್ರತಿನಿಧಿಸದೆ ಅವರು ಮೂಲತಃ ಹರಿಹರನಿಗೆ ಪ್ರಿಯವಾದ ಶಿವಭಕ್ತರೇ ಆಗಿ, ಈ ಲೋಕದ ವಾಸ್ತವದಿಂದ ಮೇಲೇರಿ ಆ ಲೋಕದ ಕಡೆಗೆ ನಡೆಯುವ ಪ್ರಯಾಣಿಕರಂತೆ ತೋರುತ್ತಾರೆ. ಹರಿಹರನಂತೆಯೇ ಈ ನಿಲುವನ್ನು ಭಕ್ತಕವಿಗಳು ಎತ್ತಿಹಿಡಿಯುತ್ತಾರೆ" ೩ ಎನ್ನುವ ಈ ಮಾತುಗಳು ಔಚಿತ್ಯಪೂರ್ಣವಾಗಿದೆ. ಭಕ್ತನಾಗುವುದೇ ಅರ್ಹತೆ ಎನ್ನುವುದು ಭಕ್ತಿಯೊಂದೇ ಹೊರತು ಜಾತಿ ವೃತ್ತಿ ಪ್ರಬೇಧಗಳಿಂದಲ್ಲ. ಶಿವಭಕ್ತಿಯ ಎದುರು ಎಲ್ಲರೂ ಸಮಾನರು.

### ೨) <u>ಶ್ರೀ ಚಂದ್ರಶೇಖರ ಕಂಬಾರರು ಹೇಳರುವಂತೆ</u>

"ಜನಪದ ಮನೋಧರ್ಮದಲ್ಲಿ ಜೀವನದ ಅತಿಶ್ರದ್ಧೆಯನ್ನು ಕಾಣುತ್ತೇವೆ. ಕಾವ್ಯವಸ್ತುವಿನ ಆಯ್ಕೆಯಲ್ಲಿ ಸಂಕೋಚ ಪ್ರವೃತ್ತಿ ಇರುವುದಿಲ್ಲ. ಒಂದನ್ನು ಹತ್ತಾಗಿ ಹೇಳದರೂ ದಣಿಯಲಾರದ್ದು ಆಡು ನುಡಿಯ ಬಹುದೊಡ್ಡ ಸೌಭಾಗ್ಯವೆಂದರೆ ತೀವ್ರತೆ, ಉಚ್ಚರಿಸಿದ ತಕ್ಷಣವೇ ಆ ವಸ್ತುವಿನ ಸಾಕ್ಷಾತ್ಕಾರವಾಗಬೇಕು"೪. ಹರಿಹರನು ತನ್ನ ಕಾವ್ಯಕ್ಕೆ ವಸ್ತುವನ್ನು ಆಯ್ಕೆ ಮಾಡಿಕೊಂಡಿರುವಲ್ಲಿ ಪ್ರಧಾನವಾಗಿ ಆತನಲ್ಲಿ ಅಡಗಿರುವ ಶಿವಭಕ್ತಿ, ಶ್ರದ್ಧಾಮನೋಭಾವದೊಂದಿಗೆ ಧರ್ಮನಿಷ್ಠೆ ಎದ್ದು ಕಾಣುತ್ತದೆ. ಇದರೊಂದಿಗೆ ಆಯಾ ಕಾಲದ ಸಾಮಾಜಿಕ, ರಾಜಕೀಯ, ಧಾರ್ಮಿಕ ಪ್ರೇರಣೆಯೂ, ಒತ್ತಡವೂ ಕಾರಣವಿರಬಹುದು.

### ೫.೨ <u>ಭಾಷೆ, ಶೈಲಿ ನಿರ್ವಹಣೆ :-</u>

ಹರಿಹರನ ರಗಳೆಗಳ ಭಾಷೆ ನಡುಗನ್ನಡ ಮತ್ತು ಹಳಗನ್ನಡದಲ್ಲಿ ರಗಳೆ ಛಂದಸ್ಸಿನಲ್ಲಿ ಬರೆದಿದ್ದಾನೆ. ಭಾಷೆಯು ರಗಳೆಗಳಲ್ಲಿ ಅರ್ಥಗರ್ಭಿತವಾಗಿಯೂ, ವಿವರಣಾತ್ಮಕವಾಗಿಯೂ ಹೇಳಕೊಳ್ಳುತ್ತಾನೆ. "ಪ್ರಾಕೃತ/ಅಪಭ್ರಂಶ ಭಾಷೆಗಳಲ್ಲಿದ್ದ ಮಾತ್ರಾಗಣ, ಅಕ್ಷರ ಗಣಗಳ ಮಿಶ್ರ ಛಂದಸ್ಸನ್ನು ಕನ್ನಡದಲ್ಲಿ ಕಥನಕ್ಕೆ ಹೊಡಿಕೊಂಡಿದ್ದು ಇವುಗಳಲ್ಲಿ ಉತ್ಸಾಹ, ಮಂದಾನಿಲ ಮತ್ತು ಲಲಿತ ಎಂಬ ಮೂರು ಲಯಗಳನ್ನು ಬಳಸಿಕೊಂಡದ್ದು; ಮಂದಾನಿಲ ಮತ್ತು ಲಲಿತ ರಗಳೆಗಳಲ್ಲಿ ಅಭಿವ್ಯಕ್ತಿ ಶಕ್ತಿಯನ್ನು

---

ಅಡಿಟಿಪ್ಪಣಿಗಳು : ೩. ಹರಿಹರನ ದರ್ಶನ – ಜಿ.ಎಸ್.ಶಿವರುದ್ರಪ್ಪ, ಸ್ನೇಹ ಪ್ರಕಾಶನ, ಪು.ಸಂ.೮೨
೪. ರಸಿಕಚಕ್ರಿ ಹರಿಹರದೇವ – ಸಂ. ಡಾ|| ಬಿ.ಸಿ.ಜವಳಿ, ಶ್ರೀ. ಶಾಂತರಸ, ಪು.ಸಂ. ೩೮೩

ಹೆಚ್ಚಿಸಿ ಮಹಾಛಂದದ ದ್ವಾರ ತೆಗೆದದ್ದು ಹರಿಹರನ ಕೊಡುಗೆ ಎನ್ನಲೇಬೇಕು. ಈ ಛಂದೋ ಬೆಳಕಿನಲ್ಲಿ ಹರಿಹರನ ಪ್ರತಿಭೆ inarticulate ಆದದ್ದರ ಮೇಲೆ ನಡೆಸಿದ ಧಾಳಿ ಕನ್ನಡದ ಅಭಿವ್ಯಕ್ತಿ ಶಕ್ತಿಯನ್ನು ನಿಸಂದಿಗ್ಧವಾಗಿ ಹೆಚ್ಚಿಸಿದೆ."೫ ಸನ್ನಿವೇಶಗಳಿಗೆ ತಕ್ಕಂತೆ ಉತ್ಸಾಹ, ಹಾಹಾಕಾರ, ಭಕ್ತನ ಕುಣಿತ, ಭಾವಾವೇಶ, ಶಿವಭಕ್ತಿ ತೀವ್ರತೆ, ಭಾವೋದ್ವೇಗ ಸಂವೇದನಾ ಶೈಲಿ, ನಾಟಕೀಯ ಗುಣ, ನವರಸಗಳಿಗೆ ತಕ್ಕಂತ ಭಾವ, ಭಾವನೆಗಳಿಗೆ ತಕ್ಕಂತೆ ತನ್ನ ಕಣ್ಣೆದುರಿನಲ್ಲೇ ಚಿತ್ರಗಳು ಒಂದರ ಹಿಂದೆ ಒಂದು ಕುಣಿಯುವಂತೆ ತೋರುವ ರಚನಾ ಸಾಮಾರ್ಥ್ಯ ಗಮನಾರ್ಹವಾದುದು.

ಪುನರುಕ್ತಿಗಳು, ಶಿವಾಲಯವನ್ನು ವರ್ಣಿಸುವಾಗ ಒಂದೇ ಮಾದರಿಯ ಶೈಲಿ, ಪದಬಳಕೆ, ಮತ್ತು ಕೆಲವು ಸಂದರ್ಭಧಲ್ಲಿ ಭಾಷಾ ಪ್ರಯೋಗವು ಹಿಮಾಲಯದಷ್ಟೆತ್ತರಕ್ಕೆ ಕೊಂಡೈಯುವಂತೆ ಭಾವರಸವು ಏರುತ್ತಿರುತ್ತದೆ. ಕ್ಷಣಮಾತ್ರದಲ್ಲಿ ನೀರಸವಾದ ವರ್ಣನೆಯು ಬಂದು ಬಿಡುತ್ತದೆ. ಒಂದು ಹುಮ್ಮಸ್ಸಿನಲ್ಲಿ ಓದುತ್ತಿರುವ ಓದುಗರಿಗೆ ಇದು ನೀರಸ ವರ್ಣನೆ ಎನಿಸಿ, ಬಾವೋದ್ವೇಗವೇ ಕಡಿಮೆಯಾಗಿ ಬಿಡುತ್ತದೆ. ಶಿವ ಮತ್ತು ಭಕ್ತರ ಬಾಂಧವ್ಯವನ್ನು ಅಭಿವೃದ್ಧಿಪಡಿಸುವ ಶಿವನನ್ನೊಲಿಸಿಕೊಳ್ಳುವ ಭಾವಭಾಷೆಯನ್ನು ಸೂಕ್ತ ಶಬ್ದಗಳಲ್ಲಿ ನಿಭಾಯಿಸಬಲ್ಲ ಶಕ್ತಿಯಂತೂ ಹರಿಹರನಲ್ಲಿ ಧಾರಾಳವಾಗಿ ಮೂಡಿಬಂದಿದೆ. ಕೃತಿಯ ಭಾಷೆಯನ್ನು ಸಾಹಿತ್ಯಾರಾಧಕರು ಯಾರೇ ಓದಿದರೂ ಇದು ಹರಿಹರನದೆಂದು ಹೇಳಬಹುದು ಅಷ್ಟರ ಮಟ್ಟಿಗೆ ಚಿರಪರಿಚಿತ ಭಾಷೆಯಾಗಿದೆ.

"ಒಟ್ಟಿನಲ್ಲಿ ಹರಿಹರನ ಭಾಷೆ ಸಮೃದ್ಧ, ಶ್ರೀಮಂತ ಮತ್ತು ಶಕ್ತಿಯುತ. ಶಬ್ದದರಿದ್ರಂಗಕ್ಕುಮೆ ನವೀನ 'ಕಾವ್ಯಾರಂಭ' ಎಂದು ಉದ್ದೇಶಿಸಿ ಕಾವ್ಯರಚನೆಗೆ ತೊಡಗಿದ ಹರಿಹರನು ಶಬ್ದದರಿದ್ರ ಹೇಗಾಗಬಲ್ಲ? ಎಂತಹ ಸನ್ನವೇಶವೇ ಇರಲಿ ಯಾವ ರಸ ಪ್ರತಿಪಾದನೇ ಇರಲಿ, ಸಂಕೀರ್ಣ ಭಾವಾಭಿವ್ಯಕ್ತಿಯೇ ಇರಲಿ, ಸಂಭ್ರಮವಿರಲಿ, ಸದ್ದಿರಲಿ, ಆನಂದವಿರಲಿ, ಆಶ್ಚರ್ಯವಿರಲಿ, ಎಲ್ಲವನ್ನು ಕಣ್ಣಿಗೆ ಕಟ್ಟುವಂತೆ, ಮನಕ್ಕೆ ಮುಟ್ಟುವಂತೆ ನಿರೂಪಿಸಲು ಬೇಕಾದ ಶಬ್ದಗಳು ಅದೂ ಸೂಕ್ತ ಶಬ್ದಗಳು, ಹರಿಹರನು ಕೈಯಿಟ್ಟಡೆ ದೊರೆಯುತ್ತವೆ. ಅಷ್ಟೊಂದು ಶ್ರೀಮಂತ ಅವನ ಶಬ್ದ ಭಂಡಾರ। ಯಾವುದೋ ಶಬ್ದಕ್ಕಾಗಿ ಅವನು ಎಂದೂ ತಲೆಕೆರೆಯುತ್ತ ಕುಳಿತವನಲ್ಲ. ಭಾವಕ್ಕೆ ತಕ್ಕ ಶಬ್ದಗಳು ಅವನ ಮುಂದೆ ಯಾವಾಗಲೂ ಕೈಕಟ್ಟಿಕೊಂಡು ಆಜ್ಞಾಧಾರಕ ಆಳಿನಂತೆ ನಿಂತಿರುತ್ತದೆ. ಆದ್ದರಿಂದ ಹರಿಹರನ ಕಾವ್ಯಭಾಷೆಗೊಂದು ಅಪೂರ್ವ ಬಗೆಯ ಸಹಜತೆಯಂತಾಗಿದೆ"೬. ಒಟ್ಟಿನಲ್ಲಿ ಹರಿಹರನ

---

ಅಡಿಟಿಪ್ಪಣಿ : ೫. ಹರಿಹರನ ರಗಳೆಗಳು ಸಾಂಸ್ಕೃತಿಕ ಮುಖಾಮುಖಿ – ಶಿವಾನಂದ ಎಸ್ ವಿರಕ್ತಮಠ, ಪು.ಸಂ.೨೨
೬. ರಸಿಕಚಕ್ರಿ ಹರಿಹರದೇವ, ಸಂ. ಡಾ॥ ಬಿ.ಸಿ.ಜವಳಿ, ಪ್ರಿ. ಶಾಂತರಸ, ಪು. ಸಂ. ೩೬೮

ರಗಳೆಗಳಲ್ಲಿ ಕಥಾವಸ್ತು ಎಷ್ಟು ಮುಖ್ಯವೋ ಅದನ್ನು ರಗಳೆ ಛಂದಸ್ಸಿನಲ್ಲಿ ಕಥೆಯ ರೂಪದಲ್ಲಿ ಹೇಳಿರುವ ಭಾಷೆಯೂ ಅಷ್ಟೇ ಮುಖ್ಯವೆನಿಸುತ್ತದೆ.

**ಶೈಲಿ ನಿರ್ವಹಣೆ:-**

ಲೋಕದ ಸಾಮಾಜಿಕ, ಧಾರ್ಮಿಕ, ಚಾರಿತ್ರಿಕ ವಸ್ತುಗಳನ್ನು ಬುದ್ಧಿ ಕೌಶಲತೆಯಿಂದ ಇಲ್ಲವೇ ಆಲೋಚನಾ ಶಕ್ತಿಯಿಂದ ಭಾವನಾತ್ಮಕವಾಗಿ ರಚನೆಮಾಡುವ ರೀತಿಯು ಶೈಲಿ ಎನ್ನಿಸಿಕೊಳ್ಳುವುದು. ಬುದ್ಧಿಗೆ ಹೊಳೆದ ಆಲೋಚನೆಯನ್ನಾಗಲಿ ಮನಸ್ಸಿನಲ್ಲಿ ಮೂಡಿದ ಭಾವವನ್ನಾಗಲಿ ಮಾತಿನಲ್ಲಿ ಕಟ್ಟಿಡುವ ರೀತಿಯನ್ನು ಶೈಲಿ ಎನ್ನಬಹುದು. ತನ್ನ ಅನುಭವದಿಂದ ಒಂದು ಕೃತಿಯನ್ನು ಎಷ್ಟು ಸಹಜವಾಗಿ ರಚಿಸಿರುತ್ತಾನೋ ಅಷ್ಟೂ ಅತ್ಯುತ್ಕೃಷ್ಟವಾಗಿ ಆತನ ಶೈಲಿ ಮೂಡಿ ಬಂದಿರುತ್ತದೆ. ಪ್ರತಿಯೊಬ್ಬ ಕವಿಯ ರಚನಾಶೈಲಿಯ ವೈಶಿಷ್ಟ್ಯದಿಂದಾಗಿ ಕವಿಗಳಲ್ಲಿ ರಚನೆಗೊಂಡ ಸಾಹಿತ್ಯದಲ್ಲಿ ಭಿನ್ನತೆ ಇರುತ್ತದೆ. ಶೈಲಿಯು ಕವಿಯಿಂದ ಕವಿಗೆ ವ್ಯತ್ಯಾಸವೇ ಆಗಿರುತ್ತದೆ. ಭಿನ್ನ ಆಸಕ್ತಿ, ಅಭಿರುಚಿ ಕಲೆ ಇದಕ್ಕೆ ಕಾರಣವಾಗುತ್ತದೆ. ಹರಿಹರನ ರಚನಾ ಶೈಲಿ ನಿಜಕ್ಕೂ ಕನ್ನಡ ಸಾಹಿತ್ಯದ ಇತರ ಕವಿಗಳಿಗಿಂತ ವಿಭಿನ್ನತೆಯಿಂದ ಕೂಡಿತ್ತು.

ಹರಿಹರನ ಶೈಲಿಯ ಮುಖ್ಯ ಲಕ್ಷಣ ಉತ್ಸಾಹ. “ಉತ್ಸಾಹದಿಂದ ಮೆಚ್ಚಿ ಪೇಳ್ದಾ ಗಿರಿಜಾ ಕಲ್ಯಾಣ ಕಾವ್ಯಂ ಎಂಬ ಅವನ ಮಾತುಗಳಿಂದಲೇ ಇದು ತಿಳಿದು ಬರುತ್ತದೆ. ಅವನ ಗಮನಕ್ಕೆ ಬಂದ ಯಾವ ವಿಷಯವಾದರೂ ಅಡಗಿಸಲು ಅಸಾಧ್ಯವಾದ ಭಾವಗಳನ್ನು ಅವನಲ್ಲಿ ಉಂಟುಮಾಡುತ್ತದೆ. ಅವು ನಾನು ಮುಂದೆ ತಾನು ಮುಂದೆ ಎಂದು ತಮ್ಮೊಳಗೇ ಹೊಯ್ದಾಡುತ್ತ ಸ್ಪರ್ಧಿಸುತ್ತವೆ. ಇದರಿಂದ ಅವನ ಮನಸ್ಸು ವಿಧವಾಗಿ ಹೇಳಲು ಪ್ರಯತ್ನಿಸಿದರೂ ಅವನಿಗೆ ತೃಪ್ತಿಯಿಲ್ಲ. ಹೇಳಿದ್ದು ಸಾಲದು, ಇನ್ನೂ ಹೇಳಬೇಕು, ಇನ್ನೂ ಚೆನ್ನಾಗಿ ಹೇಳಬೇಕು ಎಂಬುದು ಅವನ ಮನಸ್ಸಿನ ಸ್ವಭಾವ. ಇದನ್ನೇ ಉತ್ಸಾಹ ಎಂದು ಕರೆದಿರುವುದು. ಅವನ ಕಾವ್ಯಗಳಲೆಲ್ಲಾ ಪದಗಳ, ಚಿತ್ರಗಳ, ನಾದಗಳ, ಭಾವಗಳ ಚೆಂಡಾಟವು ಕಾಣುತ್ತದೆ. ಪುಟ ಹೊಡೆದ ಚೆಂಡು ಕೊಂಚ ಎತ್ತರ ಹೋದರೆ ಅದು ಇನ್ನೂ ಮೇಲಕ್ಕೆ ನೆಗೆಯಲಿಲ್ಲವಲ್ಲ ಎಂದು ಮರಳಿ ಮರಳಿ ಹೊಡೆಯುವ ಹರಿಹರನ ಶೈಲಿ”೭ ಉತ್ಕೃಷ್ಟವಾದುದು. ಹರಿಹರನಲ್ಲಿ ಇಂತಹ ಕಾವ್ಯಶಕ್ತಿ, ಉತ್ಸಾಹ, ಭಕ್ತಿಯ ಹುರುಪಿನಿಂದ ನಿರಂತರವಾಗಿ ಮೂಡಿಬಂದಿದೆ.

---

**ಅಡಿಟಿಪ್ಪಣಿಗಳು : ೭. ಹಂಪೆಯ ಹರಿಹರ – ಡಿ.ಎಲ್.ಎನ್, ಮೈ.ವಿ.ವಿ., ಪು.ಸಂ. ೭೩–೭೭**

ಹರಿಹರನ ರಗಳೆಗಳನ್ನು ಓದುತ್ತಿದ್ದಾಗ, ಅದರಲ್ಲಿ ಬರುವ ಸಾಮಾನ್ಯ ಸಂಗತಿಗಳಾದ ಶಿವಪುರದ ಕಲ್ಪನೆ, ಶಿವಭಕ್ತಿ, ಕಾಯಕ ನಿಷ್ಠೆ, ಮೌಲ್ಯಪರಿಪಾಲನೆ, ನೇರ–ನಡೆ–ನುಡಿ, ಪ್ರತಿನಿತ್ಯದ ಜೀವನ, ಶಿವಭಕ್ತಿಯನ್ನು ಪರೀಕ್ಷಿಸಲೆಂದು ಬರುವ ವಯೋವೃದ್ಧನ ವೇಷಧಾರಿತ ಶಿವ, ಭಕ್ತನ ಗೆಲುವು ಪುಷ್ಪಕವಿಮಾನದ ಆಗಮನ, ಗಣಪದವಿ ಪ್ರಾಪ್ತಿ, ಕೈಲಾಸ ವರ್ಣನೆ, ಪಾರ್ವತಿ ಪರಮೇಶ್ವರರ ವರ್ಣನೆ, ವಿರೂಪಾಕ್ಷನ ಸ್ತುತಿ – ಹೀಗೆ ಎಲ್ಲಾ ಕಥೆಗಳಲ್ಲಿ ಹರಿಹರನು ಎಷ್ಟು ಉತ್ಸಾಹ ಭರಿತನಾಗಿ ಮೇಲಿನ ಎಲ್ಲಾ ವರ್ಣನೆಗಳು ಮನಮೋಹಕಗೊಳಿಸುವಂತೆ ರಚಿಸಿರುವ ಅವನ ಶೈಲಿ ಒಂದೇ ಎನಿಸಿದರೂ ವಿಶಿಷ್ಟವಾಗಿದೆ. ಈ ಕಾವ್ಯಗಳಲ್ಲಿ ಕಾಣುವ ಭಕ್ತಿಯ ಉತ್ಸಾಹ ಓದುಗನಿಗೆ ಒಂದು ದಿವ್ಯಾನುಭವ ಜೊತೆಗೆ ಶಕ್ತಿಯ ಮೊರೆ ಹೋಗಿ, ಕರ್ತವ್ಯನಿಷ್ಟನಾಗಿದ್ದು ತಾನೂ ಶಿವಾನುಭವವನ್ನು ಪಡೆಯಬೇಕೆಂಬ ಚಿಂತನೆ ಬೆಳೆಯಬಹುದು. "ಭಕ್ತಿಯು ರಗಳೆಗಳ ವಸ್ತು ಮಾತ್ರವಲ್ಲ, ಅದು ಶೈಲಿಯೂ ಆಗಿದೆ. ಈ ಭಕ್ತಿಯ ವರ್ಣನೆಯನ್ನು ಕಥನವು, ಉತ್ಪ್ರೇಕ್ಷೆ, ಪುನರುಕ್ತಿ ಭಾವವೇಶ ರೆಟೋರಿಕ್ಕುಗಳ ಮೂಲಕ ಪ್ರಕಟಿಸುತ್ತದೆ. ಭಕ್ತಿಯ ವರ್ಣನೆಯ ಸಂದರ್ಭ ಬಂದಾಗ ಹರಿಹರನು ಉತ್ಸಾಹದಿಂದ ಉಕ್ಕೇರುವ ಕಥನಕ್ರಮವನ್ನು ತರುತ್ತಾನೆ. ಅದು ಪುನರುಕ್ತಿ ಹಾಡುಗಾರಿಕೆ ಅರ್ಥರಹಿತವಾದ ಪ್ರಾಸಗಳ ಅನುರಣನ, ಆವೇಶಗಳಿಂದ ಕೂಡಿದ ಶೈಲಿ, ಓದುಗನು ಇಲ್ಲಿನ ಭಾಷೆಯ ಅರ್ಥಕ್ಕಿಂಥ ಅದರ ನಾದಮಯತೆ, ಸೌಂಡುಗಳಿಂದ ಪರವಶಗೊಳಿಸಬೇಕು ಎಂಬ ಉದ್ದೇಶದ ಶೈಲಿಯಾಗಿದೆ."[೮] ಭಕ್ತರಸ ಪ್ರತಿಪಾದನೆಗೆ ಅವನ ಶಬ್ದಗಳು ಹೇಗೆ ಸಹಕಾರಿಯಾಗಿವೆಯೆಂಬುದನ್ನು ಇಲ್ಲಿ ಪರಾಮರ್ಶಿಸಬಹುದು. ಯಾವ ಬಗೆಯ ನಿರೂಪಣೆಯನ್ನು ಅತ್ಯುತ್ಕೃಷ್ಟವಾಗಿ ಮಾಡಬಲ್ಲ ರಚನಾಸಾಮರ್ಥ್ಯ, ಕವಿತ್ವ ಶಕ್ತಿ ಇವನಿಗಿದೆ.

ಹರಿಹರನ ರಗಳೆಗಳ ಕಥೆಗಳು ಶಿವಭಕ್ತರ ಸಂಬಂಧವನ್ನು ಬಹಳ ಹತ್ತಿರಕ್ಕೆ ತಂದು ನಿಲ್ಲಿಸುತ್ತದೆ. ಅವನ ರಚನಾ ಶೈಲಿಯ ಉತ್ಸಾಹ ಹೇಗಿರುತ್ತದೆ ಎಂದರೆ ಒಮ್ಮೊಮ್ಮೆ ಅಲ್ಲಿ ಕಾಣುವ ಶಿವಶರಣರನ್ನು ಶಿವನು ತನ್ನ ತಾಯಿಯೆಂದೋ, ನಾನು ಅವರ ಮಗನೆಂದೋ ಅಥವಾ ಭಕ್ತನು ಶಿವನನ್ನು ತಂದೆಯೆಂದೋ, ತನ್ನನ್ನು ಮಗನೆಂದು ಪರಿಭಾವಿಸುವ ಮೂಲಕ ಕೌಟುಂಬಿಕ ಭಾವ ಸಂಬಂಧ ಅಲ್ಲಿ ಬೆಳೆದಿರುತ್ತದೆ. ಆತ್ಮೀಯ ಸಲುಗೆಯ ನಂಟು ಅಲ್ಲಿ ವಿವಿಧ ಮುಖಗಳಲ್ಲಿ ಬೆರೆತಿರುತ್ತವೆ. ಭಕ್ತರನ್ನು ಬಿಟ್ಟು ಶಿವನಿಗೆ ಮತ್ತೊಂದು ಸುಖವಿಲ್ಲ, ಹಾಗೆಯೇ ಭಕ್ತರಿಗೆ ಶಿವನನ್ನು ಬಿಟ್ಟು ಅನ್ಯ ಸುಖವಿಲ್ಲ ಎಂಬಂತೆ ಹಾಲು ಜೇನಿನಂತೆ ಅಬೇಧ ಕಲ್ಪನೆಯಲ್ಲಿ ಒಂದಾಗಿ ಬಿಡುತ್ತಾರೆ.

---

**ಅಡಿಟಿಪ್ಪಣಿಗಳು :** ೮. ಹರಿಹರನ ರಗಳೆಗಳು, ಸಾಂಸ್ಕೃತಿಕ ಮುಖಾಮುಖಿ, ಪು.ಸಂ. ೧೯೧

ಇವೆಲ್ಲಕ್ಕೂ ಕಾರಣ ಹರಿಹರನಲ್ಲಿರುವ ಭಕ್ತಿಯ ಉನ್ಮಾದ. ಈ ಉತ್ಸಾಹವೇ ಅವನ ರಚನಾಶೈಲಿಯ ಮುಖ್ಯ ಲಕ್ಷಣವೆನಿಸಿಕೊಳ್ಳುತ್ತದೆ.

"ಕಾವ್ಯಕ್ಕೊಂದು ಹೊಸ ಉದ್ದೇಶವನ್ನರಿತ ಹರಿಹರದೇವನಿಗೆ, ಅದು ನಡೆದು ಹೋಗಲು ಹೊಸ ಹಾದಿಯನ್ನು ತೆರೆದು ಶ್ರೇಯಸ್ಸು ಸಲ್ಲುತ್ತದೆ. ಒಂದು ಪರಂಪರೆ ಕೆಲವು ಜನ ಶಕ್ತಿಶಾಲಿ ಕವಿಗಳ ಪ್ರಯತ್ನದ ಫಲವಾಗಿ ಸಿದ್ಧಿಯ ತುತ್ತತುದಿಯನ್ನು ಮುಟ್ಟಿದ ಮೇಲೆ, ಅದನ್ನೇ ಅನುಸರಿಸಿ ಕಾವ್ಯರಚನೆಗೆ ತೊಡಗಿದ ಕವಿಗಳಲ್ಲಿ ಅಂತಹ ಶಕ್ತಿಯ ಕೊರತೆಯ ಫಲವಾಗಿಯೋ ಅಥವಾ ಯುಗಧರ್ಮದ ಅವಶ್ಯಕತೆಯ ಫಲವಾಗಿಯೋ ಸಾಹಿತ್ಯ ಹೊಸತನಕ್ಕೆ ಹಾತೊರೆಯುವುದು. ಹೊಸದರಲ್ಲಿ ಜೀವಂತ ಸಾಹಿತ್ಯಕ್ಕೆ ಅದು ಸಹಜ. ಆದರೆ ಅದನ್ನು ಗುರುತಿಸಿ ಅಂತಹ ಸಾಹಿತ್ಯ ನಿರ್ಮಿತಿಗೆ ಶ್ರೀಕಾರ ಹಾಕಬಯಸುವ ಕವಿಗೆ, ಸಂಪ್ರದಾಯ ಶರಣರ ವಿರೋಧವನ್ನು ಧೈರ್ಯವಾಗಿ ಎದುರಿಸಬಲ್ಲ ಕೆಚ್ಚೆದೆ ಬೇಕು, ಬಹುಜನಕ್ಕೆ ಒಪ್ಪಿತವಾಗಬಲ್ಲ ಹೊಸ ಬಗೆಯ ಸಾಹಿತ್ಯ ರಚನೆ ಬೇಕಾದ ಕವಿತ್ವಶಕ್ತಿಬೇಕು. ಉತ್ಸಾಹ ಚಿಲುಮೆಯಂತೆ ಚಿಮ್ಮುತ್ತಿರಬೇಕು. ಹರಿಹರನಲ್ಲಿ ಅಂತಹ ಕಾವ್ಯಶಕ್ತಿ, ಅಮಿತೋತ್ಸಾಹ ಸಾಹಸ ಪ್ರವೃತ್ತಿಗಳು ಮುಪ್ಪುರಿಗೊಂಡುದರಿಂದಲೇ ಕನ್ನಡ ಸಾಹಿತ್ಯದಲ್ಲಿ ಹೊಸ ಹಾದಿಯನ್ನು ತೆರೆದು ಯುಗಪುರುಷನೆಂಬ ಅರ್ಹತೆಗೆ ಪಾತ್ರನಾದ."೬ ಹೀಗೆ ಜೀವನದ ವಿಕಾಸವನ್ನು ಮಾಡಿರುವ ಭಕ್ತಿ ಸಂಪನ್ನನಾದ ಕವಿ, ಹರಭಕ್ತಿ ನಿಷ್ಠೆಗಳಿಂದ ಶಿವಭಕ್ತರ ಅಂತರಂಗ ದರ್ಶನವನ್ನು ಮಾಡಿಸಿದ್ದಾನೆ. ಶಿವ-ಭಕ್ತರ ಸಂಬಂಧ ನೆಲೆಯನ್ನು ಎಳೆಎಳೆಯಾಗಿ ತಿಳಿಸಿದ್ದಾನೆ.

## ೫.೩. ರಗಳೆಗಳ ವಿನ್ಯಾಸಗಳು :-

ಹರಿಹರನ ರಗಳೆಗಳಲ್ಲಿ ರಗಳೆ ಛಂದಸ್ಸಿನೊಂದಿಗೆ ಗದ್ಯ ಮಿಶ್ರಿತವಾಗಿ ಬರುವುದರಿಂದ, ಅವೆರಡರ ನಡುವೆ ಹೆಚ್ಚು ವ್ಯತ್ಯಾಸ ಬೇಧವಿಲ್ಲದೆ ಸಮಾಂತರವಾಗಿ ಹೊಂದಿಕೊಂಡಂತೆ ಮೂಡಿಬಂದಿದೆ ಆದ್ದರಿಂದ ಗದ್ಯವೂ ತನ್ನದೇ ಆದ ಶೈಲಿಯಲ್ಲಿ ಬರುತ್ತದೆ. ಹರಿಹರನು ಪ್ರಮಾಣಬದ್ಧ ಭಾಷೆಯ ರೂಪದಲ್ಲಿ ಗದ್ಯವನ್ನು ಬರೆದಿರುವುದರಿಂದ ದೇಸಿ ಛಂದಸ್ಸಿನಲ್ಲಿ ರಗಳೆಗಳು ನಿರ್ಮಿತವಾಗಿರುವುದರಿಂದ ಸಾಮಾನ್ಯ ಜನಸಾಮಾನ್ಯರಿಗೆ ಪ್ರಿಯವಾಗಿರುವುದಕ್ಕೆ ಕಾರಣವಾಗಿರಬಹುದು.

---

ಅಡಿಟಿಪ್ಪಣಿಗಳು : ೬. ರಸಿಕಚಕ್ರಿ ಹರಿಹರದೇವ, ಸಂ. ಬಿ.ಸಿ.ಜವಳಿ, ಶ್ರೀ. ಶಾಂತರಸ, ಪು.ಸಂ. ೩೩೫-೩೩೭

ರಗಳೆಯೆಂದರೆ ಒಂದು ಪದ್ಯಜಾತಿಯಾಗಿರುತ್ತದೆ. ಜನಸಾಮಾನ್ಯರಿಗೂ ತಿಳಿಯುವ ಮಾದರಿಯಲ್ಲಿ ಸಾಹಿತ್ಯ ತಲುಪಬೇಕೆಂಬ ಉದ್ದೇಶದಿಂದ ಕಾವ್ಯವನ್ನು ರಚಿಸಿದ ಹರಿಹರನು ಕನ್ನಡ ದೇಸಿ ಭಾಷೆಗೆ ಒಲವು ತೋರಿದ್ದಾನೆ ವಿನಃ ಸಂಸ್ಕೃತ ಭಾಷೆಯ ಶಬ್ದಗಳನ್ನು ಹೆಚ್ಚಾಗಿ ಬಳಸಲು ಹೋಗಿಲ್ಲ. ೯-೧೦ ನೇ ಶತಮಾನದ ಕವಿಗಳ ಸಾಹಿತ್ಯವನ್ನು ಪೂರ್ವಸಿದ್ಧತೆ ಇಲ್ಲದೆ ಓದಿ ಗ್ರಹಿಸಿಕೊಳ್ಳಲು ಸಾಧ್ಯವಿಲ್ಲ. ಆದರೆ ಹರಿಹರನ ಸಾಹಿತ್ಯ ಕೃತಿ ಎಲ್ಲರ ಕೈಗೆಟುಕುವ ಹಾಗೆ ಮೂಡಿರುವುದೇ ವಿಶೇಷ ಎಂಬಿಷ್ಟು ವಿಚಾರಗಳನ್ನು ಪೂರ್ವ ಮತ್ತು ಮಧ್ಯಕಾಲೀನ ಸಾಹಿತ್ಯ ಚರಿತ್ರೆಯ ಆಧಾರದ ಮೇಲೆ ಹೇಳಬಹುದು. ಜನಸಾಮಾನ್ಯರಲ್ಲಿ ಸಾಹಿತ್ಯದ ಆಸಕ್ತಿಯನ್ನು ಬೆಳೆಸುವ ಮೂಲಕ ಶಿವಭಕ್ತಿಯನ್ನು ಹುಟ್ಟುಹಾಕಿ, ವೀರಶೈವಧರ್ಮವನ್ನು ಮೆರೆಸುವಂತಹ ಧಾರ್ಮಿಕ ನಿಷ್ಠೆಯ ಮನೋಭಾವ ಎದ್ದು ಕಾಣುತ್ತದೆ. "ಹರಿಹರನ ದೃಷ್ಟಿ ಕೇವಲ ವೀರಶೈವದೃಷ್ಟಿ; ಅದರಲ್ಲಿಯೂ ಸ್ಥಳಾಂತರದಲ್ಲಿ ಎಳ್ಳಷ್ಟೂ ಗುಣವನ್ನು ಕಾಣದ ಧರ್ಮಾಂಧತೆಯ ದೃಷ್ಟಿ. ಸಾಲದುದಕ್ಕೆ ಶ್ರೋತೃಗಳು ಸಾಮಾನ್ಯಜನರು."೧೦ ಕಾರಣ ಶತಮಾನಗಳಿಂದ ಸ್ವತಂತ್ರ ಅಸ್ತಿತ್ವವನ್ನು ಕಳೆದುಕೊಂಡಿದ್ದ ಜನವರ್ಗ ಭಕ್ತಿ-ಕ್ರಿಯೆ-ಜ್ಞಾನ-ನಿಷ್ಠೆಯ ಮೂಲಕ ಬೆಳೆಯುವ-ಬೆಳಗುವ ವೈಶಿಷ್ಟ್ಯತೆ ಹರಿಹರನ ರಗಳೆಯ ಆಶಯವಾಗಿದೆ.

**೧. ಮಂದಾನಿಲ ರಗಳೆಯ ಒಂದು ಉದಾಹರಣೆ :**

ಶಿವನಂ ಕಂಡಾ ಭಕ್ತಂ ಕುಣಿಯಲು
ಶಿವಭಕ್ತನ ಕೂಡಭವಂ ಕುಣಿಯಲು
ಇರ್ವರನೀಕ್ಷಿಸಿ ಗಣತತಿ ಕುಣಿಯಲು
ಸರ್ವ ಸ್ಥಾವರ ಜಂಗಮವಾಡಲು
ಮಡಕೆಯ ಶಬ್ದಕ್ಕಾಡುತ್ತಿರ್ದಂ
ಮೃಡನಖಿಳಂ ಬೆರಸಾಡುತ್ತಿರ್ದಂ
ನಾನಾ ಮುಖದಾನಂದಂ ಪುಟ್ಟಲು
ನಾನಾ ರವವಂಬರವಂ ಮುಟ್ಟಲು

– (ಕುಂಬಾರ ಗುಂಡಯ್ಯನ ರಗಳೆ) ೧೧

ಅಡಿಟಿಪ್ಪಣಿಗಳು : ೧೦. ಹರಿಹರದೇವ, ಎನ್. ಬಸವರಾಧ್ಯ, ಐ.ಬಿ.ಎಚ್. ಪ್ರಕಾಶನ, ಪು.ಸಂ. ೨೦೨

೧೧. ಹರಿಹರನ ರಗಳೆಗಳು – ಸಂ.ಡಾ॥ ಎಂ.ಎಂ. ಕಲಬುರ್ಗಿ, ಪು.ಸಂ. ೨೩೦

೨. ಉತ್ಸಾಹ ರಗಳೆಗೊಂದು ಉದಾಹರಣೆ:-

ಪಾಪವೆಂಬ ಮಲಿನ ಮನದ ಸೀರೆಯಂ ತೆರಳ್ಚಿ ಕಟ್ಟಿ
ಕೋಪವೆಂಬ ಕತ್ತೆ ನಿಲಲು ಬೆನ್ನ ಮೇಲೆ ಮಾಣದೊಟ್ಟಿ
ನಡೆದು ಭವನ ಭಕ್ತಿರಸದ ಹೊಳೆ ತಡಿಯ ಬಳಿಗೆ ಬಂದು
ಮೃಡನೆ ಕರಣೆನುತ್ತೆ ದೇಹವೆಂಬ ಕಲ್ಲ ಬಳಿಗೆ ಬಂದು
ತಾಪತ್ರಯಗಳೆಂಬ ಕಿಚ್ಚಿನಿಂದೆ ಕುದಿಸೆ ಕುದಿವುತಿರಲು
ತಾಪವಾರೆ ವಸ್ತ್ರಕುಲಮನಲ್ಲಿ ಪಿಡಿದು ತೊಲೆವುತಿರಲು
ಒಗೆದನೊಗೆದನಮಮ ಹರನ ಪರಮಭಕ್ತಿರಸದೊಳೊಗೆದೆ

–(ತಿರುಕುರುಂಪೆತೊಂಡರ ರಗಳೆ) ೧೨

೩. ಲಲಿತರಗಳೆಯ ಉದಾಹರಣೆ:-

ಪೆಟ್ಟಿಗೆಯನೊಮ್ಮವರ ಮೋರೆಗಳನೊಮ್ಮೊಮ್ಮೆ
ದಿಟ್ಟಿಸಿಯೆ ನೋಡುತಂ ಮರುಳಾಗುತೊಮ್ಮೊಮ್ಮೆ
ಲೇಸು ಲೇಸೆನುತೆ ಪೆಟ್ಟಿಗೆಯ ನೋಡುಲತಲಂದು
ಬೀಸುಟನಲ್ಲಿಂದೆ ಹೊರಯಿಂಕೆ ಕೋಪಿಸಿ ನಿಂದು
ಅಹಾಹ ಹಸನಾಯ್ತು ಕುಡಿರೇಕೆ ಪಾತ್ರೆಯಂ
ಓಹೋಹೊ ಇಂತು ಕೊಂಡವರುಂಟೆ ಪಾತ್ರೆಯಂ
ಏನೊ ಪೆಟ್ಟಿಗೆಯ ತಿಂದುದೋ ನೆಗಳು ನುಂಗಿತೋ
ಮೋನದಿಂದಿರ್ದನಿತರೊಳು ಪಾತ್ರೆ ಇಂಗಿತೋ
ಇನ್ನೆನ್ನ ಮೇಲೆ ತಪ್ಪಿಲ್ಲ ತಪ್ಪಿಲ್ಲೆನುತೆ

–(ತಿರುನೀಲಕಂಠರ ರಗಳೆ) ೧೩

"ಎಲ್ಲ ಕವಿಗಳೂ ಸಾಮಾನ್ಯವಾಗಿ ಉತ್ಸಾಹಶೀಲರೆ; ಆದರೆ ಹರಿಹರ ಅತ್ಯಾಭಿಮಾನಿ, ಅತ್ಯುತ್ಸಾಹಿ. ಅವನಲ್ಲಿ ಉತ್ಸಾಹೋತ್ಕರ್ಷ, ನಿರೋಧ ನಿಗ್ರಹಗಳನ್ನು ಗಣನೆಗೆ ತಾರದೆ ಎದ್ದು, ಅಂಕೆಹತೋಟಿಗಳನ್ನು ಮೀರಿ ಬೆಳೆದು ಉದ್ವೇಗಗೊಂಡು, ಭಾವಾತಿರೇಕಕ್ಕೆ ತಿರುಗಿ, ಹರ್ಷೋನ್ಮಾದದ ಹತ್ತಿರ ಹತ್ತಿರ ಸುಳಿದಾಡುತ್ತದೆ. ಕಾವ್ಯದ ಆ ಭಾಗ, ಈ ಭಾಗವನ್ನು ಉದಾಗೊಡ್ಡುವ ಗೊಡವೆ ಏತಕ್ಕೆ? ಇಡೀ ಕಾವ್ಯವೇ ಉದಾಹರಣೆ, ಅದರಲ್ಲಿಯೂ ರಗಳೆ" ೧೪ ಹರಿಹರನಲ್ಲಿ ಅಧಿಕ ಉತ್ಸಾಹ, ಅಧಿಕ ಭಕ್ತಿಯಿಂದ ಕೂಡಿದ ಹುರುಪು ಈ ಶ್ರದ್ಧೆಯುತವಾದ ಕೆಲಸವನ್ನು ಮಾಡಿಸಿದೆ.

---

ಅಡಿಟಿಪ್ಪಣಿಗಳು : ೧೨. ಹರಿಹರನ ರಗಳೆಗಳು – ಸಂ.ಡಾ|| ಎಂ.ಎಂ. ಕಲಬುರ್ಗಿ, ಪು.ಸಂ. ೭೯
೧೩. ಹರಿಹರನ ರಗಳೆಗಳು – ಸಂ. ಡಾ|| ಎಂ.ಎಂ. ಕಲಬುರ್ಗಿ, ಪು.ಸಂ. ೩
೧೪. ಶೈಲಿ ೨ – ಎಸ್.ವಿ.ರಂಗಣ್ಣ, ಮೈಸೂರು, ಪು.ಸಂ. ೭೯

ಹರಿಹರನ ಪ್ರತಿಭೆ ಭಕ್ತಿ ಪ್ರಪಂಚದಲ್ಲಿ ಉದ್ದೀಪನಗೊಂಡಂತೆ ಲೌಕಿಕ ಪ್ರಪಂಚದಲ್ಲಿ ಆಗದು. ಅವನ ಪ್ರತಿಭೆಯನ್ನು ಒಂದು ಗಾಳಿಪಟಕ್ಕೆ ಹೋಲಿಸಬಹುದು. ಆವೇಶದ ಗಾಳಿ ಬೀಸಿದಾಗ ಅದು ಮೇಲೇರುತ್ತದೆ. ಆವೇಶ ಮಿತಿಮೀರಿದಾಗ ಅತೀತದ ಹತ್ತಿರಕ್ಕೂ ಹೋಗುತ್ತದೆ. ಆದರೆ ಅದು ಕಿತ್ತುಕೊಂಡು ಎಲ್ಲಿ ಬೇಕೆಂದರಲ್ಲಿ ಹೋಗುವುದಿಲ್ಲ ಏಕೆಂದರೆ ಆ ಗಾಳಿಪಟವನ್ನು ಹಿಡಿದು ಆಡಿಸುತ್ತಿರುವವನು ಪಂಪಾ ವಿರೂಪಾಕ್ಷ, ಹರಿಹರ ನಿಜವಾಗಿಯೂ ಮಹಾಕವಿ. ಅವನು ಕನ್ನಡದ ಅತಿಶ್ರೇಷ್ಠ ಕವಿಗಳಲ್ಲಿ ಒಬ್ಬನೆಂದರೆ ಸಂದೇಹವಿಲ್ಲ" ೧೫ ಎಂಬ ಮಾತು ಅರ್ಥಪೂರ್ಣವಾದುದು. ಕನ್ನಡ ಸಾಹಿತ್ಯಕ್ಕೆ ಹರಿಹರ ನೀಡಿದ ಕಾಣಿಕೆ ಬಹಳ ಮಹತ್ವವುಳ್ಳದ್ದು.

ಹರಿಹರನ ಶೈಲಿಯಲ್ಲಿ ಹೊಸತನವಿದೆ. ಏಕೆಂದರೆ ಅದು ಶಿವಭಕ್ತರ ಕಥಾನಿರೂಪಣೆಗೆ ಮೀಸಲಾದವು. ಪ್ರತಿಯೊಂದು ಕಥೆಯಲ್ಲೂ ಶಿವಭಕ್ತ, ದೇಶ-ಊರು, ಕಾಯಕ, ನಿಷ್ಠೆ, ಶಿವನ ಪರೀಕ್ಷೆ, ಭಕ್ತನ ವಿಜಯ ಮತ್ತು ಕೈಲಾಸ ಪ್ರವೇಶ-ಗಣಪದವಿ ಪ್ರಕಟವಾಗುವ ಸನ್ನಿವೇಶಗಳು ಒಂದರ ನಂತರ ಒಂದು ಕಣ್ಮುಂದೆ ಸುಳಿದುಹೋಗುವ ಕಥಾ ವಾಸ್ತವ ಚಿತ್ರಣಗಳಾಗಿವೆ. ಇವೆಲ್ಲಾ ಹೀಗೆ ಏಕರೀತಿಯಿಂದ ಕೂಡಿದ್ದರೂ ಕಥೆಯಿಂದ ಕಥೆಗೆ ಭಿನ್ನ ಭಕ್ತಿ-ಭಾವ, ಭಿನ್ನ ಕಾಯಕ ನಿಷ್ಠೆ ವಿಭಿನ್ನವಾದ ಸಂದರ್ಭೋಚಿತ ಸನ್ನಿವೇಷಗಳೇ ನಿರ್ಮಾಣವಾಗಿರುತ್ತದೆ. "ಅವನ ಶೈಲಿಯಲ್ಲಿ ಪ್ರೀತಿ ಸಂತೋಷ ಸೂಚಕವಾದ ಕ್ರಿಯಾಪದಗಳ ಮಾಲಿಕೆ, ಉದ್ಗಾರ-ಸ್ವರಾನುಕರಣಗಳ ವೆಗ್ಗಳ ಪುನರುಕ್ತಿಗಳ ಹೇರಳ, ಒಂದು ಮಾತನ್ನು ಹಲವು ತರದಿಂದ ಹೇಳಿಯೂ ದಣಿಯದ ಪದಪುಂಜ, ಇವನ್ನು ಎಲ್ಲಾ ಕಡೆಗೆ ಗುರುತಿಸಬಹುದು. ಗದ್ಯಪದ್ಯವೆರಡರಲ್ಲಿಯೂ ವಾಣಿ ಸಹಜ ಸಂಪನ್ನವಾಗಿ ನೆರೆ ಬಂದ ತೊರೆಯಾಗಿ ಹರಿಯುತ್ತದೆ. ಅದರಲ್ಲಿ ತೇಲುವ ಕಸಕಡ್ಡಿಗಳಂತೆ ದೋಷಗಳಿದ್ದರೂ ಅವು ಕಣ್ಣೊತ್ತುವುದಿಲ್ಲ! ಅವುಗಳಿಂದ ಒಮ್ಮೊಮ್ಮೆ ಕಳೆಯೇರುತ್ತದೆ."೧೬ ಹೀಗೆ ಹರಿಹರನು ಭಕ್ತಿಯಾಧಿಕ್ಯ ಮತ್ತು ಉತ್ಸಾಹದಿಂದ ಅತ್ಯಂತ ಶಾಂತಿಯುತವೂ, ಶಕ್ತಿಯುತವೂ ಹಾಗೂ ಭಾವಪೂರ್ಣಬದ್ಧವಾದ ರಗಳೆಗಳನ್ನು ರಚಿಸಿ ಕನ್ನಡದ ಶ್ರೇಷ್ಠ ಕವಿಗಳ ಸಾಲಿನಲ್ಲಿ ನಿಲ್ಲುತ್ತಾನೆ.

ಅಡಿಟಿಪ್ಪಣಿಗಳು : ೧೫. ವಚನ ಪಿತಾಮಹ, ಹರಿಹರ ಕವಿ ಮತ್ತು ಇವನ ಕೆಲವು ವಚನಗಳು, ಡಿ.ಎಲ್.ನರಸಿಂಹಾಚಾರ್, ಪು. ಸಂ. ೩೩೩-೩೩೫

೧೬. ಕನ್ನಡ ಸಾಹಿತ್ಯ ಚರಿತ್ರೆ – ರಂ.ಶ್ರೀ.ಮುಗಳಿ, ಪು. ಸಂ. ೧೭೯

# ಅಧ್ಯಾಯ : ೩

## ಸಮಾರೋಪ

ಸರ್ವರಿಗೂ ಹಿತವನ್ನು ಉಂಟು ಮಾಡುವುದೇ ಸಾಹಿತ್ಯ. ಸಾಹಿತ್ಯ ಜನತೆಯ ಬದುಕಿನ ಪ್ರತಿಬಿಂಬವಾಗಿದೆ. ಇದು ಶಬ್ದಾರ್ಥಗಳನ್ನು ಬಳಸಿ ಹೊರಹೊಮ್ಮಿಸಿದ ಬದುಕಿನ ಅಭಿವ್ಯಕ್ತಿಯೇ ಆಗಿದೆ. ಭಾರತೀಯರ ಬದುಕು ಮತ್ತು ಸಾಹಿತ್ಯ ಮೊದಲಿನಿಂದ ಧಾರ್ಮಿಕ ಪ್ರಧಾನವಾದದ್ದೇ ಹೌದು. ಧರ್ಮದ ನೆಲೆ ಸಾಹಿತ್ಯವನ್ನು ಹಿತವಾಗಿಸಿದ್ದು ಮಾತ್ರವಲ್ಲದೆ, ತತ್ಕಾಲೀನ ಜೀವನದ ಸಾಕ್ಷ್ಯವನ್ನಾಗಿಸಿತು ಕೂಡ. ಸಾಹಿತ್ಯದಲ್ಲಿ ಆಯಾಯಾ ಕಾಲದ ಬದುಕಿನ ಮೌಲ್ಯಗಳು ಪ್ರತಿಬಿಂಬಿತವಾಗಿವೆಯಾದರೂ ಎಲ್ಲಾದಕ್ಕೂ ಧಾರ್ಮಿಕತೆಯ ಕವಚವಿದ್ದೇ ಇದೆ. ಯಾವುದೇ ಮತಧರ್ಮದ ಪ್ರಸಾರ, ದೈವಿಕ ನೆಲೆಯನ್ನು ಭಕ್ತಿ-ಭಾವದ ಮೂಲಕ ಪ್ರಚಲಿತಗೊಳಿಸುವ ಮೂಲಕ ಜನತೆಯ ಸಂಪರ್ಕಕ್ಕೆ ತರುವ ಉದ್ದೇಶದಿಂದ ಸಾಹಿತ್ಯದಲ್ಲಿ ಕವಿಯಾದವನು ಜೀವನದರ್ಶನವನ್ನು ಅಭಿವ್ಯಕ್ತಿಸುತ್ತಾನೆ. ಸಾಹಿತಿಯಾದವ ಜೀವನವನ್ನು ತೆರೆದ ಕಣ್ಣಿನಿಂದ ಮತ್ತು ಭಕ್ತಿಯ ನೆಲೆಯಿಂದ ನೋಡಿ ಅಲ್ಲಿ ತಾನು ಕಂಡ ಕಾಣ್ಕೆಯನ್ನು ಹೃದಯದೆರೆದು ಸ್ವಾಗತಿಸಿ ಸಂಗ್ರಹಿಸುತ್ತಾನೆ. ಅನಂತರ ತನ್ನ ಸಂಸ್ಕಾರ ಬಲದಿಂದ ಅವನ್ನು ಪರಿಷ್ಕರಿಸಿ, ಯೋಗ್ಯವಾದುದನ್ನು ಸ್ಥಿತಗೊಳಿಸಿ, ಪ್ರಸಾರ ಮಾಡುತ್ತಾನೆ. ಸಾಹಿತ್ಯವೆಂದರೆ ಬದುಕಿನಲ್ಲಿ ಶ್ರದ್ಧೆಯನ್ನು ಹುಟ್ಟಿಸುವುದು. ಮನುಷ್ಯನಲ್ಲಿ ತನ್ನ ಅರಿವನ್ನು ಮೂಡಿಸಿ ಬದುಕಲು ಪರಮಾತ್ಮನ ಪ್ರೇರಣೆಯೇ ಮುಖ್ಯವಾಗಿದೆ ಎಂಬ ದರ್ಶನವನ್ನು ಮನವರಿಕೆ ಮಾಡಿಕೊಡುತ್ತದೆ.

ಎರಡು ಸಾವಿರ ವರ್ಷಗಳ ದೀರ್ಘ ಪರಂಪರೆಯುಳ್ಳ ಕನ್ನಡ ಸಾಹಿತ್ಯದಲ್ಲಿ ಚಂಪು ಕಾಲಘಟ್ಟದ ನಂತರ ಬಂದ ವಚನ ಸಾಹಿತ್ಯ ಬಿಗಿಯಾದ ಮಾರ್ಗದ ಹಾದಿಯಿಂದ ಕವಲೊಡೆದು ನಡುಗನ್ನಡದ ದೇಸಿ ರೂಪದಲ್ಲಿ ವಚನಕಾರರು ರಚಿಸಿದ ವಚನಗಳ ಮೂಲಕ ಜನತೆಯ ಮನವೊಲಿಸಿದುದು ಗಮನಾರ್ಹ. ಶರಣರ ಈ ಆರ್ಥಿಕ ಕ್ರಾಂತಿ ವರ್ಗರಹಿತ ವ್ಯವಸ್ಥೆಯ ಮೂಲಕಾಯಕವಾಗಿತ್ತು. ವಿಶ್ವದ ನಾಗರೀಕರಲ್ಲಿ ಪ್ರತಿಯೊಬ್ಬರೂ ಪರಾವಲಂಬಿ ಜೀವನ ಮಾಡದೆ ಪರರ ಪರಿಶ್ರಮದಲ್ಲಿ ಪಾಲುದಾರರಾಗಿ ಬಾಳದೆ ಸ್ವಾವಲಂಭಿಗಳಾಗಿ, ಕಾಯಕ ಜೀವಿಗಳಾಗಿ ಬಾಳಬೇಕೆಂದು ಕರೆಕೊಟ್ಟರು.

ಕನ್ನಡ ಸಾಹಿತ್ಯದಲ್ಲಿ ವಚನಗಳು ಭಕ್ತಿ ಸಾಹಿತ್ಯ ಪರಂಪರೆಯ ಒಂದು ಘಟ್ಟವಾಗಿದೆ. ಜನರಲ್ಲಿ ಮೌಢ್ಯ, ಅಜ್ಞಾನ, ಗೊಡ್ಡು ಸಂಪ್ರದಾಯ ಕಂದಾಚಾರಗಳು ಮನೆಮಾಡಿಕೊಂಡಿತ್ತು, ಇದಲ್ಲದೆ ವರ್ಗ-ವರ್ಣ-ಲಿಂಗ ಅಸಮಾನತೆ ಎದ್ದು ಕಾಣುತ್ತಿತ್ತು ಹೀಗೆ ಅಸಮಾನತೆಯಲ್ಲಿ ಬೆಂದುಹೋಗಿದ್ದ ಜನಜೀವನಕ್ಕೆ ಹಿತವನ್ನುಂಟುಮಾಡುವ ಕಾರ್ಯವನ್ನು ಕೈಗೊಂಡ ವಚನಕಾರರು ಸಾಮಾಜಿಕ ಭಾಷಾಕ್ರಾಂತಿಯನ್ನುಂಟು ಮಾಡಿ ಎಲ್ಲರಿಗೂ ಅರ್ಥವಾಗುವ ಜನಭಾಷೆಯಲ್ಲೇ ಧರ್ಮದ ಸಾರವನ್ನು ಮತ್ತು ಬದುಕಿನ ಅರ್ಥವನ್ನು ತಿಳಿಯಹೇಳಿದರು. ವಚನಗಳು ಎಂಬುದು ಶರಣರ ಬದುಕಿನ ಅನುಭವದಿಂದ ಮೂಡಿಬಂದವುಗಳು. ಬಸವಣ್ಣ, ಜೇಡರ ದಾಸಿಮಯ್ಯ, ಅಲ್ಲಮಪ್ರಭು, ಚನ್ನಬಸವಣ್ಣ, ಅಕ್ಕಮಹಾದೇವಿ, ಸಿದ್ಧರಾಮೇಶ್ವರ, ಹೀಗೆ ನೂರಾರು ಶರಣ-ಶರಣೆಯರು ತಮ್ಮ ಆದರ್ಶದಿಂದ ಭಕ್ತಿ ಮಾರ್ಗದಲ್ಲಿ ತಾವು ಕಂಡುಕೊಂಡ ಜೀವನ ಸತ್ಯ, ಮೌಲ್ಯಗಳನ್ನು, ಲಿಂಗಪೂಜೆ, ದಾಸೋಹ, ಕಾಯಕ ನಿಷ್ಠೆ, ಸಮಾಜಾಭಿವೃದ್ಧಿಗೆ ಅಗತ್ಯವಾದ ವೈಚಾರಿಕ ನಿಲುವು ಮತ್ತು ಲೋಕಕಲ್ಯಾಣದ ಕನಸು ಅವರ ಆಶಯವಾಗಿ ಸಾರಿದರು. ಹೀಗೆ ಬಸವಣ್ಣನವರು ಸಮಗ್ರ ಕ್ರಾಂತಿಯ ಜಾಗೃತಿಯನ್ನು ಮಾಡಿ ಜನಜಾಗೃತಗೊಳಿಸಿದರು. ಈ ಸಂದರ್ಭದಲ್ಲಿ ಬೆಂಬಲವಾಗಿ ನಿಂತ ಶರಣರೂ ಅಷ್ಟೇ ಮುಖ್ಯರೆನಿಸಿಕೊಳ್ಳುತ್ತಾರೆ. ತಮ್ಮ ಆಧ್ಯಾತ್ಮಿಕ ಕ್ಷೇತ್ರದ ಆಶ್ರಯದಲ್ಲಿ ಕಾಯಕ ತತ್ವ ಬೋಧನೆ, ಸಾಧನೆಯನ್ನು ಕಡ್ಡಾಯಗೊಳಿಸಿದರು. ಭಕ್ತಿ ಭಂಡಾರಿ ಬಸವಣ್ಣನವರ "ಕಾಯಕವೇ ಕೈಲಾಸ" – "ಸತ್ಯಶುದ್ಧಕಾಯಕ" ತತ್ವದಂತೆ ದುಡಿದು ತಿನ್ನಬೇಕೆಂಬ ಛಲವನ್ನು ಮೂಡಿಸಿತು, ಯಾವುದೇ ಕಾಯಕವಾಗಲಿ ಮೋಸ, ವಂಚನೆಗಳಿಲ್ಲದೆ ಮಾಡಬೇಕು. ಕಾಯಕ ಸೂತ್ರದಲ್ಲಿ ಎಲ್ಲರೂ ಸಮಾನ, ಇಲ್ಲಿ ಮೇಲು-ಕೀಳು ಎಂಬುದಿರಲಿಲ್ಲ, ಬಸವಣ್ಣನವರು ಮತ್ತು ಅವರ ಸಮಕಾಲೀನ ಶರಣರು ವರ್ಗರಹಿತ ಸಮಾಜ ನಿರ್ಮಾಣಕ್ಕಾಗಿ ಕಾಯಕ ದಾಸೋಹವೆಂಬ ಸೂತ್ರಗಳನ್ನು ರೂಪಿಸಿದ್ದರು. ಲಿಂಗ ತಾರತಮ್ಯ ಬೇಧವೆಣಿಸದೆ ಬಸವಣ್ಣನವರ ಮಾನವೀಯ ಮೌಲ್ಯದ ಮಹಾಮನೆಗೆ ಅಸಂಖ್ಯಾತ ಶೋಷಿತ ವರ್ಗದಿಂದ ಬಂದ ಶಿವಶರಣರು, ವಚನಗಾರ್ತಿಯರಿಗೂ ಅವಕಾಶವಿದ್ದಿದ್ದರಿಂದ ವರ್ಗ-ವರ್ಣ-ಲಿಂಗ ಬೇಧ ರಹಿತ ಸಮಾಜನಿರ್ಮಾಣ ಸಮತಾತತ್ವದ ಸಂದೇಶ ಸಾರಿದರು.

ವಚನ ಸಾಹಿತ್ಯದ ಕ್ರಾಂತಿಯ ಪ್ರಭಾವವು ೧೨ ನೇ ಶತಮಾನದ ಪ್ರಮುಖ ಕವಿಯಾಗಿದ್ದ ಹರಿಹರನ ಮೇಲೆ ಗಾಢವಾಗಿ ಉಂಟಾಗಿ ಕನ್ನಡನಾಡಿನ ಶಿವಶರಣರ ಮತ್ತು ತಮಿಳುನಾಡಿನ ೬೩ ಪುರಾತನರ ಜೀವನವನ್ನು ಆಧರಿಸಿ ಸುಮಾರು ೧೨೦ಕ್ಕೂ ಅಧಿಕ ರಗಳೆ ಕಾವ್ಯಗಳನ್ನು ರಚಿಸಿದ್ದಾನೆ.

ಹರಿಹರನ ಶೈಲಿಯಲ್ಲಿ ಭಕ್ತಿಯ ಸೊಬಗು ಉದ್ಗಾರ, ಪುನರುಕ್ತಿಗಳು ಹೇರಳವಾಗಿ ಕಂಡು ಉತ್ಸಾಹ ಪ್ರಧಾನ ಗುಣವಾಗಿ ಕಾಣುತ್ತದೆ. ಹರಿಹರನ ರಗಳೆಗಳೆಂಬ ನವೀನ ಪ್ರಯೋಗಕ್ಕೂ ಶಿವಕಥೆಗಳ ಬರಹದಲ್ಲಿ ಶಿವ-ಭಕ್ತರ ಸಂಬಂಧಕ್ಕೂ ಇರುವಂತಹ ಅವಿನಾಭಾವ ಸಂಬಂಧವನ್ನು ಹುಡುಕುವ ಉದ್ದೇಶದಿಂದ ಭಕ್ತಿಯ ಮೂಲನೆಲೆ ಮತ್ತು ಹಲವು ಮುಖಗಳನ್ನು ಕುರಿತು ಅಧ್ಯಯನ ನಡೆಸಿ ಸೂಕ್ತ ನಿಲುವನ್ನು ತಾಳಿರುತ್ತೇನೆ.

ಹರಿಹರನ ರಗಳೆಗಳಲ್ಲಿ ಶಿವನ ಭಾವಪೂರ್ಣ ಒಳಸ್ಪಂದನವೇ ಪರಿಪೂರ್ಣ ಶಕ್ತಿಯೆಂಬಂತಿದೆ. ಈ ಶಕ್ತಿಯನ್ನು ಹರಿಹರನು ತಮಿಳುನಾಡಿನ ಪುರಾತನ ಶಿವಭಕ್ತರಿಂದ, ವಚನಕಾರರ ಪ್ರಭಾವ ಪ್ರೇರಣೆಯಿಂದಲೂ ಮತ್ತು ತನ್ನ ಅನುಭಾವಿಕ ಶಕ್ತಿಯಿಂದಲೂ ಹೊರಹೊಮ್ಮಿಸಿದ ಈ ಸಾಹಿತ್ಯ ಭಕ್ತಿ ಪ್ರಧಾನವಾದುದು. ಭಕ್ತಿಯೇ ಮುಕ್ತಿಸಾಧನೆಗೆ ಕಾರಣ ಆದ್ದರಿಂದ ಈ ಮಾರ್ಗದಲ್ಲಿ ಅನನ್ಯವಾಗಿ ಸಮರ್ಪಣ ಮನೋಭಾವದ ಅರಿವನ್ನು ಮೂಡಿಸಿದ್ದಾನೆ. ಭಕ್ತಿ ಮಾರ್ಗದ ತಿರುಳೆಲ್ಲಾ ಇಲ್ಲಿ ತುಂಬಿ ತುಳುಕಿದೆ. ಇದರ ಒಳಹೊಕ್ಕು ನೋಡಿದಾಗ ಭಕ್ತಿಯೇ ನಿಜವಾದ ಯೋಗವೆಂಬುದು ಸ್ಪಷ್ಟವಾಗುತ್ತದೆ. ಭಕ್ತಿಯೋಗದ ಸಾಧನೆಯು ಆದರ್ಶ, ನೇಮವನ್ನು ಭಕ್ತಿಯಿಂದ ಪುಣ್ಯಕಾರ್ಯ ಮಾಡುವ ಶಿವಶರಣರಿಗೆ ಮಾತ್ರ ಸಾಧ್ಯ. ಎಂಬುದು ಹರಿಹರನ ಸಾಹಿತ್ಯದ ಒಳಗುಟ್ಟು.

ಶಿವನಿಗೂ, ಭಕ್ತನಿಗೂ ಇರುವ ಪರಸ್ಪರ ಅವಿನಾಭಾವ ಸಂಬಂಧವೇ ಭಕ್ತಿ. ಭಕ್ತನೆನಿಸಿಕೊಂಡಾತ ತಾನು ನಂಬಿದ ಭಗವಂತನಲ್ಲಿ ಇಟ್ಟಿರುವ ಅನನ್ಯ ಪ್ರೀತಿಯೇ ಭಕ್ತಿ. ಶಿವನೆಡೆಗೆ ಹರಿಯುವ ನಿರಂತರ ನಿಷ್ಕಲ್ಮಶ ಪ್ರೇಮ ಪ್ರವಾಹವೇ ಭಕ್ತಿ. ಹರಿಹರನ ಕಾವ್ಯಗಳಲ್ಲಿ ಮೂಡಿನಿಂತಿರುವ ಪಾತ್ರಲೋಕ ಆತನ ಕಾಲಮಾನದಲ್ಲಿ ಹಾಗೂ ಅದಕ್ಕಿಂತ ಒಂದೆರಡು ಶತಮಾನದ ಮೊದಲು ಸಜೀವವಾಗಿದ್ದ ಸಮಾಜವನ್ನು ಬಹುಮಟ್ಟಿಗೆ ಪ್ರತಿನಿಧಿಸುವಂತಿದೆ. ಹರಿಹರನ ರಗಳೆಗಳಲ್ಲಿ ಭಾಷೆ, ಕಥಾವಸ್ತು, ನಾಯಕನ ಆಯ್ಕೆ, ಛಂದೋರೀತಿ, ಎಲ್ಲ ದೃಷ್ಟಿಯಲ್ಲಿಯೂ ವಿಶಿಷ್ಟ ರೀತಿಯಲ್ಲಿ ಬದಲಾವಣೆ ಮಾಡಿಕೊಂಡಿರುವುದು ಅಧ್ಯಯನದಿಂದ ತಿಳಿದುಬರುತ್ತದೆ. ಶಿವಶರಣರಿಗೆ ಪೌರಾಣಿಕ ಕೈಲಾಸದ ಬಗ್ಗೆ ನಂಬಿಕೆ ಇಲ್ಲ, ಬದಲಿಗೆ ಭಕ್ತರ ಆದರ್ಶ ಜೀವನದಿಂದ ಲಭ್ಯವಾಗುವ ಉತ್ತಮ ಸಂತೋಷ ಕ್ಷಣಗಳೇ ಕೈಲಾಸ. ಬಸವಣ್ಣನ ತತ್ವ ಆದರ್ಶಗಳ ಪರಿಣಾಮದಿಂದ ಕಲ್ಯಾಣವೇ ಕೈಲಾಸವಾಗಿತ್ತು. ಅನಂತರ ಕಲ್ಯಾಣದಲ್ಲಿ ನಡೆದ

ಕ್ರಾಂತಿಯಿಂದಾಗಿ ಆದರ್ಶ ಮೌಲ್ಯಗಳು ಇಲ್ಲದಾಗಿ ಅಮಾನವೀಯತೆ ಎಲ್ಲೆಡೆ ರಾರಾಜಿಸಿತು. ಸತ್ಯವಾದ ಪರಿಶುದ್ಧ ಜೀವನದೊಂದಿಗೆ ಕಾಯಕನಿಷ್ಠೆಯನ್ನು ಹೊಂದಿದಾಗ ಶಾಶ್ವತಮುಕ್ತಿ ಲಭ್ಯವಾಗುತ್ತದೆ. ಆದರೆ ಹರಿಹರನ ರಗಳೆಗಳಲ್ಲಿ ಪುರಾಣದ ಕೈಲಾಸದ ಬಗ್ಗೆ ನಂಬಿಕೆ ಇದ್ದು, ಭಕ್ತಿಯನ್ನು ಮೆರೆದ ನಿಜಭಕ್ತ ಗಣಪದವಿಯನ್ನು ಹೊಂದಿ ಪರಿಪೂರ್ಣನೆನಿಸಿಕೊಳ್ಳುವ ಅಂಶಗಳು ಅಧ್ಯಯನದಿಂದ ವೇದ್ಯವಾಗುತ್ತದೆ.

ಭಕ್ತಿರಸದ ಪಾರಮ್ಯವನ್ನು ಮನದುಂಬಿ ಹಾಡಿರುವ ಹರಿಹರ ಶರಣರ ಭಕ್ತಿ ಪರಂಪರೆಯನ್ನು ಜನಸಮುದಾಯದಲ್ಲಿ ಹುಟ್ಟುಹಾಕುವ ಪ್ರಾಮಾಣಿಕ ಪ್ರಯತ್ನವನ್ನು ಮಾಡಿದ್ದಾನೆ. ಭಕ್ತಿ ಪರಂಪರೆಯೊಂದಿಗೆ ಅಸ್ಪೃಶ್ಯತೆ ನಿವಾರಣೆ, ವರ್ಗಸಮಸ್ಯೆ ನಿವಾರಣೆ, ಆರ್ಥಿಕ ಚಿಂತನೆ ಮಹಿಳಾ ವಿಮೋಚನೆ ಮತ್ತು ಶರಣರ ಸಾಮಾಜಿಕ ಪ್ರಜ್ಞೆಯಂತಹ ವಿಷಯಗಳಿಗೂ ಒತ್ತು ನೀಡಿರುವುದು ರಗಳೆಗಳ ಅಧ್ಯಯನದಿಂದ ತಿಳಿದು ಬರುತ್ತದೆ.

ಹರಿಹರನು ತನ್ನ ರಗಳೆಗಳಲ್ಲಿ, ಪರಿಶುದ್ಧ ಜೀವನ ನಡೆಸುವ ಮೂಲಕ ಭಕ್ತರು ಮೋಕ್ಷವನ್ನು ಸಾಧಿಸಲು ಪರಮಾತ್ಮನ ಧ್ಯಾನ-ಭಕ್ತಿ-ನೇಮನಿಷ್ಠೆಯೇ ರಾಜಮಾರ್ಗ ಎಂದು ತಿಳಿಸಿದ್ದಾನೆ. ಸಜ್ಜನರು ಸದಾಕಾಲ ತಮ್ಮಮನಸ್ಸಿನಲ್ಲಿ ದೈವಚಿಂತನೆಯನ್ನು ನಡೆಸುತ್ತಾ ಭಕ್ತರಾಗಿ ಬಾಳುತ್ತಾರೆ. ದುರ್ಜನರ ರೀತಿ ಇದಕ್ಕಿಂತ ಬೇರೆರೀತಿಯದು. 'ಭಕ್ತಿ' ಯೆಂಬುದು ಒಂದು ಒಣವೇದಾಂತವಲ್ಲ, ಅದು ಜೀವನ ಪ್ರೀತಿ-ನೀತಿಗಳನ್ನು ಒಳಗೊಂಡಿರುತ್ತದೆ. ಸಕಲ ಜಗತ್ತಿನ ಒಡೆಯನಾದ ಭಗವಂತನಲ್ಲಿ ಆ ಪ್ರೀತಿ ವ್ಯಾಪಿಸುವುದರ ಮೂಲಕ ಮಾನವನ ಬದುಕನ್ನು ಸಾರ್ಥಕಗೊಳಿಸಬಹುದೆಂಬ ಅಂಶ ಅಧ್ಯಯನದಿಂದ ಅಭಿವ್ಯಕ್ತವಾಗಿದೆ.

ಲೋಕದಲ್ಲಿ ಏನಾದರೂ ಮಹತ್ವದ ಸಾಧನೆ ಸಾಧಿಸಬೇಕಾದರೆ ಪರಿಪೂರ್ಣ ಪರಿಶ್ರಮ ಅಗತ್ಯ, ಆಗ ಮಾತ್ರ ಯಶಸ್ಸು ಲಭ್ಯವಾಗುತ್ತದೆ. ಅದೇ ರೀತಿ ನಮಗೆ ಶಿವನಲ್ಲಿ ನಂಬಿಕೆ ಇದ್ದರೆ ಮಾತ್ರ ಶಿವನು ನಮ್ಮನ್ನು ಭಕ್ತರನ್ನಾಗಿ ಸ್ವೀಕರಿಸಿ, ಸತ್ವಪರೀಕ್ಷೆಗಾಗಿ ಸಾಕಷ್ಟು ಕಷ್ಟಕೋಟಲೆಗಳನ್ನು ತಂದೊಡ್ಡುತ್ತಾನೆ. ಅವನು ತನು-ಮನ-ಧನ ಕಿತ್ತುಕೊಂಡು, ಸಾವು-ನೋವು ಎದುರಿಸುವಂತೆ ಮಾಡುತ್ತಾನೆ. ಆದರೆ ಯಾವ ಭಕ್ತರು ತಮ್ಮ ಪ್ರಯತ್ನದಲ್ಲಿ ಹಿಂದೆ ಸರಿಯದೆ ಸದೃಢ ನಿಷ್ಠೆಯಿಂದ, ಮಾನಸಿಕ ಸ್ಥೈರ್ಯದಿಂದ ಸಾಧಿಸುವ ಸಂಕಲ್ಪ ಮಾಡಿದರೆ ಶಿವನ ಕರುಣೆಗೆ ಪಾತ್ರನಾಗುತ್ತಾನೆ.

ಆಗ ಎದುರಾದ ಎಲ್ಲಾ ಸಂಕಟ ವಿಪತ್ತು ಕ್ಷಣಮಾತ್ರದಲ್ಲಿ ನಿವಾರಣೆ ಮಾಡಿ ಶಿವನು ಅವರಿಗೆ ಮೋಕ್ಷವನ್ನು ನೀಡಿ, ಪ್ರೀತಿಯನ್ನು ಹಂಚುವ ಶಿವ-ಭಕ್ತರ ನಡುವಿನ ಬಾಂಧವ್ಯ ಆತ್ಮೀಯತೆ ಮತ್ತು ವಾತ್ಸಲ್ಯದಿಂದ ಕೂಡಿರುತ್ತದೆ.

ಮನಸ್ಸು ಮಲಿನವಾಗಿ ಯಾವ ನೇಮಗಳನ್ನು ಪರಿಪಾಲಿಸಿ ಪೂಜೆ ಮಾಡಿದರೂ ಸತ್ಫಲ ದೊರೆಯದು. ಭಕ್ತನಿಗೆ ನೇಮಾಚರಣೆಯ ಜೊತೆಗೆ ನಂಬಿಕೆ ಭಕ್ತಿ-ಭಾವವು ಪ್ರಧಾನವಾಗಿರಬೇಕು. ಆ ಭಕ್ತಿಗೆ ಶುದ್ಧ ಮನಸ್ಸು, ಸದ್ವರ್ತನೆ, ಕಾಯಕ ಶ್ರದ್ಧೆ, ಲಿಂಗನಿಷ್ಠೆ ಇರಬೇಕು, ಲಿಂಗವನ್ನು ಕರಸ್ಥಳದ ಮೇಲೆ ಇಟ್ಟು ಪೂಜಿಸುವ ನಿತ್ಯ ಪೂಜೆ, ಸದಾಚಾರವನ್ನು ಬೆಳಸಿಕೊಳ್ಳಬೇಕು. ಇಂತಹ ಭಕ್ತಿಯ ಜೊತೆ ಶುದ್ಧಮನಸ್ಸು, ಕಾಯಕಶ್ರದ್ಧೆ, ಸದ್ವರ್ತನೆ, ಆದರ್ಶ ಮೊದಲಾದ ಗುಣಗಳೊಂದಿಗೆ ಅವನ ಮನಸ್ಸಿನಲ್ಲಿ ಸದಾ ಭಕ್ತಿಯ ಕುಸುಮ ಅರಳುತ್ತದೆ, ಅದರಂತೆ ಮನುಷ್ಯ, ಭಕ್ತಿಯ ಮೂಲಕ ಆತ್ಮ ಶಕ್ತಿಯನ್ನು ವೃದ್ಧಿಸಿಕೊಂಡು ಮಾನವತ್ವದಿಂದ ಶಿವತ್ವದ ಸ್ಥಾನವನ್ನು ಏರಬಹುದು. ಇಲ್ಲಿ ಭಕ್ತನೇ ಶಿವ, ಶಿವನೇ ಭಕ್ತ ಎಂಬ ಅಬೇಧ ಭಾವವನ್ನು ಚಿತ್ರಿಸಿರುವ ಹರಿಹರ ಶಿವತ್ವವನ್ನು ಬೆಳಸಿಕೊಳ್ಳಲು ಬೇಕಾಗಿರುವುದು ನಿರ್ಮಲವಾದ ಶ್ರದ್ಧಾ-ಭಕ್ತಿ ಎಂದಿದ್ದಾನೆ. ಜೊತೆಗೆ ಶಿವನಿಗಿಂತ ಶಿವಭಕ್ತನಿಗೆ ಒಂದು ಕೈಮಿಗಿಲು ಮಾಡಿದ್ದಾನೆ. ಶಿವಭಕ್ತನೇ ಶ್ರೇಷ್ಠವೆಂಬಂತೆ ರಗಳೆಗಳಲ್ಲಿ ಸಾರಿದ್ದಾನೆ.

ಭಕ್ತಿಯೆಂದರೆ ನಿರ್ಮಲವಾದ ಪ್ರೇಮ, ಶಿವನ ಮೇಲೆ ಗಾಢ ಪ್ರೇಮವನ್ನು ಬೆಳಸಿಕೊಂಡಾಗ ಅವರ ಸಂಬಂಧ ಮತ್ತಷ್ಟು ಹತ್ತಿರಕ್ಕೆ ಬಂದು ಆತ್ಮೀಯಸ್ವರೂಪವಾಗುತ್ತದೆ. ಮನುಷ್ಯ ಹುಟ್ಟು-ಸಾವಿನ ಜೀವನ ಚಕ್ರದಲ್ಲಿ ಬಿದ್ದು ಒದ್ದಾಡುವ ಬದಲು ಶಿವನ ಭಕ್ತಿ ಸಾಧನೆಯಿಂದ, ತಮ್ಮ ಸಾತ್ವಿಕ ಸ್ವಭಾವ, ಸತ್ಕಾರ್ಯಗಳಿಂದ ಸರ್ವಕಾಲಕ್ಕೂ ಸಲ್ಲುವಂತಹ ಮೌಲ್ಯಯುತ ಬದುಕು ಸ್ಮರಣೆಗೆ ಅರ್ಹ. ಸ್ಫೂರ್ತಿಯ ಚಿಲುಮೆಗಳಂತಹ ಶಿವಭಕ್ತರ ಕಥೆಯನ್ನು ಹೇಳಿರುವ ಹರಿಹರ ದೈವ ಪ್ರೇಮವನ್ನು ಮೈಗೂಡಿಸಿಕೊಳ್ಳಲು ಸಮಾಜದ ಜನವರ್ಗವನ್ನು ಪ್ರೋತ್ಸಾಹಿಸಿದ್ದಾನೆ ಎಂಬುದು ಅಧ್ಯಯನದಿಂದ ತಿಳಿಯುತ್ತದೆ.

ಹರಿಹರನು ತನ್ನ ರಗಳೆಗಳಲ್ಲಿ ಶಿವಧ್ಯಾನದಿಂದ ವ್ಯಕ್ತಿಗಳು ಕೋಪ-ತಾಪಗಳನ್ನು ಜಯಿಸುವುದಕ್ಕೆ ಸಾಧ್ಯ ಎನ್ನುವುದನ್ನು ತಿಳಿಸಿದ್ದಾನೆ. ದುಃಖ ನೋವು ಏನೇ ಎದುರಾದರು ಎದೆಗುಂದದೆ ಎಲ್ಲವನ್ನು ಸಮಾನವಾಗಿ ಸ್ವೀಕರಿಸುವ ಸಮಸ್ಥಿತ ಪ್ರಜ್ಞೆ ಬೆಳಸಿಕೊಳ್ಳಲು ಸಾಧ್ಯ.

ಸಮಾಜದ ಜನರು ಸಭ್ಯಸ್ಥರಾಗಿ, ಸತ್ಕಾರ್ಯಗಳನ್ನು ಮಾಡುವ ಮನೋಭಾವನೆಯನ್ನು ಬೆಳೆಸಿಕೊಂಡು ಎಲ್ಲಕ್ಕೂ ಒಡೆಯ ಶಿವನೇ ಎಂದು ತಿಳಿದು, ಶಿವನೊಂದಿಗೆ ಪ್ರೇಮವನ್ನು ಹೊಂದಿ ಸರ್ವರೊಂದಿಗೆ ಬೆರೆತು, ಏಕಧರ್ಮೋಪಾಸನೆಯೊಂದಿಗೆ ಸಾಮರಸ್ಯದ ಬಾಳ್ವೆ ನಡೆಸಬೇಕು ಎನ್ನುವ ಆದರ್ಶ ಹರಿಹರನ ರಗಳೆಗಳ ಅಧ್ಯಯನದಿಂದ ವೇದ್ಯವಾಗುತ್ತದೆ.

ಹರಿಹರ ಕವಿಯ ಪರಿಚಯದೊಂದಿಗೆ, ಅವನ ವಿದ್ಯಾಭ್ಯಾಸ, ಗುರುಭಕ್ತಿ, ವಿರೂಪಾಕ್ಷನ ಭಕ್ತಿ, ಕೃತಿರಚನೆ, ಧ್ಯೇಯ, ಸಾಧನೆ ಇವೇ ಮೊದಲಾದ ಸಂಗತಿಗಳಲ್ಲಿ ಬರುವ ದಂತ ಕಥೆಗಳು ಪವಾಡಗಳಾಗಿ ಹೆಸರು ಮಾಡಿರುವ ಉಲ್ಲೇಖಗಳನ್ನು ತಿಳಿಸಿರುತ್ತಾನೆ. ಹರಿಹರನಲ್ಲಿರುವ ಭಕ್ತಿಯ ಆವೇಶ ಇಂತಹ ಕಾರ್ಯಗಳನ್ನು ಮಾಡಿಸಲು ಪ್ರೇರಣೆ ನೀಡಿರಬೇಕು. ಮನುಷ್ಯರಲ್ಲಿ ಧ್ಯಾನ, ಯೋಗ, ಜ್ಞಾನ, ಭಕ್ತಿ ಮಾರ್ಗಗಳು ಯಾವುದೇ ಸಂದರ್ಭದಲ್ಲೂ ಮನಸ್ಸಿನಲ್ಲಿ ಪರಿಪೂರ್ಣತೆಯನ್ನೇ ಉಂಟುಮಾಡುತ್ತದೆ. ಇದರಿಂದ ಪ್ರಚೋದಿತನಾದವನು ತನ್ನೊಂದಿಗೆ ಇರುವವರಿಗೂ ಅಂತಹ ಧನಾತ್ಮಕ, ಪ್ರೇರಣಾತ್ಮಕ ಚಿಂತನೆಗಳನ್ನೇ ಬೋಧಿಸುತ್ತಾನೆ ಎಂಬುದಕ್ಕೆ ಹರಿಹರನ ಜೀವನದ ಘಟನೆಗಳು ಸಾಕ್ಷಿಯಂತಿವೆ ಎಂಬುದು ಅಧ್ಯಯನದಿಂದ ವೇದ್ಯವಾಗುತ್ತದೆ.

ಹರಿಹರನ ಬದುಕಿನಲ್ಲಿ ಶಿವನ ಮೇಲಿನ ಅಪಾರನಂಬಿಕೆಯು ಹಾಗು ಸಮಾಜದಲ್ಲಿ ಪ್ರಭಾವಿತ ವ್ಯಕ್ತಿಗಳ ಶಿವಭಕ್ತಿಕತೆಗಳ ಪ್ರೇರಣೆಯಿಂದ ಅವನ ಬದುಕಿನ ಆದರ್ಶ ಹಾಗು ಗುರಿ ಎಲ್ಲವೂ ಶಿವೋಮಯವೇ ಆಯಿತು ಎನ್ನಬಹುದು. ಹೀಗೆ ಭಕ್ತನು ಶಿವನ ಬಗ್ಗೆ ನಂಬಿಕೆ ಮತ್ತು ಆದರ್ಶಗಳನ್ನು ಇಟ್ಟುಕೊಂಡು ನಡೆಸುವ ಸಾಧನವೇ ಭಕ್ತಿ. ಭಕ್ತನು ಭಗವಂತನ ಸ್ವರೂಪವನ್ನು ಅರಿಯಲು ಪ್ರೇಮ, ಧ್ಯಾನ, ಯೋಗ, ಸ್ನೇಹ, ವಾತ್ಸಲ್ಯ, ದಾಸ್ಯ, ಬಾಂಧವ್ಯಗಳ ಮೂಲಕ ತಿಳಿಯ ಹೊರಡುತ್ತಾನೆ. ಹೀಗೆ ಇವುಗಳ ಮಾದರಿಯನ್ನು ನಾವು ಹರಿಹರನ ರಗಳೆಗಳಲ್ಲಿ ಗುರುತಿಸಲು ಅವಕಾಶಗಳಿವೆ.

ಹರಿಹರ ಕವಿಯನ್ನು ಕನ್ನಡ ಸಾಹಿತ್ಯದ ಎಲ್ಲಾ ಕವಿಗಳಿಗಿಂತ ವಿಭಿನ್ನಗೊಳಿಸಿರುವುದು ಕವಿಯ ಜೀವನಾದರ್ಶ ಮತ್ತು ಅವರ ಕೃತಿಗಳಿಂದ ವ್ಯಕ್ತವಾಗುವ ಜೀವನದರ್ಶನದಿಂದಲೇ. ಶಿವಶರಣರ ಬದುಕಿನಲ್ಲಿ ವ್ಯಕ್ತವಾಗುವ ಜೀವನ ಆದರ್ಶ ಮತ್ತು ದರ್ಶನಗಳು ಎಲ್ಲಾ ಕಾಲಕ್ಕೂ

ಮೌಲ್ಯಗಳಾಗಿ ನಿಲ್ಲುವ ಸಾಮರ್ಥ್ಯವನ್ನು ಹೊಂದಿರುವಂಥವು. ಎಂಬ ಅಂಶಗಳನ್ನು ಹಲವು ನಿದರ್ಶನಗಳೊಂದಿಗೆ ಪ್ರಸ್ತುತ ಪಡಿಸಿರುತ್ತೇನೆ.

ಹರಿಹರನ ರಗಳೆಗಳ ಕುರಿತಾದ ಸಂಶೋಧನೆಯ ಅಂದಿನ ಚಾರಿತ್ರಿಕ ಸಂದರ್ಭವೊಂದರ ಸಾಮಾಜಿಕ ವ್ಯವಸ್ಥೆಯ ಸ್ವರೂಪವನ್ನು ಅರ್ಥೈಸಿಕೊಳ್ಳುವ ಜೊತೆಗೆ ಅವುಗಳ ನಡುವಿನ ಅಂತರ ಸಂಬಂಧವನ್ನು ತಿಳಿಯುವುದಾಗಿದೆ. ಈ ಹಿನ್ನೆಲೆಗಳಿಂದ ಹರಿಹರನ ಸಾಹಿತ್ಯವನ್ನು ಓದುವಾಗ ವರ್ತಮಾನದಲ್ಲಿ ಎದುರಾಗುವ ಪ್ರಶ್ನೆಗಳಾವುವು ಹಾಗು ಇಂದಿನ ಜನತೆಯ ಬದುಕಿಗೆ ಹೇಗೆ ಉಪಕಾರಿಯಾಗಬಲ್ಲದು ಎಂಬ ಸೂಕ್ಷ್ಮವಾದ ಚಿಂತನೆಗಳಿಂದ ಅಧ್ಯಯನ ಮಾಡಲಾಗಿದೆ. ತನ್ನ ಕೃತಿಗಳಲ್ಲಿ ಧಾರ್ಮಿಕ ಚೌಕಟ್ಟನ್ನು ನಿರ್ಮಾಣಮಾಡಿಕೊಂಡು ಏಕದೇವೋಪಾಸನೆಯನ್ನು ಪ್ರತಿಪಾದಿಸಿರುವ ಹರಿಹರನನ್ನು ಮತ್ತು ಶರಣರ ಭಕ್ತಿಯನ್ನೊಳಗೊಂಡ ಸಾರ್ಥಕ ಜೀವನವನ್ನು ತಿಳಿಯುವ ಅವಶ್ಯಕತೆ ಇದೆ. ಅದರ ಮೂಲಕವೇ ಅಂದಿನ ಧಾರ್ಮಿಕ ಸಂಸ್ಕೃತಿಯನ್ನು ಧರ್ಮದ ತಳಹದಿಯ ಮೇಲೆ ರಚನೆಗೊಂಡ ಇಂದಿನ ವರ್ತಮಾನವನ್ನು ಅರ್ಥೈಸಿಕೊಳ್ಳುವ ವಿವಿಧ ಆಯಾಮಗಳನ್ನು ಚರ್ಚಿಸಿರುತ್ತೇನೆ. ಆದ್ದರಿಂದ ಈ ಚಾರಿತ್ರಿಕ ದರ್ಶನವನ್ನು ಮುಂದಿಟ್ಟುಕೊಂಡು, ಅಂದಿನ ಸಮಾಜದ ಮೇಲೆ ಮತ್ತು ಪ್ರಸ್ತುತ ಜೀವನವನ್ನು ಜವಾಬ್ದಾರಿ ನೆಲೆಯಲ್ಲಿ ಕಟ್ಟಿಕೊಳ್ಳುವ ಮೂಲಧಾತುಗಳ ವಿವೇಕವನ್ನು ಪಡೆಯುವುದಕ್ಕೆ ಹರಿಹರನ ಸಾಹಿತ್ಯ ಹೇಗೆ ಮಾರ್ಗದರ್ಶಕವಾಗಬಹುದು ಎಂಬ ಸಾಧ್ಯತೆಗಳನ್ನು ಚರ್ಚಿಸಿರುತ್ತೇನೆ. ಆದ್ದರಿಂದ ಹರಿಹರನ ರಗಳೆಗಳ ಮಹತ್ವ ಮತ್ತು ಕಾವ್ಯೋದ್ದೇಶವನ್ನು ವಿವೇಚಿಸುವ ಹಿನ್ನೆಲೆಯಿಂದ ಪ್ರಧಾನವಾಗಿ ೮ ನೆಲೆಗಳಲ್ಲಿ ಗುರುತಿಸಲಾಗಿದೆ.

(೧) <u>ಹರಿಹರನ ಜೀವನ ಮತ್ತು ಕಾವ್ಯೋದ್ದೇಶ :-</u>

ಹರಿಹರನ ಜೀವನ; ಪವಾಡಗಳು, ಕೃತಿರಚನೆ, ಉದ್ದೇಶ, ಭಕ್ತಿ ಪಾರಮ್ಯತೆಯ ಮೇಲೆ ಅಧ್ಯಯನ ಬೆಳಕು ಚೆಲ್ಲದೆ.

(೨) <u>ಚಾರಿತ್ರಿಕ ಹಿನ್ನೆಲೆ :-</u>

ಚಂಪು ಸಾಹಿತ್ಯದ ನಂತರ ವಚನ ಸಾಹಿತ್ಯ ಕಾಲಘಟ್ಟದ ಪ್ರಭಾವ ಪ್ರೇರಣೆ ಒಂದೆಡೆಯಾದರೆ, ರಾಜಕೀಯ ಅರಾಜಕತೆ, ಧರ್ಮ-ಧರ್ಮಗಳ ನಡುವಿನ ಸಂಘರ್ಷದ ನಡುವೆ

೧೩ನೇ ಶತಮಾನದಲ್ಲಿ ತಲೆಯೆತ್ತಿದ ರಗಳೆ ಸಾಹಿತ್ಯದ ಮೂಲಕ ಹರಿಹರನು ವೀರಶೈವ ಧರ್ಮದಲ್ಲಿದ್ದ ಸರಳತೆ, ಸುಲಭ ಪೂಜಾವಿಧಾನ, ಬೇಧ-ಭಾವ ರಹಿತ ದೈವ ಪ್ರೀತಿ, ಸಮಾನಧರ್ಮ, ಮೌಢ್ಯರಹಿತ ಸ್ಥಿತಿಯನ್ನು ಜನಮಾನಸದಲ್ಲಿ ಪ್ರತಿಷ್ಠಾಪಿಸಲು ಹೊರಟಂತೆ ಕಾಣುತ್ತದೆ ಎಂಬ ವಿವರಗಳನ್ನು ರಗಳೆಗಳ ಅಧ್ಯಯನದಿಂದ ವೇದ್ಯವಾಗುತ್ತದೆ. ವೀರಶೈವ ಸಾಹಿತ್ಯವು ಮೊದಮೊದಲು ಧರ್ಮ ಪ್ರಚಾರಕ್ಕಾಗಿಯೇ ಪ್ರಾರಂಭವಾಯಿತು. ಆ ಧರ್ಮತತ್ವಗಳು ಉದಾರವಾದುದರಿಂದ ಅದರ ನಿರೂಪಣೆಯಿಂದ ಕೂಡಿರುವ ಹರಿಹರನ ಸಾಹಿತ್ಯ ಉದಾರವೂ, ಉಜ್ವಲವೂ ಎನಿಸಿತು. ಆದ್ದರಿಂದ ಈ ಉದಾರವಾದ ಧರ್ಮವನ್ನು ಬೋಧಿಸಲು ಹರಿಹರನು ಹೊಸ ಛಂದಸ್ಸಿನ ಪ್ರಕಾರ ಮತ್ತು ನವೀನ ನೆಲೆಯ ಸಾಹಿತ್ಯ ಮಾದರಿಯನ್ನು ಗುರುತಿಸಬಹುದು.

**(೩) <u>ಸಾಮಾಜಿಕ ಹಿನ್ನೆಲೆ :-</u>**

ಹರಿಹರನು ಶಿವಭಕ್ತನಾಗಿದ್ದರೂ ಅವನೊಬ್ಬ ಸಮಾಜ ಜೀವಿಯಾಗಿರುವ ಕಾರಣದಿಂದ ಆ ಕಾಲದ ನಿರ್ದಿಷ್ಟ ಸಮುದಾಯ ಪ್ರಜ್ಞೆ, ಸಾಂಸ್ಕೃತಿಕ ತಿಳುವಳಿಕೆ, ಧಾರ್ಮಿಕ ನಂಬಿಕೆ, ಆಶಯ, ಮನಸ್ಸಿನ ಹಂಬಲಗಳ ಅರಿವನ್ನು ತನ್ನ ಕೃತಿಗಳಲ್ಲಿ ಗುರುತಿಸಿರುತ್ತಾನೆ. ೧೩ನೇ ಶತಮಾನದ ಸಾಮಾಜಿಕ ಸಂದರ್ಭದಲ್ಲಿ ಒಂದು ಧರ್ಮದ ಸಾಂಸ್ಥೀಕರಣಕ್ಕೆ ಅನ್ಯಧರ್ಮದ ನಂಬುಗೆಗಳು ಹೇಗೆ ಅಡ್ಡಲಾಗಿದೆ, ಅವುಗಳನ್ನು ಹಿಮ್ಮೆಟ್ಟಿಸಿ ಪರಸ್ಪರ ಧರ್ಮಗಳು ರೂಪಿಸಿಕೊಳ್ಳುತ್ತಿದ್ದ ಸಾಹಿತ್ಯಕ್ಕೆ - ಸಾಂಸ್ಕೃತಿಕ ಹೋರಾಟದ ಸ್ವರೂಪವನ್ನು ಸಾಮಾಜಿಕ ಹಿನ್ನೆಲೆಯಿಂದ ರಗಳೆಗಳ ಮೂಲಕ ಅರ್ಥೈಸಿಕೊಳ್ಳುವ ಸಾಧ್ಯತೆಗಳನ್ನು ಕೂಲಂಕುಷವಾಗಿ ಅಧ್ಯಯನದಲ್ಲಿ ಚರ್ಚಿಸಲಾಗಿದೆ. ಸಮಾಜದಲ್ಲಿನ ಅಂಕುಡೊಂಕುಗಳನ್ನು ತಿದ್ದಿತೀಡುವ ಪ್ರಯತ್ನ ಇವನ ರಗಳೆಗಳಲ್ಲಿ ಯಶಸ್ವಿಯಾಗಿ ನಡೆದಿದೆ ಆದ್ದರಿಂದ ಆಗಿನ ಸಾಮಾಜಿಕ ಸಂದರ್ಭದೊಂದಿಗಿನ ಅಧ್ಯಯನವು ಇಲ್ಲಿ ಅವಶ್ಯಕವೆನಿಸಿ ಅರ್ಥಪೂರ್ಣವೆನಿಸಿದೆ.

**(೪) <u>ಪ್ರಸ್ತುತತೆ-ವರ್ತಮಾನದ ಪ್ರಶ್ನೆಗಳು : -</u>**

೧೩ನೇ ಶತಮಾನದ ಹರಿಹರ ಸಾಹಿತ್ಯದ ವಿಚಾರಧಾರೆಯನ್ನು ಮುಂದಿಟ್ಟುಕೊಂಡು ವರ್ತಮಾನದ ಸಮಸ್ಯೆಗಳಿಗೆ ಪರಿಹಾರ ಹುಡುಕುವ ಮಾದರಿಯಲ್ಲಿ ಬಲತ್ಕಾರ ಮಾಡಿ ಓದಲು ಸಾಧ್ಯವಿಲ್ಲ. ಆದರೆ ಹರಿಹರನ ರಗಳೆಗಳಲ್ಲಿ ಎದ್ದುಕಾಣುವ ಶಿವನು ಜನಸಾಮಾನ್ಯರ ಪಾಲಿಗೆ ಶಕ್ತಿ, ಮೌಲ್ಯ, ನಂಬಿಕೆ, ಸಂವೇದನೆ ಇದ್ದಂತೆ. ಈ ನೆಲೆಗಳೆಲ್ಲಾ ಭಕ್ತಿ ಎನ್ನುವ ಅಸ್ತಿತ್ವ ಸಮಾಜದಲ್ಲಿ

ಎಲ್ಲಿಯವರೆಗೂ ಇರುತ್ತದೆಯೋ ಅಲ್ಲಿಯವರೆಗೂ ಹರಿಹರನ ಭಕ್ತಿಯ ಮೂಲ ತಿರುಳು ಸಂಪರ್ಕವನ್ನು ಬೆಸೆಯುತ್ತಲೇ ಇರುತ್ತದೆ. ಆದ್ದರಿಂದ ಶಿವನೊಂದಿಗೆ ಸಂಬಂಧ-ಸಂವೇದನೆಯನ್ನು ಏರ್ಪಡಿಸುವ ಭಕ್ತಿಯು ಪ್ರಸ್ತುತತೆಯಿಂದ ಕೂಡಿದುದೂ ಹಾಗು ನಿರಂತರವಾದುದೂ ಹೌದು ಎಂಬುದು ಹರಿಹರನ ಕಾವ್ಯಗಳಿಂದ ಗೋಚರಿಸುತ್ತದೆ.

ಡಾ॥ ಎಂ.ಎಂ. ಕಲಬುರ್ಗಿರವರ 'ಹರಿಹರನ ರಗಳೆಗಳು' ಎಂಬ ಸಂಪಾದಿತ ಕೃತಿಯನ್ನು ಆಧಾರವಾಗಿಟ್ಟುಕೊಂಡು ಶಿವ ಮತ್ತು ಭಕ್ತರ ನಡುವಿನ ಸಂಬಂಧದ ಸ್ವರೂಪ ಮತ್ತು ಭಾವಗಳ ವಿಶ್ಲೇಷಣೆಗಳನ್ನು ಎಳೆಎಳೆಯಾಗಿ ಬಿಡಿಸಿಕೊಂಡು ಹೊಸ ತಾತ್ವಿಕ ಚಿಂತನೆಗಳಲ್ಲಿ ಸಂಶೋಧನಾಧ್ಯಯನವನ್ನು ಕೈಗೊಂಡಿರುತ್ತೇನೆ.

ಶಿವ ಮತ್ತು ಭಕ್ತರ ಸಂಬಂಧಗಳ ಮಧ್ಯೆ ಗೌರವ, ಪ್ರೇಮ, ವಾತ್ಸಲ್ಯ, ಭಯ ಭಕ್ತಿ ಆತ್ಮೀಯ ಭಾವಗಳನ್ನು ಹೊಂದಿದ್ದು, ಅದರಿಂದ ಇಬ್ಬರೂ ಸಂತೃಪ್ತರಾಗಿರುತ್ತಾರೆ. ಇಂಥ ಭಾವಗಳಿಂದ ಸಂಬಂಧ ಗಟ್ಟಿಗೊಂಡು ಅದು ತಾಯಿ-ಮಗ, ತಂದೆ-ಮಗ, ಸೋದರತ್ವ, ಒಡೆಯ ಸೇವಕ, ಮಧುರಭಾವ, ಸ್ನೇಹ ಸಂಬಂಧಗಳ ಅನ್ಯೋನ್ಯತೆಯಿಂದ ಕೂಡಿದ್ದು, ಅವನ್ನು

೧) ಸ್ನೇಹ ಸಂಬಂಧ

೨) ಕೌಟುಂಬಿಕ ವಾತ್ಸಲ್ಯ ಸಂಬಂಧ

೩) ದಾಸ್ಯ ಸಂಬಂಧ

ಪ್ರತಿಯೊಂದು ಸಂಬಂಧಗಳ ಸ್ವರೂಪ, ವ್ಯಾಪ್ತಿಗಳೊಂದಿಗೆ ಅವುಗಳಿಗೆ ಭಾಷ್ಯ ಬರೆದು ಆಯಾ ಸಂಬಂಧಗಳಡಿಯಲ್ಲಿ ವ್ಯಕ್ತವಾಗುವ ಭಾವಕ್ಕೆ ಅನುಗುಣವಾಗಿ ರಗಳೆಗಳನ್ನು ವಿಂಗಡಿಸಿಕೊಂಡು ಅಧ್ಯಯನಕ್ಕೆ ಪೂರಕವಾಗಿ ವಿವರಿಸಿರುತ್ತೇನೆ.

ಶಿವ ಮತ್ತು ಭಕ್ತರ ಸಂಬಂಧದ ಭಾವಗಳು:

೧) ಶಾಂತ ಭಾವ

೨) ಮಧುರ ಭಾವ

೩) ಧೃತಿ ಭಾವ

ಶಿವಭಕ್ತರು ಚಿರಂತನ ಸುಖವನ್ನು ಪಡೆದು, ಗಣಪದವಿಯನ್ನು ತನ್ನ ಭಕ್ತಿಯ ಮೂಲಕ ರೂಪಿಸಿಕೊಳ್ಳಲು ಶಾಂತ ಮನಸ್ಥಿತಿ, ಮಧುರ ಭಾವ, ಧೈರ್ಯ ಮನೋಭಾವ ಮತ್ತು ಮುಗ್ಧ

ಭಕ್ತಿಭಾವದಿಂದಿರುವುದಕ್ಕೆ ಸಾಧ್ಯ ಎಂಬುದನ್ನು ಹರಿಹರನ ರಗಳೆಗಳ ಅಧ್ಯಯನದಿಂದ ವೇದ್ಯವಾಗುತ್ತದೆ.

ಬ್ರಾಹ್ಮಣತ್ವದಲ್ಲಿರಬಹುದಾದ ಕಠಿಣ ಪೂಜಾ ಪದ್ಧತಿ, ಭೇದ ನೀತಿ, ಮೋಕ್ಷ ಪಕ್ಷಪಾತ-ಇವು ಯಾವುವೂ ಹರಿಹರನ ವೀರಶೈವ ಮತ ಧರ್ಮಾಚರಣೆಯಲ್ಲಿಲ್ಲ. ಆದ್ದರಿಂದ ಜನಹಿತವಾಗಿದ್ದ ವೀರಶೈವ ಧರ್ಮವು ೧೨ನೇ ಶತಮಾನದ ಕೊನೆಯಲ್ಲಿ ಕ್ಷೀಣಿಸುತ್ತಾ ತಮಿಳುನಾಡಿನಲ್ಲಿ ತಲೆಯೆತ್ತಿದ್ದ ವೈಷ್ಣವ ಧರ್ಮದ ಪ್ರಭಾವವು ಜೈನಧರ್ಮದೊಂದಿಗೆ ಪ್ರತಿಸ್ಪರ್ಧೆ ಮತ್ತು ಸಂಘರ್ಷವನ್ನು ಎದುರಿಸಬೇಕಿತ್ತು. ಇಂತಹ ಸಂದರ್ಭದಲ್ಲಿ ಏಕದೇವೋಪಾಸನೆಯ ಅವಶ್ಯಕತೆಯಿತ್ತು ಹಾಗು ಉತ್ತಮ ಸಮಾಜ ದೃಷ್ಟಿಗೆ "ಶಿವಭಕ್ತಿಯ" ಸ್ಥಾಪನೆ ಎಷ್ಟರ ಮಟ್ಟಿಗೆ ಅವಶ್ಯಕವಿತ್ತು ಎಂಬುದು ಗಮನಾರ್ಹವೆನಿಸುತ್ತದೆ. ಈ ಹಿನ್ನೆಲೆಗಳಿಂದ ಹರಿಹರನ ಎಲ್ಲಾ ರಗಳೆಗಳಲ್ಲಿ ಶಿವ ಮತ್ತು ಭಕ್ತರ ಸಂಬಂಧದ ಸ್ವರೂಪವನ್ನು ತಿಳಿಯಲು ವಿವಿಧ ನೆಲೆಗಳಿಂದ ಭಕ್ತಿಯ ವೈವಿಧ್ಯತೆಯನ್ನು ವಿಶ್ಲೇಷಿಸಿ ನೋಡಿರುತ್ತೇನೆ.

**ರಗಳೆಗಳಲ್ಲಿ ಹೊಸದೃಷ್ಟಿ :-**

ಹರಿಹರನ ರಗಳೆಗಳು ಸಾಹಿತ್ಯ ಚರಿತ್ರೆಯಲ್ಲಿ ಜೀವ ಕಳೆಯನ್ನು ತುಂಬಿಕೊಳ್ಳಲು ಕಾರಣವೇ ಅದರ ಹೊಸ ದೃಷ್ಟಿಕೋನದ ನೆಲೆಗಳಿಂದ, ಅವು ಪ್ರಮುಖವಾಗಿ.

೧. ಕಥಾನಾಯಕರ ಸಾಮಾಜಿಕ ಮೌಲ್ಯಗಳು

೨. ಶಿವ-ಭಕ್ತರನ್ನು ಪರೀಕ್ಷಿಸುವ ರೀತಿ

೩. ಪವಾಡ ಸದೃಶ್ಯತೆ

೪. ಶಿವತತ್ವ ಪ್ರತಿಪಾದನೆ

೫. ಭಕ್ತನ ಆದರ್ಶ ಮತ್ತು ಜೀವನ ದರ್ಶನ

೬. ಲೋಕಾನುಭವ, ಶಿವಾನುಭವ

**ಕಥಾನಾಯಕರ ಮೌಲ್ಯಗಳ ವಿಶ್ಲೇಷಣೆಯಲ್ಲಿ :-**

(೧)ಕಾಯಕ ನಿಷ್ಠೆ

(೨)ದಾನ-ಧರ್ಮ-ತ್ಯಾಗ

(೩)ಜೀವನದ ಆದರ್ಶಗಳು

(೪)ವರ್ಗ–ವರ್ಣ–ಸ್ತ್ರೀ ಬೇಧ ನಿರಾಕರಣೆ

(೫)ರಾಜ–ಯಾಜಮಾನ್ಯರೆಂಬ ಸಂಸ್ಕೃತಿಯ ನಿರಾಕರಣೆ ಯಂತಹ ಅಂಶಗಳನ್ನು ಚರ್ಚಿಸಲಾಗಿದೆ.

ಹರಿಹರನ ರಗಳೆಗಳಲ್ಲಿ ಶಿವನು ಮಾರುವೇಷದಲ್ಲಿ ಬಂದು ತನ್ನ ಭಕ್ತರ ಪರೀಕ್ಷೆ ನಡೆಸಲು ಕಾರಣಗಳೇನಿರಬಹುದು? ಪರೀಕ್ಷೆ ಏಕೆ ಪ್ರಸ್ತುತವೆನಿಸಿತ್ತು? ಹಾಗೆ ಪರೀಕ್ಷಿಸುತ್ತಿದ್ದ ಶಿವನು ಭೂಮಿಯ ಮೇಲಿರುವ ಎಲ್ಲರನ್ನೂ ಪರೀಕ್ಷಿಸುತ್ತಿದ್ದನೇ? ಪರೀಕ್ಷೆಯ ಅವಶ್ಯಕತೆ ಎಷ್ಟು? ಪರೀಕ್ಷೆಯ ಪರಿಣಾಮ ಏನಿರಬಹುದು? ಅದರ ಫಲಿತಾಂಶವು ಸಾಮಾನ್ಯ ಜನರ ಮೇಲೆ ಪ್ರಭಾವ ಬೀರಿರಬಹುದೆ? ಹರಿಹರನು ರಗಳೆಯೆಂಬ ಛಂದಸ್ಸಿನಲ್ಲಿ ಒಂದೇ ಮಾದರಿಯಲ್ಲಿ ವಿವಿಧ ಕಥೆಗಳನ್ನು ಏಕೆ ಬಣ್ಣಿಸಿರಬಹುದು. ಈ ಮೊದಲಾದ ಪ್ರಶ್ನೆಗಳನ್ನು ಎತ್ತಿಕೊಂಡು ಅವುಗಳಿಗೆ ಉತ್ತರವನ್ನು ರಗಳೆಗಳಲ್ಲಿನ ಕಥೆಗಳ ಆಧಾರದ ಹಿನ್ನೆಲೆಯಿಂದ ವಿಶ್ಲೇಷಣೆ ಮಾಡಿರುತ್ತೇನೆ.

ಪರೀಕ್ಷೆಯ ಸ್ವರೂಪಗಳು:-

೧) ಆತ್ಮ ಪರೀಕ್ಷೆ

೨) ಧರ್ಮ ಪರೀಕ್ಷೆ

೩) ಸಮಾಜ ಪರೀಕ್ಷೆ

ಅಲ್ಲದೆ ರಗಳೆಗಳಲ್ಲಿ ವ್ಯಕ್ತವಾಗುವ ಪವಾಡಗಳ ಸಾದೃಶ್ಯತೆಯ ಪರಿಯನ್ನು ಪ್ರಸ್ತುತ ಕಾಲಮಾನಕ್ಕೆ ತಕ್ಕಂತೆ ವಿಶ್ಲೇಷಣೆ ದೃಷ್ಟಿಯಿಂದ ವಿವೇಚಿಸಲಾಗಿದೆ. ಶಿವತತ್ವ ಪ್ರತಿಪಾದನೆಯ ನವೀನ ಮಾದರಿಯನ್ನು ಭಕ್ತನ ಆದರ್ಶ ಮತ್ತು ಜೀವನ ದರ್ಶನವನ್ನು ಎಳೆಎಳೆಯಾಗಿ ತಿಳಿಸಲಾಗಿದೆ. ಶಿವಾನುಭವದಿಂದ ಲೌಕಿಕ ಜಂಜಾಟಗಳಿಂದ ದೂರಸರಿದು ಆಧ್ಯಾತ್ಮಿಕ ಸಾಧಕನಾಗುವ ಪರಿಯನ್ನು ರಗಳೆಗಳ ಅಧ್ಯಯನದಿಂದ ತಿಳಿಯಬಹುದು. ಈ ಹಿನ್ನೆಲೆಗಳಿಂದ ಗಮನಿಸಿದಾಗ, ಹರಿಹರ ಸೃಷ್ಟಿಸಿದ ರಗಳೆಗಳು ಶರಣಪರಂಪರೆ ಬೆಳೆಯುವುದಕ್ಕೆ ಹೇಗೆ ಸಹಕಾರಿಯಾಗಿರಬಹುದು ಪಂಪಾದಿಗಳು ನಿರ್ಮಿಸಿದ್ದ ಧಾರ್ಮಿಕ, ಲೌಕಿಕ ಪರಂಪರೆ ಇಲ್ಲವಾಗಿ ಈ ಹೊಸ ಮಾದರಿಯ ರಗಳೆ ಸಾಹಿತ್ಯದ ಕಂಪು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಒಂದು ಮೈಲಿಗಲ್ಲಾಗಿ ನಿಲ್ಲುತ್ತದೆ. ಎಂಬ ಅಂಶವನ್ನು ಇಲ್ಲಿ ಗಮನಿಸಲಾಗಿದೆ.

## ಶಿವ ಮತ್ತು ಭಕ್ತರ ಸಂಬಂಧದ ಹಿನ್ನೆಲೆಯಲ್ಲಿ ರಗಳೆಗಳ ರಾಚನಿಕ ಸ್ವರೂಪ :-

### ೧. ಕಥಾವಸ್ತು – ತಂತ್ರ ದೃಷ್ಟಿ :-

ಹರಿಹರ ರಗಳೆಗಳಲ್ಲಿ ಕಥೆಗಳನ್ನು ಕಟ್ಟುವ ಕೆಲಸ ಮಾಡಿದ್ದಾನೆ. ಮಣಿಗಳನ್ನು ಪೋಣಿಸಿ ಒಂದು ಸುಂದರವಾದ ಹಾರವನ್ನು ಹೆಣೆದಿರುವಂತಹ ಅವನ ಚಾತುರ್ಯ ಇಲ್ಲಿ ಗಮನಾರ್ಹ. ಕಥೆಗಳ ಭಾವ ಒಂದೇ ಆಗಿದ್ದರೂ ವಿಭಿನ್ನತೆಯಿಂದ ಕೂಡಿರುತ್ತದೆ. ಬಂಡೆಕಲ್ಲನ್ನು ಕೆತ್ತಿ ಶಿಲೆಯ ರೂಪಕ್ಕೆ ತರುವಂತೆ ಮತ್ತು ಚಿನ್ನವನ್ನು ಕಾಯಿಸಿ ಹದವಾದ ಆಭರಣ ರೂಪಕ್ಕೆ ತರುವಂತೆ ಹರಿಹರನು ಹದವಾದ ಒಂದು ಭಕ್ತಿಲೋಕವನ್ನು ಸಾಹಿತ್ಯದಲ್ಲಿ ಸೃಷ್ಟಿಸಿದ್ದಾನೆ.

### ೨. ಭಾಷೆ, ಶೈಲಿ, ನಿರ್ವಹಣೆ :-

ಹರಿಹರನ ರಗಳೆಗಳ ಭಾಷೆ ನಡುಗನ್ನಡ ಮತ್ತು ಹಳಗನ್ನಡದಲ್ಲಿ ರಗಳೆ ಛಂದಸ್ಸಿನಲ್ಲಿ ಬರೆದಿದ್ದಾನೆ. ಭಾಷೆಯು ರಗಳೆಗಳಲ್ಲಿ ಅರ್ಥಗರ್ಭಿತವಾಗಿಯೂ, ವಿವರಣಾತ್ಮಕವಾಗಿಯೂ ಹೇಳಕೊಳ್ಳುತ್ತಾನೆ.

### ೩. ರಗಳೆಗಳ ವಿನ್ಯಾಸಗಳು :-

ಹರಿಹರನ ರಗಳೆಗಳಲ್ಲಿ ರಗಳೆ ಛಂದಸ್ಸಿನೊಂದಿಗೆ ಗದ್ಯ ಮಿಶ್ರಿತವಾಗಿ ಬರುವುದರಿಂದ, ಅವೆರಡರ ನಡುವೆ ಹೆಚ್ಚು ವ್ಯತ್ಯಾಸ ಬೇಧವಿಲ್ಲದೆ ಸಮಾಂತರವಾಗಿ ಹೊಂದಿಕೊಂಡಂತೆ ಮೂಡಿಬಂದಿದೆ ಆದ್ದರಿಂದ ಗದ್ಯವೂ ತನ್ನದೇ ಆದ ಶೈಲಿಯಲ್ಲಿ ಬರುತ್ತದೆ. ಹರಿಹರನು ಪ್ರಮಾಣಬದ್ಧ ಭಾಷೆಯ ರೂಪದಲ್ಲಿ ಗದ್ಯವನ್ನು ಬರೆದಿರುವುದರಿಂದ ದೇಸಿ ಛಂದಸ್ಸಿನಲ್ಲಿ ರಗಳೆಗಳು ನಿರ್ಮಿತವಾಗಿರುವುದರಿಂದ ಜನಸಾಮಾನ್ಯರಿಗೆ ಪ್ರಿಯವಾಗಿರುವುದಕ್ಕೆ ಕಾರಣವಾಗಿರಬಹುದು.

ಹರಿಹರನ ಶೈಲಿಯಲ್ಲಿ ಹೊಸತನವಿದೆ. ಏಕೆಂದರೆ ಅದು ಶಿವಭಕ್ತರ ಕಥಾನಿರೂಪಣೆಗೆ ಮೀಸಲಾದವು. ಪ್ರತಿಯೊಂದು ಕಥೆಯಲ್ಲೂ ಶಿವಭಕ್ತ, ದೇಶ–ಊರು, ಕಾಯಕ, ನಿಷ್ಠೆ, ಶಿವನ ಪರೀಕ್ಷೆ, ಭಕ್ತನ ವಿಜಯ ಮತ್ತು ಕೈಲಾಸ ಪ್ರವೇಶ–ಗಣಪದವಿ ಪ್ರಕಟವಾಗುವ ಸನ್ನಿವೇಶಗಳು ಒಂದರ ನಂತರ ಒಂದು ಕಣ್ಮುಂದೆ ಸುಳಿದುಹೋಗುವ ಕಥಾ ವಾಸ್ತವ ಚಿತ್ರಣಗಳಾಗಿವೆ. ರಗಳೆಗಳ ವಿನ್ಯಾಸಗಳು ಶಿವ ಮತ್ತು ಭಕ್ತರ ಸಂಬಂಧ ಸ್ವರೂಪವನ್ನು ಎಳೆಎಳೆಯಾಗಿ ಬಿಡಿಸಿ ಹೇಳುವುದಕ್ಕೆ ಅನುಗುಣವಾಗಿ ಹೊಂದಿಕೊಂಡಿದೆ. ಇವೆಲ್ಲವುಗಳ ದೀರ್ಘ ಚರ್ಚೆಯನ್ನು ಪ್ರಸ್ತಾಪಿಸಲಾಗಿದೆ.

ರಗಳೆಗಳಲ್ಲಿ ಪ್ರಮುಖವಾಗಿ ಏನಿದೆ? ಎಂಬ ಪ್ರಶ್ನೆಯನ್ನು ಹಾಕಿಕೊಂಡರೆ ನಮಗೆ ವ್ಯಕ್ತವಾಗುವ ಅಂಶಗಳು ಇಂತಿವೆ.

೧. ಅಲ್ಲಿ ಪರಿಪೂರ್ಣವಾದ ಶಿವ ಭಕ್ತಿಯನ್ನು ಮೈಗೂಡಿಸಿಕೊಂಡ ಶಿವಭಕ್ತರ ಕಥೆಗಳಿವೆ.

೨. ಅದು ಸತ್ಯವಾದ ಮತ್ತು ಉತ್ತಮ ಅರ್ಥಸಾರಂಶಗಳನ್ನೊಳಗೊಂಡ ಸಾರ್ಥಕ ಕಥೆಗಳೆನಿಸಿಕೊಂಡಿವೆ.

೩. ಕಾಯಕದ ಮಹತ್ವವನ್ನು ಒತ್ತಿಹೇಳಿದ್ದಾನೆ. ಗುರು-ಲಿಂಗ-ಜಂಗಮಕ್ಕೆ ಶಿವಭಕ್ತರು ತಾವು ಶ್ರಮಪಟ್ಟು ದುಡಿದದ್ದನ್ನು ವಿನಿಯೋಗಿಸಿದ ನಂತರ ಉಳಿದುದರಲ್ಲಿ ಬದುಕುವ ಮಹೋದ್ದೇಶವನ್ನು ಇಟ್ಟುಕೊಂಡ ಶಿವಭಕ್ತರ ಜೀವನ ದರ್ಶನ ಸ್ತುತ್ಯಾರ್ಹ.

ಉದಾ: ಮಾದಾರ ಚೆನ್ನಯ್ಯ, ಇಳೆಯಾಂಡ ಗುಡಿಮಾರ, ಅರಿವಾಳ್ತಾಂಡರ, ಅತಿಭಕ್ತರನು, ತಿರುಕುರುಂಪೆ ತೊಂಡರ, ಹಾವಿನಹಾಳ ಕಲ್ಲಯ್ಯ, ಕುಂಬಾರ ಗುಂಡಯ್ಯರೇ ಮೊದಲಾದ ಶಿವಭಕ್ತರ ರಗಳೆಗಳಲ್ಲಿ ಕಾಯಕ ಮಹತ್ವವನ್ನು ಸಾರಿರುವ ಹರಿಹರ, ಸಮಾಜಾಭಿವೃದ್ಧಿಗೆ ಅವಶ್ಯವಿರುವ ಆರ್ಥಿಕ ಸಮತೋಲನವನ್ನು ಸಾರಿದ್ದಾನೆ.

೪. ಹರಿಹರನ ಪಾಲಿಗೆ, ಶಿವ ಮತ್ತು ಶಿವಭಕ್ತರು ಬೇರೆಯಲ್ಲ; ಇಬ್ಬರೂ ಒಂದೇ ಎಂಬ ಭಾವನೆ ಇತ್ತು. ಶಿವಭಕ್ತರ ಕುರಿತ ಸ್ತುತ್ಯಾರ್ಹ, ಶಿವನನ್ನು ಕುರಿತು ಸ್ತುತಿ ಮಾಡಿದಷ್ಟೆ ತೃಪ್ತಿ ಮನೋಭಾವ ಅವನಿಗುಂಟಾಗುತ್ತಿತ್ತು. ಅವನ ಪಾಲಿಗೆ ಅದೇ ಸಾಕಾಗಿತ್ತು. ಯಾವ ರಾಜರನ್ನಾಗಲಿ, ಪಂಡಿತರನ್ನಾಗಲಿ ಮೆಚ್ಚಿಸುವ ಅಗತ್ಯವಿರಲಿಲ್ಲ, ಭಕ್ತಿ-ಭಾವವನ್ನು ಉದ್ರಿತಗೊಳಿಸಿ ಮುಕ್ತ ಕಂಠದಿಂದ ಶಿವ ಮತ್ತು ಶಿವಭಕ್ತರ ಕೀರ್ತಿಯನ್ನು ಕುರಿತು ಹಾಡಿದ್ದಾನೆ.

ಈ ನೆಲೆಗಳಿಂದ ವಿಶ್ಲೇಷಿಸಿ ನೋಡಿದ ಮಹಾಪ್ರಬಂಧವು ಈ ಕೆಳಗಿನ ಅಂಶಗಳನ್ನು ಪ್ರಸ್ತುತ ಪಡಿಸುತ್ತದೆ.

೧) ಹರಿಹರನ ವ್ಯಕ್ತಿತ್ವ ಅತ್ಯಂತ ವೈಶಿಷ್ಟ್ಯಪೂರ್ಣ ಮತ್ತು ಅರ್ಥಬದ್ಧತೆಯಿಂದ ಕೂಡಿದೆ. ಏಕೆಂದರೆ ಅವನ ಬದುಕು-ಬರಹದಲ್ಲಿ ಏಕರೂಪತೆಯಿದೆ. ಆತನ ಪ್ರಾಚೀನರು, ವಚನಕಾರರು ಬಾಳ್ವೆ ನಡೆಸಿದ್ದ ಬದುಕನ್ನು ಒಪ್ಪಿಕೊಂಡು ಅದನ್ನು ವಿಸ್ತರಿಸಿದನೇ ಹೊರತು ವಿರೂಪಗೊಳಿಸಲಿಲ್ಲ. ಭಕ್ತಿ, ಕಾಯಕ, ನೇಮ-ನಿಷ್ಠೆ, ಶುದ್ಧ ಮನಸ್ಸು, ಆದರ್ಶಗಳ ದರ್ಶನವನ್ನು ತನ್ನ ರಗಳೆಯಲ್ಲಿ ಅಭಿವ್ಯಕ್ತಿಸುತ್ತಾ ಹೊಸ ಮೌಲ್ಯಸ್ಥಾಪನೆ, ಆಚಾರಗಳ ಪರಿಷ್ಕರಣೆಯನ್ನು ಮಾಡಿಕೊಂಡು ತನ್ನ

ಸಾಹಿತ್ಯಕ್ಕೆ ಚೈತನ್ಯಶೀಲತೆಯನ್ನು ತಂದುಕೊಂಡಿದ್ದಾನೆ. ಈ ಬಗೆಯ ವಿವರಣೆಯನ್ನು ಅಧ್ಯಯನ ಎತ್ತಿಹಿಡಿದಿದೆ.

೨) ಸಾಹಿತ್ಯದಲ್ಲಿ 'ಭಕ್ತ-ಭಗವಂತನ' ಅಧ್ಯಯನ ಮಾಡುವ ಸಾಧ್ಯತೆಗಳನ್ನು ದರ್ಶಿಸುವುದರೊಂದಿಗೆ ಹರಿಹರನ ರಗಳೆಗಳು ವಚನ, ಕೀರ್ತನೆ, ಸಾಹಿತ್ಯಗಳಂತೆ ಭಕ್ತಿನಿಷ್ಠ ಸಾಹಿತ್ಯವಾಗಿದೆಯೆಂಬುದನ್ನು ಈ ಅಧ್ಯಯನ ಪ್ರಸ್ತುತ ಪಡಿಸುತ್ತದೆ. ಈ ಭಕ್ತಿನೆಲೆಯು ಆತ್ಮೀಯ, ಮಮತೆ-ವಾತ್ಸಲ್ಯ, ದಾಸ್ಯತನದ ಸಂಬಂಧಗಳಲ್ಲಿ ಮಿಳಿತವಾಗುವಂತಹದ್ದು. ಇಲ್ಲಿ ಶಿವ-ಭಕ್ತರ ಸಂಬಂಧವು ಪ್ರೇಮ, ಮಧುರ, ಸ್ನೇಹ, ಉಗ್ರನಿಷ್ಠೆ, ಧೃತಿ, ಕರುಣೆ ಭಾವಗಳಿಂದ ಕೂಡಿರುತ್ತದೆ.

೩) ಹರಿಹರನ ರಗಳೆ ಸಾಹಿತ್ಯ ಭಾಷೆ, ಸಾಹಿತ್ಯದ ಮೂಲ ಉದ್ದೇಶ, ನಿರೂಪಣೆ ಕ್ರಮ, ಭಕ್ತಿ-ಭಾವ, ಕಥಾವಸ್ತು-ತಂತ್ರ-ಶೈಲಿ-ವಿನ್ಯಾಸ, ಭೇದನಿರಾಕರಣೆ, ರೂಪ, ಮೌಲ್ಯ-ಆದರ್ಶ ಪ್ರತಿಪಾದನೆ ಸ್ವರೂಪದಲ್ಲಿ ಹೊಸ ಹುಟ್ಟನ್ನು ಪಡೆಯಿತು. ಹೀಗೆ ತನ್ನದೇ ಆದ ಕೆಲವು ವೈಶಿಷ್ಟ್ಯಗಳಿಂದ ಕನ್ನಡದ ಬಹುಮುಖ ಪ್ರಯೋಗಶೀಲತೆಗೆ ಸಾಕ್ಷಿಯಾಗಿದೆ. ಈ ಎಲ್ಲಾ ಅಂಶಗಳನ್ನು ಅಧ್ಯಯನ ಪ್ರಸ್ತುತ ಪಡಿಸುತ್ತದೆ.

ಒಟ್ಟಾರೆ ಹರಿಹರನ ರಗಳೆಗಳಲ್ಲಿ ಶಿವಶರಣರ ಜೀವನವನ್ನು ಶ್ರದ್ಧೆ, ಭಕ್ತಿ, ಉತ್ಸಾಹ, ನಂಬಿಕೆ, ಆಕಾಂಕ್ಷೆ, ಹೋರಾಟ ಪ್ರಯತ್ನಗಳಿಂದ ಅಲಂಕರಿಸಿದ್ದಾನೆ. ಇಲ್ಲಿ ಇವರ ಜೀವನಕ್ಕೆ ಕೊನೆಯೆಂಬುದಿಲ್ಲ. ಔನತ್ಯಕ್ಕೆ ಮಿತಿ ಇಲ್ಲ, ಆತ್ಮಕೆ ಸಾವಿಲ್ಲ; ಒಬ್ಬರಿಗಿಂತ ಒಬ್ಬರು ಮೇರು ಭಕ್ತರೇ ಸರಿ! ಎಂಬಂತೆ ಚಿತ್ರಿಸಿದ್ದಾನೆ. ಭಕ್ತಿ ಎಂಬುದು ವೇದ-ಶಾಸ್ತ್ರ-ಪುರಾಣದ ತತ್ವವಲ್ಲ, ಅದು ಒಂದು ಜೀವನದ ಸಾರ್ಥಕ ಯಾತ್ರೆ, ಭಕ್ತಿಯನ್ನು ಸಿದ್ಧಾಂತಗಳ ನೆಲೆಯಲ್ಲಿ ಕಟ್ಟಿಕೊಡಲು ಸಾಧ್ಯವಿಲ್ಲ, ಬದಲಿಗೆ ಅದು ಜೀವನದ ರಸಗಳಿಗೆಯಾಗಿದೆ. ಆದ್ದರಿಂದ ಹರಿಹರನು ಶಿವಭಕ್ತರ ಕಥೆಗಳನ್ನು ಭಕ್ತಿ ಶಾಸ್ತ್ರಗಳಲ್ಲಿ ಬರೆದಿರುವಂತದ್ದಲ್ಲ, ಭಕ್ತರ ಅಂತರಾತ್ಮದಲ್ಲಿ ಹೊಕ್ಕು ಅವರ ಹೃದಯಗಳಲ್ಲಿ ಬರೆದಂತಿದೆ. ಅದೊಂದು ಜೀವನ ಸತ್ಯವಾದುದು, ಭಕ್ತರೊಂದಿಗೆ ಶಿವನು ಆತ್ಮೀಯ ಒಲವನ್ನು ಇಟ್ಟುಕೊಂಡು ಬಾಂಧವ್ಯದ ನೆಲೆಯಲ್ಲಿ ಒಡಗೂಡಿ ಅವರ ನಡುವೆ ಹೊಂದಿರುವ ಸ್ನೇಹ-ವಾತ್ಸಲ್ಯ ಸಂಬಂಧ ಗಟ್ಟಿಯಾಗಿದೆ, ಎಂಬಿಷ್ಟು ಅಂಶಗಳು ಸಂಶೋಧನಾಧ್ಯಾಯನದಿಂದ ವ್ಯಕ್ತವಾಗುತ್ತದೆ.

# ಅಧ್ಯಯನದ ಫಲಿತಗಳು

ಹರಿಹರನ ರಗಳೆಗಳಲ್ಲಿ ಶಿವ ಮತ್ತು ಭಕ್ತರ ಸಂಬಂಧದ ನೆಲೆಗಳು ಎಂಬ ಸಂಶೋಧನ ಪ್ರಬಂಧವನ್ನು ಹಲವು ದೃಷ್ಟಿಕೋನಗಳಿಂದ ಅಭ್ಯಸಿಸಿ, ಅಧ್ಯಯನವನ್ನು ತೃಪ್ತಿದಾಯಕವಾಗಿ ನಡೆಸಿ ಈ ಕೆಳಕಂಡ ಫಲಿತಗಳು ವ್ಯಕ್ತವಾಗಿದೆ.

ಹರಿಹರನ ರಗಳೆಗಳಲ್ಲಿ ಭಕ್ತನ ಮನಸ್ಸಿನ ಸೂತ್ರವನ್ನು ಅರ್ಥಮಾಡಿಕೊಳ್ಳುವುದರ ಅಗತ್ಯ ಇದೆ. ಆಗ ಮಾತ್ರ ಇಲ್ಲಿನ ಭಕ್ತಿ ಸೂತ್ರ ಅರ್ಥವಾಗಲು ಸಾಧ್ಯವಾಗುವುದು. ಇಲ್ಲಿನ ಶಿವಭಕ್ತರು, ಮನಸ್ಸಿನ ಜೊತೆ ಹೋಗದೆ, ಮನಸ್ಸಿನ ವಿಪರೀತ ಹೋಗುತ್ತಾರೆ. ಆಗ ಮಾತ್ರ ಅವರಿಗೆ ಭಕ್ತಿಯ ಉಪಲಬ್ಧವಾಗುವುದು. ಇಲ್ಲಿನ ಶಿವಭಕ್ತರ ಜೀವನ ಎಂಬುದು ಒಂದು ಶಕ್ತಿಯಸ್ವರೂಪವನ್ನು ಪಡೆದಂತಿದೆ, ಅವರಿಗೆ ಶಿವನಲ್ಲಿ ಲೀನವಾಗುವವರೆಗೆ ತೃಪ್ತಿ ಸಾಧ್ಯವಿಲ್ಲ. ಆ ಶಿವನೇ ಅವರ ಪಾಲಿನ ಪರಮ ಶಿಖರ, ಅದೇ ಅಂತಿಮ ವಿಷಯವಾಗಿದೆ. ಶಿವಶರಣರಿಗೆ ಭಕ್ತಿಯ ತಾದಾತ್ಮ್ಯಕ್ಕೊಳಗಾಗಿ ಬೇರಾವುದೇ ಸುಖ-ಭೋಗ-ಐಶ್ವರ್ಯಾದಿಗಳನ್ನು ಆಕಾಂಕ್ಷಿಸುವುದೂ ಇಲ್ಲ, ಯಾರನ್ನು ದ್ವೇಷಿವುದಿಲ್ಲ ಮತ್ತು ಯಾವ ವಿಷಯ-ಭೋಗಗಳಲ್ಲಿ ಆಸಕ್ತನಾಗಿರುವುದಿಲ್ಲ. ಭಕ್ತಿಯ ಪರವಶತೆ ಮತ್ತು ನೇಮಾಚರಣೆಯ ಉತ್ಸಾಹ ಒಂದೇ ಅವರಲ್ಲಿ ಪ್ರಧಾನವಾಗಿ ಉಳಿಯುವ ಸಂಗತಿಯಾಗಿರುತ್ತದೆ ಎಂಬುದು ಎಲ್ಲಾ ರಗಳೆಗಳ ಆಶಯವಾಗಿದೆ.

ಹರಿಹರನು ತನ್ನ ರಗಳೆಗಳಲ್ಲಿ ಶಿವ ಮತ್ತು ಭಕ್ತರ ನಡುವೆ ಸಂಬಂಧವನ್ನು ಬಹಳ ಆತ್ಮೀಯವಾಗಿ ಬೆಸೆದಿದ್ದಾನೆ. ಅಲ್ಲಿ ಶಿವನನ್ನು ಬಿಟ್ಟು ಭಕ್ತನು ಇರುವುದಿಲ್ಲ, ಭಕ್ತನನ್ನು ಬಿಟ್ಟು ಶಿವನು ಇರುವುದಿಲ್ಲ. ಇಬ್ಬರ ನಡುವೆ ಅಬೇಧ ಕಲ್ಪನೆಯಿದೆ ಎಂಬುದು ಗೋಚರವಾಗುತ್ತದೆ. ಅಲ್ಲದೆ ಶಿವನಿಗಿಂತ ಶಿವಶರಣರೇ ಮೇಲಾಗಿದ್ದರು. ಶಿವಭಕ್ತರೇ ಕಥಾನಾಯಕರಾಗಿ, ರಗಳೆಗಳಲ್ಲಿ ತಮ್ಮ ಭಕ್ತಿಯನ್ನು ಮೆರೆದಿದ್ದಾರೆ. ಇಲ್ಲಿ ಶಿವನು ಭಕ್ತನನ್ನು ತನ್ನ ಸ್ನೇಹಿತನಂತೋ ಇಲ್ಲವೆ ತನ್ನ ಕುಟುಂಬದ ಸದಸ್ಯನಂತೆ ತಿಳಿದು ಪ್ರೀತಿ-ವಾತ್ಸಲ್ಯದ ಭಾವ ತೋರುತ್ತಾನೆ. ಅದೇ ರೀತಿ ಭಕ್ತನು ತನ್ನ ಒಡೆಯನೆಂದು, ನಾನು ಅವನ ದಾಸನೆಂದು ತಿಳಿದು ಶಿವನನ್ನು ಆರಾಧಿಸುತ್ತಾನೆ. ಆದ್ದರಿಂದ

ಈ ಸಂಬಂಧದ ಬಾಂಧವ್ಯವನ್ನು

೧. ಸ್ನೇಹ ಸಂಬಂಧ

೨. ಕೌಟುಂಬಿಕ ವಾತ್ಸಲ್ಯ ಸಂಬಂಧ

೩. ದಾಸ್ಯ ಸಂಬಂಧ

ಈ ಸಂಬಂಧಗಳಡಿಯಲ್ಲಿ ಗುರುತಿಸಿ ಶಾಂತ, ಮಧುರ ಮತ್ತು ಧೃತಿ ಭಾವಗಳಿಂದ ಶಿವನನ್ನು ಆರಾಧಿಸುವ ಭಕ್ತರು ಶಿವನೊಂದಿಗೆ ಪ್ರೇಮವನ್ನು ಹೊಂದಿ ಪರಿಪೂರ್ಣತೆಯನ್ನು ಗಳಿಸುತ್ತಾನೆ. ಶಿವ ಮತ್ತು ಭಕ್ತನ ಭಕ್ತಿಯ ಸಂಬಂಧದಲ್ಲಿ ಹರಿಹರನು ಕೆಲವು ಸಂದೇಶವನ್ನು ನೀಡುತ್ತಿದ್ದಾನೆ ಎಂಬುದು ರಗಳೆಗಳ ಸಂಶೋಧನಾಧ್ಯಯನದಿಂದ ತಿಳಿದು ಬಂದಿದೆ. ಅವು.,

**(೧) <u>ಶಿವಭಕ್ತನು ಉನ್ಮತ್ತತೆಯಿಂದ ತುಂಬಿಹೋಗಿರುತ್ತಾನೆ :-</u>**

ಭಕ್ತನು ಶಿವನ ಹುಚ್ಚನ್ನು ಹಿಡಿಸಿಕೊಂಡಿರುತ್ತಾನೆ. ಅವನಿಗೆ ಎಲ್ಲದರ ಪರಿವಿಗಿಂತ ಶಿವನ ಪರಿಧಿಯೇ ಹೆಚ್ಚು. ಭಕ್ತನು ಕೆಲವೊಮ್ಮೆ ಹುಚ್ಚನಂತೆ ನಡೆದುಕೊಳ್ಳುತ್ತಾನೆ. ಹುಚ್ಚರಿಗೆ ಲೋಕಾರೂಢಿ, ಕುಲಮರ್ಯಾದೆಗಳನ್ನು ಬಿಟ್ಟು ನಡೆಯುವಂತೆ ಭಕ್ತನೂ ಸಹ ತನ್ನ ನೇಮವನ್ನು ಆಚರಿಸುವುದಕ್ಕಾಗಿ ಏನನ್ನು ಬೇಕಾದರೂ ಮಾಡುವ ಸಾಹಸಕ್ಕೆ ಕೈ ಹಾಕುತ್ತಾನೆ. ಹುಚ್ಚನಿಗೂ, ಇಲ್ಲಿನ ಭಕ್ತನಿಗೂ ಒಂದು ವ್ಯತ್ಯಾಸವಿದೆ. ಅದೇನೆಂದರೆ ಅವನು ಜೀವನದಲ್ಲಿ ಕೆಳಮಟ್ಟದ ಸ್ಥಾನದಲ್ಲಿ ಬಿದ್ದಿರುತ್ತಾನೆ ಆದರೆ ಇಲ್ಲಿನ ಶಿವಭಕ್ತ ಜೀವನದಲ್ಲಿ ಮೇಲ್ಮುಖಸ್ಥಾನಕ್ಕೆ ಏರುತ್ತಿರುತ್ತಾನೆ.

ಉದಾ: ಮಾನಕಂಜರನು ತನ್ನ ಮಗಳ ಮದುವೆಯ ದಿನದಂದೇ ಆಗಮಿಸಿದ ವಯೋವೃದ್ಧನ ಕಟ್ಟಿಗೆಯ ಪಾದುಕೆಗಳು ಕಾಲ್ಬೆರಳುಗಳಿಗೆ ತುಂಬ ನೋವು ಉಂಟು ಮಾಡುತ್ತಿದ್ದು ಅದರ ನಿವಾರಣೆಗೆಂದು ಮಧುಮಗಳ ಮೃದುವಾದ ತಲೆಗೂದಲನ್ನು ನೀಡಬೇಕೆಂದು ಕೇಳಿದಾಗ ಅಂಜದೆ, ಅಳುಕದೆ ಅಲಂಕೃತಗೊಂಡಿದ್ದ ಮಗಳ ತಲೆಗೂದಲನ್ನೇ ಕೊಟ್ಟ ಮಾನಕಂಜರನ ಭಕ್ತಿಯ ಉನ್ಮಾದತೆ ಅತಿಶಯವಾದುದು. ಅದೇ ರೀತಿ ಮುಗ್ಧ ಭಕ್ತ ಕಣ್ಣಪ್ಪ ಶಿವಲಿಂಗಕ್ಕೆ ತನ್ನ ಕಣ್ಣುಗಳನ್ನು ನೀಡುವುದು, ಭಕ್ತ ಸಿರಿಯಾಳನು ಅತಿಥಿ ಸತ್ಕಾರಕ್ಕಾಗಿ ತನ್ನ ಮಗನನ್ನು ಕೊಂದು ತಲೆಯ ಮಾಂಸವನ್ನು ಜಜ್ಜಿ ಇಡುವ ಪ್ರಸಂಗ, ಶಿವನಿಗಿಡುವ ನೈವೇದ್ಯ ಮಣ್ಣುಪಾಲಾದಾಗ ತನ್ನ ತಲೆಯನ್ನೇ ಕಡಿದು ನೈವೇದ್ಯ ಮಾಡುವ ಭಕ್ತ ಅರಿವಾಳ್ತಾಂಡರ, ರುದ್ರಪಶುಪತಿಯು ಪುರಾಣದ ಕಥೆಯಾದ ಶಿವನು ವಿಷಕುಡಿದ ಪ್ರಸಂಗವನ್ನು ಕೇಳಿ, ಹೌಹಾರಿ ಸಮುದ್ರದಲ್ಲಿ ನಿಂತು ವರ್ಷಗಟ್ಟಲೆ

ತಪಸ್ಸು ಮಾಡಿ, ಜಲಚರಗಳಿಗೆ ಬಲಿಯಾದರೂ ಕಂಗೆಡದೆ ಶಿವನ ಧ್ಯಾನ ಮಾಡುವುದು, ಕುಂಬಾರ ಗುಂಡಯ್ಯನು ತಾಳಮೇಳವೆಂಬಂತೆ ಮಡಿಕೆಯನ್ನು ಬಡಿದು ಬಡಿದು ಶಿವನೊಂದಿಗೆ ನರ್ತಿಸುವುದು. ಇಹಃ ಪಗೆಯಾಂಡರನು ತನ್ನ ಪಟ್ಟದರಸಿಯನ್ನೇ ದಾನ ನೀಡುವುದು..... ಹೀಗೆ ರಗಳೆಗಳಲ್ಲಿ ಶಿವಭಕ್ತನು ಭಕ್ತಿಯ ಉನ್ಮತ್ತತೆಯಿಂದ ತುಂಬಿ ತುಳುಕುತ್ತಾನೆ. ಇಲ್ಲಿ ಒಮ್ಮೆ ಭಕ್ತನ ನಿಷ್ಠೆ ಕಾರಣವಾದರೆ, ಮತ್ತೊಮ್ಮೆ ಅವನ ಮುಗ್ಧತೆ ಕಾರಣವಾಗುತ್ತದೆ. ಒಟ್ಟಾರೆ ತನ್ನ ಕೃತಿಗಳಲ್ಲಿ ಭಕ್ತನಿಗೆ ಶಿವಭಕ್ತಿಯ ಹುಚ್ಚು ಹಿಡಿಸಿರುವ ಹರಿಹರ ಅದರಿಂದ ತಪ್ಪಿಸಿಕೊಳ್ಳಲಾರದಂತೆ ಮಾಡಿದ್ದಾನೆ. ಅದೇ ರೀತಿ ಶಿವನಿಗೂ ಭಕ್ತನ ಮೇಲೆ ಅಭಿಮಾನ ಪ್ರೀತಿಯ ಸೆಳವು ಅಧಿಕವಾದುದು ಹೀಗೆ ಶಿವಭಕ್ತನ ಜೀವನದಲ್ಲಿ ಶಿವನು ಅವತರಿಸಿದಾಗ ಭಕ್ತನು ತನ್ನ ಹೃದಯದಲ್ಲಿ ಪರಮಾತ್ಮನಿಗೆ ಸ್ಥಳ ಕೊಡುತ್ತಾನೆ. ಅವನ ಒಲುಮೆ, ನೇಮ ನಿಷ್ಠೆಗಳನ್ನು ರೂಢಿಸಿಕೊಂಡು ಶಿವನ ಅವತರಣೆಗಾಗಿ ಕಾತರದಿಂದ ಕಾಯುತ್ತಾ ಭಕ್ತಿಯಲ್ಲಿ ಮುಳುಗುತ್ತಾನೆ. ಆಗ ಶಿವನ ಸಾಕ್ಷಾತ್ಕಾರ ಲಭಿಸಿದರೆ, ಅದೊಂದು ವಿಸ್ಫೋಟವೇ ಆದಂತೆ ಭಕ್ತನು ಬೇರೊಂದು ಜಗತ್ತಿನಲ್ಲಿ ಜೀವಿಸುತ್ತಿರುತ್ತಾನೆ. ಆಗ ತನ್ನಿಂದ ಆತ ಜೀವಿಸದೆ ಶಿವನ ಒಲುಮೆಯಿಂದ ಜೀವಿಸುತ್ತಿರುತ್ತಾನೆ ಎಂಬಂತೆ ಕೈಲಾಸದಲ್ಲಿ ಭಕ್ತನಿಗೆ ಗಣಪದವಿಯೊಂದಿಗೆ ಮೋಕ್ಷ ಪದವಿ ಪ್ರಾಪ್ತವಾಗಿರುತ್ತದೆ, ಅನಂತರ ಭಕ್ತನು ಸ್ತಬ್ಧನಾಗುತ್ತಾನೆ, ಶಾಂತಮಯನಾಗುತ್ತಾನೆ.

## (೨) <u>ಭಕ್ತಿಯ ಉನ್ಮತ್ತತೆಯಿಂದ ಭಕ್ತನು ಸ್ತಬ್ಧನಾಗುತ್ತಾನೆ, ಶಾಂತನಾಗುತ್ತಾನೆ, ಶಿವೋಮಯನಾಗುತ್ತಾನೆ :-</u>

ಭಕ್ತಿ ಎಂಬುದು ಶಿವನನ್ನು ಅರಿಯುವ ಕಲೆ, ಭಕ್ತಿಯಲ್ಲಿ ತಮ್ಮನ್ನು ತಾವು ಕಳೆದುಕೊಂಡು ಶಿವನ ಅಂತಃಸತ್ವದ ಭಾವವನ್ನು ಪಡೆದುಕೊಂಡು ಭಕ್ತನು ಸ್ತಬ್ಧನಾಗಿ ಶಾಂತಮಯನಾಗುವ ಸಂದೇಶಗಳೇ ಎಲ್ಲಾ ರಗಳೆಗಳ ಆಶಯವೆಂಬುದು ಸಂಶೋಧನಾಧ್ಯಯನದಿಂದ ತಿಳಿದುಬರುತ್ತದೆ. ಹರಿಹರನ ಭಕ್ತಿ ಸಾಹಿತ್ಯದಲ್ಲಿ ಶಿವನ ಸ್ತೋತ್ರ ಸ್ತುತಿಗಳ ಜೊತೆಗೆ ಪ್ರೀತಿ ಮತ್ತು ತಾದಾತ್ಮ್ಯವೆರೆಡೂ ಕೂಡಿ ಭಕ್ತರ ಹೃದಯದಲ್ಲಿ ಬರೆದ ಜೀವಂತ ಸತ್ಯವೆನಿಸಿದೆ ಇದು ಹರಿಹರನ ರಗಳೆಗಳ ವಿಶೇಷ ಕಾಣಿಕೆಯೆನಿಸಿದೆ.

## (೩) ಅನುರಾಗವೇ ಭಕ್ತಿ :-

ಹರಿಹರನ ರಗಳೆಗಳಲ್ಲಿ ವ್ಯಕ್ತವಾಗಿರುವ "ಭಕ್ತಿ" ಶಾಸ್ತ್ರೀಯವಾದುದಲ್ಲ, ಸಿದ್ಧಾಂತವೂ ಅಲ್ಲ, ಅದು ಜೀವಂತ ಶಕ್ತಿ ಎಂಬ ನಂಬಿಕೆಯಾಗಿದೆ. ಹರಿಹರನ ಭಕ್ತಿ ಭಾವುಕತೆಯಿಂದ ಬಂದಿದೆ ಮತ್ತು ತಾತ್ವಿಕನಿಲುವಿನಿಂದ ಕೂಡಿದೆ. ಕಥೆಗೆ ಒಬ್ಬ ನಾಯಕನು ಮುಖ್ಯವೆಂದು ಹೇಳಿ ಅವನ ಸುತ್ತ ಹೆಣೆಯುವ ಭಕ್ತಿಯು ಅತ್ಯಂತ ರೋಮಾಂಚನಕಾರಿಯಾದುದು. ಇಲ್ಲಿನ ಭಕ್ತಿ ಸುಗಮವಾದದ್ದು, ಪರಿಪೂರ್ಣ ಮನಸ್ಸಿನೊಂದಿಗೆ ಶಿವನೊಡನೆ ಪೋಣಿಸಿದ ಪ್ರೇಮವೇ ಭಕ್ತಿಯೆನಿಸಿದೆ. ಭಗವಂತ/ಶಿವ ಎಲ್ಲೋ ಇಲ್ಲ, ನಮ್ಮಯ ಅಂತರ್ಯದಲ್ಲೇ, ಮೌಲ್ಯಾದರ್ಶಗಳಲ್ಲೇ ಇದ್ದಾನೆ ಅದರ ಪಾಲನೆಯೇ ಶಿವಭಕ್ತಿ ಎನಿಸಿಕೊಳ್ಳುತ್ತದೆ ಈ ಭಕ್ತಿಯ ಚೈತನ್ಯವನ್ನು ಹೊಸ ಆಯಾಮದಲ್ಲಿ ಹರಿಹರನು ಹೇಳಲಿಚ್ಛಿಸಿದ್ದಾನೆ. ಅನುರಾಗದಿಂದ ಭಕ್ತಿ ಹುಟ್ಟುತ್ತದೆ, ಭಕ್ತಿಯಿಂದ ಶಿವನು ವೇದ್ಯನಾಗುತ್ತಾನೆ. ಎಂಬ ಒಟ್ಟು ಸಾರಾಂಶವು ರಗಳೆಗಳ ಅಧ್ಯಯನದಿಂದ ತಿಳಿದುಬರುತ್ತದೆ.

## (೪) ಉದಾತ್ತ ಸಂಸ್ಕಾರ – ದೈವಸಕ್ಷಾತ್ಕಾರ :-

ರಗಳೆಗಳಲ್ಲಿ ವ್ಯಕ್ತವಾಗುವ ಭಕ್ತಿರಸವು ಕಾವ್ಯಾಸಕ್ತರಿಗೆ ಆನಂದಪುಳಕಿತರನ್ನಾಗಿಸುತ್ತದೆ. ಭಕ್ತಿಯಲ್ಲಿ ತಲ್ಲೀನರಾಗುವ ಶಿವಭಕ್ತರ ಕಥೆಗಳು ಸಮಾಜಕ್ಕೆ ಉದಾತ್ತ ಸಂಸ್ಕಾರವನ್ನು ಕಲಿಸುತ್ತದೆ. ದೈವೀಸಾಕ್ಷಾತ್ಕಾರದ ಸ್ವರೂಪವನ್ನು ಸಾರಿರುವ ಹರಿಹರನ ದೃಷ್ಟಿಯು ಅನುಭಾವಿಕ ಅರಿವನ್ನು ನೀಡುತ್ತದೆ. ಸಮೃದ್ಧ ಜೀವನದ ಸಫಲತೆಯನ್ನು ಪಡೆದು ಬದುಕಿನಲ್ಲಿ ಭಕ್ತಿಯಿಂದ ಶಾಂತಚಿತ್ತರಾಗಿ ಆನಂದವನ್ನು ಪಡೆಯುವುದು ಹೇಗೆಂಬುದನ್ನು ರಗಳೆಗಳ ಅಧ್ಯಯನದಿಂದ ನಾವು ಕಲಿತುಕೊಳ್ಳಬಹುದಾಗಿದೆ. ಹರಿಹರನ ರಗಳೆಗಳ ಕುರಿತಾದ ಸಂಶೋಧನೆಯಿಂದಾಗಿ ಅಂದಿನ ಚಾರಿತ್ರಿಕ ಸಂದರ್ಭವೊಂದರ ಸಾಮಾಜಿಕ ವ್ಯವಸ್ಥೆಯ ಸ್ವರೂಪವನ್ನು ಅರ್ಥೈಸಿಕೊಳ್ಳುವ ಜೊತೆಗೆ ಅವುಗಳ ನಡುವಿನ ಅಂತರ ಸಂಬಂಧವು ಸ್ಪಷ್ಟವಾಗಿ ವ್ಯಕ್ತವಾಗಿದೆ. ಇದರೊಂದಿಗೆ ಹರಿಹರನ ಸಾಹಿತ್ಯವನ್ನು ಓದುವಾಗ ವರ್ತಮಾನದಲ್ಲಿ ಎದುರಾಗುವ ಪ್ರಶ್ನೆಗಳಾವುವು ಹಾಗು ಇಂದಿನ ಜನತೆಯ ಬದುಕಿಗೆ ಹೇಗೆ ಉಪಕಾರಿಯಾಗಬಲ್ಲದು ಎಂಬ ಸೂಕ್ಷ್ಮವಾದ ಚಿಂತನೆಗಳು ಅಧ್ಯಯನದಿಂದ ವ್ಯಕ್ತವಾಗುತ್ತದೆ. ಹರಿಹರನ ಭಾಷೆ, ಕಥಾಹಂದರ ಒಂದು ಸಂಸ್ಕಾರಯುತವಾದ ಭಕ್ತಿಯ ಪರಿಕಲ್ಪನೆಯೊಂದಿಗೆ ಬೆಸೆದು ಬಂದಿದ್ದು, ಅದು ಕೊನೆಗೆ ದೈವ ಸಾಕ್ಷಾತ್ಕಾರದೊಂದಿಗೆ ಲೀನವಾಗುತ್ತದೆ.

ಹರಿಹರನ ಸಮಕಾಲೀನ ಸಮಾಜದಲ್ಲಿದ್ದ ಜೈನ, ವೈದಿಕ, ವೀರಶೈವ ಧರ್ಮದ ನಡುವಿನ ಸಂಘರ್ಷದ ಮಧ್ಯೆ ವಾಸಿಸುವ ಚಂಚಲ ಮನಸ್ಸಿನ ಜನಸಾಮಾನ್ಯರ ಮನಸ್ಥಿತಿ ಯಾವುದರತ್ತ ಬೇಕಾದರೂ ವಾಲಬಹುದಿತ್ತು ಅಂತವರನ್ನು ತನ್ನೆಡೆಗೆ ಸೆಳೆದುಕೊಳ್ಳುವುದಕ್ಕೆ ಅವಶ್ಯವೆನಿಸಿದ್ದ ಉತ್ತಮ ಕಾವ್ಯರಚನೆ, ಸರಳ ಆಚರಣೆಗಳುಳ್ಳ ಧರ್ಮ ಸಂಪ್ರದಾಯ, ಮೌಲ್ಯಾದರ್ಶಗಳನ್ನೊಳಗೊಂಡ ಸಂಸ್ಕಾರ ಮತ್ತು ಹೊಸತನಗಳ ಅಗತ್ಯವಿತ್ತು. ಆದ್ದರಿಂದ ಕವಿಯು ರಗಳೆಗಳ ಮೂಲಕ ಲೌಕಿಕ ಸುಖಕ್ಕಿಂತ ಅಲೌಕಿಕ ಸುಖವೇ ಶಾಶ್ವತವಾದುದು ಎಂಬ ಅರಿವನ್ನು ಪ್ರತಿಪಾದಿಸುವ ಮೂಲಕ ಅದನ್ನು ಅನುಸರಿಸುವ ತನ್ನ ಭಕ್ತರು ಪರಿಶುದ್ಧ, ಪ್ರಾಮಾಣಿಕರು ಎಂದು ಸಾರಿ ಭಕ್ತರ ಪ್ರತಿಷ್ಠಾಪನೆ ಮಾಡಿದ್ದಾನೆ ಮತ್ತು ತನ್ನ ವಾದವನ್ನು ಸಮರ್ಥಿಸಿಕೊಳ್ಳುವ ಕ್ರಮವು ರಗಳೆಗಳಲ್ಲಿ ವ್ಯಕ್ತವಾಗಿದೆ. ಅದರಂತೆ ಸಮಾಜವನ್ನು ಪುನರ್ರಚಿಸುವ ದೃಷ್ಟಿಯನ್ನು ಅವನ ಕಾವ್ಯಗಳ ಮುಖೇನ ಸಾಧಿಸಿರುವುದು ನಮಗೆ ಅಧ್ಯಯನದಿಂದ ತಿಳಿದು ಬರುತ್ತದೆ.

ಶಿವಭಕ್ತರ ಗೈರುಹಾಜರಿ ಇದ್ದಂತಹ ಸಂದರ್ಭದ ಕಾಲಘಟ್ಟದಲ್ಲಿ "ಹೂವಿನಿಂದ ನಾರೂ ಸ್ವರ್ಗಕ್ಕೆ" ಎಂಬ ಗಾದೆ ಮಾತಿನಂತೆ ಭವಿಗಳನ್ನು ಭಕ್ತರ ಸಂಗಡದ ಮೂಲಕ ದೈವಸಾನಿಧ್ಯಕ್ಕೆ ತಲುಪಿಸಿ ಭಕ್ತರನ್ನಾಗಿ ಪರಿವರ್ತಿಸುವ ಅವನ ಕೈಚಳಕ ವಿಶೇಷವಾದುದು. ಅದಕ್ಕಾಗಿ ಅವನು ಸಮಾಜವನ್ನೇ ಬುಡಮೇಲು ಮಾಡುವಂತಹ ಕ್ರಾಂತಿಕಾರಿ ಸನ್ನಿವೇಶಗಳನ್ನು ಧೈರ್ಯದಿಂದ ಯಶಸ್ವಿಯಾಗಿ ರಚಿಸಿದ ಅವನ ದೃಷ್ಟಿಕೋನ ಸಮಾಜದಲ್ಲಿ ಜನರನ್ನು ಜಾಗೃತರನ್ನಾಗಿಸುವುದಲ್ಲದೆ, ಹೆಚ್ಚು ಸ್ಥಿತಪ್ರಜ್ಞರನ್ನಾಗಿಸಿ ಸಮಾನಾಂತರ ಸಮಾಜದ ನಿರ್ಮಾಣದ ಕನಸು ಕಾಣಲು ಸಾಧ್ಯವಾಯಿತು. ಒಂದೆಡೆ ಬಡವ-ಬಲ್ಲಿದ ಮತ್ತು ಅಬಲೆಯರನ್ನು ಕಾವ್ಯ ನಾಯಕ-ನಾಯಕಿಯರನ್ನಾಗಿ ಮಾಡಿಕೊಂಡು ಅವರ ಹೃದಯ ಶ್ರೀಮಂತಿಕೆಯನ್ನು ಮೆರೆಸಿದ. ಮತ್ತೊಂದೆಡೆ ರಾಜರು-ಬ್ರಾಹ್ಮಣರು-ಬಲಿಷ್ಟರನ್ನು ತುಚ್ಛವಾಗಿ ಕಾಣುವ ಮೂಲಕ ಅವರ ವಿರುದ್ಧ ಬಂಡಾಯ ಮನೋಭಾವವನ್ನು ತಳೆದಿರುವ ಹರಿಹರನು ಅವರ ನೀಚ ಗುಣವನ್ನು ನಿರ್ದಾಕ್ಷಿಣ್ಯವಾಗಿ ಖಂಡಿಸಿದ್ದಾನೆ.

ಉದಾ: (೧) ಬೇಡರ ಕಣ್ಣಪ್ಪ ರಗಳೆಯಲ್ಲಿ ಕಣ್ಣಪ್ಪ ಮತ್ತು ದೇವಾಲಯದ ಪೂಜಾರಿಯ ನಡುವಿನ ಪೂಜಾ ಆಚರಣೆಯ ಕ್ರಮಗಳು.

(೨)ಕೆಂಭಾವಿ ಬೋಗಣ್ಣನ ರಗಳೆಯಲ್ಲಿ ಬೋಗಣ್ಣ –ವೈದಿಕರ ನಡುವಿನ ಸಂಘರ್ಷ.

(೩)ಹಾವಿನ ಹಾಳ ಕಲ್ಲಯ್ಯನ ರಗಳೆಯಲ್ಲಿ ಕಲ್ಲವ್ವೆ -ಬ್ರಾಹ್ಮಣರ ನಡುವಿನ ಸಂಘರ್ಷ. ಅದಕ್ಕೆ ಪ್ರತಿಯಾಗಿ ಕಲ್ಲಯ್ಯ ಶಿವಭಕ್ತರ ಮನೆಯ ನಾಯಿಯ ಬಾಯಿಯಲ್ಲಿ ವೇದ-ಮಂತ್ರ ಪಠಣ ಮಾಡಿಸಿದ್ದು. ಹೀಗೆ ವೈದಿಕರ ಆಚರಣೆಯ ಸಾರವನ್ನು ಅಲ್ಲಗಳೆದಿದ್ದಾನೆ. ಭಗವಂತ ಮತ್ತು ಭಕ್ತನ ಸ್ಥಾನ ಪಲ್ಲಟಮಾಡುವ ಮೂಲಕ ಅವರಲ್ಲಿ ಅಬೇಧ ಭಾವವನ್ನು ಮೂಡಿಸಿ ಭಕ್ತಿಯ ಪರಾಕಾಷ್ಠೆಯನ್ನು ಮೆರೆಸುವುದರ ಜೊತೆಗೆ ಶ್ರೀಸಾಮಾನ್ಯರನ್ನು ತನ್ನ ಸಾಹಿತ್ಯದತ್ತ ದಿಟ್ಟಿಸಿನೋಡುವಂತೆ ಮಾಡಿದ ಅವನ ಕಾರ್ಯವೈಖರಿಯ ಪರಿ ಸಂಶೋಧನಾಧ್ಯಯನದಿಂದ ತಿಳಿದುಬರುತ್ತದೆ.

ಹರಿಹರನ ರಗಳೆಗಳು ಇಂದಿನ ಸಮಾಜ ವ್ಯವಸ್ಥೆಗೆ ಹೇಗೆ ಪ್ರಸ್ತುತವಾಗಬಲ್ಲವು? ಎಂಬಂತಹ ಮಹತ್ವದ ಪ್ರಶ್ನೆಯನ್ನೆತ್ತಿಕೊಂಡು ಚರ್ಚಿಸಿದರೆ, ಧರ್ಮಕೇಂದ್ರಿತ ನೆಲೆಯಲ್ಲಿ ಸಂಸ್ಕಾರಯುತ ಶಿವಕಥೆಗಳ ಮೂಲಕ ವರ್ಗ, ವರ್ಣ ಮತ್ತು ಸ್ತ್ರೀ ಸಮಸ್ಯೆಗಳ ನಿವಾರಣೆಯಂತಹ ಪ್ರಸಂಗಗಳನ್ನು ಒಳಗೊಂಡಿದೆ. ಇಂತಹ ಅನೇಕ ಸವಾಲುಗಳಿಗೆ ಸಮರ್ಥನೀಯವಾದ ಉತ್ತರ ನೀಡಿದೆ ಎಂಬುದು ವೇದ್ಯವಾಗುತ್ತದೆ. ಕೆಂಭಾವಿ ಭೋಗಣ್ಣನ ರಗಳೆ, ಕಣ್ಣಪ್ಪನ ರಗಳೆ, ಅಕ್ಕಮಹಾದೇವಿ ರಗಳೆ, ಅಮ್ಮವ್ವೆಯ ರಗಳೆ, ಹೆರೂರು ಹೆಣ್ಣಿನ ರಗಳೆ, ಕಾರಿಕಾಲಮ್ಮೆ ರಗಳೆ ಮುಂತಾದ ಕಥೆಗಳಲ್ಲಿ ಅಸ್ಪೃಶ್ಯತೆ ಮತ್ತು ಮಹಿಳಾ ವಿಮೋಚನೆಯಂತಹ ಮುಖ್ಯ ವಿಷಯಗಳನ್ನು ಒಳಗೊಂಡಿರುತ್ತದೆ. ವಚನ ಚಳುವಳಿಗೂ ಹರಿಹರನ ರಗಳೆಗಳಿಗೂ ಆತ್ಮೀಯ ಸಂಬಂಧವಿರುವುದು ಅಧ್ಯಯನದಿಂದ ವ್ಯಕ್ತವಾಗುತ್ತದೆ.

ವಚನ ಚಳುವಳಿಯ ಪ್ರಭಾವದಿಂದ ಪ್ರತಿಯೊಂದು ವೃತ್ತಿ ಕಾಯಕಗಳಾದವು, ಅದರಂತೆ ರಗಳೆಗಳಲ್ಲಿನ ಶಿವಭಕ್ತರು ಒಂದಲ್ಲಾ ಒಂದು ಕಾಯಕದಲ್ಲಿ ನಿಷ್ಠೆಯುಳ್ಳವರಾಗಿ, ಶಿವಭಕ್ತಿಯನ್ನು ಗಾಢವಾಗಿ ಮೈಗೂಡಿಸಿಕೊಂಡವರಾದರು. ಆದರೆ ಅವರಲ್ಲಿ ಹಣ ಸಂಗ್ರಹಿಸುವ, ತಲೆಮಾರಿಗಾಗಿ ಆಸ್ತಿ ಮಾಡಿಡುವ ಸಂಕುಚಿತ, ಸ್ವಾರ್ಥ ಮನೋಭಾವಗಳು ವ್ಯಕ್ತವಾಗುವುದಿಲ್ಲ. ಬದಲಿಗೆ ನಿತ್ಯದಾಸೋಹ, ಅತಿಥಿ ಸತ್ಕಾರ, ನೇಮ, ಸೇವಾ ಮನೋಭಾವ, ದಾನ-ಧರ್ಮ ಮತ್ತು ಶಿವಭಕ್ತಿಯ ಆಚರಣೆಗಳು ಪ್ರಧಾನವಾಗಿ ಕಾಣುವ ಮೌಲಿಕ ಗುಣಗಳಿದ್ದವು. ಇಂತಹ ದೀರ್ಘಕಾಲದ ಚಟುವಟಿಕೆಯಲ್ಲಿಯೇ ಮುಂದುವರಿಯುತ್ತಿದ್ದ ಶಿವಭಕ್ತರ ಮೂಲಕ 'ಭಕ್ತಿ'ಯ ಪ್ರತಿಪಾದನೆ ಮಾಡುವ ಉದ್ದೇಶವನ್ನು ಹರಿಹರನು ಹೊಂದಿದ್ದಂತೆ ತೋರುತ್ತದೆ. ಆದ್ದರಿಂದ

ಶಿವನು ಭಕ್ತರಿಗೆ ಆತ್ಮೀಯ ಬಂಧುವೂ ಹೌದು: ರಕ್ಷಕನೂ ಹೌದು ಎಂಬಂತೆ ಚಿತ್ರಿಸಿರುವ ಹರಿಹರನು ಶಿವನಿಗೂ-ಭಕ್ತರಿಗೂ ಅಂತರವಿರಿಸದೆ ಒಂದೇ ಸ್ಥಾನದಲ್ಲಿರಿಸುವ ಮೂಲಕ ಭಕ್ತಿಯ ಸಾರ್ಥಕ್ಯದ ಅರಿವನ್ನು ಮೂಡಿಸಿದ್ದಾನೆ. ಇಂತಹ ಮನೋಭಾವ ಭಕ್ತಿಪಂಥ ಬೆಳವಣಿಗೆಗೆ ಪೂರಕವಾಗುತ್ತದೆ ಎಂಬುದು ಅಧ್ಯಯನದಿಂದ ತಿಳಿದು ಬಂದಿರುತ್ತದೆ.

ಹರಿಹರನು ತನ್ನ ಕೃತಿಗಳಲ್ಲಿ ಹಲವು ವೃತ್ತಿ ಪ್ರಭೇಧಗಳನ್ನು ತಿಳಿಸಿದ್ದರೂ, ಜಾತಿ ಪ್ರಭೇಧಗಳನ್ನು ಗುರುತಿಸಿಲ್ಲ. ಅವನ ಪ್ರಕಾರ ಇರುವುದು ಎರಡೇ ಜಾತಿ (೧)ಭಕ್ತಕುಲ, (೨)ಭವಿಕುಲ. ಸ್ತ್ರೀ ಮತ್ತು ಪುರುಷ ಬೇಧವನ್ನು ಗುರುತಿಸಿಲ್ಲ ಬದಲಿಗೆ ಸ್ತ್ರೀಯರ ಪರವಾದ ಒಲವು ಕಾಳಜಿಯನ್ನು ವ್ಯಕ್ತಪಡಿಸಿದ್ದಾನೆ. ಪುರುಷ ಸಮಾಜದ ಸೊಕ್ಕನ್ನು ಮುರಿಯುವಂತಹ ಸ್ತ್ರೀತ್ವವನ್ನು ಎತ್ತಿಹಿಡಿದು ಶಿವನೊಂದಿಗೆ ಸ್ತ್ರೀಯರ ಭಕ್ತಿ-ಬಾಂಧವ್ಯವನ್ನು ಉತ್ತಮಪಡಿಸಿದ್ದಾನೆ.
ಉದಾ: ಮಹಾದೇವಿಯಕ್ಕ, ಕಾರಿಕಾಲಮ್ಮೆ, ಅಮ್ಮವ್ವೆ, ಹೆರೂರು ಹೆಣ್ಣು ವೈಜಕವ್ವೆ, ನಿಂಬಿಯಕ್ಕ, ಪಾಂಡ್ಯ ಮಹಾದೇವಿ, ಕೋಳೂರ ಕೊಡಗೂಸು ಇತ್ಯಾದಿ.

ಸಮಾಜದಲ್ಲಿ ಕಡೆಗಣಿಸಲ್ಪಟ್ಟ ಕೆಳಜಾತಿ, ಬಡವ ವರ್ಗದವರು ಸಲ್ಲಿಸುವ ಭಕ್ತಿ-ಭಾವ ಶಿವನಿಗರ್ಪಿತವಾಗುತ್ತದೆ. ತಾರತಮ್ಯವಿಲ್ಲದೆ ಅವರನ್ನು ತನ್ನೊಳಗೆ ತಂದುಕೊಳ್ಳುವ ಮೂಲಕ ಕೆಳಜಾತಿ ಬಡವ ಭಕ್ತಕುಲದೊಂದಿಗೆ ಆತ್ಮೀಯ ಬಾಂಧವ್ಯವನ್ನು ಶಿವನು ಹೊಂದಿದ್ದಾನೆ.
ಉದಾ: ಕೆಂಭಾವಿ ಭೋಗಣ್ಣನ ರಗಳೆಯಲ್ಲಿ,

ಶಿವಭಕ್ತರೊಳಗೆ ಜಾತಿಯ ವಿಚಾರಿಪುದಿಲ್ಲ

ಶಿವಭಕ್ತರೊಳಗೆ ಬೇಧ ಕಲ್ಪಿಸುವುದಿಲ್ಲ

ವೇಷವಿರ್ದಲ್ಲಿ ಗಿರಿಜೇಶನಿರ್ದಪನೆಂದು.....(ಹರಿಹರನ ರಗಳೆಗಳು: ಡಾ.ಎಂ.ಎಂ.ಕಲಬುರ್ಗಿ)

ಕಣ್ಣಪ್ಪ, ಮಾದಾರ ಚೆನ್ನಯ್ಯ, ಇಳೆಯಾಂಡ ಗುಡಿಮಾರ, ಅತಿಭಕ್ತ, ಸೋಮಾಸಿಮಾರ, ತಿರುನಾಳ್ಪೋವರರೇ ಮೊದಲಾದ ಶಿವಭಕ್ತರ ಪ್ರಿಯಭಕ್ತಿ ಶಿವನಿಗರ್ಪಿತವಾಗುತ್ತದೆ.

ಒಟ್ಟಿನಲ್ಲಿ ಹರಿಹರನಿಗೆ ಭಕ್ತಿಯ ಆವೇಶ ಹೆಚ್ಚು. ಧರ್ಮಾಭಿಮಾನ ಹರಿಹರನಲ್ಲಿ ಅಧಿಕವಾಗಿದೆ. ಹಲವು ನೇಮಗಳ ಮೂಲಕ ಶಿವಭಕ್ತಿಯನ್ನು ಪಾಲಿಸುತ್ತಾ ಆತ್ಮಶುದ್ಧಿಯಿಂದ ಬಾಳ್ವೆ ನಡೆಸುತ್ತಿದ್ದ ಶಿವಭಕ್ತರು ಶೈವಧರ್ಮದ ಅನುಯಾಯಿಗಳಾಗಿದ್ದರು. ಹೀಗೆ ಶಿವಭಕ್ತರು ಶಿವನಲ್ಲಿ

ಅಚಲಭಕ್ತಿ, ವಿಶ್ವಾಸ, ನಂಬಿಕೆ, ಭಕ್ತಿ, ಭಾವ ವಿಷಯಗಳಲ್ಲಿ ಮುಳುಗಿಹೋಗಿರುವುದನ್ನು ವ್ಯಕ್ತಪಡಿಸಿರುವ ಹರಿಹರನ ರಗಳೆಗಳು ಸಾಹಿತ್ಯದ ವಸ್ತುವೈವಿಧ್ಯ, ಭಕ್ತಿಯ ಹರವು ಮತ್ತು ಸಾರ್ವಕಾಲಿಕತೆಯ ಸತ್ಯವನ್ನು ಪರಿಚಯಿಸಿಕೊಡುತ್ತದೆ.

ಶಿವ ಮತ್ತು ಭಕ್ತರ ನಡುವಿನ ಸಂಬಂಧದಲ್ಲಿ 'ಭಕ್ತಿ' ಎಂಬುದು ಸೇತುವೆಯಾಗಿರುತ್ತದೆ. ಭಕ್ತನು ನಿಷ್ಠೆಯಿಂದ ಶಿವನ ದರ್ಶನಕ್ಕೆ ಎಷ್ಟು ಹಾತೊರೆಯುತ್ತಾನೋ ಅಷ್ಟೇ ಕಾತರ ಶಿವನಿಗೂ ಇರುತ್ತದೆ. ಭಕ್ತನ ನೈಜತೆಯನ್ನು ಶಿವನು ಕಾಡಿ ಕಾಡಿ ಪರೀಕ್ಷೆಗೆ ಒಡ್ಡಿದಾಗ ಎದೆಗುಂದದ ಭಕ್ತನು ಶಿವನನ್ನೇ ಸೋಲಿಸುತ್ತೇನೆ ಎಂಬ ನಿಲುವಿನಿಂದ ಭಕ್ತಿಯ ಮೂಲಕ ಹೋರಾಟ ಮಾಡಿದರೆ, ಶಿವನು ತನ್ನ ಗೆಲುವಿಗೆ ಹೋರಾಟ ಮಾಡುತ್ತಿರುತ್ತಾನೆ. ಹೀಗೆ ಶಿವ-ಭಕ್ತರ ನಡುವಿನ ಈ ಭಕ್ತಿಯ ಜಗಳದಲ್ಲಿ ಕೊನೆಗೆ ಗೆಲ್ಲುವವರು ಯಾರು? ಎಂಬ ಪ್ರಶ್ನೆ ಬಂದಾಗ ಶಿವನು ತನ್ನ ಭಕ್ತರ ಭಕ್ತಿಗೆ ಸೋತಿರುತ್ತಾನೆ. ಭಕ್ತನು ತನ್ನ ನಿಷ್ಠೆ-ಆದರ್ಶಗಳಿಂದ ಗೆದ್ದಿರುತ್ತಾನೆ. ಇಲ್ಲಿ ಸೋಲಿನಲ್ಲೂ ಗೆಲುವನ್ನು ಸಾಧಿಸಿರುವ ಶಿವನು ಉಳಿವ ಮನುಷ್ಯರು ಸನ್ಮಾರ್ಗದಲ್ಲಿ ಸಾಗಿ ತನ್ನ ಮನಸ್ಸನ್ನು ನಿಗ್ರಹಿಸಿಕೊಂಡು ನಡೆ, ನುಡಿ ಶುದ್ಧ, ಸತ್ಯ, ದಾನ ಧರ್ಮದಿಂದ ಕೂಡಿರುವ ತನ್ನ ಭಕ್ತರ ದಾಸನಾಗುತ್ತಾನೆ. ಉಜ್ವಲ ಶಿವಭಕ್ತಿ ಹರಿಹರನ ಕಾವ್ಯಕ್ಕೆ ಸ್ಥಾಯಿ, ಅವನು ಒಬ್ಬ ಶಿವಕವಿ, ಭಕ್ತಕವಿ, ಅವನ ಕಲ್ಪನೆ ಶಿವಪುರ. ರಗಳೆಗಳಲ್ಲಿ ಕೇವಲ ಶಾಸ್ತ್ರಬದ್ಧವಾದ ಶುಷ್ಕ ಗದ್ಯವನ್ನು ಅವನು ಬರೆದಿಲ್ಲವೆಂಬುದು ತಿಳಿಯುತ್ತದೆ. ಭಾಷೆಯ ವಿಷಯದಲ್ಲಿ ಹರಿಹರನು ಕನ್ನಡ ಆಡುಮಾತಿನ ಲಯವಿನ್ಯಾಸ ಹಾಗು ಪದಪುಂಜಗಳನ್ನು ಹೇರಳವಾಗಿ ಬಳಸಿ ಕ್ರಾಂತಿಯನ್ನು ಸಾಧಿಸಿದ್ದಾನೆ ಎಂದು ಅಧ್ಯಯನದಿಂದ ತಿಳಿದುಬರುತ್ತದೆ.

**ಹರಿಹರನ ರಗಳೆಗಳಲ್ಲಿ ಪ್ರಧಾನವಾಗಿ ವ್ಯಕ್ತವಾಗುವ ಅಂಶಗಳು :-**

(೧) ಭಗವದ್ಭಕ್ತನಾದ ಹರಿಹರನಲ್ಲಿ ಅಂತರ್ಗತವಾಗಿದ್ದ ಅಪಾರ ಶಿವನೊಲುಮೆಯೊಂದಿಗೆ ವಿರೂಪಾಕ್ಷಸ್ವಾಮಿ ಪೂಜೆ ಮತ್ತು ಭಕ್ತಿಯ ಆವೇಶವೇ ಹೊರಹೊಮ್ಮಿ ಉತ್ಸಾಹ ಶೈಲಿಯಲ್ಲಿ ಶಿವಭಕ್ತರ ಕಥೆಗಳನ್ನು ರಚಿಸುವುದಕ್ಕೆ ಪ್ರೇರೇಪಿಸಿದೆ. ಇಲ್ಲಿ ಪ್ರಮುಖವಾಗಿ, "ಭಕ್ತ-ವೃತ್ತಿ-ನೇಮನಿಷ್ಠೆ-ಆದರ್ಶ-ಆತ್ಮೋನ್ನತಿ-ಆಧ್ಯಾತ್ಮಿಕ ಸಾಧನೆ" ಕ್ರಮವಾಗಿ ನಡೆಯುವ ಭಕ್ತಿಯ ನೆಲೆಯು ಗಮನಾರ್ಹವಾದುದು. ಶಿವನೊಲುಮೆಯನ್ನು ಬೆಳೆಸಿಕೊಳ್ಳುವ ಭಕ್ತರು-ಶೈವಾಚರಣೆ-ವೃತ್ತಿ-ಸೇವೆ-ದಾನಗಳೆಂಬ ಮೌಲ್ಯಗಳನ್ನು ಹಿಡಿದು ಶಿವನ

ಕರುಣೆಗೊಳಗಾಗುವ ಭಕ್ತರು–ಪರಮೇಶ್ವರನಿಂದ ಭಕ್ತನ ಪರೀಕ್ಷೆ–ಭಕ್ತನ ವಿಜಯಪತಾಕೆ–ಶಿವನ ದರ್ಶನಭಾಗ್ಯ–ಕೈಲಾಸ ಪ್ರವೇಶ–ಗಣಪದವಿ ಪ್ರಾಪ್ತಿ, ಹೀಗೆ ಕ್ರಮಬದ್ಧವಾಗಿ ನಡೆಯುವ ಘಟನಾ ಸರಪಳಿಯೆಂಬಂತೆ ರಗಳೆಯ ಕಥೆ ಮೂಡಿದೆ.

(೨) ಭಕ್ತರ ದಯಾಪರತೆ, ಉಪಕಾರಶೀಲತೆ ಗುಣಗಳನ್ನು ಮೆರೆದು ಭೂಲೋಕದಲ್ಲಿ ಭಕ್ತಿಯ ಹೊಸ ದಾಖಲೆಯನ್ನು ಸೃಷ್ಟಿಸುತ್ತಾರೆ. ಇದು ಸಮಾಜದ ಜನರಿಗೆ ಶ್ರೇಯಸ್ಕರವೆಂಬಂತೆ ತಿಳಿಯಹೇಳಿರುವ ಹರಿಹರನ ಸಾಹಿತ್ಯಕ್ಕೆ ಸಮಾಜದ ಜನರ ಮನಸ್ಸು ಆಕರ್ಷಿಸದೆ ಇರುವುದಿಲ್ಲ. ಹರಿಹರನದು ಉತ್ಸಾಹದ ಭಕ್ತಿಭಾವ, ಭಕ್ತಿ ಸುಖದ ಮುಂದೆ ಇತರ ಸುಖಗಳೆಲ್ಲಾ ಶೂನ್ಯವೆಂದೇ ತಿಳಿಸಿದ್ದಾನೆ. ಆದ್ದರಿಂದ ಶಿವಭಕ್ತರು ತಮ್ಮ ಬದುಕಿನಲ್ಲಿ ಲೌಕಿಕ ಸುಖಕ್ಕಿಂತ ಪಾರಲೌಕಿಕ ಸುಖಕ್ಕೇ ಹೆಚ್ಚಿನ ಒತ್ತುಕೊಟ್ಟು ಸಾಧಿಸಿದ ಶಿವಭಕ್ತಿಯ ಹಿರಿಮೆ ಮತ್ತು ಮಾನವೀಯ ಧರ್ಮದ ಗರಿಮೆಯನ್ನು ಹರಿಹರ ತನ್ನ ರಗಳೆಗಳಲ್ಲಿ ಪ್ರಸ್ತುತಪಡಿಸಿದ್ದಾನೆ.

(೩) ಸಾಮಾನ್ಯರಂತೆ ಸಮಾಜದಲ್ಲಿ ಭಕ್ತಿ–ಭಾವದಿಂದ ಬಾಳುತ್ತಿದ್ದ ಶಿವಶರಣರ ಚರಿತ್ರೆಗಳನ್ನು ಕಾವ್ಯರೂಪದಲ್ಲಿ ಮೊತ್ತಮೊದಲಿಗೆ ರಚಿಸಿ ಚಾರಿತ್ರಿಕ ಮತ್ತು ಸಾಹಿತ್ಯಕ ದಾಖಲೆಯನ್ನುಂಟುಮಾಡಿದ ಹರಿಹರ ಶಿವಶರಣರಲ್ಲಿ ಎಂದೂ ಬೇಧ–ಭಾವವೆಣಿಸಿರಲಿಲ್ಲ. ಪ್ರತಿಯೊಬ್ಬ ಶಿವಭಕ್ತನ ಚರಿತ್ರೆಗೂ ಬಹಳ ಪ್ರಾಧಾನ್ಯತೆ ನೀಡಿದ್ದಾನೆ. ಯಾವ ರಾಜರ ಹಂಗಿಗೂ ಒಳಗಾಗದ ಇವನಿಗೆ ಹಂಪೆಯ ವಿರೂಪಾಕ್ಷನೇ ಒಡೆಯನಾದರೆ, ಶಿವಭಕ್ತರ ಶ್ರೇಷ್ಠ ಭಕ್ತಿಯಾಚರಣೆಯನ್ನು ವಿವರಿಸುವುದೇ ಇವನ ಕಾವ್ಯದ ಉದ್ದೇಶವಾಗಿತ್ತು. ಆದ್ದರಿಂದ ಕಾವ್ಯನಾಯಕರೇ ಶಿವಭಕ್ತರಾಗಿದ್ದರು. ಭಕ್ತ ಜನಸಮೂಹವೇ ತನ್ನ ಕೇಳುಗ ಶೋತೃಗಳಂತೆ ತಿಳಿದಿದ್ದನು.

(೪) ಹರಿಹರನಿಗೆ ಭಕ್ತಿಯ ಉತ್ಸಾಹ ಅಧಿಕ. ಭಕ್ತರ ಚರಿತ್ರೆಯನ್ನು ವಿವರಿಸುವುದೇ ತನ್ನ ಗುರಿಯೆಂದು ನಂಬಿದ್ದ ಓರ್ವ ಮಹಾಕವಿ. ಅಂತೆಯೇ ಶಿವಭಕ್ತನಾಗಿದ್ದನು. ಶಿವಭಕ್ತಿಯ ಆಧಿಕ್ಯವನ್ನು ತಿಳಿಸುತ್ತಾ ಶಿವಪರಿವಾರವನ್ನು ಕುರಿತು ತಿಳಿಸುವುದೇ ರಗಳೆಗಳ ಆಶಯವಾಗಿದೆ. ಶಿವಭಕ್ತರು, ಶಿವಶರಣರು ತಮ್ಮ ಶಿವಭಕ್ತಿ ಮತ್ತು ವೀರಶೈವ ಧರ್ಮಗಳ ಪ್ರಸಾರಕ್ಕೆ ಪರಧರ್ಮೀಯರೊಡನೆ ಹೋರಾಡಿದ ಸ್ವರೂಪವನ್ನು ತಿಳಿಸಿದ್ದಾನೆ. ಇಲ್ಲಿ ಸ್ವಧರ್ಮದ ಶ್ರೇಯಸ್ಸಿಗೆ ಅನ್ಯಧರ್ಮದ ವಿರುದ್ಧ ಹೋರಾಟ ಅನಿವಾರ್ಯವೆಂಬಂತೆ ಚಿತ್ರಿಸಿದ್ದಾನೆ.

ಉದಾ: ಏಕಾಂತ ರಾಮಯ್ಯ, ಬಾಹೂರ ಬೊಮ್ಮಿತಂದೆ, ದಂಡೀಶ ಭಕ್ತ, ಅಕ್ಕಮಹಾದೇವಿ, ತೆಲುಗು ಜೊಮ್ಮಯ್ಯ, ಮಾರುಡಿಗೆ ನಾಚಿತಂದೆ ಮೊದಲಾದವರು.

(೫) ಶಿವಭಕ್ತನು ಸತ್ಯ, ನ್ಯಾಯ, ಛಲ, ನಿಷ್ಠೆಯೆಂಬಂತಹ ಮೌಲ್ಯಾದರ್ಶಗಳ ರಕ್ಷಣೆಗಾಗಿ ನಡೆಸುವ ಭಕ್ತಿಯ ಹೋರಾಟ ಮತ್ತು ತಮ್ಮ ಶಿವಭಕ್ತಿಯಾಚರಣೆಗೆ ಎದುರಾಗುವ ಪ್ರತಿ ಸಂದರ್ಭವನ್ನು ಧೈರ್ಯದಿಂದ ಪ್ರತಿಭಟಿಸುವ ಮನೋಧರ್ಮವನ್ನು ಕುರಿತು ರಗಳೆಗಳಲ್ಲಿ ನಿರ್ಭಿಡೆಯಿಂದ ಸಾರಿರುವುದರಿಂದ ಇವನಿಗೆ ಲಭಿತವಾಗಿರುವ ಕ್ರಾಂತಿಕವಿಯೆಂಬ ಬಿರುದು ಸಾರ್ಥಕವಾದುದು.

(೬) ಸಮಾಜದ ಜನರೊಡನೆ ಬೇಧವೆಣಿಸದೆ ಬಡವ ಬಲ್ಲಿದ, ಅಸ್ಪೃಶ್ಯವರ್ಗ, ಸ್ತ್ರೀ ಸಮೂಹ, ತಿರಸ್ಕೃತ ವರ್ಗದ ಜನರನ್ನು ಕಾವ್ಯದ ನಾಯಕರನ್ನಾಗಿಸಿದ್ದಾನೆ. ಈ ನಾಡಿನ ಕಡೆಗಣಿಸಲ್ಪಟ್ಟ ಜನವರ್ಗದ ಚರಿತ್ರೆಯನ್ನು ಯಾರ ಹಂಗಿಗೂ ಒಳಗಾಗದೆ ಧೈರ್ಯದಿಂದ ಮುಕ್ತಕಂಠದಿಂದ ಅವರ ಶಿವಭಕ್ತಿಯ ಮಹಿಮೆಯನ್ನು ಸಾರಿದ್ದಾನೆ. ಹೀಗೆ ಸಮಾಜದಲ್ಲಿ ಸಮಾನತೆಯನ್ನು ಮೆರೆದು ಸರ್ವತೋಮುಖ ಬೆಳವಣಿಗೆಗೆ ಶ್ರೀಕಾರ ಹಾಕಿರುವ ಹರಿಹರ ಶಿವಭಕ್ತರ ಮೇಲೆ ಅಪಾರ ಗೌರವ, ಭಕ್ತಿ ಮತ್ತು ಅಭಿಮಾನ ಹೊಂದಿರುವನು. ಅನುಭಾವಿಕ ನೆಲೆಯಲ್ಲಿ ನಿಂತು ತಮ್ಮ ಆತ್ಮೋದ್ಧಾರಕ್ಕಾಗಿ ಹಂಬಲಿಸುವವರಿಗೆ ರಗಳೆಗಳು ದಾರಿದೀಪವಾಗಿದ್ದರೆ, ಸಾಮಾನ್ಯರ ಬದುಕಿಗೆ ಆಶಾಮಯವಾದ ಮಾರ್ಗದರ್ಶಿಯಾಗಿದೆ ಎಂದರೆ ತಪ್ಪಾಗಲಾರದು.

(೭) ಹಲವು ಶಿವಶರಣರ ಚರಿತ್ರೆಗಳಲ್ಲಿ ಅವರ ಧರ್ಮದ ತತ್ವಗಳು ವಿಸ್ತೃತವಾಗಿರುತ್ತದೆ. ಅವರ ಪೂಜೆ ನೇಮ, ಹಾಡು, ಅತಿಥಿ ಸತ್ಕಾರಕ್ಕಾಗಿ ಶಿವಶರಣರನ್ನಾದರಿಸುವ ರೀತಿ, ಶಿವಪರ್ವಗಳನ್ನು ಆಚರಿಸುವ ಬಗ್ಗೆ, ಶಿವಪುರಗಳ ಕಲ್ಪನೆ, ಶಿವಾನುಭವ ಗೋಷ್ಠಿಯನ್ನು ನಡೆಸುವ ಸಂಭ್ರಮಗಳು ರಗಳೆಗಳಲ್ಲಿ ಹರಿಹರನು ಅರ್ಥಪೂರ್ಣವಾಗಿ ವ್ಯಕ್ತಪಡಿಸಿದ್ದಾನೆ. ಹರಿಹರನ ರಗಳೆಗಳಲ್ಲಿ ಕವಿಯ ಹೃದಯಶ್ರೀಮಂತಿಕೆ ಮತ್ತು ಉತ್ತಮ ಸಂಸ್ಕಾರವಂತಿಕೆ ಎದ್ದುಕಾಣುತ್ತದೆ. ಇದಕ್ಕೆ ಕವಿಯು ವಿಶಿಷ್ಟ ಪದ್ಧತಿಯಿಂದ ಕಥೆಯನ್ನು ಹೆಣೆದು ಅದನ್ನು ಸಹಜವಾದ ನಿರರ್ಗಳ ಶೈಲಿಯ ನಿರೂಪಣೆ ಮತ್ತು ಕೌಶಲತೆಯಿಂದ ಉತ್ತಮವಾಗಿ ಮೂಡಿಸಿದ್ದಾನೆ.

(೮) ಹರಿಹರನ ರಗಳೆಗಳಲ್ಲಿ ಅಲೌಕಿಕ ಶಕ್ತಿಯ ಪ್ರಭಾವದಿಂದ ಕೆಲ ಕಥಾನಾಯಕರು ತಮ್ಮಷ್ಟಕ್ಕೇ ತಾವು ಪವಾಡಗಳ ಅಂಚಿನಲ್ಲಿ ಮಿಂಚುತ್ತಾರೆ.

ಉದಾ : ಅಕ್ಕಮಹಾದೇವಿ, ಶಂಕರ ದಾಸಿಮಯ್ಯ, ರೇವಣ್ಣ ಸಿದ್ಧಯ್ಯ, ಅಲ್ಲಮಪ್ರಭು, ಬಸವಣ್ಣರೇ ಮೊದಲಾದವರ ಜೀವನದಲ್ಲಿ ಸನ್ನಡತೆ, ಅಲೌಕಿಕ ಶಕ್ತಿ, ಸಮತಾ ಮನೋಭಾವ, ಸರ್ವರ ಶ್ರೇಯಸ್ಸಿಗಾಗಿ ನಡೆಸುವ ಪವಾಡ ಸಾದೃಶ್ಯತೆ ಮತ್ತು ಅವರ ಅನನ್ಯ ಭಕ್ತಿಯು ಅಧಿಕವಾಗಿದೆ. ಆದರೂ ಅಲ್ಲಿ ಸಹಜತೆ, ಮಾನವೀಯ ಧರ್ಮ, ಪವಾಡ ಪುರುಷರಂತೆ ಚಿತ್ರಿಸಿ ಸರ್ವಕಾಲಕ್ಕೂ ಸಲ್ಲುವಂತಹವರ ಸಾಲಿನಲ್ಲಿ ನಿಲ್ಲಿಸಿ ಅವರ ಮೂಲಕ ಲೋಕೋದ್ಧಾರದ ಕಾರ್ಯವನ್ನು ಮಾಡಿಸಿ, ಅದನ್ನು ಔಚಿತ್ಯಪೂರ್ಣವಾಗಿ ರಗಳೆಗಳಲ್ಲಿ ಅಭಿವ್ಯಕ್ತಿಸಿದ್ದಾನೆ.

(೯) ಭಕ್ತಿಯ ಅರಿವೇ ಇಲ್ಲದ ಕಣ್ಣಪ್ಪನು ತನ್ನ ಮುಗ್ಧತೆಯಿಂದ ಶಿವನನ್ನು ಒಲಿಸಿಕೊಳ್ಳುವ ಪರಿ ವಿಶಿಷ್ಟವಾದುದು. ಕೋಳೂರು ಕೊಡಗುಸು ತನ್ನ ಎಳೆಯ ಪ್ರಾಯದಲ್ಲಿ ಸಹಜವಾದ ಮುಗ್ಧ ಮನಸ್ಸು ಮತ್ತು ಆರ್ತಧನಿಯಿಂದ ಶಿವನನ್ನು ಒಲಿಸಿಕೊಳ್ಳುವುದು, ಮಕ್ಕಳ ಬಾಲನುಡಿಗೆ ಮತ್ತು ಮುಗ್ಧ ಭಕ್ತಿಗೆ ಒಲಿಯುವ ಶಿವನೂ ಮುಗ್ಧ ಮನಸ್ಸಿರುವವನೇ ಆಗಿದ್ದಾನೆ. ಅವನು ತನ್ನ ಭಕ್ತರನ್ನು ಪ್ರೇಮಿಸುವ ಈ ಪರಿ ರಗಳೆಗಳಲ್ಲಿ ವ್ಯಕ್ತವಾಗಿದೆ.

(೧೦) ಶಿವಭಕ್ತಿಯಿಂದ ಮಾತ್ರ ಬದುಕು ಹಸನಾಗುವುದು ಎಂಬ ಸತ್ಯವನ್ನು ಶಿವಶರಣರು ಅರಿತಿದ್ದರು. ಪರಿಪೂರ್ಣತೆಯತ್ತ ಸಾಗುವುದೇ ಬಾಳಿನ ಉನ್ನತ ಗುರಿ ಎಂದು ತಿಳಿದು ಜೀವಿಸುತ್ತಿದ್ದ ಆ ಶಿವಭಕ್ತರುಗಳ ಅನುಭವದ ನೆಲೆಯೇ ಹರಿಹರನ ರಗಳೆಗಳ ತತ್ವದರ್ಶನವಾಗಿದೆ. ಗರ್ವವನ್ನು ತ್ಯಜಿಸಿದ ಶಿವಶರಣರು ಸತ್ಯ, ದಾನ-ಧರ್ಮ, ದಯೆ, ಸಮಾನತೆ, ಕಾಯಕ ನಿಷ್ಠೆ, ಸಮಾನತೆಯನ್ನು ಬೆಳೆಸಿಕೊಂಡು ಬದುಕಿದ ಅವರ ಜೀವನವು ಯಶೋಗಾಥೆಗಳಾಗಿವೆ. ಆತ್ಮಸಾಧನೆಯಿಂದ ಶಿವಕೈವಲ್ಯ ಸಂಪಾದಿಸಿದ ಶರಣರ ಬಾಳು ಲೌಕಿಕ ಮತ್ತು ಅಲೌಕಿಕವಾಗಿಯೂ ಸಾರ್ಥಕತೆಯನ್ನು ಪಡೆದು ಕೀರ್ತಿವಂತರಾದರು.

(೧೧) ಪ್ರತಿಯೊಬ್ಬ ಶಿವಭಕ್ತರಲ್ಲಿನ ವ್ಯಕ್ತಿತ್ವದ ಮೌಲ್ಯಗಳನ್ನು ಸಾರುವ ಮೂಲಕ ಶಿವಭಕ್ತಿಯ ಅಸ್ತಿತ್ವಕ್ಕೆ ಒತ್ತು ನೀಡಿದರು. ಈ ಶಿವಶರಣರಲ್ಲಿನ ವ್ಯಕ್ತಿತ್ವ ವಿಕಸನಕ್ಕೆ ಮೂಲ ಸಾಧನವೇ 'ಶಿವಭಕ್ತಿ' ಎಂದು ಸಾರಿದನು. ಸಾಮಾನ್ಯರು ಆ ವ್ಯಕ್ತಿತ್ವದ ಬೆಳಕಿನಲ್ಲಿ ತಮ್ಮ ತಮ್ಮ ಬದುಕನ್ನು ಕಟ್ಟಿಕೊಳ್ಳುವಂತಾಗಲಿ ಎಂಬ ಆಶಯವನ್ನು ರಗಳೆಗಳ ಮೂಲಕ ಹರಿಹರ ಸಾದರಪಡಿಸಿದನು.

(೧೨) ಶಿವಭಕ್ತರ ವ್ಯಕ್ತಿತ್ವದಲ್ಲಿ ಸಣ್ಣತನವಾಗಲೀ, ಸ್ವಾರ್ಥ-ಲೋಭವಾಗಲೀ ಎಳ್ಳಷ್ಟು ಇರುವುದಿಲ್ಲ. ಅವರು ಹೆಸರಾಗಿರುವುದು ತಮ್ಮ ಬಾಹ್ಯ ಸೌಂದರ್ಯ, ಗಳಿಸಿದ ಸಂಪತ್ತಿನಿಂದಲ್ಲ, ಬದಲಿಗೆ ಮಾನವೀಯ ಮೌಲ್ಯ, ಭಕ್ತಿ ಸಾಧನೆ-ಸಿದ್ಧಿಗಳ ಮೂಲಕ ಸಾಮಾಜಿಕವಾಗುತ್ತಾ ಬಂದರು. ಪ್ರೀತಿ-ತ್ಯಾಗಗಳ ನಡುವೆ ಶಿವನತ್ತ ಚಿತ್ತವಿಟ್ಟು ಸ್ನೇಹ, ಮಧುರ ವಾತ್ಸಲ್ಯ ಮತ್ತು ದಾಸ್ಯಸಂಬಂಧ ಸೇತುವೆಯನ್ನು ಬೆಸೆದುಕೊಂಡಿರುತ್ತಾರೆ. ಶಿವಭಕ್ತರ ಏಕದೇವೋಪಾಸನೆ, ಶಿಸ್ತು, ಸಂಯಮ, ಆತ್ಮಗೌರವ, ಹೃದಯ ವೈಶಾಲ್ಯತೆ ಮತ್ತು ಅವರ ಹೋರಾಟದ ಬದುಕು ಅರ್ಥಪೂರ್ಣವಾದುದು. ಇದು ಸರ್ವಕಾಲಕ್ಕೂ ಜನತೆಯಲ್ಲಿ ಅರಿವು, ಆಲೋಚನೆಗಳನ್ನು ಹುಟ್ಟುಹಾಕುವುದರ ಮೂಲಕ ಹೊಸ ವ್ಯಕ್ತಿತ್ವದ ಬದುಕನ್ನು ರೂಪಿಸಿಕೊಳ್ಳಲು ಅನುವಾಗುತ್ತದೆ.

(೧೩) ಶಿವಭಕ್ತಿಯೊಂದೇ ಶಿವಭಕ್ತರಿಗೆ ಮೋಕ್ಷ ಸಾಧನವಾಗಿರುವುದರಿಂದ ತಾದಾತ್ಮ್ಯಕ್ಕೊಳಗಾದ ಶಿವಭಕ್ತನು ಜೀವನದಲ್ಲಿ ಎದುರಾಗುವ ಎಂತಹ ಸವಾಲುಗಳನ್ನು ಎದುರಿಸಲು ಎದೆಗುಂದುವುದಿಲ್ಲ. ಶಿವಭಕ್ತಿಯನ್ನು ನಿಷ್ಠೆ ಮತ್ತು ಧೃತಿ ಮನೋಭಾವದಿಂದಲೇ ಮುಂದುವರಿಸುತ್ತಾನೆ. ಶಿವಭಕ್ತಿ ಭಕ್ತನಲ್ಲಿ ದಿನದಿಂದ ದಿನಕ್ಕೆ ಉತ್ಸಾಹ, ನಿಷ್ಠೆಯನ್ನು ಹೆಚ್ಚಿಸುತ್ತದೆಯೇ ಹೊರತು ಕುಗ್ಗಿಸುವುದಿಲ್ಲ. ಶಿವ ನೀಡುವ ಪರೀಕ್ಷೆ ಸಾಮಾನ್ಯವಾದುದಲ್ಲ. ಅದನ್ನು ಧೃತಿಯಿಂದ ಎದುರಿಸುವ ಭಕ್ತನ ಮನಸ್ಸೂ ಅಷ್ಟೇ ಟೊಳ್ಳಾಗಿರದೆ, ನಿಶ್ಚಲವಾಗಿರುತ್ತದೆ. ಶಿವ ಮತ್ತು ಭಕ್ತರ ಸಂಬಂಧದ ಉನ್ನತೀಕರಣವನ್ನು ಹರಿಹರ ಅತ್ಯುತ್ತಮವಾಗಿ ಬೆಸೆದಿದ್ದಾನೆ. ನಿಷ್ಠೆಗಳಿಗೆ ಹೆಸರಾದ ಶಿವಭಕ್ತರು ಒಮ್ಮೆ ಕೈಗೊಂಡ ನಿರ್ಧಾರದಿಂದ ಎಂದೆಂದಿಗೂ ಹಿಂದೆಸರಿಯರು. ಎಂಥ ಕಠಿಣ ಪರೀಕ್ಷೆ ಎದುರಾದರೂ ಅವರ ಆತ್ಮ ಮತ್ತು ನಿಷ್ಠೆಗೆ ಮೋಸಮಾಡಿಕೊಳ್ಳದ ಶಿವಭಕ್ತರ ಸಂಕಲ್ಪ ದೃಢವಾದುದು.

(೧೪) ಧರ್ಮದ ಸಾರ್ಥಕತೆ ಇರುವುದೇ ನಮ್ಮ ಆಚಾರ-ವಿಚಾರ, ಅಹಿಂಸೆ, ಸತ್ಯ-ನಿಷ್ಠೆಗಳೆಂಬ ಸದಾಚಾರದ ವ್ರತಗಳ ಆಚರಣೆಯಲ್ಲಿ ಈ ಧಾರ್ಮಿಕ ಕ್ರಿಯೆಗಳು ವೈಯಕ್ತಿಕ ಹಿತವನ್ನು ಸಾಧಿಸುವುದರ ಜೊತೆಗೆ ಸಾಮಾಜಿಕ ಹಿತವನ್ನು ಸಾಧಿಸಬೇಕೆಂಬ ಆಶಯವನ್ನು ಹರಿಹರ ತನ್ನ ರಗಳೆಗಳಲ್ಲಿ ವ್ಯಕ್ತಪಡಿಸಿದ್ದಾನೆ.

(೧೫) ಹರಿಹರನು ಯಾವುದೇ ಹಳೆಯ ಕಟ್ಟು ಸಂಪ್ರದಾಯಕ್ಕೆ ಒಳಗಾಗಲಿಲ್ಲ. ಸಮಾಜದ ಒಳಿತಿಗಾಗಿ ಅವಶ್ಯವಿರುವ ಧಾರ್ಮಿಕ ಪ್ರಕ್ರಿಯೆಗಳನ್ನು ಬೋಧಿಸುವಂತಹ ಮತ್ತು

ಶಿವಭಕ್ತಿಯನ್ನು ಒಪ್ಪಿಸುವಂತಹ ಕಾರ್ಯವನ್ನು ನಿಷ್ಠೆಯಿಂದ ಮಾಡಿದ ಹರಿಹರ ಸಮಾಜದ ಹಿತಚಿಂತಕನೂ ಹೌದು, ಶಿವಕವಿಯೂ ಹೌದು ಎನ್ನುವಂತಿದೆ.

(೧೬) ಭಕ್ತ ಮತ್ತು ಭಗವಂತನ ನಡುವೆ ಏರ್ಪಡುವ ಸಂಬಂಧ ಸೇತುವೆಯು ಭಕ್ತಿಯ ಮೇಲೆ ನಿಂತಿರುತ್ತದೆ. ಅದನ್ನು ಬಿಟ್ಟರೆ ಮೂರನೆಯವನಿಗೆ ಇಲ್ಲಿ ಸ್ಥಾನವಿಲ್ಲ, ಅಂದರೆ ಇವರ ನಡುವೆ ಮಧ್ಯವರ್ತಿಯಿಲ್ಲ. ದೀನದಲಿತರು, ಜಾತಿಹೀನರು, ಸ್ತ್ರೀಯರು, ಅಬಲೆಯರು, ವೃದ್ಧರು ಹೀಗೆ ಎಂಥವರಾದರೂ ತಮ್ಮ ತಮ್ಮ ಆತ್ಮಶಕ್ತಿಯ ವಿಕಾಸವನ್ನು ಭಕ್ತಿಮಾರ್ಗದ ಮುಖೇನ ಸಾಧಿಸುವ ಕ್ರಮವನ್ನು ವ್ಯಕ್ತಪಡಿಸಿದ್ದಾನೆ. ಈ ಮೂಲಕ ಸ್ವಯಂಪೂರ್ಣ, ಭಕ್ತಪೂರ್ಣ ಸಮಾಜ ನಿರ್ಮಾಣದ ಆಶಯವನ್ನು ಹರಿಹರ ಹೊಂದಿದ್ದಾನೆ ಎಂದು ತೋರುತ್ತದೆ.

(೧೭) ಸತ್ಯಶುದ್ಧ ಕಾಯಕದ ಮಹತ್ವವನ್ನು ಹರಿಹರ ಎತ್ತಿಹಿಡಿದಿದ್ದಾನೆ. ಶಿವಭಕ್ತರು ತಮ್ಮ ಎಲ್ಲಾ ಕೆಲಸವನ್ನು ಆತ್ಮನಿಷ್ಠೆ, ವೃತ್ತಿಗೌರವ, ನೇಮದ ಹಾಗೆ ತಿಳಿದು ಶಿವಭಕ್ತಿಯ ಆಚರಣೆಯ ಭಾಗವಾಗಿಯೇ ಮಾಡುತ್ತಾರೆ. ಆ ಕಾಯಕದ ಹಿರಿಮೆಯೊಂದಿಗೆ ಶಿವಭಕ್ತಿಯ ಮಹಿಮೆಯೂ ವ್ಯಕ್ತವಾಗುತ್ತದೆ. ಕಾಯಕದಿಂದ ಗಳಿಸಿದ್ದನೆಲ್ಲಾ ಶಿವಪೂಜೆ, ಶಿವಶರಣರ ಸೇವೆಗಾಗಿ, ಅತಿಥಿ ಸತ್ಕಾರ, ದಾನ-ಧರ್ಮಕ್ಕಾಗಿ ಸಮರ್ಪಣಾ ಮನೋಭಾವದಿಂದ ಅರ್ಪಿಸುವ ಕಾಯಕ ಯೋಗಿಗಳಂತೆ ತನ್ನ ಕಥಾನಾಯಕರನ್ನು ಚಿತ್ರಿಸಿದ್ದಾನೆ. ಹೀಗೆ ಹರಿಹರನು ಸಮಾಜದ ಸಮನ್ವಯತೆಯನ್ನು ಸಾಧಿಸಿದ್ದಾನೆ.

(೧೮) ಹರಿಹರನು ತನ್ನ ರಗಳೆಗಳಲ್ಲಿ ಶಾಸ್ತ್ರೀಯ ಪರಿಭಾವನೆಗಿಂತ ಅಂತರಂಗದ ಅನುಭವಕ್ಕೆ ಪ್ರಾಧಾನ್ಯತೆಯನ್ನು ನೀಡಿದ್ದಾನೆ. ಇಲ್ಲಿನ ಶಿವಭಕ್ತರೇನೂ ಉಳ್ಳವರಲ್ಲ, ಒಂದು ವೇಳೆ ಉಳ್ಳವರಾಗಿದ್ದರೂ ಅದನ್ನು ವೈಯಕ್ತಿಕ ಭೋಗಕ್ಕೆ ಬಳಸಿಕೊಳ್ಳುವ ಮನಸ್ಸಿನವರಲ್ಲ. ಕೂಡಿಡುವ ಸಂಗ್ರಹ ಬುದ್ಧಿಯವರು ಇಲ್ಲಿ ಕಾಣಿಸುವುದಿಲ್ಲ. ಅವರೆಲ್ಲಾ ಶಿವನ ಒಲುಮೆಗೆ ಪಾತ್ರರಾಗಿರುವವರು, ಅನುಭಾವಿಗಳೇ ಆಗಿದ್ದಾರೆ. ವೇದ-ಮಂತ್ರ-ಶಾಸ್ತ್ರಗಳಿಗೆ ಒಳಗಾದವರಲ್ಲ. ಶಿವನ ಮೇಲೆ ಇಟ್ಟ ನಂಬಿಕೆಯೇ ಅವರ ಪ್ರಧಾನ ಸಂಪತ್ತು. ಶಿವಶರಣನು ತನ್ನ ನಿಷ್ಠೆ, ಸಾಧನೆಯಿಂದ ಮಾತ್ರ ಉಚ್ಚವಾದ ಆಧ್ಯಾತ್ಮಿಕ ನಿಲುವನ್ನು ಗಳಿಸುತ್ತಿದ್ದನು. ಅವರಿಗೆ ಶಿವಭಕ್ತಿ, ಶಿವನೊಲುಮೆ, ಏಕಾಗ್ರತೆ, ಆವೇಶ, ನಂಬಿಕೆ, ಆತ್ಮವಿಶ್ವಾಸವೇ ಶಿವನನ್ನು ಮುಟ್ಟುವಲ್ಲಿ ದಾರಿದೀಪಗಳಾಗಿ ನಿಲ್ಲುತ್ತವೆ. ಇದೇ ಶಿವಭಕ್ತರ

ನಿಸ್ಸೀಮ ವ್ಯಕ್ತಿತ್ವ. ಈ ಅನುಭಾವದಿಂದಲೇ ಕೊನೆಯಲ್ಲಿ ಅವರು ಶಿವನ ಸಾಕ್ಷಾತ್ಕಾರಕ್ಕೊಳಗಾಗಿ ಮಹಾಚೇತನಗಳಾಗಿ ಸ್ಥಾನ ಪಡೆಯುವುದಕ್ಕೆ ಸಾಧ್ಯವಾಗುತ್ತಿತ್ತು.

(೧೯) ಯಾವುದೇ ವ್ಯಕ್ತಿಯ ಬೋಧನೆ ಜನಮಾನಸದಲ್ಲಿ ಪ್ರಧಾನವಾಗಿ ಉಳಿಯಬೇಕಾದರೆ ಅವನ ನಡೆ-ನುಡಿ, ಆಚಾರ-ವಿಚಾರ, ಸಂಸ್ಕಾರಗಳು ಮೊದಲು ಪರಿಶುದ್ಧವಾಗಿರಬೇಕು. ಅವನು ಮೊದಲು ಆದರ್ಶಮಯನಾಗಿರಬೇಕು, ಹಾಗೆ ಇಲ್ಲಿ ಹರಿಹರನು ಭಕ್ತಿಯ ಪ್ರತಿಪಾದನೆಯನ್ನು ಕೇವಲ ಬೋಧಿಸುವುದಿಲ್ಲ, ಬದಲಿಗೆ ಅವನೊಬ್ಬ ಭಕ್ತಕವಿ. ಹರಭಕ್ತಿಯೇ ಅವನ ಜೀವನದ ಯಶೋಗಾಥೆ, ಅವು ಉತ್ತಮ ಸಾರವನ್ನೇ ಹೇಳುತ್ತದೆ. ಅವನು ಸಮಾಜಕ್ಕೆ ಪ್ರೇರಕನೂ, ಹಿತಚಿಂತಕನಾಗಿಯೂ ಕಾಣುತ್ತಾನೆ. ವಿರೂಪಾಕ್ಷ ಸ್ವಾಮಿಯ ಭಕ್ತಿನಿಷ್ಠೆಯನ್ನು ಅವನ ಪುಷ್ಪರಗಳೆ, ಹಂಪೆಯರಸನ ರಗಳೆ, ಮಹಿಮಾರಗಳೆ, ಗುಣಸ್ತೋತ್ರರಗಳೆ, ವಿಭೂತಿರಗಳೆಗಳಲ್ಲಿ ಖಚಿತವಾಗಿ ತಿಳಿದುಕೊಳ್ಳಬಹುದು. ಹರಿಹರನು ವಿರೂಪಾಕ್ಷನೊಡನೆ ಸ್ನೇಹ ಮತ್ತು ಪ್ರೀತಿ-ಮಧುರ ಭಾವನೆಯನ್ನು ಹೊಂದಿರುವ ಬಗ್ಗೆ ಇಲ್ಲಿ ವ್ಯಕ್ತವಾಗುತ್ತದೆ.

(೨೦) ಶಿವಭಕ್ತರಲ್ಲಿ ಒಬ್ಬೊಬ್ಬರು ಒಂದೊಂದು ವೃತ್ತಿಯನ್ನು ಅನುಸರಿಸುತ್ತಾ ಅದರಲ್ಲೇ ಆಧ್ಯಾತ್ಮಿಕ ಸುಖವನ್ನು ಪಡೆಯುತ್ತಿದ್ದರು. ಅವರಲ್ಲಿ ವೃತ್ತಿ ತಾರತಮ್ಯಗಳೆಂಬುದು ಇರಲಿಲ್ಲ. ಕಾಯಕದೊಂದಿಗೆ ಅವರ ಆರ್ಥಿಕ ಸ್ಥಿತಿ ಸುಧಾರಣೆ, ಆಲಸ್ಯರಹಿತ ಬಾಳ್ವೆ ನಡೆಸಿ ಆಧ್ಯಾತ್ಮದ ಅರಿವನ್ನು ಮೂಡಿಸುತ್ತಾ ಲೋಕಾನುಭವದಲ್ಲೇ ಶಿವಾನುಭವವನ್ನು ಕಂಡುಕೊಂಡಿದ್ದರು. ಇವರು ಇಹದಲ್ಲಿಯೇ ಪರವನ್ನು ಹುಡುಕಿ ಜೀವಾತ್ಮ - ಪರಮಾತ್ಮ ಸಮನ್ವಯತೆಯನ್ನು ಸಾಧಿಸಿದ್ದಾರೆ.

(೨೧) ತನಗೆ ನೋವಾದರೂ ಚಿಂತಿಸದೆ ತನ್ನ ಭಕ್ತರಿಗೆ ನೋವಾಗದಂತೆ ನೋಡಿಕೊಳ್ಳುವ ಶಿವನು ಒಂದೆಡೆಯಾದರೆ, ಶಿವನೇ ಸರ್ವಸ್ವ ಎಂದು ಭಾವಿಸಿ ಅವನಿಗೋಸ್ಕರವಾಗಿ ಎಲ್ಲವನ್ನೂ ಸಮರ್ಪಿಸಲು ಸಿದ್ಧರಿರುವ ಭಕ್ತನೊಂದು ಕಡೆಗೆ, ಶಿವನಿಗಿಂತ ಶಿವಭಕ್ತರೇ ಮೇಲು ಎಂಬಂತೆ ವಿಜೃಂಭಿಸುತ್ತಾರೆ. ಲೋಕಾನುಭವದಲ್ಲಿ ಶಿವನನ್ನು ನಂಬಿ ಶಿವಾನುಭವವನ್ನು ಪಡೆದುಕೊಳ್ಳುವ ದಿವ್ಯ ಸಂದೇಶಗಳನ್ನು ಹರಿಹರನ ರಗಳೆಗಳಲ್ಲಿ ಅಭಿವ್ಯಕ್ತಿಸಿದ್ದಾನೆ.

ಹೀಗೆ ಉಜ್ವಲವಾದ ಭಕ್ತಿಸಾಧನೆ, ಗುರು-ಲಿಂಗ-ಜಂಗಮ ಪೂಜೆ, ಸೇವೆ ಮತ್ತು ಸಮಾಜದಲ್ಲಿ ಮಾನವೀಯ ಪ್ರಜ್ಞೆಯನ್ನು ಮೆರೆಯುವ ಮೂಲಕ ಭಕ್ತನು ಶಿವನಾಗಿ ಬಿಡುತ್ತಾನೆ.

# ಪರಾಮರ್ಶನ ಗ್ರಂಥಗಳು

**ಸೂಚನೆ : ಲೇಖಕರ ಹೆಸರು / ವರ್ಷ / ಕೃತಿ / ಪ್ರಕಾಶನ-ವಿಶ್ವವಿದ್ಯಾಲಯ / ಸ್ಥಳ.**


೧. ಸಂ. ಎಸ್.ಎಸ್.ಅಂಗಡಿ, ೨೦೦೩, **ಕನ್ನಡ ಸಂಶೋಧನೆ ಮತ್ತು ಚಿದಾನಂದಮೂರ್ತಿ**, ಸಪ್ನ ಬುಕ್ ಹೌಸ್, ಬೆಂಗಳೂರು.

೨. ಸಂ. ಎಂ.ಎಂ.ಕಲಬುರ್ಗಿ, ೧೯೯೯, **ಹರಿಹರನ ರಗಳೆಗಳು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೩. ಕಾಳೇಗೌಡ ನಾಗವಾರ, ಎ.ಮು-೨೦೧೩, **ತ್ರಿಪದಿ, ರಗಳೆ ಮತ್ತು ಜನಪದ ಸಾಹಿತ್ಯ**, ಕರ್ನಾಟಕ ಬುಕ್ ಏಜನ್ಸಿ, ಬೆಂಗಳೂರು.

೪. ಸಂ. ಕೆ.ಜಿ.ಕುಂದಣಗಾರ, ೨೦೧೩(ದ್ವಿ.ಮು), **ಹರಿಹರದೇವ**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೫. ಸಂ. ಕೆ.ಜಿ.ಕುಂದಣಗಾರ, ೨೦೧೩ (ದ್ವಿ.ಮು), **ಹರಿಹರ ದೇವ**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೬. ಸಂ. ಕೆ.ಎಸ್.ಕೃಷ್ಣಮೂರ್ತಿ, ೨೦೦೪, **ಹರಿಹರನ ರಗಳೆಗಳಲ್ಲಿ ಭಕ್ತಿ**, ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, ಮೈಸೂರು.

೭. ಸಂ. ಎಸ್.ಆರ್. ಗುಂಜಾಳ, ೨೦೧೦, **ಲಿಂಗಾಯತ ಜಾಗತೀಕರಣ**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೮. ಸಂ.ಗುರುಪಾದ ಮರಿಗುದ್ದಿ, ೨೦೦೧, **ಹರಿಹರ ಮಹಾಕವಿಯ ಜಾತಿ-ಭೇದ ನಿರಸನ ರಗಳೆಗಳು**, ನೆಲೆ ಪ್ರಕಾಶನ, ಸಿಂದಗಿ

೯. ಸಂ.ಗುರುಪಾದ ಮರಿಗುದ್ದಿ, ೨೦೦೮, **ಹರಿಹರ ಮಹಾಕವಿಯ ಲಿಂಗ-ಭೇದ ನಿರಸನ ರಗಳೆಗಳು** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೧೦. ಸಂ. ಎಂ.ಚಿದಾನಂದ ಮೂರ್ತಿ, ೨೦೧೪, **ಸಂಶೋಧನೆ**, ಡಿ.ವಿ.ಕೆ.ಮೂರ್ತಿ ಪ್ರಕಾಶನ, ಮೈಸೂರು.

೧೧. ಸಂ.ಬಿ.ಸಿ.ಜವಳಿ, ಪ್ರಿ.ಶಾಂತರಸ, ೧೯೭೯, **ರಸಿಕಚಕ್ರ ಹರಿಹರದೇವ**, ಜಗದ್ಗುರು ಕೊಟ್ಟೂರು ಸ್ವಾಮಿ ಮಠ, ಬಳ್ಳಾರಿ–ಹೊಸಪೇಟೆ ತಾ.

೧೨. ಸಂ. ಬಿ.ಸಿ.ಜವಳಿ, ೧೯೬೬, **ಹರಿಹರ ಮಹಾಕವಿಯ ಕೆಲವು ಮಹೋನ್ನತ ವಿಚಾರಗಳು**, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೧೩. ಸಂ. ಬಿ.ಸಿ.ಜವಳಿ, ೧೯೭೬, **ಹರಿಹರ ಕವಿಯ ಎರಡು ರಗಳೆಗಳು**, ಪ್ರಭಾ ಪಬ್ಲಿಶರ್ಸ್, ಧಾರವಾಡ

೧೪. ಸಂ. ಬಿ.ಸಿ.ಜವಳಿ, ಮಲ್ಲಬಾದಿ ವೀರಭದ್ರಪ್ಪ, ೧೯೭೮, **ಮಹಾಕವಿ ಹಂಪೆಯ ಹರಿಹರದೇವನ ರಗಳೆಗಳು (ಭಾಗ–೧) ಪ್ರಸ್ತಾವನೆ**

೧೫. ಸಂ. ಬಿ.ಸಿ.ಜವಳಿ, ೧೯೮೧, **ಹರಿಹರ ಕವಿಯ ಕೆಲವು ಮಹೋನ್ನತ ವಿಚಾರಗಳು**, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೧೬. ಸಂ. ಬಿ.ಸಿ.ಜವಳಿ, ದೇವೇಂದ್ರಕುಮಾರ ಸಿ.ಹಕಾರಿ, ೧೯೮೧, **ರಸಿಕ ಚಕ್ರಿ, ಹರಿಹರ, ಕಾಯಕದ ಐದು ರಗಳೆಗಳು**, ಜಗದ್ಗುರು ಕೊಟ್ಟೂರು ಸ್ವಾಮಿ ಮಠ, ಬಳ್ಳಾರಿ ಜಿಲ್ಲೆ, ಹೊಸಪೇಟೆ ತಾ.

೧೭. ಸಂ. ಬಿ.ಸಿ.ಜವಳಿ, ೧೯೮೩, **ಹರಿಹರ ಕವಿಯ ಸ್ತ್ರೀ ಪಾತ್ರ ದರ್ಶನ**, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೧೮. ಸಂ. ಎಚ್.ತಿಪ್ಪೇರುದ್ರಸ್ವಾಮಿ, ಐದನೇ ಮುದ್ರಣ–೨೦೧೦, **ಶರಣರ ಅನುಭಾವ ಸಾಹಿತ್ಯ**, ಡಿ.ವಿ.ಕೆ.ಮೂರ್ತಿ ಪ್ರಕಾಶನ, ಮೈಸೂರು.

೧೯. ಸಂ. ಎಚ್.ದೇವೀರಪ್ಪ, ೧೯೭೧, **ಹಂಪೆಯ ಹರಿಹರದೇವರ ಎಂಟು ರಗಳೆಗಳು**, ಶಿವಕುಮಾರ ಪ್ರಕಾಶನ, ವಿಜಯನಗರ, ಬೆಂಗಳೂರು–೪೦.

೨೦. ಸಂ. ಎಚ್. ದೇವೀರಪ್ಪ, ೧೯೮೭, **ಹಂಪೆಯ ಹರಿಹರ, ಸಾಹಿತ್ಯ ಅಕಾಡೆಮಿ**, ಮುದ್ರಕರು–ಚಂದನ ಪ್ರಿಂಟರ್ಸ್, ಬೆಂಗಳೂರು.

೨೧. ಸಂ. ಎಚ್. ದೇವೀರಪ್ಪ, ೧೯೭೯, **ಹಂಪೆಯ ಹರಿಹರ ರಚಿತ ಉಡುತಡಿಯ ಮಹಾದೇವಿಯರ ರಗಳೆ**, ಶಿವಕುಮಾರ ಪ್ರಕಾಶನ, ೫೨, ವಿಜಯನಗರ, ಬೆಂಗಳೂರು.

೨೨. ಸಂ. ಡಿ.ಎಲ್.ನರಸಿಂಹಾಚಾರ್, ೧೯೩೯, **ಹಂಪೆಯ ಹರಿಹರ**, ಮೈಸೂರು ವಿ.ವಿ.

೨೩. ಸಂ.ಡಿ.ನಾಗೇಂದ್ರಪ್ಪ, ೨೦೧೨, **ಮಹಾಕವಿ ಹರಿಹರನ ಪುರಾತನ ಶರಣರು**, ಸಂವಹನ, ಶಿವರಾಂಪೇಟೆ, ಮೈಸೂರು.

೨೪. ಸಂ. ಡಿ.ಆರ್.ನಾಗರಾಜ್, ೨೦೧೦, **ಅಲ್ಲಮಪ್ರಭು ಮತ್ತು ಶೈವ ಪ್ರತಿಭೆ**, ಅಕ್ಷರ ಪ್ರಕಾಶನ, ಹೆಗ್ಗೋಡು ಸಾಗರ, ಕರ್ನಾಟಕ.

೨೫. ಸಂ. ನಾಗಭೂಷಣ ಶಾಸ್ತ್ರಿ, ೧೯೯೬, **ಹರಿಹರ**, ಕರ್ನಾಟಕ ಸಾಹಿತ್ಯ ಅಕಾಡೆಮಿ, ನೃಪತುಂಗ ರಸ್ತೆ, ಬೆಂಗಳೂರು.

೨೬. ಸಂ.ಪಂ.ನಾಗಭೂಷಣಶಾಸ್ತ್ರಿ, ನೀಲಗಿರಿ ತಳವಾರ, ೧೯೯೬, **ರಸಿಕಚಕ್ರಿ ಹರಿಹರದೇವನ ಶಿವಶರಣ ನಾಲ್ಕು ರಗಳೆಗಳು**, ಜಗದ್ಗುರು ಕೊಟ್ಟೂರು ಸ್ವಾಮಿ ಮಠ, ಹೊಸಪೇಟೆ ತಾ.

೨೭. ಸಂ. ಎಸ್.ಜಿ.ಫಿವಾರಿ, ಶ್ರೀರಾಮಕೃಷ್ಣ ಮರಾಠೆ, ೧೯೮೩, **ರಸಿಕಚಕ್ರಿ ಹರಿಹರದೇವನ ಶಿವಶರಣರ ನಾಲ್ಕು ರಗಳೆಗಳು**, ಜಗದ್ಗುರು ಕೊಟ್ಟೂರು ಸ್ವಾಮಿ ಮಠ, ಹೊಸಪೇಟೆ ತಾ., ಬಳ್ಳಾರಿ ಜಿಲ್ಲೆ

೨೮. ಸಂ. ಬಸವರಾಜ ಸಬರದ, ೨೦೦೭, **ಶೂನ್ಯ ಸಂಪಾದನೆ ಪ್ರಸ್ತುತ ಸವಾಲುಗಳು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೯. ಎನ್.ಬಸವರಾಧ್ಯ, ವಿ.ತೆ.ಗೋಪಾಲಕೃಷ್ಣ ಭಟ್ಟ, ಎಲ್. ಗುಂಡಪ್ಪ, **ಹರಿಹರದೇವ**, ಐ.ಬಿ.ಎಚ್.ಪ್ರಕಾಶನ, ಬೆಂಗಳೂರು.

೩೦. ಸಂ. ಕೆ.ಪಿ.ಮಹಾದೇವಯ್ಯ, ೧೯೯೯, **ಹರಿಹರನ ರಗಳೆಗಳ ಸಾಹಿತ್ಯಕ ಅಧ್ಯಯನ**, ಅಭಿರುಚಿ, ಪ್ರಕಾಶನ, ಮೈಸೂರು.

೩೧. ಸಂ. ಸ.ಸ.ಮಾಳವಾಡ, ೧೯೬೯, **ಹರಿಹರನ ರಗಳೆಗಳಲ್ಲಿ ಜೀವನದರ್ಶನ**, ಪ್ರ. ಧಾರವಾಡ.

೩೨. ಸಂ. ಎಸ್.ವಿ.ರಂಗಣ್ಣ, ೧೯೫೮, **ಶೈಲಿ-೨**, ಕಾವ್ಯಾಲಯ ಪ್ರಕಾಶಕರು, ಮೈಸೂರು.

೩೩. ಸಂ.ಎಂ.ಎನ್.ಲೀಲಾವತಿ, ೧೯೭೩, **ಹರಿಹರನ ಐದು ರಗಳೆಗಳು**, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೩೪. ಸಂ. ವಸಿಷ್ಠ, ೧೯೯೮, **ಹರಿಹರನ ನಂಬಿಯಣ್ಣನ ರಗಳೆ**, ಲಕ್ಷ್ಮಿ ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್, ಮೈಸೂರು.

೩೫. ಸಂ. ಎಸ್.ವಿದ್ಯಾಶಂಕರ, ೨೦೧೩, **ವೀರಶೈವ ಸಾಹಿತ್ಯ ಚರಿತ್ರೆ ಸಂಪುಟ-೨**, ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು.

೩೬. ಸಂ. ಸಿ.ವೀರಣ್ಣ, ೨೦೧೧, **ಮಧ್ಯಕಾಲೀನ ಸಾಹಿತ್ಯ ಚರಿತ್ರೆ-ಕನ್ನಡ ಸಾಹಿತ್ಯ ಚಾರಿತ್ರಿಕ ಬೆಳವಣಿಗೆ**, ನವಕರ್ನಾಟಕ ಪ್ರಕಾಶನ, ಕ್ರೆಸೆಂಟ್ ರಸ್ತೆ, ಬೆಂಗಳೂರು.

೩೭. ಸಂ. ಟಿ.ಎಸ್.ವೆಂಕಣ್ಣಯ್ಯ, ೨೦೦೮, **ಹರಿಹರ ಕವಿಯ ಬಸವರಾಜ ದೇವರ ರಗಳೆ**, ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು.

೩೮. ಸಂ. ಟಿ.ಎಸ್.ವೆಂಕಣ್ಣಯ್ಯ, ತಾತ್ಪರ್ಯ-ಡಿ.ನಾಗೇಂದ್ರಪ್ಪ, ೨೦೧೩, **ಹರಿಹರ ಕವಿಯ ಬಸವರಾಜದೇವರ ರಗಳೆ**, ಪೊಡವಿ ಪ್ರಕಾಶನ, ಶ್ರೀರಾಂಪುರ, ಮೈಸೂರು.

೩೯. ಸಂ. ತ.ಸು.ಶಾಮರಾಯ, ೧೯೮೨, **ಹರಿಹರನ ಉಡುತಡಿಯ ಅಕ್ಕಮಹಾದೇವಿಯ ರಗಳೆ**, ಪ್ರತಿಭಾ ಪ್ರಕಾಶನ, ಮೈಸೂರು.

೪೦. ಸಂ. ಬಿ. ಶಿವಮೂರ್ತಿ ಶಾಸ್ತ್ರಿಗಳು, ೧೯೬೯, **ವೀರಶೈವ ಸಾಹಿತ್ಯ ಮತ್ತು ಇತಿಹಾಸ(ಭಾಗ-೨)**, ಶರಣ ಸಾಹಿತ್ಯ ಕಾರ್ಯಾಲಯ, ಬೆಂಗಳೂರು.

೪೧. ಸಂ. ಬಿ.ವ್ಹಿ.ಶಿರೂರ, ೨೦೧೫, **ಸಂಶೋಧನ ಸ್ವರೂಪ**, ಅನ್ನಪೂರ್ಣ ಪ್ರಕಾಶನ, ಹುಬ್ಬಳ್ಳಿ.

೪೨. ಸಂ. ಡಾ. ಶಿವಾನಂದ ಎಸ್, ವಿರಕ್ತಮಠ, ೨೦೦೩, ೨೦೧೪, **ಹರಿಹರನ ರಗಳೆಗಳು ಸಾಂಸ್ಕೃತಿಕ ಮುಖಾಮುಖಿ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೩. ಸಂ. ಸದಾನಂದ ಪಾಟೀಲ, ೧೯೯೯, **ಹರಿಹರನ ರಗಳೆಗಳು, ಒಂದು ಸಾಂಸ್ಕೃತಿಕ ಅಧ್ಯಯನ**, ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ, ಗದಗ.

೪೪. ಸದಾನಂದ ಪಾಟೀಲ, **ಹರಿಹರ ಕಥಾಕೋಶ,** ಬಸವ ಸಮಿತಿ, ಬಸವ ಭವನ, ಶ್ರೀ ಬಸವೇಶ್ವರ ವೃತ್ತ, ಬೆಂಗಳೂರು.

೪೫. ಸಂ. ಬಿ.ಎಸ್.ಸ್ವಾಮಿ, ೧೯೭೪, **ಕವಿಚಕ್ರೇಶ್ವರ,** ಕ್ವಾಲಿಟಿ ಪಬ್ಲಿಶರ್ಸ್, ಧಾರವಾಡ.

೪೬. ಸಂ. ಎಂ.ಎಸ್. ಸುಂಕಾಪುರ, ೧೯೭೬, **ಮಹಾಕವಿ ಹಂಪೆಯ ಹರಿಹರ ದೇವಕೃತ ನೂತನ ಪುರಾತನ ರಗಳೆಗಳು,** ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿ.ವಿ., ಧಾರವಾಡ.

೪೭. ಸಂ. ಎಂ.ಎಸ್. ಸುಂಕಾಪುರ, ೧೯೭೬, **ಮಹಾಕವಿ ಹಂಪೆಯ ಹರಿಹರ ದೇವಕೃತ ಪುರಾತನ, ರಗಳೆಗಳು,** ಕರ್ನಾಟಕ ವಿ.ವಿ., ಧಾರವಾಡ.

೪೮. ಸಂ. ಹಂಪ ನಾಗರಾಜಯ್ಯ, ೧೯೭೯, **ಹರಿಹರದೇವ (ವಿಚಾರ ಸಂಕಿರಣ),** ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು-೧೮.

೪೯. ಸಂ. ಹಂಪನಾಗರಾಜಯ್ಯ. ೧೯೭೯, **ಹರಿಹರದೇವ(ಚರಿತ್ರೆ, ಕಾವ್ಯ ನಿರ್ಣಯ, ಕಾವ್ಯ ವಿಮರ್ಶೆ)** ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು.

೫೦. ಹಿರೇಮಲ್ಲೂರು, ದ್ವಿ.ಮು.೨೦೦೮, **ಲಿಂಗಾಯತ ಧರ್ಮ, ಒಂದು ಅಧ್ಯಯನ,** ಪ್ರಿಯದರ್ಶಿನಿ ಈಶ್ವರನ್, ಪ್ರಕಾಶನ, ವಿಜಯನಗರ, ಬೆಂಗಳೂರು.

೫೧. ಸಂ. ಹಿರೇಮಲ್ಲೂರ ಈಶ್ವರನ್, ೧೯೭೧, **ಹರಿಹರನ ಕೃತಿಗಳು (ಒಂದು ಸಂಖ್ಯಾ ನಿರ್ಣಯ),** ಪ್ರಸಾರಾಂಗ ಮೈಸೂರು ವಿ.ವಿ.

೫೨. ಸಂ. ಆರ್.ಸಿ.ಹಿರೇಮಠ, ೧೯೯೯, **ಹರಿಹರ ದೇವಕೃತ ಪುರಾತನ ಆರು ರಗಳೆಗಳು,** ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೫೩. ಸಂ. ಎಸ್.ಎಸ್.ಹಿರೇಮಠ, ೧೯೯೮, **ಹರಿಹರ ಚಿತ್ರಿಸಿದ ದಲಿತ ಶರಣರು,** ಪ್ರಸರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೫೪. ಬಿ.ಬಿ.ಹೆಂಡಿ, ೧೯೭೭, **ಹರಿಹರ ಕವಿಯ ವ್ಯಕ್ತಿತ್ವ ಹಾಗೂ ಕವಿತ್ವ (ಅಪ್ರಕಟಿತ ಮಹಾಪ್ರಬಂಧ),** ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

----- * ---- * ---- * -----

